# ಗೀತಾರ್ಥ ಚಂದ್ರಿಕೆ

## ಪದಶಃ ಅರ್ಥ ಮತ್ತು ತಾತ್ಪರ್ಯ

ಲೇಖಕ

ಹೊಸಕೆರೆ ಚಿದಂಬರಯ್ಯ

ಎಸ್. ಎಸ್. ಎನ್. ಬುಕ್ ಡಿಪೊ

ಸಿಟಿ ಮಾರ್ಕೆಟ್ : : ಬೆಂಗಳೂರು-2.

# ಮುನ್ನುಡಿ

ಪ್ರತಿಯೊಂದು ಶ್ಲೋಕದ ಪದಶಃ ಅರ್ಥ ಮತ್ತು ಅಗತ್ಯವಾದ ವಿವರಣೆಯುಳ್ಳ ಭಗವದ್ಗೀತೆಯನ್ನು ಓದಬೇಕೆಂಬ ಕನ್ನಡಿಗರ ಬಯಕೆಯ ಕಡೆಗೆ ಲಕ್ಷ್ಯ ಕೊಟ್ಟು ಗೀತೆಯ ಮೇಲೆ ಈ ಹೊಸ ವ್ಯಾಖ್ಯಾನವನ್ನು ಬರೆಯಬೇಕೆಂದು ನನಗೆ ಪ್ರವೃತ್ತಿಯಾಯಿತು

ಭಗವದ್ಗೀತೆಯ ಮೇಲೆ ಎಷ್ಟು ಗ್ರಂಥಗಳು ಹೊರಟರೂ ಕಡಿಮೆಯೆಂದೇ ನನಗೆ ತೋರುತ್ತದೆ ಏಕೆಂದರೆ ಜಗತ್ತಿನ ಮೂಲಕಾರಣವು ಯಾವದೆಂಬುದನ್ನೂ ಅದರ ಸ್ವರೂಪವನ್ನೂ ತಿಳಿಸಿ ಜಗತ್ತಿನ ಕೊರಳಿಗೆ ಅದರ ನಿಜವಾದ ಬೆಲೆಯ ಪಟ್ಟಿಯನ್ನು ಕಟ್ಟಿ ಮನಸ್ಸಿಗೆ ಅಚ್ಚಳಿಯದ ಶಾಂತಿಯನ್ನುಂಟುಮಾಡಿ ಮನುಷ್ಯನಲ್ಲಿ ದೇವತ್ವವನ್ನು ತುಂಬುವ ಗ್ರಂಥಗಳಲ್ಲಿ ಭಗವದ್ಗೀತೆಗೆ ಅಗ್ರತಾಂಬೂಲವು ದೊರೆತಿರುವದೆಂಬುದೇನೂ ಅತ್ಯುಕ್ತಿಯ ಮಾತಲ್ಲ ಈ ಕೆಲಸವನ್ನು ಉಪನಿಷತ್ತುಗಳು ಮಾಡಿರುವವೆಂಬುದೇನೂ ಸುಳ್ಳಲ್ಲ ಆದರೆ ವಿಷಯಸುಖಾತಿರೇಕದ ಪರಿಣಾಮವಾಗಿ ಬಚ್ಚುಬಾಯಾಗಿರುವ ಈಗಿನ ಜನರಿಗೆ ಆ ಉಕ್ಕಿನ ಕಡಲೆಗಳಿಂದ ಪುಷ್ಟಿ ದೊರೆಯುವ ಸಂಭವವು ಕಡಿಮೆ ಆ ಉಕ್ಕಿನ ಕಡಲೆಗಳನ್ನು ನೆನೆಯಿಸಿ ಬೇಯಿಸಿ ಭಟ್ಟಿಯಿಳಿಸಿದ್ದೆನಿಸಿರುವ ಈ ಭಗವದ್ಗೀತೆಯಲ್ಲಿ ಸ್ವಲ್ಪ ಮಾತುಗಳಲ್ಲಿಯೇ ಎಲ್ಲ ಅರ್ಥವೂ ಒಳಗೊಂಡಿರುವುದರಿಂದ ಈ ಯೋಗ್ಯತೆಯ ದೃಷ್ಟಿಯಿಂದ ನೋಡಿದರೆ ಇದು ಉಪನಿಷತ್ತುಗಳೆಲ್ಲಕ್ಕಿಂತ ಮೇಲುಗೈಯಾಗಿರುವದು ಉಳಿದ ಶಾಸ್ತ್ರಗಳೆಲ್ಲ ಸೃಷ್ಟಿಯ ಹಬ್ಬುಗೆಯ ವಿಷಯವಾದ್ದರಿಂದ ಗ್ರಹಿಸುವದಕ್ಕೆ ಸುಕರವಾಗಿರುವವು. ಇದು ಸೃಷ್ಟಿಯಲ್ಲಿ ಕಾಣುವ ವಿವಿಧ ವಸ್ತುಗಳ ಮೂಲಕಾರಣವಾದ ಏಕತ್ವದ ವಿಷಯವಾದ ಶಾಸ್ತ್ರವಾದ್ದರಿಂದ ಕಠಿನವಾಗಿರುವ ಕಾರಣ ಇದರ ಸ್ಪಷ್ಟೀಕರಣಕ್ಕಾಗಿ ಎಷ್ಟು ಬರೆದರೂ ಅಗತ್ಯವೆ

ಇದರಲ್ಲಿ ಇನ್ನೊಂದು ವಿಶೇಷವೇನೆಂದರೆ ಇದರ ಅರ್ಥವನ್ನು ಗ್ರಹಿಸಬೇಕೆಂಬುವವನು ಇಂಥದ್ದೊಂದು ಪಕ್ಷದ ದೀಕ್ಷೆಯನ್ನು ವಹಿಸಿದವನಾಗಬೇಕೆಂಬ ನಿಯಮವಿಲ್ಲ ಇದು ಭಾರತೀಯರ ಭಂಡಾರವಾಗಿದ್ದರೂ ಕರೆದವರ ಕಾಮಧೇನು

ವಾಗಿದ್ದು ಜಗತ್ತಿನಲ್ಲಿ ಲಿಪಿಯನ್ನು ಹೊಂದಿರುವ ಭಾಷೆಗಳಲ್ಲೆಲ್ಲ ಆಯಾ ಭಾಷಾಂತರಗಳಲ್ಲಿ ರೂಪುಗೊಂಡು ಎಲ್ಲೆಲ್ಲಿಯೂ ಪ್ರಶಂಸೆಯನ್ನು ಹೊಂದಿ ಭರತಖಂಡಕ್ಕೇ ಅನ್ಯಾದೃಶವಾದ ಯಶಸ್ಸನ್ನು ತಂದುಕೊಟ್ಟಿರುವದು ವ್ಯವಹಾರವನ್ನು ಹೇಗೆ ನಡೆಸಬೇಕೆಂಬ ಯೋಚನೆಯುಂಟಾದಾಗ ಇದು ಅದರ ತೊಡಕನ್ನು ಬಿಡಿಸಿ ಹೇಳುತ್ತದೆ ನೀತಿ ಮರ್ಯಾದೆಗಳ ವಿಷಯದಲ್ಲಿ ಸಂಶಯವುಂಟಾದಾಗ ಇದು ಅವುಗಳ ಉಚ್ಚನೀಚ ಸ್ವರೂಪವನ್ನು ಬಿಚ್ಚಿ ಮುಂದಿಡುತ್ತದೆ ಇನ್ನು ಜಗತ್ತಿಗೆಲ್ಲ ಕಾರಣವಾದ ಮೂಲತತ್ತ್ವವೇನಿರಬಹುದೆಂಬುದರ ಕಡೆಗೆ ಕಣ್ಣು ಹಾಕಿದರ ಇದು ಅದನ್ನು ಕಣ್ಣಿಗೆ ಕಟ್ಟಿದಹಾಗೆ ಮುಂದಿಡುತ್ತದೆ ಲೋಕದಲ್ಲಿ ಜನರಿಗೆ ಸ್ವಭಾವವಾಗಿ ಇಂಥ ಪರಮಾರ್ಥ ವಿಚಾರಗಳು ರುಚಿಸುವದು ಬಹು ಕಡಿಮೆ ಆದರೂ ಭಗವದ್ಗೀತೆಯೆಂದರೆ ಎಲ್ಲರಿಗೂ ಬಾಯಿ ನೀರುಕರೆಯುವಹಾಗಿರುವದು ಏಕೆಂದರೆ ಇದು ಭಾರವಾದ ವಿಚಾರ ವಿಶೇಷಗಳೆಂಬ ಅಲಿಕಲ್ಲುಗಳ ಗಂಟುಕಟ್ಟಿ ವಾಚಕರ ತಲೆಯ ಮೇಲೆ ಹೇರಬೇಕೆಂದು ಶ್ರೀಕೃಷ್ಣನು ತನ್ನ ಮೆದುಳನ್ನು ಬಲಾತ್ಕಾರದಿಂದ ಹಿಂಡಿ ತೊಟ್ಟಿಕ್ಕಿಸಿದ ರಸವಲ್ಲ, ಅರ್ಜುನನ ಮೇಲಿನ ಪ್ರೇಮದಿಂದ ಶ್ರೀಕೃಷ್ಣನ ಹೃದಯದಿಂದ ತಾನಾಗಿ ಉಕ್ಕಿ ಹರಿದುಬಂದದ್ದಿದು ಆದ್ದರಿಂದ ಇದರಲ್ಲಿ ಸೃಷ್ಟಿಯ ವಿಚಾರ ಮತ್ತು ಜ್ಞಾನಿಯ ಲಕ್ಷಣ ಮೊದಲಾದುವುಗಳು ಒಂದೇ ಕಡೆಯಲ್ಲದೆ ಮತ್ತೆಮತ್ತೆಯೂ ಬಂದಿರುವವು ಕ್ರಿಸ್ತಧರ್ಮದವರು ತಮ್ಮ ಧರ್ಮಗ್ರಂಥವಾದ ಬೈಬಲನ್ನು ಕಾಸಿಗೊಂದು ಕೊಸರಿಗೊಂದು ಕೊಡುತ್ತ ಅದರ ಪ್ರಚಾರಕ್ಕಾಗಿ ಸರ್ವ ಸನ್ನಾಹಗಳನ್ನು ನಡೆಸಿದರೂ ಕೂಡ ಅದು ಮುಂದೆ ಹೆಜ್ಜೆ ಇಡಲಾರದೆ ಇರುವಾಗ ನಮ್ಮ ಭಗವದ್ಗೀತೆಯು ನಾವು ಕಣ್ಣು ಮುಚ್ಚಿಕೊಂಡೂ ಕೈ ಮುದುರಿಕೊಂಡೂ ನಮ್ಮ ಹಿಮ್ಮೇಣಿಯ ಬಾಯಿ ಕಟ್ಟಿಕೊಂಡೂ ಕೂತಿದ್ದರೂ ತಾನು ತನ್ನ ಪ್ರಭಾವದಿಂದಲೇ ಜಗಚ್ಚಕ್ರವನ್ನೇ ತನ್ನ ನರ್ತನಶಾಲೆಯನ್ನಾಗಿ ಮಾಡಿಕೊಂಡು ಪೃಥ್ವಿಯ ಎಲ್ಲ ಜನಾಂಗದವರೂ ತನ್ನನ್ನು ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತೆ ಮಾಡಿದೆ ಇದರಿಂದಲೆ ಈ ಭಗವದ್ಗೀತೆಯೆಂಬ ಕಲ್ಪವೃಕ್ಷದ ತಾಯಿ ಬೇರು ಎಷ್ಟು ಚೆನ್ನಾಗಿ ಎಲ್ಲೆಲ್ಲಿಯೂ ಹರಡಿಕೊಂಡಿರುವುದೆಂಬುದು ತಾನೇ ಎದ್ದು ಕಾಣುತ್ತದೆ ಈಚೀಚೆಗೆ ಪ್ರತಿವರ್ಷವೂ ಮಾರ್ಗಶಿರ ಶುದ್ಧ ೧೧ ಗೀತಾಜಯಂತಿ ಎಂಬ ಹೆಸರಿನಿಂದ ಇದರ ಜನ್ಮದಿನದ ಉತ್ಸವವು ಎಲ್ಲ ಕಡೆಯಲ್ಲಿಯೂ ನಡೆಯಲಾರಂಭವಾಗಿರುವದು ಇಷ್ಟೇ ಅಲ್ಲ ಜಗತ್ತಿನಲ್ಲಿ ಎಷ್ಟೋ ವಿಚಾರಗಳ ಮೇಲೆ ಎಷ್ಟೋ ಗ್ರಂಥಗಳು ಹುಟ್ಟಿರುವಾಗ ಭಗವದ್ಗೀತೆಯ ಸಂಬಂಧವಾಗಿ ಹುಟ್ಟಿರುವ ಗ್ರಂಥಗಳದೇ ಕಳೆದ ವರ್ಷದ ರಾಷ್ಟ್ರೀಯ ಮಹಾಸಭೆಯ ಸಮಯದಲ್ಲಿ ಕಲಿಕತೆಯಲ್ಲಿ ಒಂದು ಪ್ರದರ್ಶನವು ನಡೆದಿರುವದನ್ನು ನೋಡಿದರೆ ಇದರ ವ್ಯಾಪಕತ್ವವು ಎಷ್ಟು ಅಪರಿಮಿತವೆಂದು ಗೊತ್ತಾಗುತ್ತದೆ.

ಭಗವದ್ಗೀತೆಯೆಂದೊಡನೆ ಇದು ವೈರಾಗ್ಯವನ್ನುಂಟುಮಾಡುವ ಗ್ರಂಥವಾದ್ದರಿಂದ ಇದನ್ನೋದಿ ತಮ್ಮ ಹುಡುಗರಿಗೆ ವಿರಕ್ತಿಯಲ್ಲಿ ಗಂಟು ಬಿದ್ದೀತೋ ಎಂದು ಕೆಲವರು ಅರೆಮರುಳರು ತಮ್ಮ ಹೊಟ್ಟೆಯನ್ನು ತಾವೇ ಕಿವಿಚಿಕೊಳ್ಳುತ್ತಾರೆ. ದುರ್ದೈವದಿಂದ ವಿರಕ್ತಿಯೆಂಬುದು ಅಷ್ಟು ಅಗ್ಗವಾಗಿ ಬಂದು ಗಂಟುಬೀಳುವಂಥದ್ದಲ್ಲ ಒಂದು ಪಕ್ಷಕ್ಕೆ ಅದು ಕಾಣಿಸಿಕೊಂಡರೆ ಆಗ ಅವನ ಪುಣ್ಯಕ್ಕೆ ಎಣೆಯೇ ಇಲ್ಲವೆನ್ನಬೇಕು ಜಗತ್ತಿನಲ್ಲಿ ವಿರಕ್ತಿಗೆ ಸಮನಾದ ಭಾಗ್ಯವೇ ಇಲ್ಲ. ವಿರಕ್ತಿಯೆಂದರೆ ಯಾವ ಪ್ರಾಪಂಚಿಕ ಸುಖಸಾಧನವೂ ಇಲ್ಲದೆ ನಿರಾಶೆಯಿಂದ ಒಂದು ಕಡೆ ಸಾಯಲಾಗಿ ಮೂಲೆಯಲ್ಲಿ ಮುದುರಿಕೊಂಡಿರುವದೆಂದು ಬಹು ಜನರು ತಿಳಿದಿರುವರು ಇಂಥ ನಿರ್ಜೀವಿಗಳ ಬಾಯಿಗೆ ನೀರೇ ಹೊರತು ಗೀತೆಯಲ್ಲ. ಬೇಕುಬೇಕಾದ ಸುಖಸಾಧನಗಳು ತನ್ನ ಪಾದಧೂಳಿಯಲ್ಲಿ ಉರುಳಾಡುತ್ತಿದ್ದು ಅವುಗಳನ್ನು ತಾನು ಕಡೆಗಾಣುತ್ತಿರುವುದು ವೈರಾಗ್ಯ ಈ ಲೋಕದ ಸುಖದ ಸಾಧನದ ತುತ್ತುಗಳನ್ನೇ ಗಳಿಸಿಕೊಳ್ಳಲಾರದ ಹೇಡಿಯು ಪರಲೋಕದ ಬುತ್ತಿಯನ್ನೇನು ಸಂಪಾದಿಸುವನು? ಅಟ್ಟಕ್ಕೆ ಹಾರದವನು ಬೆಟ್ಟಕ್ಕೆ ಹಾರ್ಯಾನೆ? ಆದ್ದರಿಂದ ಪ್ರಾಪಂಚಿಕ ಸುಖಸಾಧನಗಳನ್ನು ಗಳಿಸಲಾರದವನು ತನ್ನ ಜನ್ಮವನ್ನು ಸಾರ್ಥಕ ಮಾಡಿಕೊಳ್ಳುವುದಕ್ಕಾಗಿ ಪರಮಾರ್ಥವನ್ನು ಸಾಧಿಸುವನೆನ್ನುವದು ಹಗಲ ಕನವರಿಕೆಯ ಮಾತು ಈ ಅರ್ಥವನ್ನು **ಶ್ರೀಸಮರ್ಥ ರಾಮದಾಸರು** ತಮ್ಮ **ದಾಸಬೋಧ** ಗ್ರಂಥದಲ್ಲಿ ಬಹಳ ಕಡೆ ಎತ್ತಿಹೇಳಿದ್ದಾರೆ ಆದ್ದರಿಂದ ತನ್ನ ಮನುಷ್ಯತ್ವವು ಸಾರ್ಥಕವಾಗಬೇಕಾದರೆ ಮನುಷ್ಯನು ತನ್ನ ಮತ್ತು ತನ್ನ ಕುಟುಂಬದ ಹೊಟ್ಟೆಬಟ್ಟೆಯನ್ನು ಸಂಪಾದಿಸುವುದರಲ್ಲಿ ಮಾತ್ರವೇ ಅಲ್ಲದೆ ಸಾರ್ವಜನಿಕವಾದ ಯಾವ ವ್ಯವಹಾರದಲ್ಲಿ ಮುಂದೆ ಬಿದ್ದರೂ ಒಳ್ಳೆ ದಕ್ಷತೆಯನ್ನು ತೋರಿಸಬಲ್ಲವನಾಗಬೇಕು ಅಂಥವನೆ ನಿಜವಾಗಿ ಆತ್ಮವಿದ್ಯೆಗೆ ಅಧಿಕಾರಿ

ಇರಲಿ ಹೀಗೆ ಬೇಕಾದಷ್ಟು ಐಶ್ವರ್ಯವನ್ನು ಗಳಿಸುವವರೂ ಎಷ್ಟೋ ಜನರು ಉಂಟಷ್ಟೆ ಅಷ್ಟುಮಾತ್ರದಿಂದಲೇ ಅವರೂ ನಮ್ಮ ಗೀತೆಗೆ ಅಧಿಕಾರಿಗಳಲ್ಲ. ಬರೀ ಈ ಹೊತ್ತಿನ—ಎಂದರೆ ಈ ಲೋಕದ—ಹೊಟ್ಟೆಬಟ್ಟೆಗಳ ಸಮೃದ್ಧಿಯೇ ಸಾಕೆನ್ನುವವರ ಮುಂದೆ ಭಗವದ್ಗೀತೆಯು ತನ್ನ ಬಾಯ ಬೀಗವನ್ನು ತೆಗೆದು ಮುತ್ತನ್ನುದುರಿಸುವದಿಲ್ಲ ಏಕೆಂದರೆ ಜಡವಾದ ವಿಷಯಗಳ ಮುಂದೆ ಬಾಯುಗಲಿಸಿಕೊಂಡು ಕಣ್ಣುಕಣ್ಣು ಬಿಡುತ್ತ ದೈನ್ಯಪಟ್ಟು ಅದರ ಸುಖವನ್ನು ಪಡೆಯುತ್ತ ಆ ದೈನ್ಯಕ್ಕೆ ಹೇಸದೆ ಇರುವ ದಾಸ್ಯ ಬುದ್ಧಿಯವರ ಮೇಲೆ ತನ್ನ ದೃಷ್ಟಿಯನ್ನು ಹಾಕಲು ಗೀತಾದೇವಿಯು ಸಂಕೋಚಗೊಳ್ಳುವಳು ಆ ದಾಸ್ಯವನ್ನು ಕೂಡ ಕಳೆದುಕೊಳ್ಳಬೇಕೆಂದು ಬಯಸುವ ಧೀರನಾದರೆ ಮಾತ್ರ ಅವನ ಮೇಲೆ ಗೀತಾದೇವಿಯ ಕೃಪಾಕಟಾಕ್ಷವು ಬಿದ್ದೀತು. ಆದ್ದರಿಂದ ಗೀತಾದೇವಿಯ ಒಲುಮೆಯನ್ನು

ಪಡೆಯಬೇಕೆನ್ನುವವನ ಆಶೆ ಇನ್ನೂ ಹೆಚ್ಚಾಗಿರಬೇಕು ಈ ಪ್ರಾಪಂಚಿಕ ವಸ್ತುಗಳೆಲ್ಲ ಅವನ ಕಣ್ಣಿಗೆ ಕ್ಷುದ್ರಗಳಾಗಿ ಕಾಣಬೇಕು ಈ ವಸ್ತುಗಳಿಂದಾಗುವ ಸುಖಕ್ಕಿಂತ ಹೆಚ್ಚಿನ ಬಗೆಯ ಸುಖವನ್ನು ಪಡೆಯಬೇಕೆಂದು ಅವನ ಮನಸ್ಸು ಆತುರಗೊಳ್ಳಬೇಕು ಹೀಗೆ ಸುಖದ ಗಣಿಯನ್ನೇ ಸೂರೆಗೊಳ್ಳಬೇಕೆಂಬಷ್ಟು ಮಹತ್ತರವಾದ ಆಶೆಯುಳ್ಳವನೆ ನಮ್ಮ ಗೀತೆಯ ಅಧಿಕಾರಿಯು ವಿರಕ್ತಿಯೆಂದರೆ ಎಲ್ಲ ಸುಖಸಾಧನಗಳನ್ನೂ ತೊರೆಸುವಂಥದ್ದೆಂದು ತಿಳಿಯಬಾರದು, ಇನ್ನಿಲ್ಲವೆನಿಸುವಂಥ ಹೆಚ್ಚಿನ ಸುಖದ ಬಯಕೆಯೆಂದು ತಿಳಿಯಬೇಕು

ಇನ್ನು ಕೆಲವರು ಭಗವದ್ಗೀತೆಯೆಂದರೆ ಮುಪ್ಪಿನ ಕಾಲದಲ್ಲಿ ನೋಡತಕ್ಕ ಗ್ರಂಥವೆಂದು ತಿಳಿಯುವರು ಇದಕ್ಕೆ ವಿರಕ್ತಿಯೆಂಬ ಮಾತಿನ ತಪ್ಪು ತಿಳುವಳಿಕೆಯೂ ಕಾರಣ ಇದಲ್ಲದೆ ಭಗವದ್ಗೀತೆಯು ಪಾರಮಾರ್ಥಿಕ ಗ್ರಂಥವಾದ್ದರಿಂದ ವ್ಯವಹಾರದಲ್ಲಿ ಅದರ ಉಪಯೋಗವೇನೂ ಇಲ್ಲವೆಂಬ ಚಿಪ್ಪುತನ ಒಂದು ಕಾರಣ ಭಗವದ್ಗೀತೆಯು ಪಾರಮಾರ್ಥಿಕ ಗ್ರಂಥವೇನೋ ನಿಜವೆ ಆದರೆ ವ್ಯವಹಾರದಲ್ಲಿ ಅದರ ಉಪಯೋಗವಿಲ್ಲದೆ ಇಲ್ಲ ಜಗತ್ತಿನಲ್ಲಿ ಸರ್ವೈಶ್ವರ್ಯಸಂಪನ್ನರೂ ಕೂಡ ನಿಟ್ಟುಸಿರಿಡುತ್ತಿರುವುದನ್ನು ನಾವು ನೋಡುತ್ತೇವಷ್ಟೆ ಅವರಿಗೆ ಯಾವ ಸುಖಸೌಕರ್ಯದಲ್ಲೇನು ಕಡಿಮೆ ? ಅವರಿಗೆ ಎಲ್ಲವೂ ಇದ್ದರೂ ಆ ಸುಖಸಾಧನೆಗಳೆಲ್ಲ ಬರೀ ತೋರಿಕೆಯವುಗಳೆಂಬ ಬೆಲೆ ತಿಳಿಯದೆ ಇರುವುದರಿಂದ ಅವುಗಳೆಲ್ಲ ಎಂದೆಂದಿಗೂ ನಿಜವಾಗಿ ಹೀಗೆಯೇ ಇರುವವೆಂದು ನಂಬಿ ಮೋಸಹೋಗುವುದೇ ಅವರ ದುಃಖಕ್ಕೆ ಕಾರಣ ಭಗವದ್ಗೀತೆಯು ಈ ತಪ್ಪು ತಿಳಿವಳಿಕೆಯ ಬೇರನ್ನು ಕಿತ್ತೊಗೆಯುವದು ಜಗತ್ತೆಂಬುವದು ತುದಿಮೊದಲು ಕಾಣದೆ ಇರುವ ಸಮುದ್ರದಂತಿದೆ ಜಗತ್ತಿನಲ್ಲಿರುವ ನಾವು ಆ ಸಮುದ್ರದ ನೀರಿನಲ್ಲಿ ಜಾರಿಬಿದ್ದವರಾಗಿದ್ದೇವೆ ಈಗ ನಾವು ಈಜುವ ಮರ್ಮವನ್ನು ತಿಳಿಯದೆಹೋದರೆ ಕಣ್ಣುಕಿವಿ ಬಾಯಿಯೊಳಗೆಲ್ಲ ಉಪ್ಪುನೀರು ನುಗ್ಗಿ ಗುಟುಕುನೀರು ಕುಡಿದು ಮುಳುಗಿ ಸಂಕಟದಿಂದ ಸತ್ತು ಮೀನು ಮೊಸಳೆಗಳಿಗೆ ತುತ್ತಾಗುತ್ತೇವೆ ಆದ್ದರಿಂದ ಜಗತ್ತೆಂಬ ಸಮುದ್ರದಲ್ಲಿ ಈಜುವದನ್ನು ಕಲಿಯಬೇಕು ಇದಕ್ಕೆ ಭಗವದ್ಗೀತೆಯೇ ಸದ್ಗುರು ಈಜು ಕಲಿತವರೆಲ್ಲರೂ ನೀರಿನ ಮೇಲೆ ತೇಲುವ ಆನಂದವನ್ನು ಅನುಭವಿಸುವಂತೆ ಭಗವದ್ಗೀತೆಯನ್ನು ಓದಿದವರೆಲ್ಲರೂ ಅಳಿಯದ ಆನಂದವನ್ನು ಅನುಭವಿಸುತ್ತಾರೆ ಆದ್ದರಿಂದ ಗೀತೆಗೆ ಮುದುಕರೂ, ಹುಡುಗರೂ ಮತ್ತೆ ಎಲ್ಲರೂ ಅಧಿಕಾರಿಗಳು

ನಮ್ಮ ದೇಶದ ಜ್ಞಾನಭಂಡಾರವಾದ ಈ ಗೀತೆಗೆ ಬೇರೆ ಬೇರೆ ಪಂಥದವರು ಬೇರೆ ಬೇರೆ ಸಿದ್ಧಾಂತಗಳ ಒಲವನ್ನು ಕೊಟ್ಟು ಬರೆದಿರುವರು ಆದ್ದರಿಂದ ಆ ಮಹಾಚಾರ್ಯರು ನಡೆಸಿದ ಸಂಪ್ರದಾಯದ ದಾರಿಯಲ್ಲಿ ಹೆಜ್ಜೆ ಇಡುವ ವ್ಯಾಖ್ಯಾನಗಳೇ

ಬಹಳ. ಈ ನನ್ನ ವ್ಯಾಖ್ಯಾನವು ಈಗ ಇರುವ ವ್ಯಾಖ್ಯಾನಗಳಲ್ಲೆಲ್ಲ ಅತ್ಯಂತ ಪುರಾತನವಾದ ಶಾಂಕರ ಸಂಪ್ರದಾಯದ ಹೆಜ್ಜೆಯನ್ನು ಹಿಡಿದು ಬರೆದದ್ದಾಗಿರುವದು.

ಸಾಮಾನ್ಯವಾಗಿ ಗೀತೆಗೆ ಹೊಸ ವ್ಯಾಖ್ಯಾನಕ್ಕಿಂತಲೂ ಹಳೇ ಸಂಪ್ರದಾಯದ ಮೇಲೆ ಬಹಳ ಪ್ರೀತಿ ಇರುವದೆಂದು ತೋರುವದು. ಹೇಗೆಂದರೆ, ಈ ಉಪದೇಶವನ್ನು ಪರಮಾತ್ಮನು ವಿವಸ್ವಂತನಿಗೆ ಹೇಳಿದನೆಂದೂ ಅವನಿಂದ ಅದು ಮುಂದಕ್ಕೆ ಸಾಗಿತೆಂದೂ ಗೀತೆಯಲ್ಲಿ ಸಂಪ್ರದಾಯಪರಂಪರೆಯು ಸೂಚಿತವಾಗಿರುವದು (೪-೧). ಇದಲ್ಲದೆ ಕರ್ಮವನ್ನು ಮಾಡಬೇಕೆನ್ನುವಾಗಲೂ "ಹಿಂದಿನವರು ಬಹುಕಾಲದಿಂದ ನಡೆಸಿಕೊಂಡು ಬಂದಿರುವ ಕರ್ಮವನ್ನು ಮಾಡು (೪-೧೫)" ಎಂಬುದರಲ್ಲಿಯೂ ಸಂಪ್ರದಾಯವು ತೋರುತ್ತದೆ. ಹಿಂದಿನವರು ಹೋದ ದಾರಿಯೆಂದು ಕಣ್ಣುಮುಚ್ಚಿಕೊಂಡು ಹೋಗಬೇಕೆಂಬರ್ಥದಲ್ಲಿ ಗೀತೆಯು ಸಂಪ್ರದಾಯವನ್ನು ಮುಂದೆ ಮಾಡುವದಿಲ್ಲ. ಸಾಮಾನ್ಯವಾಗಿ ಒಂದು ಸಂಪ್ರದಾಯಕ್ಕೆ ಬಹುಕಾಲದಿಂದ ಲೆಕ್ಕವಿಲ್ಲದಷ್ಟು ಮೇಧಾವಿಗಳು ತಲೆ ಬಗ್ಗಿಸಿರಬೇಕಾದರೆ ಅದರ ತಿರುಳು ತೂಕವಾಗಿರಬೇಕೆಂಬ ಲೋಕಾಭಿಪ್ರಾಯವನ್ನು ಹಿಡಿದು ಗೀತೆಯು ಹಾಗೆ ಹೇಳಿದಂತೆ ಕಾಣುತ್ತದೆ. ಆದರೂ ಒರೀ ಪೂರ್ವಸಂಪ್ರದಾಯದ್ದೆಂಬ ದೃಷ್ಟಿಯಿಂದಲೇ ಇದಕ್ಕೆ ಬೆಲೆಯನ್ನು ಕಟ್ಟಬೇಕಾಗಿಲ್ಲ. ಈ ಸಂಪ್ರದಾಯದ ಪ್ರವರ್ತಕರಾದ ಆಚಾರ್ಯರ ವಿಚಾರಪ್ರಭಾವವು ಈಗಿನ ಕಾಲದಲ್ಲಿ ವಿಚಾರಮಾರ್ಗದಲ್ಲಿ ನಮ್ಮ ದೃಷ್ಟಿಪಥವನ್ನು ಮೀರಿ ಮುಂದೆ ಹೋಗಿರುವ ಪಾಶ್ಚಾತ್ಯರ ಕಣ್ಣನ್ನು ಕೂಡ ಮಂಜುಮಾಡುವಂಥದ್ದಾಗಿರುವದು. ಆಚಾರ್ಯರ ವಿಚಾರದ ಹೊಳವು ಅಷ್ಟು ತೇಜಸ್ವಿಯಾಗಿರುವದಕ್ಕೆ ಅವರು ವಿಶೇಷವಾಗಿ ಅನುಭವವನ್ನು ಒಲವಾಗಿ ಹಿಡಿದುಕೊಂಡು ಹೋಗಿರುವದೇ ಕಾರಣ. ಅನುಭವವೆಂಬುದು ಸರ್ವಪ್ರಮಾಣಗಳಿಗೂ ರಾಜನು. ಅನುಭವವೆಂಬ ಪ್ರಮಾಣವು ಮುಂದೆ ಕಾಣಿಸಿಕೊಂಡಿತೆಂದರೆ ಪ್ರತ್ಯಕ್ಷ, ಅನುಮಾನ, ಶಬ್ದ-ಮೊದಲಾದ ಎಲ್ಲವೂ ಅದರ ಸೇವೆಗೆ ಸೊಂಟವನ್ನು ಕಟ್ಟಿಕೊಂಡು ಹಿಂದೆ ಒರುವವು. ಭೌತಿಕವಸ್ತುತತ್ತ್ವಗಳು ಹೊರಗೆ ರಸಾಯನಶಾಲೆಯಲ್ಲಿ ನಿರ್ಣಯವಾಗುವಂತೆ ಆಧ್ಯಾತ್ಮಿಕತತ್ತ್ವಗಳು ಒಳಗೆ ನಮ್ಮ ಅನುಭವದಲ್ಲಿ ನಿರ್ಣಯವಾಗುವದೇ ಭೂಷಣವಾಗಿರುವದು. ಆದ್ದರಿಂದ ಆಚಾರ್ಯರು ನಮ್ಮೆಲ್ಲರ ಎಚ್ಚರ, ಕನಸು, ನಿದ್ರೆ-ಎಂಬ ಮೂರೂ ಅವಸ್ಥೆಗಳ ಅನುಭವವೆಂಬ ಒರೆಗಲ್ಲಿನಿಂದ ತತ್ತ್ವಾರ್ಥವನ್ನು ನಿರ್ಣಯಿಸುವದರಿಂದ ಆ ತತ್ತ್ವಾರ್ಥಗಳ ಸತ್ಯತ್ವಕ್ಕೆ ಬೇರೊಬ್ಬರ ಹೊಣೆಯೇ ಬೇಕಾಗಿಲ್ಲ. ಈ ಧೈರ್ಯದಿಂದಲೆ ಅವರು ೧೮ನೆ ಅಧ್ಯಾಯದ ೬೬ನೆ ಶ್ಲೋಕಕ್ಕೆ ಭಾಷ್ಯವನ್ನು ಬರೆಯುವಾಗ "ಅಗ್ನಿಯು ತಣ್ಣಗಿದ್ದಾನೆಂದಾಗಲಿ ಬೆಳಕಿಲ್ಲದವನೆಂದಾಗಲಿ ನೂರಾರು ಶ್ರುತಿಗಳು ಹೇಳಿದರೂ ಪ್ರಮಾಣವಾಗುವುದಿಲ್ಲ" ಎಂದು ಎದೆಯನ್ನು ತಟ್ಟಿಕೊಂಡು ಹೇಳಿದ್ದಾರೆ. ಇದರಿಂದ ಅವರು ವೇದದ ಮೇಲೆ ತಿರಸ್ಕಾರಬುದ್ಧಿಯುಳ್ಳವರೆಂಬ ಅರ್ಥವನ್ನು ಯಾರೂ ತೆಗೆ

ಯುಬಾರದು ವೇದದಲ್ಲಿ ಹೇಳಿರುವದೆಲ್ಲ ಅನುಭವಕ್ಕೆ ಹೊಂದಿರುವದೆಂಬ ಬಲವಾದ ಭರವಸದಿಂದ ಅವರು ಆ ಮಾತನ್ನಾಡಿರುವರು ಇದೇ ದೃಢವಾದ ಶ್ರದ್ಧೆಯೇ ಹೊರತು ಸುಮ್ಮನೆ ವೇದದಲ್ಲಿ ಹೇಳಿರುವದೆಂಬ ಮಾತ್ರದಿಂದ ನಂಬುವದು ನಿಜವಾದ ಶ್ರದ್ಧೆಯಲ್ಲ ನಮ್ಮ ಅನುಭವಕ್ಕೇ ಪ್ರಾಶಸ್ತ್ಯವಾದರೆ ವೇದದ್ದೇನು ಹೆಚ್ಚುಗಾರಿಕೆಯೆಂದರೆ ನಮ್ಮ ತಿಳಿವಳಿಕೆಯಲ್ಲಿ ಎದ್ದು ಕಾಣದೆ ಮರೆಯಾಗಿರುವ ಅನುಭವಗಳನ್ನು ಅದು ನಮ್ಮ ಸ್ಮೃತಿಪಥಕ್ಕೆ ಏರಿಸಿ ತೋರಿಸುವುದು ವೇದವು ತೋರಿಸಿದ ಹೊರತು ನಮಗೆ ಆ ನಮ್ಮ ಅನುಭವವೇ ಗೋಚರವಾಗುತ್ತಿರುವದಿಲ್ಲ ಆದ್ದರಿಂದಲೆ ವೇದಕ್ಕೆ ಹೆಚ್ಚುಗಾರಿಕೆ ತಾತ್ಪರ್ಯವೇನೆಂದರೆ ನಾನು ಇಲ್ಲಿ ಆಚಾರ್ಯರ ಸಂಪ್ರದಾಯವನ್ನು ಅನುಸರಿಸಿರುವೆನೆಂದು ಹೇಳಿರುವದು ಸಂಪ್ರದಾಯಪ್ರಿಯರಿಗೆ ಹೇಳಿದ ಮಾತು ಸಂಪ್ರದಾಯವೆಂದಕೂಡಲೆ ಒಂದು ವ್ಯಕ್ತಿಯ ಕಲ್ಪನೆಯಿಂದ ನೊಂದುಕೊಳ್ಳುವವರು ಇದನ್ನು ಶ್ರೀಶಂಕರಭಗವತ್ಪಾದರ ಸಂಪ್ರದಾಯವೆಂಬುದನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ ಅನುಭವ ಪ್ರಮಾಣವನ್ನು ಹಿಡಿದ ಸಂಪ್ರದಾಯವೆಂದು ತಿಳಿದುಕೊಂಡರೆ ಬಹಳ ಚೆನ್ನಾಗಿರುವದು ಅನುಭವಕ್ಕೆ ಒಪ್ಪುವ ಅರ್ಥವನ್ನು ಯಾರು ಬೇಡವೆನ್ನಲಾದೀತು? ಆದ್ದರಿಂದ ಈ ಗ್ರಂಥವು ಕನ್ನಡಿಗರೆಲ್ಲರೂ ಓದತಕ್ಕದ್ದಾಗಿರುವದು.

ದಿಕ್ಪ್ರದರ್ಶನಾರ್ಥವಾಗಿ ಅನುಭವಕ್ಕೆ ಒರೆ ಹಚ್ಚಿ ನೋಡಿಕೊಳ್ಳಬಹುದಾದ ಮುಖ್ಯವಾದ ಕೆಲವು ಸ್ಥಲಗಳು ಯಾವವೆಂದರೆ —ಎಲ್ಲ ವಸ್ತುಗಳನ್ನೂ ನಿನ್ನೊಳಗೆ ನೋಡುತ್ತಿ ಮತ್ತು ನನ್ನಲ್ಲಿಯೂ ನೋಡುತ್ತಿ (೪–೩೫) ತಾನು ಎಲ್ಲ ಪ್ರಾಣಿಗಳೊಳಗೂ ಇರುವವನೆಂದೂ ತನ್ನಲ್ಲಿ ಎಲ್ಲ ಚರಾಚರಾ ವಸ್ತುಗಳೂ ಗರ್ಭಿತವಾಗಿರುವವೆಂದೂ ನೋಡುತ್ತಾನೆ (೬–೨೯) ಯಾರು ನನ್ನನ್ನು ಎಲ್ಲೆಲ್ಲಿಯೂ ಮತ್ತು ಎಲ್ಲವನ್ನೂ ನನ್ನಲ್ಲಿಯೂ ನೋಡುತ್ತಾನೊ (೬–೩೦) ನಾನು ಅವುಗಳಲ್ಲಿಲ್ಲ; ಅವು ನನ್ನಲ್ಲಿವೆ (೭–೧೨) ಚರಾಚರ ಜಗತ್ತೆಲ್ಲ ಯಾವನೊಳಗಿವೆಯೊ ಯಾವನು ಈ ಎಲ್ಲದರಲ್ಲಿಯೂ ವ್ಯಾಪಿಸಿಕೊಂಡಿದ್ದಾನೊ (೮–೨೨) ಎಲ್ಲ ಕ್ಷೇತ್ರಗಳಲ್ಲಿಯೂ ಕ್ಷೇತ್ರಜ್ಞನು ನಾನು (೧೩–೨). ಪ್ರಾಣಿಗಳಲ್ಲೆಲ್ಲ ಬೇರೆ ಬೇರೆ ಇರುವ ಹಾಗೆ ಇದ್ದು ಅಖಂಡನಾಗಿರುವನು(೧೩–೧೬) ಬೇರೆ ಬೇರೆ ಸ್ಥಾವರಜಂಗಮ ವಸ್ತುಗಳೆಲ್ಲ ಒಬ್ಬನಲ್ಲಿಯೇ ಇರುವದು (೧೩–೩೦). ಎಲ್ಲ ವಸ್ತುಗಳಲ್ಲಿಯೂ ಏಕತ್ವವನ್ನು ನೋಡುವದು ಸಾತ್ತ್ವಿಕ (೧೮–೨೦)

ಭಗವದ್ಗೀತೆಯ ಅರ್ಥವು ಸಮುದ್ರಪ್ರಾಯವಾಗಿ ಬೆಳೆದು ನೆಲಾಗುದ್ದಿ ಮೈನೋಯಿಸಿಕೊಳ್ಳುವ ಬೇರೆ ಬೇರೆ ಪ್ರಕ್ರಿಯೆಗಳಿಂದ ತುಂಬಿಹೋದರೆ ಆ ಬಲೆಯ ಕಣ್ಣೊಳಗೆ ಸಿಕ್ಕುಬಿದ್ದ ವಾಚಕರಿಗೆ ದಿಕ್ಕುಕಾಣದಂತಾಗಬಹುದೆಂದು ಯೋಚಿಸಿ ನಾನು ಇಲ್ಲಿ ಮುಮುಕ್ಷುಗಳ ಬಾಯಾರಿಕೆ ಇಂಗುವಷ್ಟು ಮಾತ್ರದ ಅಮೃತಸರೋವರಪ್ರಾಯವಾಗಿ ಇದನ್ನು ರಚಿಸಿದ್ದೇನೆ. ಕನ್ನಡಭಾಷಾಭಂಡಾರಕ್ಕೊಂದು ಹೊಸ

ಮಾದರಿಯಾಗುವಂತೆ ಈ ವ್ಯಾಖ್ಯಾನದಲ್ಲಿ ನಾನು ಯತ್ನಿಸಿರುವದೇನೆಂದರೆ-ಕನ್ನಡದಲ್ಲಿ ಪ್ರತಿಯೊಂದು ಶಬ್ದಕ್ಕೂ ಅರ್ಥವನ್ನು ಬರೆದಿರುವ ಪ್ರತಿಗಳ ಪ್ರಚಾರವು ಕಡಿಮೆಯಾಗಿರುವದರಿಂದ ಹೆಚ್ಚು ಸಂಸ್ಕೃತದಲ್ಲಿ ಪರಿಚಯವಿಲ್ಲದವರಿಗಾದರೂ ಪಾರಾಯಣಕಾಲದಲ್ಲಿ ಪ್ರತಿಯೊಂದು ಶಬ್ದವೂ ಮನಸ್ಸಿನ ಮೇಲೆ ತನ್ನದೊಂದು ಸಂಸ್ಕಾರವನ್ನು ಮೂಡಿಸುವದಕ್ಕನುಕೂಲವಾಗಬೇಕೆಂದು ಯೋಚಿಸಿ ವ್ಯವಹಾರದಲ್ಲಿ ಅಪೂರ್ವವಾದ ದಕ್ಷತೆಯನ್ನೂ ಪರಮಾರ್ಥದಲ್ಲಿ ನಿಜವಾದ ನಿಷ್ಠೆಯನ್ನೂ ಉಂಟುಮಾಡಿ ಏಕಕಾಲದಲ್ಲಿ ಎರಡು ಕೈಯಲ್ಲಿಯೂ ಕತ್ತಿಯನ್ನು ತಿರುಗಿಸುವಂಥ ವಿಲಕ್ಷಣ ಸಾಮರ್ಥ್ಯವು ಉಂಟಾಗುವಂತೆ ಅನ್ವಯಕ್ರಮವಾಗಿ ಪ್ರತಿಯೊಂದು ಮಾತಿಗೂ ಅರ್ಥವನ್ನು ಕೊಟ್ಟಿರುತ್ತೇನೆ. ಈ ಸಂದರ್ಭದಲ್ಲಿ ಎಷ್ಟೋ ಕಡೆ ಪಾದಪೂರಣಾರ್ಥವಾಗಿರುವ 'ಚ' ಶಬ್ದ ಮೊದಲಾದ ಅವ್ಯಯಗಳ ಅರ್ಥವನ್ನು ಬಲಾತ್ಕಾರದಿಂದ ಹಿಂಡದೆ ಅವುಗಳನ್ನು ಸುಮ್ಮನೆ ಒಂದು ಕಡೆಯಲ್ಲಿಟ್ಟುಬಿಟ್ಟಿದ್ದೇನೆ ಪ್ರತಿಯೊಂದು ಮಾತಿನ ಅರ್ಥವಾದರೂ ಎಷ್ಟೋ ಕಡೆ ಕೆಲವು ಮಟ್ಟಿಗಾದರೂ ವಿವರಣೆಯಿಂದ ಕೂಡಿದ್ದರೇ ಹೊರತು ಇಲ್ಲದಿದ್ದರೆ ಮನಸ್ಸಿನಲ್ಲಿ ಒಡೆದು ಮೂಡುವ ಸಂಭವವಿಲ್ಲದಿರುವದನ್ನು ನೋಡಿ ಅದನ್ನು ಹಿಗ್ಗಿಸಿದ ಹಿತವೂ ಮಿತವೂ ಆದ ವಿವರಣೆಯನ್ನು ಜೋಡಿಸಿದ್ದೇನೆ ಇಷ್ಟರಿಂದಲೂ ಕೂಡ ವಾಚಕರ ಹೃದಯದಲ್ಲಿ ಗೀತಾರ್ಥದ ರಸವು ಇಳಿಯದಷ್ಟು ಗಟ್ಟಿಯಾಗಿ ಒಗೆಟಾಗಿರುವ ಕಡೆ (ಉದಾಹರಣೆಗೆ ೨-೧೬, ೨-೬೯, ೪-೧೮) ಆ ಅಭಿಪ್ರಾಯಗಳನ್ನು ಜೀರ್ಣಿಸಿಕೊಳ್ಳುವುದಕ್ಕೆ ತಕ್ಕ ರಸದ ರೂಪವಾಗಿ ಯುಕ್ತಿಯನ್ನೂ ಅನುಭವವನ್ನೂ ನೆನಪುಗೊಟ್ಟು ಉದಾಹರಣೆಗಳೊಡನೆ ಅದನ್ನು ಗಂಟಲಲ್ಲಿಳಿಯುವ ಹಾಗೆ ಹದವಾದ ತುತ್ತಾಗಿ ಮಾಡಿದ್ದೇನೆ ಒಂದು ಶ್ಲೋಕದಲ್ಲಿಯೇ ಒಂದು ವಿಷಯದಿಂದ ಇನ್ನೊಂದಕ್ಕೆ ಹೋಗುವಾಗ ಅವೆರಡರ ಸಂಬಂಧವನ್ನು ತಿಳಿಸುವದಕ್ಕಾಗಿ ಆಕಾಂಕ್ಷೆಯನ್ನೆತ್ತಿ ಹೇಳಿರುತ್ತೇನೆ ಒಂದು ಶ್ಲೋಕದಿಂದ ಇನ್ನೊಂದು ಶ್ಲೋಕಕ್ಕೆ ಹೋಗುವಾಗ ಅಗತ್ಯವಾದ ಕಡೆಗಳಲ್ಲೆಲ್ಲ ಹದವಾದ ಮೆಟ್ಟಿಲಿನಂತೆ ಅವತರಣಿಕೆಗಳನ್ನು ಕೊಟ್ಟಿದ್ದೇನೆ ಕೆಲವು ಕಡೆ ಅವಯವಾರ್ಥಗಳನ್ನೂ ಸೂಚಿಸಿದ್ದೇನೆ. ಅದೇ ಶಬ್ದಗಳು ಮತ್ತೆ ಮತ್ತೆ ಬಂದಾಗ ಅವುಗಳಿಗೆ ಬರೀ ಅರ್ಥವನ್ನು ಮಾತ್ರ ಕೊಟ್ಟು ಮುಂದೆ ಸಾಗಿದ್ದೇನೆ. ಎರಡು ಬಗೆಯ ಅನ್ವಯಗಳು ಕಂಡು ಬಂದು ಎರಡೂ ಸಮತೂಕವಾಗಿದ್ದರೆ ವ್ಯಾಖ್ಯಾನದಲ್ಲಿ ಎರಡನ್ನೂ ಸೇರಿಸಿದ್ದೇನೆ ತೂಕದಲ್ಲಿ ಮೇಲು ಕೀಳು ಕಂಡಾಗ ವ್ಯಾಖ್ಯಾನದಲ್ಲಿ ಒಂದನ್ನಿಟ್ಟು ಟಿಪ್ಪಣಿಯಲ್ಲಿ ಇನ್ನೊಂದನ್ನು ಕೊಟ್ಟಿದ್ದೇನೆ. ಇಷ್ಟೆಲ್ಲ ವಿಷಯಗಳಿದ್ದರೂ ಕಂಸದಲ್ಲಿ ಹಾಕಿರುವ ಸಂಸ್ಕೃತ ಶಬ್ದಗಳನ್ನು ಬಿಟ್ಟೋದಿದರೆ ವ್ಯಾಖ್ಯಾನವು ಓದುವವರಿಗೆ ನಡುನಡುವೆ ಯಾವ ಯಾವತಡೆಯೂ ಆಗದೆ ಉತ್ಸಾಹದಿಂದ ಮುಂದುವರಿಯುವಂತಿರುವ ಲಲಿತವಾದ ವಚನ ಕಾವ್ಯವಾಗಿದ್ದು ದುಃಖಮಯವಾಗಿ ಕಾಣುವ ಜಗತ್ತನ್ನು ಸುಖಮಯವಾಗಿ ಮಾರ್ಪಡಿಸುವ ಮಹಿಮೆಯಿಂದ

ಇದು ಮುದ್ದು ಬೀರುತ್ತ ಬೆಳದಿಂಗಳಂತೆ ಹೃದಯವನ್ನು ಅರಳಿಸಿ ಆನಂದಗೊಳಿಸು ವಂತೆಮಾಡಿದ್ದೇನೆ ಬೇರೆ ಬೇರೆ ಪಾಠಾಂತರಗಳನ್ನು ಟಿಪ್ಪಣಿಯಲ್ಲಿ ಸಂಗ್ರಹಿಸಿದ್ದೇನೆ. ಗೀತೆಯು ಸರ್ವೋಪನಿಷತ್ತುಗಳ ಸಾರವೆಂಬರ್ಥವನ್ನು ಮನಗಾಣುವುದಕ್ಕಾಗಿ ಗೀತೆಯ ಮಾತುಗಳಿಗೆ ಆಧಾರವಾದ ಉಪನಿಷದ್ವಾಕ್ಯಗಳನ್ನು ಟಿಪ್ಪಣಿಯಲ್ಲಿ ಬರೆದು ಅದಕ್ಕೂ ಅರ್ಥವನ್ನು ಹೇಳಿರುತ್ತೇನೆ ಗೀತೆಯ ಮೂಲಕ್ಕೆ ಅಕ್ಷರಾನುಕ್ರಮಣಿಕೆಯನ್ನೂ ಕೊಟ್ಟಿರುತ್ತೇನೆ

ಭಗವದ್ಗೀತೆಯೆಂಬುವದು ಉಪನಿಷತ್ತುಗಳೆಂಬ ಹಸುಗಳಿಂದಕರೆದ ಹಾಲೆಂದು ಪ್ರಸಿದ್ಧವಾಗಿರುವದು ನಮ್ಮ ಈ ಸಣ್ಣ ವ್ಯಾಖ್ಯಾನವು ಆ ಹಾಲನ್ನು ಕಾಸಿ ಹೆಪ್ಪು ಹಾಕಿ ಮೊಸರುಮಾಡಿ ಕಡೆದು ಮಜ್ಜಿಗೆಯನ್ನು ಆಚೆಗಿಟ್ಟು ಬೆಣ್ಣೆಯನ್ನು ತೆಗೆದುಕೊಂಡು ಅದರಿಂದ ಸಿದ್ಧಮಾಡಿದ ಕಮ್ಮನೆಯ ತುಪ್ಪವಾಗಿರುವದು ತುಪ್ಪವು ಆಯುಸ್ಸಿನ ರೂಪವೆಂದು ಶ್ರುತಿ ಇರುವದು ಆದ್ದರಿಂದ ಈ ಗೀತಾರ್ಥದ ತುಪ್ಪದ ಸೇವನೆಯಿಂದ ಚಿರಾಯುಗಳಾಗುವ ಸಂಯೋಗವನ್ನು ಕಳೆದುಕೊಳ್ಳಬಾರದು ಕನ್ನಡಿಗರ ಕನ್ನಡಿಯಂತಿರುವ ಈ ಗ್ರಂಥವು ಕನ್ನಡಿಗರೆಲ್ಲರೂ ತಮ್ಮ ಸ್ವರೂಪವನ್ನು ಚೆನ್ನಾಗಿ ನೋಡಿಕೊಳ್ಳುವದಕ್ಕೆ ತಕ್ಕದ್ದಾಗಿರುವದು ಗೀತೆಯ ಇನ್ನೂ ಹೆಚ್ಚಿನ ವಿಷಯಗಳನ್ನು ನೋಡಬೇಕೆನ್ನುವವರು ನಮ್ಮ **ಭಗವದ್ಗೀತಾಸಾರವಿಚಾರ** ವನ್ನೋದಬಹುದು ಅದು ಇದರ ಜೋಡಿಯ ಪುಸ್ತಕ ತಾನಿರುವ ಗುಡಿಸಲನ್ನು ಬ್ರಹ್ಮಲೋಕವಾಗಿ ಮಾಡುವ ಈ ಗೀತಾಗ್ರಂಥಗಳಿಂದ ಕನ್ನಡಿಗರು ತಪ್ಪದೆ ತಮ್ಮ ಮನೆಗಳನ್ನು ಪವಿತ್ರಗೊಳಿಸಿಕೊಳ್ಳುವದು ಹೆಚ್ಚು ಶ್ರೇಯಸ್ಕರವು

ಬೆಂಗಳೂರು,
ಕಾರ್ತೀಕ ಶುಕ್ಲ ಶಾ॥ ೧೮೫೧ } **ಹೊಸಕೆರೆ ಚಿದಂಬರಯ್ಯ**

# ಎರಡನೆ ಮುದ್ರಣ

## ಪ್ರಕಾಶಕನ ಒಂದು ಮಾತು.

ಶ್ರೀಮದ್ಭಗವದ್ಗೀತೆಯು ಶ್ರೀ ಕೃಷ್ಣಾರ್ಜುನರು ಸಂಸ್ಕೃತ ಮಹಾಭಾರತದಿಂದ ಕಡೆದು ತೆಗೆದ ಬೆಣ್ಣೆ ಇಂಥ ಗೀತೆಯನ್ನು ಪಂಡಿತರು, ಪಾಮರರು ಮತ್ತೆ ಎಲ್ಲರೂ ಓದಿ ಪಾವನರಾಗಲೆಂದು ಶ್ರೀ ಹೊಸಕೆರೆ ಚಿದಂಬರಯ್ಯನವರು ತಿಳಿಗನ್ನಡದಲ್ಲಿ ರಚಿಸಿರುವರು. ಮೊದಲನೆ ಮುದ್ರಣದ ಪ್ರತಿಗಳು ತೀರಿಹೋಗಿ ಎರಡನೆ ಮುದ್ರಣದ ಅವಶ್ಯಕತೆ ಬಹಳವಾಗಿ ಕಂಡು ಬಂದರೂ ಹಣದ ಮುಗ್ಗಟ್ಟಿನಿಂದ ಇದುವರೆವಿಗೂ ಪುನರ್ಮುದ್ರಣ ಮಾಡಿಸಲು ಸಾಧ್ಯವಾಗಲಿಲ್ಲ ಶ್ರೀ ಕೃಷ್ಣಪರಮಾತ್ಮನ ಕೃಪೆಯಿಂದ ಈಗ ಎರಡನೆ ಮುದ್ರಣ ಹೊರಬಿದ್ದಿದೆ ಎಲ್ಲರೂ ಪ್ರೋತ್ಸಾಹಿಸಬೇಕಾಗಿ ಕೋರುತ್ತೇನೆ

ಪ್ರಕಾಶಕ
**ಯಂ. ರಾಮರಾವ್.**

# ವಿಷಯಕ್ರಮ

(ಕಂಸಗಳಲ್ಲಿ ಕೊಟ್ಟಿರುವ ಸಂಖ್ಯೆಗಳಲ್ಲಿ ಮೊದಲಿನದು ಆ ವಿಷಯ ಪ್ರಾರಂಭವಾಗಿರುವ ಶ್ಲೋಕದ ಸಂಖ್ಯೆಯನ್ನೂ ಕೊನೆಯದು ಅದು ಮುಗಿದಿರುವ ಶ್ಲೋಕದ ಸಂಖ್ಯೆಯನ್ನೂ ಸೂಚಿಸುವವು )

# ಗೀತಾಮಾಹಾತ್ಮ್ಯ ಸಂಗ್ರಹ



ಭಗವಾನ್ ಮಹಾವಿಷ್ಣು ಹೇಳಿದ್ದು —

ಪ್ರಾರಬ್ಧಂ ಭುಜ್ಯಮಾನೋ ಹಿ ಗೀತಾಭ್ಯಾಸರತಸ್ಸದಾ ।
ಸ ಮುಕ್ತಃ ಸ ಸುಖೀ ಲೋಕೇ ಕರ್ಮಣಾ ನೋಪಲಿಪ್ಯತೇ ॥

ಅ॥ ಪ್ರಾರಬ್ಧದ ಕರ್ಮಗಳಿಗೆ ತಲೆಗೊಟ್ಟವನು ಯಾವಾಗಲೂ ಗೀತೆಯ ಅಭ್ಯಾಸದಲ್ಲಿ ಮನಸ್ಸಿಟ್ಟರೆ ಜಗತ್ತಿನಲ್ಲಿ ಅವನು ಮುಕ್ತನು, ಅವನು ಸುಖಿಯು, ಅವನಿಗೆ ಕರ್ಮಗಳು ಅಂಟುವದಿಲ್ಲ

ಗೀತಾಯಾಃ ಪುಸ್ತಕಂ ಯತ್ರ ಯತ್ರ ಪಾಠಃ ಪ್ರವರ್ತತೇ ।
ತತ್ರ ಸರ್ವಾಣಿ ತೀರ್ಥಾನಿ ಪ್ರಯಾಗಾದೀನಿ ತತ್ರ ವೈ ॥

ಅ॥ ಎಲ್ಲಿ ಗೀತೆಯ ಪುಸ್ತಕವಿದೆಯೊ ಎಲ್ಲಿ ಅದರ ಓದುಗಾರಿಕೆ ಸಾಗುತ್ತಿರುವದೊ ಅಲ್ಲಿ ಪ್ರಯಾಗ ಮೊದಲಾದ ಎಲ್ಲ ತೀರ್ಥಗಳೂ ಇರುವವು

ಯತ್ರ ಗೀತಾವಿಚಾರಶ್ಚ ಪಠನಂ ಪಾಠನಂ ಶ್ರುತಮ್ ।
ತತ್ರಾಹಂ ನಿಶ್ಚಿತಂ ಪೃಥ್ವಿ ನಿವಸಾಮಿ ಸದೈವ ಹಿ ॥

ಅ॥ ಎಲೌ ಭೂದೇವಿಯು, ಎಲ್ಲಿ ಗೀತೆಯ ವಿಚಾರವೂ ಕಲಿಯುವಿಕೆಯೂ ಕಲಿಸುವಿಕೆಯೂ ಕೇಳಬರುವದೋ ಅಲ್ಲಿ ನಾನು ಯಾವಾಗಲೂ ಇರುವೆನು

ಗೀತಾಶ್ರಯೇಽಹಂ ತಿಷ್ಠಾಮಿ ಗೀತಾಮೇ ಚೋತ್ತಮಂ ಗೃಹಮ್ ।
ಗೀತಾಜ್ಞಾನಮುಪಾಶ್ರಿತ್ಯ ತ್ರೀನ್ಲೋಕಾನ್ಪಾಲಯಾಮ್ಯಹಮ್ ॥

ಅ॥ ನಾನು ಗೀತೆಯನ್ನಾಶ್ರಯಿಸಿಕೊಂಡಿರುವೆನು ಗೀತೆಯು ನನಗೆ ಉತ್ತಮವಾದ ಮನೆ ಗೀತಾಜ್ಞಾನವನ್ನು ಹಿಡಿದುಕೊಂಡು ನಾನು ಮೂರು ಲೋಕಗಳನ್ನೂ ಕಾಪಾಡುತ್ತಿರುವೆನು

ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ ।
ಸಕೃದ್ಗೀತಾಂಭಸಿ ಸ್ನಾನಂ ಸಂಸಾರಮಲನಾಶನಮ್ ॥

ಅ॥ ಮನುಷ್ಯನು ದಿನದಿನವೂ ನೀರಿನಲ್ಲಿ ಮುಳುಗುಹಾಕುವುದು ಮೈಯ ಕೊಳೆಯನ್ನು ಕಳೆಯುವುದು ಒಮ್ಮೆ ಗೀತೆಯೆಂಬ ನೀರಿನಲ್ಲಿ ಮುಳುಗುಹಾಕುವದು ಹುಟ್ಟು ಸಾವುಗಳೆಂಬ ಕೊಳೆಯನ್ನು ಕಳೆಯುವುದು.

—ವಾರಾಹಪುರಾಣ.

ಶ್ರೀಗುರುಭ್ಯೋ ನಮಃ

# ಗೀತಾರ್ಥ ಚಂದ್ರಿಕೆ



ಅವನ ಮಾಯಾಬಲದಿಂ । ದೀ ವಿಶ್ವದ ನಾಮರೂಪುಗಳ್ತೋರುವವೋ ।
ಆ ವಿಭುವೆಮ್ಮಯ ಜೀವದ । ಜೀವಂ ತಾನೆಂದು ಬೆಳಗುತಿರ್ಕೆಮ್ಮೊಳಗಂ ॥

ಶ್ರೀಮನ್ನಾರಾಯಣನೆಂದು ಹೆಸರುಗೊಂಡಿರುವ ಪರಮಾತ್ಮನು ಅನೇಕ ನಿಯಮಗಳಿಗೊಳಪಟ್ಟು ನಡೆಯುತ್ತಿರುವ ಈ ಜಗತ್ತಿನ ಮೂಲನಿಯಾಮಕನೆಂದು ಸಾಮಾನ್ಯವಾಗಿ ಎಲ್ಲರೂ ಭಾವಿಸುತ್ತಿರುವರಷ್ಟೆ. ಆ ಸರ್ವತಂತ್ರಸ್ವತಂತ್ರನಾದ ಭಗವಂತನು ಈ ಜಗತ್ತನ್ನು ಸೃಷ್ಟಿಮಾಡಿದಾಗಲೇ ಅದರ ನೆಮ್ಮದಿಗೆ ಸಾಧಕವಾದ ಧರ್ಮನಿಯಮಗಳನ್ನೂ ಉಪದೇಶಮಾಡಿದನು. ಅವುಗಳಿಗೆ ವೇದಗಳೆಂದು ಹೆಸರು. ಬರಬರುತ್ತ ಜನರ ತಿಳಿವಳಿಕೆಯೂ ಸಾಮರ್ಥ್ಯವೂ ಕುಗ್ಗುತ್ತ ಬಂದದರಿಂದ ಲೋಕದಲ್ಲಿ ಆ ಧರ್ಮಾಚರಣೆಯು ಕಡಿಮೆಯಾಗಿ ಅಧರ್ಮವು ಹೆಚ್ಚುತ್ತ ಬಂತು. ಅದನ್ನು ನೋಡಿ ಆ ಪರಮಾತ್ಮನು ಮತ್ತೊಮ್ಮೆ ಆ ಜಗಚ್ಚಕ್ರದ ಕೀಲನ್ನು ತಿರುಗಿಸಿ ಧರ್ಮಾಚರಣೆಗೆ ತಕ್ಕ ಶಕ್ತಿಯನ್ನು ತುಂಬಿಕೊಡಬೇಕೆಂದು ತಾನೆ ಶ್ರೀಕೃಷ್ಣನೆಂಬ ಹೆಸರಿನಿಂದ ವಸುದೇವದೇವಕಿಯರಿಗೆ ಮುದ್ದುಮಗನಾಗಿ ಕಾಣಿಸಿಕೊಂಡು ತನ್ನ ಗೆಳೆಯನಾದ ಅರ್ಜುನನನ್ನು ಸಮಾಧಾನಗೊಳಿಸುವ ನೆವದಿಂದ ಜಗತ್ತಿಗೇ ಧರ್ಮೋಪದೇಶವನ್ನು ಮಾಡಿರುವನು. ಇದೇ ಭಗವದ್ಗೀತೆಯೆಂದು ಪ್ರಸಿದ್ಧವಾಗಿರುವದು. ಇದು ಮಹರ್ಷಿಗಳಾದ ವ್ಯಾಸರು ಬರೆದಿರುವ ಮಹಾಭಾರತದೊಳಗೊಂದು ಭಾಗವಾಗಿ ವೇದದಲ್ಲಿರುವ ಉಪದೇಶ ಜೀವಾಳವನ್ನು ಅಚ್ಚುಕಟ್ಟಾಗಿ ಪ್ರತಿಪಾದಿಸಿರುವ ಪ್ರಕರಣವಾಗಿರುವದು.

ಗೀತೋಪದೇಶಕ್ಕೆ ಉಂಟಾದ ಅವಕಾಶದ ಪರಿಸ್ಥಿತಿ ಹೇಗಿತ್ತೆಂದರೆ .— ಹಸ್ತಿನಾವತಿಯಲ್ಲಿ ಆಳುತ್ತಿದ್ದ ಧೃತರಾಷ್ಟ್ರನ ಮಕ್ಕಳಾದ ಕೌರವರು ತಮ್ಮ ಚಿಕ್ಕಪ್ಪನ ಮಕ್ಕಳಾದ ಪಾಂಡವರಿಗೆ ಎಷ್ಟುಮಾತ್ರವೂ ಪಾಲು ಕೊಡದೆ ಎಲ್ಲವನ್ನೂ ತಾವೇ ನುಂಗಿ ನೀರು ಕುಡಿದದ್ದರಿಂದ ಪಾಂಡವರು ತಮಗೆ ಬೇಕಾದವರಾಗಿದ್ದ ಕೆಲವು ರಾಜರನ್ನು ತಮ್ಮ ಕಡೆಗೆ ಸೇರಿಸಿಕೊಂಡು ಕೌರವರ ಮೇಲೆ ದಂಡೆತ್ತಿಕೊಂಡು ಬಂದಿದ್ದಾರೆ ಕೌರವರೂ ತಕ್ಕಹಾಗೆ ಸನ್ನದ್ಧರಾಗಿ ಪಾಂಡವರನ್ನು ಎದುರಿಸುವದಕ್ಕೆ ನಿಂತಿದ್ದಾರೆ ಎರಡು ಸೇನೆಯೂ ಕುರುಕ್ಷೇತ್ರದಲ್ಲಿ ಸೇರಿದೆ.

ಇತ್ತ ಇದನ್ನೆಲ್ಲ ನೋಡುವದಕ್ಕೆ ಕಣ್ಣಿಲ್ಲದ ಧೃತರಾಷ್ಟ್ರನು ತನ್ನ ಮಕ್ಕಳ ಆಗುಹೋಗುಗಳ ತಳಮಳವನ್ನು ಮನಸ್ಸಿಗೆ ಹಚ್ಚಿಕೊಂಡು ಪೇಚಾಡುತ್ತಿದ್ದಾಗ ವ್ಯಾಸರು ತಮ್ಮ ವರದಿಂದಲೇ ಹುಟ್ಟಿದ್ದ ಅವನನ್ನು ಸಮಾಧಾನಗೊಳಿಸುವದಕ್ಕಾಗಿ ಅವನ ಮೇಲಿನ ಕನಿಕರದಿಂದ ಅಲ್ಲಿಗೆ ಬಂದು ಅವನಿಗೆ ಎಲ್ಲ ವೃತ್ತಾಂತವನ್ನೂ ತಿಳಿಸುವ ಕೆಲಸಕ್ಕೆ ಸಂಜಯನೆಂಬುವನನ್ನು ಗೊತ್ತುಮಾಡಿ ಆ ಸಂಜಯನಿಗೆ ಅಲ್ಲಿಯೇ ಯುದ್ಧದ ಎಲ್ಲ ನಡೆವಳಿಕೆಗಳೂ ಕಣ್ಣಿಗೆ ಕಟ್ಟಿದಹಾಗೆ ಕಾಣಬರುವಂತೆಯೂ ಶಕ್ತಿಯನ್ನು ಕೊಟ್ಟು ಹೋದರು. ಆಗ—

# ಮೊದಲನೆ ಅಧ್ಯಾಯ

---

**ಧೃತರಾಷ್ಟ್ರ ಉವಾಚ** ಧೃತರಾಷ್ಟ್ರನು ಹೇಳಿದ್ದು :—

**ಧರ್ಮಕ್ಷೇತ್ರೆ ಕುರುಕ್ಷೇತ್ರೆ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ?** ॥ ೧ ॥

(ಸಂಜಯ) ಪಕ್ಷಪಾತವೆಂಬ ಗುಣವನ್ನು ಚೆನ್ನಾಗಿ ಗೆದ್ದಿರುವಂಥ ಸಂಜಯನೆ, (ಧರ್ಮಕ್ಷೇತ್ರೇ) ಯಾವ ನೆಲದಲ್ಲಿ ಕಾಲಿಟ್ಟ ಮಾತ್ರಕ್ಕೇ

ಮನುಷ್ಯನಲ್ಲಿ ಧರ್ಮಬುದ್ಧಿಯು ತಲೆ ಎತ್ತುವದೋ ಅಂಥ ಧರ್ಮಭೂಮಿಯಾದಂಥ ಮತ್ತು (ಕುರುಕ್ಷೇತ್ರೇ[1]) ನನ್ನ ಮಕ್ಕಳ ಆಳಿಕೆಗೊಳಪಟ್ಟಿರುವಂಥ ಹಸ್ತಿನಾಪುರದ ಸಮೀಪದಲ್ಲಿರುವ ಕುರುಕ್ಷೇತ್ರವೆಂಬ[2] ಬಯಲಿನಲ್ಲಿ (ಯುಯುತ್ಸವಃ) ಯುದ್ಧಮಾಡಬೇಕೆಂದು (ಸಮವೇತಾ) ಸೇರಿರುವಂಥವರಾಗಿ (ಮಾಮಕಾಃ) ಚಕ್ರಾಧಿಪತ್ಯವನ್ನು ಅನುಭವಿಸುತ್ತಿರುವ ಹೆಚ್ಚುಗಾರಿಕೆಯುಳ್ಳ ನನ್ನ ಮಕ್ಕಳೂ ಮತ್ತು (ಪಾಂಡವಾಶ್ಚೈವ) ನಮ್ಮ ಸಂಬಂಧವನ್ನು ಹೇಳುತ್ತ ಹೊರಗಿದ್ದುಕೊಂಡು ರಾಜ್ಯಕ್ಕೆ ಬಾಯಿನೀರು ಸುರಿಸುತ್ತಿರುವ ಐವರು ಪಾಂಡವರೂ ಕೂಡ (ಕಿಮಕುರ್ವತ) ಏನು ಮಾಡಿದರು ? ಯುದ್ಧಕ್ಕೆ ಎಂದು ಸೇರಿದವರು ಯುದ್ಧವನ್ನು ಮಾಡುವರೆಂಬುದು ಸಹಜವಾದರೂ ನನಗೆ ಮೂರು ಕಾರಣಗಳಿಂದ ಸಂಶಯವು ತೋರುತ್ತದೆ. ಮೊದಲನೆಯದೇನೆಂದರೆ – ಅದು ಧರ್ಮಭೂಮಿಯಾದ್ದರಿಂದ ಸ್ವಭಾವವಾಗಿ ಧರ್ಮಿಷ್ಠರಾದ ಪಾಂಡವರಿಗೆ ಅಲ್ಲಿಗೆ ಬರುತ್ತಲೆ ಅನರ್ಥಗಳು ಭಯಂಕರವಾಗಿ ಕಂಡುಬಂದು ಅವರನ್ನು ಹಿಮ್ಮೆಟ್ಟುವಹಾಗೆ ಮಾಡಿಬಿಡಬಹುದು ಈ ಸಂದರ್ಭದಲ್ಲಂತು ನನ್ನವರರೊಟ್ಟೆ ತಾನಾಗಿ ತುಪ್ಪದಲ್ಲಿ ಬಿದ್ದಂತಾಗುವದು ಅಥವಾ ಎರಡನೆಯದೇನೆಂದರೆ ನನ್ನವರಿಗಾದರೂ ಒಳ್ಳೆಯ ಬುದ್ಧಿಬಂದು ಪಾಂಡವರಿಗೆ ಪಾಲನ್ನು ಕೊಟ್ಟುಬಿಡುವಂತೆಯಾದರೂ ಮಾಡಿಬಿಡಬಹುದು ಇನ್ನು ಮೂರನೆಯದೇನೆಂದರೆ ರಣರಂಗವು ನನ್ನವರ ಆಳಿಕೆಗೊಳಪಟ್ಟಿರುವದರಿಂದ ಇಲ್ಲಿ ತಮ್ಮ ಬೇಳೆ ಬೇಯಲಾರದೆಂದಾರೂ ಪಾಂಡವರು ನಮ್ಮವರ ಗೋಜನ್ನು ಬಿಟ್ಟು ಹಿಮ್ಮೆಟ್ಟಬಹುದು. ಆದ್ದರಿಂದ ಕೇಳುತ್ತೇನೆ

---

1 ಕುರುವೆಂಬ ರಾಜನು ಆ ಬಯಲನ್ನು ಉತ್ತದ್ದರಿಂದ ಅದು ಅವನ ಹೊಲವೆನಿಸಿತೆಂದೂ ಇಂದ್ರನು ಬಂದು ಧರ್ಮಕ್ಷೇತ್ರವೆಂದು ಹೇಳಿ ಅದನ್ನು ಬಿಡಿಸಿದನೆಂದೂ ಪುರಾಣ ಕಥೆ ಇದೆ. ಇದು ಧರ್ಮಕ್ಷೇತ್ರವೆಂದೇ ಪರಶುರಾಮನು ಇಪ್ಪತ್ತೊಂದು ಸಲ ಸುತ್ತಿ ಭೂಮಿಯಮೇಲಿರುವ ಕ್ಷತ್ರಿಯರನ್ನೆಲ್ಲ ಕೊಂದಮೇಲೆ ಇಲ್ಲಿ ಪಿತೃತರ್ಪಣವನ್ನು ಮಾಡಿದನೆಂದೂ ಹೇಳುತ್ತಾರೆ.

2 ಈಗಿನ ದಿಲ್ಲಿಪಟ್ಟಣವಿರುವದು ಈ ಬಯಲಿನಲ್ಲಿಯೆ.

ಹೀಗೆ ಹೊರಗಣ್ಣಿಲ್ಲದ್ದರ ಜೊತೆಗೆ ತಮ್ಮನ ಮಕ್ಕಳ ಮೇಲಿನ ಮರುಕವೆಂಬ ಒಳಗಣ್ಣನ್ನೂ ಕಳೆದುಕೊಂಡಿರುವ ಧೃತರಾಷ್ಟ್ರನಿಗೆ—

**ಸಂಜಯ ಉವಾಚ** ಸಂಜಯನು ಹೇಳಿದ್ದು —

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ ೨ ॥**

(ವ್ಯೂಢಂ) ಬೇರೆಬೇರೆ ಆಕೃತಿಯಲ್ಲಿ ನಿಲ್ಲಿಸಿದ್ದಂಥ (ಪಾಂಡವಾನೀಕಂ) ಪಾಂಡವರ ಸೇನೆಯನ್ನು (ದೃಷ್ಟ್ವಾತು) ನೋಡಿದ ಮೇಲೆ, ಏನು ಹೇಳಲಿ! (ರಾಜಾ) ರಾಜನಾದ (ದುರ್ಯೊಧನಃ) ದುರ್ಯೊಧನನು — ಹೆದರಿಕೊಂಡೋ ಏನೋ ತನ್ನ ಕಡೆಯ ಪ್ರಮುಖರೊಡನೆ ಮಾತಾಡಿ ಧೈರ್ಯವನ್ನು ತಂದುಕೊಳ್ಳಬೇಕೆಂದು ನೆನಸಿಯೋ ಅಥವಾ ಭೀಷ್ಮರು ತನ್ನ ಸೇನಾಪತಿಯಾಗಿದ್ದದರಿಂದ ಈ ಸಂದರ್ಭದಲ್ಲಿ ಅವರನ್ನು ಕರೆಸಿಕೊಂಡು ಮಾತನಾಡಬಹುದಾಗಿತ್ತಾದರೂ ಪಾಂಡವರ ಕಡೆ ಧೃಷ್ಟದ್ಯುಮ್ನನು ಸೇನಾಪತಿಯಾಗಿದ್ದುದನ್ನು ನೋಡಿ ಅವನ ಧನುರ್ವಿದ್ಯಾಗುರುಗಳಾದ ದ್ರೋಣರೊಡನೆ ಮಾತಾಡಬೇಕೆಂದೋ ಅಥವಾ ದ್ರೋಣಾಚಾರ್ಯರು ಅನೇಕವೇಳೆ ಪಾಂಡವರ ಮೇಲೆ ಹೆಚ್ಚು ಮೆಚ್ಚಿಗೆಯನ್ನು ತೋರಿಸುತ್ತಿದ್ದದರಿಂದ ಅವರನ್ನು ಹೆಚ್ಚು ಎಚ್ಚರಗೊಳಿಸಬೇಕೆಂದೋ ಯೋಚಿಸಿದಂತೆ ತೋರುತ್ತದೆ. ಈ ಮನಸ್ಸಿನ ಗಡಿಬಿಡಿಯ ಭರದಲ್ಲಿ, (ತದಾ) ಆಗ-ತನ್ನ ಬಳಿಗೇ ಅವರನ್ನು ಬರಮಾಡಿಕೊಳ್ಳುವದನ್ನು ಬಿಟ್ಟು ತಾನೆ ಗುರುಗಳ ಬಳಿಗೆ ಶಿಷ್ಯನು ವಿನಯದಿಂದ ಹೋಗುವ ಹಾಗೆ ತೋರಿಸಿಕೊಂಡು (ಆಚಾರ್ಯಮುಪಸಂಗಮ್ಯ) ದ್ರೋಣಾಚಾರ್ಯರ ಬಳಿಗೆ ಹೋಗಿ (ವಚನಂ) ಸ್ವಲ್ಪದರಲ್ಲಿ ಹೆಚ್ಚು ಅರ್ಥವನ್ನು ಕೊಡುವಂಥ ಮಾತನ್ನು (ಅಬ್ರವೀತ್) ಹೇಳಿದನು.

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**

(ಪಾಂಡುಪುತ್ರಾಣಾಂ) ಪಾಂಡವರ (ಆಚಾರ್ಯ)[1] ಗುರುಗಳೆ, ಅವರ ಶಿಷ್ಯತ್ವವನ್ನು ನೀವು ಬಹಳ ಕೊಂಡಾಡುತ್ತೀರಲ್ಲ! ಅವರು ಈಗ ಗುರುವಿಗೆ ತಿರುಮಂತ್ರವನ್ನು ಹೇಳುವದಕ್ಕೆ ಬಂದಿರುವುದನ್ನು ನೋಡಿ, ಮತ್ತು ಯಾವನು ನಿಮ್ಮನ್ನು ಕಸಕ್ಕಿಂತ ಕಡೆಯಾಗಿ ಕಂಡು ಅವಮಾನಗೊಳಿಸಿದನೊ ಅಂಥ (ದ್ರುಪದಪುತ್ರೇಣ) ದ್ರುಪದನ ಮಗನಾದ, ಮತ್ತು ನಿಮ್ಮನ್ನು ಕೊಲ್ಲುವುದಕ್ಕಾಗಿಯೇ ಹುಟ್ಟಿರುವ ಯಾರಿಗೆ ನೀವೇ ಧನುರ್ವಿದ್ಯೆಯನ್ನು ಕಲಿಸಿದಿರೊ ಅಗೋ ಆ (ತವ) ನಿಮ್ಮ (ಶಿಷ್ಯೇಣ) ಶಿಷ್ಯನಾದ, ಇಷ್ಟೇ ಅಲ್ಲದೆ ಸ್ವಭಾವವಾಗಿ (ಧೀಮತಾ) ಬುದ್ಧಿಶಾಲಿಯೂ ಆದ ಧೃಷ್ಟದ್ಯುಮ್ನನಿಂದ (ವ್ಯೂಢಾಂ) ಬೇರೆ ಬೇರೆ ಆಕೃತಿಯಲ್ಲಿ ನಿಲ್ಲಿಸಿರುವ (ಮಹತೀಂ) ದೊಡ್ಡದಾದ (ಏತಾಂ ಚಮೂಮ್) ಈ ಸೇನೆಯನ್ನು (ಪಶ್ಯ) ನೋಡಿ. ಅವನಿಗೆ ತಾವು ಗುರುಗಳಾಗಿರುವದರಿಂದ ಅದಕ್ಕೆ ತಕ್ಕ ಪ್ರತೀಕಾರವು ತಮಗೆ ಚೆನ್ನಾಗಿ ಗೊತ್ತು.

ಹಗೆಗಳ ದಂಡಿನಲ್ಲಿ ಯುದ್ಧಕ್ಕೆ ನಿಂತಿರುವವರು ಯಾರುಯಾರೆಂದರೆ—

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**

**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥**

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥**

(ಯುಧಿ) ಯುದ್ಧದಲ್ಲಿ, ಭೀಮಾರ್ಜುನರ ಪರಾಕ್ರಮವಂತು ತಮಗೆ ತಿಳಿದೇ ಇದೆಯಷ್ಟೆ. (ಅತ್ರ) ಈ ದಂಡಿನಲ್ಲಿ, ಭೀಮಾರ್ಜುನಾದಿ ಪಾಂಡವ

---

[1] (ಆಚಾರ್ಯ) ಗುರುಗಳೆ, (ಪಾಂಡುಪುತ್ರಾಣಾಂ) ಪಾಂಡವರ (ಮಹತೀಂ ಚಮೂಂಪಶ್ಯ) ದೊಡ್ಡ ಸೇನೆಯನ್ನು ನೋಡಿ—ಎಂದರೂ ಹೊಂದುವದು

ರಿರುವದನ್ನು ಹೇಳುವದಿನ್ನೇನು ? (ಭೀಮಾರ್ಜುನಸಮಾಃ) ಭೀಮಾರ್ಜುನ ರಿಗೆ ಸಮಾನರಾದ (ಶೂರಾಃ) ಶೂರರಾದ ಮತ್ತು (ಮಹೇಷ್ವಾಸಾಃ) ದೊಡ್ಡ ದೊಡ್ಡ ಧನುಸ್ಸುಗಳನ್ನು ಹಿಡಿದಿರುವಂಥವರು ಯಾರೆಂದರೆ —(ಯುಯು ಧಾನಃ) ಯುದ್ಧದಲ್ಲಿ ಕುಶಲನಾದ ಸಾತ್ಯಕಿಯೂ (ವಿರಾಟಶ್ಚ) ಶತ್ರುಗಳನ್ನು ಬಹಳವಾಗಿ ಕಾಡಿಸುವ ವಿರಾಟನೂ (ಮಹಾರಥಃ) ಒಬ್ಬನೇ ಹತ್ತು ಸಹಸ್ರ ಜನರ ಮೇಲೆ ಕೈಮಾಡಬಲ್ಲಂಥ (ದ್ರುಪದಶ್ಚ) ಮರದ ನಿಶಾನಿಯುಳ್ಳ ದ್ರುಪ ದನೂ (ಧೃಷ್ಟಕೇತುಃ) ಶಿಶುಪಾಲನ ಮಗನಾದ ಭಯಂಕರವಾದ ಧ್ವಜವುಳ್ಳ ಧೃಷ್ಟಕೇತುವೆಂಬ ರಾಜನೂ (ಚೇಕಿತಾನಃ) ಯದುವಂಶದ ಚಿಕಿತಾನನ ಮಗನಾದ ಚೇಕಿತಾನನೆಂಬ ರಾಜನೂ (ವೀರ್ಯವಾನ್) ವೀರಧರ್ಮದಿಂದ ಕೂಡಿದ (ಕಾಶಿರಾಜಶ್ಚ) ಕಾಶಿಯ ರಾಜನೂ (ಪುರಜಿತ್) ಬಹುಜನರನ್ನು ಗೆಲ್ಲಬಲ್ಲ ಪುರಜಿತ್ತೆಂಬ ರಾಜನೂ (ಕುಂತಿಭೋಜಶ್ಚ) ಕುಂತಿಯ ತಂದೆಯಾದ ಕುಂತಿಭೋಜನೂ (ನರಪುಂಗವಃ) ಮನುಷ್ಯರಲ್ಲೆಲ್ಲ ಶ್ರೇಷ್ಠನಾದ (ಶೈಬ್ಯಶ್ಚ) ಶಿಬಿ ವಂಶದ ಶೈಬ್ಯನೆಂಬ ರಾಜನೂ (ವಿಕ್ರಾಂತಃ) ವಿಶೇಷ ಪರಾಕ್ರಮಿಯಾದ (ಯುಧಾಮನ್ಯುಶ್ಚ) ಯುಧಾಮನ್ಯುವೂ (ವೀರ್ಯವಾನ್) ವೀರಧರ್ಮವುಳ್ಳಂಥ (ಉತ್ತಮೌಜಾಶ್ಚ) ಉತ್ತಮೌಜನೆಂಬ ಪಾಂಚಾಲರಾಜನೂ (ಸೌಭದ್ರಃ) ಸುಭದ್ರೆಯ ಮಗನಾದ ಅಭಿಮನ್ಯುವೂ (ದ್ರೌಪದೇಯಾಶ್ಚ) ದ್ರೌಪದಿಯ ಮಕ್ಕಳಾದ ಪ್ರತಿವಿಂಧ್ಯ ಮೊದಲಾದ ಐವರೂ (ಸರ್ವೇ) ಎಲ್ಲರೂ (ಮಹಾ ರಥಾ ಏವ) ಒಬ್ಬೊಬ್ಬರೇ ಹತ್ತುಸಹಸ್ರ ಜನರ ಮೇಲೆ ಕೈಮಾಡಬಲ್ಲವರೆ.

ಇಷ್ಟು ಹೇಳಿದರೂ ಗುರುಗಳು ಸುಮ್ಮನಿದ್ದುದನ್ನು ನೋಡಿ ದುರ್ಯೋಧ ನನು ತನ್ನನ್ನು ಹೇಡಿಯೆಂದು ತಿಳಿದುಕೊಂಡಾರೆಂದು ತನಗಾಗಿರುವ ಹೆದರಿಕೆ ಯನ್ನು ಮುಚ್ಚಿಕೊಳ್ಳುವದಕ್ಕಾಗಿ ತನ್ನ ಕಡೆಯವರನ್ನೂ ಹೊಗಳುತ್ತಾನೆ.—

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿತೇ ॥ ೭ ॥**

ಯುದ್ಧದ ಮಾತು ತೆಗೆದರೆ ಕ್ಷತ್ರಿಯರಾದರೆ ಒಡನೆ ಹುರಿಗೊಳ್ಳುವರು. ಇರಲಿ. (ದ್ವಿಜೋತ್ತಮ) ಶಾಂತರಾದ ಬ್ರಾಹ್ಮಣರಲ್ಲಿ ಶ್ರೇಷ್ಠರಾದ ದ್ರೋಣಾ ಚಾರ್ಯರೇ, (ವಿಶಿಷ್ಟಾಃ) ಹೆಚ್ಚಿನ ಯೋಗ್ಯತೆಯಿಂದ ಕೂಡಿದಂಥ (ಅಸ್ಮಾಕಂತು) ನಮ್ಮ ಕಡೆಯವರಾದರೊ (ಯೇ) ಯಾರು ಯಾರಿದ್ದಾರೊ (ತಾನ್) ಅವ ರನ್ನು-ತಾವು ತಿಳಿದಿರುವಿರಾದರೂ (ನಿಬೋಧ) ನೆನಪಿಗೆ ತಂದುಕೊಂಡು ನೋಡಿರಿ ಪ್ರಿಯಶಿಷ್ಯರಾದ ಪಾಂಡವರನ್ನು ನೋಡುವ ಸಡಗರದಲ್ಲಿ (ಸಂಜ್ಞಾರ್ಥಂ) ನೆನಪಿಗೆ ಬರಲೆಂದು (ಮಮ) ನನ್ನ (ಸೈನ್ಯಸ್ಯ) ದಂಡಿನ (ನಾಯಕಾಃ) ದಳಪತಿಗಳು ಯಾರೊ (ತಾನ್) ಅವರನ್ನು (ತೇ) ತಮಗೋ ಸ್ಕರವಾಗಿ (ಬ್ರವೀಮಿ) ಹೇಳುತ್ತೇನೆ

ಹೀಗೆಂದು ಕೆಲವರ ಹೆಸರನ್ನು ಹೇಳುತ್ತಾನೆ :—

**ಭವಾನ್ ಭೀಶ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂ ಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿರ್ಜಯದ್ರಥಃ[1] ॥ ೮ ॥**

(ಭವಾನ್) ನಮಗೆಲ್ಲ ಗುರುಗಳಾದ ತಾವೂ (ಭೀಷ್ಮಶ್ಚ) ನಮ್ಮ ಮುತ್ತಾತಂದಿರಾದ ಭೀಷ್ಮಾಚಾರ್ಯರೂ (ಕರ್ಣಶ್ಚ) ಕರ್ಣನೂ (ಸಮಿತಿಂಜಯಃ) ಯುದ್ಧದಲ್ಲಿ ಜಯಶೀಲನಾಗುವಂಥ (ಕೃಪಶ್ಚ) ಕೃಪಾಚಾರ್ಯರೂ(ಅಶ್ವತ್ಥಾಮಾ) ತಮ್ಮ ಮಕ್ಕಳಾದ ಅಶ್ವತ್ಥಾಮಾಚಾರ್ಯರೂ (ವಿಕರ್ಣಶ್ಚ) ನನ್ನ ಚಿಕ್ಕ ತಮ್ಮನಾದ ವಿಕರ್ಣನೂ (ಸೌಮದತ್ತಿಃ) ಸೋಮದತ್ತನ ಮಗನಾದ ಭೂರಿ ಶ್ರವನೂ (ಜಯದ್ರಥಃ) ಸಿಂಧುದೇಶದ ರಾಜನಾದ ಜಯದ್ರಥನೂ

ಹೆಸರು ಹೇಳುತ್ತಹೋದರೆ ಮುಗಿಯದಷ್ಟು ಬಹು ಜನರಿರುವರೆಂದು ಹೇಳುತ್ತಾನೆ .—

---

[1] ತಥೈವ ಚ ಎಂದೂ ಪಾಠಾಂತರವಿದೆ. ಹೀಗೆಯೇ ಎಷ್ಟೋ ಜನರಿದ್ದಾರೆಂದು ಅದರ ಅರ್ಥ.

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯ ॥**

(ಅನ್ಯೇ) ಬಾಹ್ಲೀಕ, ಭಗದತ್ತ–ಮೊದಲಾಗಿ ಉಳಿದ (ಬಹವಃ ಚ) ಬಹು ಜನರೂ (ಶೂರಾಃ) ಶೌರ್ಯವುಳ್ಳವರು, (ಮದರ್ಥೇ) ನನ್ನ ಜಯಕ್ಕಾಗಿ (ತ್ಯಕ್ತಜೀವಿತಾಃ) ಪ್ರಾಣವನ್ನು ಬಿಡುವುದಕ್ಕೆ ಸಿದ್ಧರಾಗಿರುವವರು, (ನಾನಾ ಶಸ್ತ್ರಪ್ರಹರಣಾಃ) ಹೊಡೆಯುವ ಸಾಧನಗಳಾಗಿ ಬಗೆಬಗೆಯಾದ ಆಯುಧಗಳನ್ನು ಉಪಯೋಗಿಸಬಲ್ಲವರು, ಆದ್ದರಿಂದಲೇ (ಸರ್ವೇ) ಎಲ್ಲರೂ (ಯುದ್ಧ ವಿಶಾರದಾಃ) ಯುದ್ಧದಲ್ಲಿ ನಿಪುಣರು.

ಹೀಗೆ ಎರಡು ಸೇನೆಯಲ್ಲಿಯೂ ಶೂರರಿದ್ದರೂ ತನ್ನ ಸೇನೆಯಲ್ಲಿ ಹೆಚ್ಚುಗಾರಿಕೆಯಿರುವದೆಂದು ಹೇಳುತ್ತಾನೆ —

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ ॥ ೧೦ ॥**

(ಭೀಷ್ಮಾಭಿರಕ್ಷಿತಂ) ಸೂಕ್ಷ್ಮಬುದ್ಧಿಯುಳ್ಳ ಮತ್ತು ತಮ್ಮ ಮನಸ್ಸಿಗೆ ಬಂದರೆ ಮಾತ್ರ ಸಾಯುವ ಭೀಷ್ಮರ ರಕ್ಷಣೆಗೊಳಪಟ್ಟಿರುವಂಥ (ಅಸ್ಮಾಕಂ) ನಮ್ಮ (ತತ್ ಬಲಂ) ಆ ಸೇನೆಯು (ಅಪರ್ಯಾಪ್ತಂ) ಹನ್ನೊಂದಕ್ಷೋಹಿಣಿ ಇರುವದರಿಂದ ಲೆಕ್ಕವಿಲ್ಲದಷ್ಟಿರುವದು. ಪಾಂಡವರ ಸೇನೆಗೆ ಧೃಷ್ಟದ್ಯುಮ್ನನು ಸೇನಾನಾಯಕನಾದರೂ ಅವನು ಸೇನಾನಾಯಕನಾಗುವುದಕ್ಕೆ ಮೊದಲು ಪಾಂಡವರ ಸೇನೆಯು ಭೀಮನ ರಕ್ಷಣೆಯಲ್ಲಿ ಬಂದು ನಿಂತದ್ದರಿಂದ (ಭೀಮಾಭಿ ರಕ್ಷಿತಂ) ಸ್ಥೂಲಬುದ್ಧಿಯುವನಾದ ಭೀಮನ ರಕ್ಷಣೆಗೊಳಪಟ್ಟ (ಇದಂ) ಈ (ಏತೇಷಾಂ) ಪಾಂಡವರ (ಬಲಂ) ಸೇನೆಯು (ಪರ್ಯಾಪ್ತಂ) ಏಳೇ ಅಕ್ಷೋಹಿಣಿ ಇರುವದರಿಂದ ಬೆರಳ ತುದಿಯಲ್ಲಿ ಎಣಿಸಿಬಿಡಬಹುದು

ಇಷ್ಟಾದರೂ ಕಿವಿಗೊಡದಿರುವ ಗುರುಗಳನ್ನು ನೋಡಿ ದುರ್ಯೋಧನನು ಅಧಿಕಾರಯುಕ್ತವಾಣಿಯಿಂದ ಹೇಳುತ್ತಾನೆ :—

**ಅಯನೇಷು ಚ ಸರ್ವೇಷು ಯಥಾ ಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ ೧೧ ॥**

ಸೇನಾಪತಿಗಳಾದ ಭೀಷ್ಮರು ಶತ್ರುಗಳನ್ನೆಲ್ಲ ಗೆಲ್ಲುವ ಸಮರ್ಥರಾದ್ದರಿಂದ (ಭವಂತಃ) ನೀವು (ಸರ್ವ ಏವ) ಎಲ್ಲರೂ (ಹಿ) ಇನ್ನು (ಸರ್ವೇಷು) ಎಲ್ಲಾ (ಅಯನೇಷು ಚ) ವ್ಯೂಹದ ಬಾಗಿಲುಗಳಲ್ಲಿಯೂ (ಯಧಾಭಾಗಂ) ನಿಮನಿಮಗೆ ಗೊತ್ತುಮಾಡಿಕೊಟ್ಟಿರುವ ಕಡೆಗಳಲ್ಲಿ (ಅವಸ್ಥಿತಾಃ) ಇದ್ದುಕೊಂಡು (ಭೀಷ್ಮಮೇವ) ಭೀಷ್ಮನನ್ನೇ (ಅಭಿರಕ್ಷಂತು) ಎಲ್ಲ ಕಡೆಯಿಂದಲೂ ಕಾಯಬೇಕು.

ಇದಕ್ಕೂ ದ್ರೋಣರು ಉತ್ತರವನ್ನು ಕೊಡದಿರುವದನ್ನು ನೋಡಿ ಮುಮ್ಮಗನಾದ ದುರ್ಯೋಧನನು ತೀರ ನಿರಾಶನಾದಾನೆಂದು ಮಮತೆಯಿಂದ ಭೀಷ್ಮರು ತಮ್ಮ ಬೆಂಬಲವನ್ನು ಸೂಚಿಸುತ್ತಾರೆ —

**ತಸ್ಯ ಸಂಜನಯನ್ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥**

(ತಸ್ಯ) ಸಂಧಿಮಾಡಿಕೊಳ್ಳೆಂದು ಮುಂತಾಗಿ ಹೇಳಿದ ಯಾವ ಉಪದೇಶಕ್ಕೂ ಕಿವಿಗೊಡದಿರುವವನೊಡನೆ ಮಾತಾಡುವದೇನೆಂಬ ದ್ರೋಣರ ಉಪೇಕ್ಷೆಯಿಂದ ಬೆಪ್ಪಾಗಿನಿಂತ ಆ ದುರ್ಯೋಧನನಿಗೆ (ಹರ್ಷಂ) ಸಂತೋಷವನ್ನು (ಸಂಜನಯನ್) ಹುಟ್ಟಿಸಿ (ಕುರುವೃದ್ಧಃ) ಕುರುವಂಶದ ಹಿರಿಯನೂ (ಪ್ರತಾಪವಾನ್) ಪರಾಕ್ರಮಶಾಲಿಯೂ (ಪಿತಾಮಹಃ) ಅಜ್ಜನೂ ಆದ ಭೀಷ್ಮನು (ಉಚ್ಚೈಃ) ಪಾಂಡವರಿಗೆ ಕೂಡ ಚೆನ್ನಾಗಿ ಕೇಳಿಸುವಂತೆ ಗಟ್ಟಿಯಾಗಿ (ಸಿಂಹನಾದಂ ವಿನದ್ಯ) ಸಿಂಹನಾದವನ್ನು ಮಾಡಿ (ಶಂಖಂ) ಶಂಖವನ್ನು (ದಧ್ಮೌ) ಊದಿದನು.

ಆಮೇಲೆ ಸೈನಿಕರೆಲ್ಲರೂ ಸೇನಾಪತಿಯನ್ನು ಹಿಂಬಾಲಿಸಿದ್ದು :—

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ ೧೩ ॥**

(ತತಃ) ಸೇನಾಪತಿಗಳಾದ ಭೀಷ್ಮರು ಯುದ್ಧದ ಸಿದ್ಧತೆಯನ್ನು ತೋರಿಸುತ್ತಲೆ, ಸೇನೆಯಲ್ಲಿ ಎಲ್ಲರಿಂದಲೂ (ಶಂಖಾಶ್ಚ) ಶಂಖಗಳೂ (ಭೇರ್ಯಶ್ಚ) ಭೇರಿಗಳೂ (ಪಣವ + ಆನಕ + ಗೋಮುಖಾಃ) ಮೃದಂಗಗಳೂ ನಗಾರಿಗಳೂ

ರಣಸಿಂಹಗಳೂ (ಸಹಸೈವ) ಒಂದೇ ಕಾಲದಲ್ಲಿಯೇ (ಅಭ್ಯಹನ್ಯಂತ) ಚೆನ್ನಾಗಿ ಬಾರಿಸಲ್ಪಟ್ಟವು. (ಸ ಶಬ್ದಃ) ಆ ಗದ್ದಲವು (ತುಮುಲಃ + ಅಭವತ್) ಎಲ್ಲೆಲ್ಲಿಯೂ ತುಂಬಿ ತೂರುವಂತಾಯಿತು

ಇಷ್ಟಾಗುತ್ತಲೆ ಪಾಂಡವರ ಸೇನೆಯಲ್ಲೇನು ನಡೆಯಿತೆಂದರೆ —

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥**

(ತತಃ) ಕುರುಸೇನೆಯ ಸಾಮಾನ್ಯವಾದ ಶಂಖಗಳ ಧ್ವನಿಯಾಗುತ್ತಲೆ ಅತ್ತ ದುರ್ಯೋಧನನು ಭೀಷ್ಮರ ಕಡೆಗೂ ದ್ರೋಣರ ಕಡೆಗೂ ನೋಡುತ್ತ ನಿಂತಿರುವಾಗ ಇತ್ತ ಸಾಮಾನ್ಯವಾದ ರಥಗಳಲ್ಲಿ ಕುಳಿತಿರುವ ಕೌರವರ ಮುಂದೆ, ಅಗ್ನಿದೇವನು* ಅನುಗ್ರಹ ಮಾಡಿ ತಂದುಕೊಟ್ಟ (ಶ್ವೇತೈಃ) ಬಿಳಿಯ ಬಣ್ಣದ (ಹಯೈಃ) ಕುದುರೆಗಳಿಂದ (ಯುಕ್ತೇ) ಹೂಡಲ್ಪಟ್ಟಿರುವದಾಗಿ, ಯಾವ ಶತ್ರುವಿನಿಂದಲೂ ಕದಲಿಸುವದಕ್ಕೂ ಆಗದಂಥ (ಮಹತಿ) ಭಾರವಾದ (ಸ್ಯಂದನೇ) ರಥದಲ್ಲಿ (ಸ್ಥಿತೌ) ಕುಳಿತುಕೊಂಡು (ಮಾಧವಃ) ಕೃಷ್ಣನೂ (ಪಾಂಡವಶ್ಚೈವ) ಅರ್ಜುನನೂ, ತಮ್ಮ ಸಿದ್ಧತೆಯನ್ನೂ ಸೂಚಿಸಿ (ದಿವ್ಯೌ) ಪ್ರಖ್ಯಾತವಾದ (ಶಂಖೌ) ಶಂಖಗಳನ್ನು (ಪ್ರದಧ್ಮತುಃ) ಊದಿದರು.

ಪಾಂಡವರ ಶಂಖಗಳು ಪ್ರಖ್ಯಾತವಾದವುಗಳೆಂದು ತೋರಿಸುವದಕ್ಕಾಗಿ ಆ ಶಂಖಗಳ ಹೆಸರನ್ನೆಲ್ಲ ಹೇಳಿದ್ದು :—

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥**
**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬ ॥**

---

* ಹಿಂದೆ ಅರ್ಜುನನು ಖಾಂಡವವೆಂಬ ವನವನ್ನು ಅಗ್ನಿಗೆ ಭೋಜನಾರ್ಥವಾಗಿ ಕೊಟ್ಟಾಗ ಅಗ್ನಿದೇವನು ಈ ರಥವನ್ನು ಅರ್ಜುನನಿಗೆ ಕೊಟ್ಟನೆಂದು ಕಥೆ ಇದೆ.

(ಹೃಷೀಕೇಶಃ) ಎಲ್ಲರ ಇಂದ್ರಿಯಗಳನ್ನೂ ತನ್ನ ಅಂಕೆಯಲ್ಲಿಟ್ಟು ಕೊಂಡಿರುವ ಕೃಷ್ಣನು (ಪಾಂಚಜನ್ಯಂ) ಪಂಚಜನನೆಂಬ ರಾಕ್ಷಸನನ್ನು ಕೊಂದು ಪಡೆದ ಪಾಂಚಜನ್ಯವೆಂಬ ಶಂಖವನ್ನೂ (ಧನಂಜಯಃ) ದಿಗ್ವಿಜಯ ಮಾಡಿ ಸಮಸ್ತ ರಾಜರಿಂದಲೂ ಕಾಣಿಕೆಯನ್ನು ತಂದ ಅರ್ಜುನನು (ದೇವ ದತ್ತಂ) ದೇವತೆಗಳು ಕೊಟ್ಟ ದೇವದತ್ತವೆಂಬ ಶಂಖವನ್ನೂ (ಭೀಮಕರ್ಮಾ) ಇತರರ ಎದೆಯೊಡೆಯುವಂಥಾ ಕರ್ಮಗಳನ್ನು ಮಾಡಬಲ್ಲವನೂ (ವೃಕೋ ದರಃ) ಚೆನ್ನಾಗಿ ತಿಂದು ಅರಗಿಸಿಕೊಳ್ಳುವವನೂ ಆದ ಭೀಮನು (ಪೌಂಡ್ರಂ) ಪೌಂಡ್ರವೆಂಬ ಹೆಸರಿನ (ಮಹಾಶಂಖಂ) ದೊಡ್ಡ ಶಂಖವನ್ನೂ (ರಾಜಾ) ರಾಜಸೂಯಯಾಗವನ್ನು ಮಾಡಿ ರಾಜನೆನಿಸಿಕೊಂಡಿರುವವನಾಗಿ ಮತ್ತು (ಕುಂತೀಪುತ್ರಃ) ಕುಂತೀದೇವಿಯು ತಪಸ್ಸನ್ನು ಮಾಡಿ ಯಮನ ಅನುಗ್ರಹ ದಿಂದ ಪಡೆದ ಮಗನಾಗಿ (ಯುಧಿಷ್ಠಿರಃ) ಯುದ್ಧದಲ್ಲಿ ಜಯಶಾಲಿಯಾಗು ವಂಥ ಧರ್ಮರಾಜನು (ಅನಂತವಿಜಯಂ) ಶಾಶ್ವತವಾದ ಜಯವನ್ನು ತಂದುಕೊಡುವಂಥ ಅನಂತವಿಜಯವೆಂಬ ಶಂಖವನ್ನೂ (ನಕುಲಃ) ನಕು ಲನೂ (ಸಹದೇವಶ್ಚ)ಸಹದೇವನೂ(ಸುಘೋಷ+ ಮಣಿಪುಷ್ಪಕೌ) ಸುಘೋ ಷವೆಂಬ ಮತ್ತು ಮಣಿಪುಷ್ಪಕವೆಂಬ ಶಂಖವನ್ನೂ (ದಧ್ಮೌ) ಊದಿದರು.

ಭೀಷ್ಮರನ್ನು ಕೌರವರ ಸೈನಿಕರು ಹಿಂಬಾಲಿಸಿದಂತೆ ಪಾಂಡವರನ್ನು ಅವರ ಸೈನಿಕರು ಹಿಂಬಾಲಿಸಿದ್ದು .—

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥**

(ಪೃಥಿವೀಪತೇ) ಧೃತರಾಷ್ಟ್ರರಾಜನೆ, ಕೇಳು. (ಪರಮೇಷ್ವಾಸಃ) ದೊಡ್ಡ ಬಿಲ್ಲನ್ನು ಹಿಡಿದ (ಕಾಶ್ಯಶ್ಚ) ಕಾಶಿರಾಜನೂ (ಮಹಾರಥಃ) ಒಬ್ಬನೇ ಹತ್ತುಸಾವಿರ ಸೇನೆಯ ಮೇಲೆ ಕೈಮಾಡಬಲ್ಲವನಾದ, (ಶಿಖಂಡೀ ಚ)

ಮುಖದ ಮೇಲೆ ಮೀಸೆ ಇಲ್ಲದಿರುವ ಶಿಖಂಡಿಯೂ (ಧೃಷ್ಟದ್ಯುಮ್ನಃ) ಶತ್ರುಗಳನ್ನು ಹೀರುವ ಬಲವುಳ್ಳ ಧೃಷ್ಟದ್ಯುಮ್ನನೂ (ವಿರಾಟಶ್ಚ) ಶತ್ರುಗಳನ್ನು ಗಿರ್ರನೆ ತಿರುಗಿಸಿಬಿಡುವಂಥ ವಿರಾಟನೂ (ಅಪರಾಜಿತಃ) ಮತ್ತೊಬ್ಬರಿಗೆ ಸೋಲದಿರುವ (ಸಾತ್ಯಕಿಶ್ಚ) ಸಾತ್ಯಕಿಯೂ (ದ್ರುಪದಃ) ಮರದ ಗುರ್ತಿನ ಧ್ವಜವುಳ್ಳ ದ್ರುಪದನೂ (ದ್ರೌಪದೇಯಾಶ್ಚ) ದ್ರೌಪದಿಯ ಐವರು ಮಕ್ಕಳೂ (ಮಹಾಬಾಹುಃ) ಮೊಣಕಾಲವರೆಗೆ ತೋಳುಗಳುಳ್ಳ (ಸೌಭದ್ರಶ್ಚ) ಸುಭದ್ರೆಯ ಮಗನಾದ ಅಭಿಮನ್ಯುವೂ (ಸರ್ವಶಃ) ಎಲ್ಲರೂ ಕೂಡಿ (ಪೃಥಕ್ ಪೃಥಕ್) ಬೇರೆ ಬೇರೆಯಾಗಿ (ಶಂಖಾನ್) ಶಂಖಗಳನ್ನು (ದಧ್ಮುಃ) ಊದಿದರು.

ಕೌರವರ ಕಡೆಯ ಶಂಖವು ಬರೀ ಸಿದ್ಧತೆಯನ್ನು ತೋರಿಸಿತ್ತು. ಪಾಂಡವರ ಕಡೆಯದು ಅಷ್ಟು ಮಾತ್ರವೇ ಅಲ್ಲ —

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ || ೧೯ ||**

(ಸ ಘೋಷಃ) ಆ ಗದ್ದಲವು (ತುಮುಲಃ) ದಟ್ಟವಾಗಿ (ನಭಶ್ಚ) ಆಕಾಶವನ್ನೂ (ಪೃಥಿವೀಂ ಚೈವ) ಭೂಮಿಯನ್ನೂ ಕೂಡ (ವ್ಯನುನಾದಯನ್) ಪ್ರತಿಧ್ವನಿಯಿಂದ ತುಂಬಿದ್ದಲ್ಲದೆ (ಧಾರ್ತರಾಷ್ಟ್ರಾಣಾಂ) ಕೌರವರ (ಹೃದಯಾನಿ) ಎದೆಗಳನ್ನು (ವ್ಯದಾರಯತ್) ಬಿರಿಯುವಂತೆ ಮಾಡಿತು

ಇಂಥ ಭಯವೇನೂ ಇಲ್ಲದೆ ಪಾಂಡವರ ಸೇನೆಯಲ್ಲಿ ಮುಂದೆ ನಡೆದದ್ದು :—

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ || ೨೦ ||**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

(ಮಹೀಪತೇ) ಧೃತರಾಷ್ಟ್ರನೆ, ಕೇಳು. (ಅಥ) ಪಾಂಡವರ ಶಂಖಗಳ ಧ್ವನಿಯನ್ನು ಕೇಳಿದ ಮೇಲೆ (ವ್ಯವಸ್ಥಿತಾನ್) ಓಡಿಹೋಗದೆ ನಿಂತಿರುವಂಥ

(ಧಾರ್ತರಾಷ್ಟ್ರಾನ್) ಕೌರವರನ್ನು (ದೃಷ್ಟ್ವಾ) ನೋಡಿ (ಪಾಂಡವಃ) ಪಾಂಡುರಾಜನ ಮಕ್ಕಳಲ್ಲಿ ಪ್ರಮುಖನಾಗಿಯೂ (ಕಪಿಧ್ವಜಃ) ಮಹಾಪರಾಕ್ರಮಿಯಾದ ಹನುಮಂತನನ್ನು ಧ್ವಜದಲ್ಲಿರಿಸಿಕೊಂಡವನಾಗಿಯೂ ಇರುವ ಅರ್ಜುನನು (ಶಸ್ತ್ರಸಂಪಾತೇ) ಬಾಣವನ್ನುಹೊಡಿಬಿಡುವಂಥ ಪ್ರಸಂಗವು (ಪ್ರವೃತ್ತೇ) ಒದಗಿರುವಾಗ (ಧನುಃ) ಗಾಂಡೀವಧನುಸ್ಸನ್ನು (ಉದ್ಯಮ್ಯ) ಕೈಗೆ ತೆಗೆದುಕೊಂಡು (ತದಾ) ಆಗ (ಹೃಷೀಕೇಶಂ) ಕೃಷ್ಣನನ್ನು ಕುರಿತು (ಇದಂ) ಈ (ವಾಕ್ಯಂ) ಮಾತನ್ನು (ಆಹ) ಹೇಳಿದನು.

**ಅರ್ಜುನ ಉವಾಚ** ಅರ್ಜುನನು ಹೇಳಿದ್ದು .—

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ||**

**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ |**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ||**

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ |**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇ ಯುದ್ಧೇ ಪ್ರಿಯಚಿಕೀರ್ಷವಃ ||**

(ಅಚ್ಯುತ) ಸೋಲಿನ ಹೆದರಿಕೆಯಿಲ್ಲದಂಥ ಕೃಷ್ಣ, ನಂಟರಿಷ್ಟರೇ ಎಲ್ಲೆಲ್ಲಿಯೂ ಕಾಣುತ್ತಿರುವ (ಅಸ್ಮಿನ್) ಈ (ರಣಸಮುದ್ಯಮೇ) ಯುದ್ಧದ ಸಮಾರಂಭದಲ್ಲಿ (ಮಯಾ) ನನ್ನಿಂದ (ಕೈಃ ಸಹ) ಯಾರೊಡನೆ [ಯೋದ್ಧವ್ಯಂ] ಕಾದಾಟವಾಗಬೇಕೋ [ಯೋದ್ಧುಕಾಮಾನ್] ಯುದ್ಧದ ಬಯಕೆಯಿಂದ [ಅವಸ್ಥಿತಾನ್] ಬಂದು ನಿಂತಿರುವಂಥ [ಏತಾನ್] ಇವರನ್ನು [ಅಹಂ] ನಾನು [ಯಾವತ್ ನಿರೀಕ್ಷೇ] ನೋಡುವವರಿಗೆ ಅಥವಾ ನೋಡಬಹುದಾದ ಕಡೆ [ಉಭಯೋಃ] ನಮ್ಮ ಮತ್ತು ಕೌರವರ [ಸೇನಯೋಃ] ದಂಡುಗಳ [ಮಧ್ಯೇ] ನಡುವೆ [ಮೇ] ನನ್ನ [ರಥಂ] ತೇರನ್ನು [ಸ್ಥಾಪಯ] ನಿಲ್ಲಿಸು ಏಕೆಂದರೆ [ದುರ್ಬುದ್ಧೇಃ] ಚಿಕ್ಕಪ್ಪನ ಮಕ್ಕಳ ಪಾಲನ್ನೂ ತಿಂದು ತೇಗಬೇಕೆಂಬ ಕೆಟ್ಟ ಬುದ್ಧಿಯುಳ್ಳಂಥ [ಧಾರ್ತರಾಷ್ಟ್ರಸ್ಯ] ದುರ್ಯೋಧನನಿಗೆ [ಯುದ್ಧೇ] ಯುದ್ಧದಲ್ಲಿ [ಪ್ರಿಯಚಿಕೀರ್ಷವಃ] ಹಿತವನ್ನು ಮಾಡಬೇಕೆಂದು [ಯೇಏತೇ] ಯಾವ ಇವರು [ಅತ್ರ] ಈ ರಣರಂಗಕ್ಕೆ [ಸಮಾಗತಾಃ] ಬಂದಿ

ದ್ವಾರೊ ಆ (ಯೋತ್ಸ್ಯಮಾನಾನ್) ಯುದ್ಧಾಪೇಕ್ಷೆಯುಳ್ಳವರನ್ನು (ಅಹಂ) ನಾನು (ಅವೇಕ್ಷೇ) ನೋಡುತ್ತೇನೆ.

ಮುಂದೆ ನಡೆದದ್ದೇನೆಂದರೆ .—

**ಸಂಜಯ ಉವಾಚ** ಸಂಜಯನು ಹೇಳಿದ್ದು —

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥**
**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥೨೫॥**

(ಭಾರತ) ಭರತರಾಜನ ವಂಶದಲ್ಲಿ ಹುಟ್ಟಿದ ಧೃತರಾಷ್ಟ್ರರಾಯನೆ, ಕೇಳು. (ಗುಡಾಕೇಶೇನ) ಜಾಗರೂಕ ಸ್ವಭಾವವುಳ್ಳ ಅರ್ಜುನನಿಂದ (ಏವಂ) ಹೀಗೆ (ಉಕ್ತಃ) ಕೇಳಿಸಿಕೊಂಡವನಾಗಿ (ಹೃಷೀಕೇಶಃ) ಎಲ್ಲರ ಇಂದ್ರಿಯಗಳ ಮೇಲೆಯೂ ಅಧಿಕಾರವನ್ನು ನಡೆಸುವಂಥ ಕೃಷ್ಣನು (ಭೀಷ್ಮದ್ರೋಣ ಪ್ರಮುಖತಃ) ಮುಖ್ಯರಾದ ಭೀಷ್ಮಾಚಾರ್ಯರ ಮತ್ತು ದ್ರೋಣಾಚಾರ್ಯರ ಎದುರಿಗೂ ಮತ್ತು (ಸರ್ವೇಷಾಂ) ಎಲ್ಲ (ಮಹೀಕ್ಷಿತಾಂ ಚ) ರಾಜರ ಎದುರಿಗೂ (ಉಭಯೋಃ) ಎರಡು (ಸೇನಯೋಃ) ದಂಡುಗಳ (ಮಧ್ಯೇ) ನಡುವೆ (ರಥೋತ್ತಮಮ್) ಅರ್ಜುನನ ಉತ್ತಮವಾದ ರಥವನ್ನು (ಸ್ಥಾಪಯಿತ್ವಾ) ನಿಲ್ಲಿಸಿ "(ಪಾರ್ಥ) ನಮ್ಮ ತಂದೆಯ ಒಡಹುಟ್ಟಿದ ಪೃಥೆಯೆಂಬುವಳ ಮಗನಾದ ಅರ್ಜುನನೆ, ಕೇಳು, (ಸಮವೇತಾನ್) ಇಲ್ಲಿ ನೆರೆದಿರುವಂಥ(ಏತಾನ್) ಈ (ಕುರೂನ್) ಕೌರವರನ್ನು (ಪಶ್ಯ) ನೋಡು'' (ಇತಿ) ಎಂದು (ಉವಾಚ) ಹೇಳಿದನು

ರಣರಂಗದಲ್ಲಿ ಅರ್ಜುನನಿಗೆ ಕಂಡದ್ದು .—

**ತತ್ರಾಪಶ್ಯತ್ಸ್ಥಿತಾನ್ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್ಸಖೀಂಸ್ತಥಾ ॥**

**ಶ್ವಶುರಾನ್ಸುಹೃದಶ್ಚೈವ ಸೇನಯೋರುಭಯೋರಪಿ ।**

(ಪಾರ್ಥಃ) ಅರ್ಜುನನು (ತತ್ರ) ಅಲ್ಲಿ ನೆರದಿದ್ದಂಥ (ಉಭಯೋರಪಿ) ಎರಡೂ ಕಡೆಯ (ಸೇನಯೋಃ) ಸೇನೆಗಳಲ್ಲಿ (ಸ್ಥಿತಾನ್) ಇದ್ದ (ಪಿತೄನ್) ಭೂರಿಶ್ರವನೆ ಮೊದಲಾದ ತಂದೆಯ ಸಂಬಂಧದವರನ್ನೂ (ಅಥ) ಅದೇ ರೀತಿಯಲ್ಲಿ (ಪಿತಾಮಹಾನ್) ಭೀಷ್ಮ, ಸೋಮದತ್ತ–ಮೊದಲಾದ ಅಜ್ಜಂದಿರನ್ನೂ (ಆಚಾರ್ಯಾನ್) ದ್ರೋಣಕೃಪರೇ ಮೊದಲಾದ ಆಚಾರ್ಯರನ್ನೂ (ಮಾತುಲಾನ್) ಶಲ್ಯ, ಶಕುನಿ-ಮೊದಲಾದ ಸೋದರಮಾವಂದಿರನ್ನೂ (ಭ್ರಾತೄನ್) ದುರ್ಯೋಧನನೇ ಮೊದಲಾದ ಅಣ್ಣತಮ್ಮಂದಿರನ್ನೂ (ಪುತ್ರಾನ್) ಲಕ್ಷ್ಮಣ ಮೊದಲಾದ ಮಕ್ಕಳನ್ನೂ (ಪೌತ್ರಾನ್) ಆ ಲಕ್ಷ್ಮಣನ ಮಕ್ಕಳು ಮೊದಲಾದವರನ್ನೂ (ಸಖೀನ್) ತನ್ನ ಜೊತೆಗಾರರಾದ ಅಶ್ವತ್ಥಾಮ, ಜಯದ್ರಥ-ಮೊದಲಾದವರನ್ನೂ (ತಥಾ) ಹಾಗೆಯೇ (ಶ್ವಶುರಾನ್) ಪಾಂಡ್ಯ ಮೊದಲಾದ ಮಾವಂದಿರನ್ನೂ (ಸುಹೃದಶ್ಚೈವ) ಕೃತವರ್ಮ, ಭವದತ್ತ ಮೊದಲಾದ ಉಪಕಾರಿಗಳನ್ನೂ ಕೂಡ (ಅಪಶ್ಯತ್) ನೋಡಿದನು.

ಇದರಿಂದಾದದ್ದೇನೆಂದರ :—

**ತಾನ್ಸಮೀಕ್ಷ್ಯ ಸ ಕೌನ್ತೇಯಃ ಸರ್ವಾನ್ಬನ್ಧೂನವಸ್ಥಿತಾನ್ ॥ ೨೭॥**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।**

(ಅವಸ್ಥಿತಾನ್) ಯುದ್ಧಕ್ಕೆ ಬಂದು ನಿಂತಿರುವಂಥ (ತಾನ್) ಆ (ಸರ್ವಾನ್) ಎಲ್ಲ (ಬಂಧೂನ್) ನಂಟರನ್ನೂ (ಸಮೀಕ್ಷ್ಯ) ನೋಡಿ (ಸ ಕೌಂತೇಯಃ) ಆ ಅರ್ಜುನನು (ಪರಯಾ) ಹೆಚ್ಚಾದ (ಕೃಪಯಾ) ಕನಿಕರದಿಂದ (ಆವಿಷ್ಟಃ) ಆವೇಶವನ್ನು ಹೊಂದಿ (ವಿಷೀದನ್) ವಿಷಾದಗೊಂಡು (ಇದಂ) ಮುಂದೆ ಹೇಳುವ ಮಾತನ್ನು (ಅಬ್ರವೀತ್) ಹೇಳಿದನು.

**ಅರ್ಜುನ ಉವಾಚ** ಅರ್ಜುನನು ಹೇಳಿದ್ದು :—

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್**

**ಸೀದನ್ತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ |**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ||೨೯||**

(ಕೃಷ್ಣ) ಶರಣರ ದುಃಖಗಳನ್ನೆಲ್ಲ ಸೆಳೆದುಕೊಳ್ಳುವಂಥ ಕೃಷ್ಣನೆ, ಕೇಳು (ಯುಯುತ್ಸುಂ) ಯುದ್ಧಮಾಡಬೇಕೆಂದು (ಸಮುಪಸ್ಥಿತಮ್) ನೆರೆದಿರುವ (ಇಮಂ) ಈ (ಸ್ವಜನಂ) ನಂಟರಿಷ್ಟರನ್ನು (ದೃಷ್ಟ್ವಾ) ನೋಡಿ, ಏಕೋ ನನ್ನ ಧೈರ್ಯವೇ ಹಾರಿಹೋಗಿದೆ, ಆದ್ದರಿಂದಲೆ (ಮಮ) ನನ್ನ (ಗಾತ್ರಾಣಿ) ಕೈಕಾಲು ಮೊದಲಾದ ಅವಯವಗಳು (ಸೀದಂತಿ) ಸೊರಗುತ್ತಿವೆ, (ಮುಖಂ ಚ) ಬಾಯಿಯು ಕೂಡ (ಪರಿಶುಷ್ಯತಿ) ಬಹಳ ಒಣಗುತ್ತಿದೆ; ಇದನ್ನು ನಾನು ಹೇಗೆ ಬಚ್ಚಿಟ್ಟುಕೊಳ್ಳಲಿ! (ಮೇ) ನನ್ನ (ಶರೀರೇ) ಮೈಯಲಿ (ವೇಪಥುಶ್ಚ) ನಡುಕವೂ (ರೋಮಹರ್ಷಶ್ಚ) ಕೂದಲು ನೆಟ್ಟಗಾಗುವಿಕೆಯೂ (ಜಾಯತೇ) ಉಂಟಾಗುತ್ತಿವೆ

ಮತ್ತು :—

**ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ |**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ||**

(ಹಸ್ತಾತ್) ಕೈಯಿಂದ (ಗಾಂಡೀವಂ) ಗಾಂಡೀವಧನುಸ್ಸು (ಸ್ರಂಸತೇ) ಕೆಳಗೆ ಬೀಳುತ್ತಿದೆ (ತ್ವಕ್ಚೈವ) ಚರ್ಮವೂ ಕೂಡ, ಮನಸ್ಸಿಗಾಗಿರುವ ತಾಪದಿಂದ (ಪರಿದಹ್ಯತೇ) ಎಲ್ಲ ಕಡೆಯಲ್ಲಿಯೂ ಸುಡುತ್ತಿದೆ ಗಾಂಡೀವವನ್ನು ಬಿಟ್ಟು ಸುಮ್ಮನೆ ಇರೋಣವೆಂದರೂ (ಅವಸ್ಥಾತುಂ ಚ) ಇಲ್ಲಿ ನಿಲ್ಲುವದಕ್ಕೆ ಕೂಡ (ನ ಶಕ್ನೋಮಿ) ನನ್ನ ಕೈಯಲ್ಲಾಗುವದಿಲ್ಲ. (ಮೇ) ನನ್ನ (ಮನಃ) ಮನಸ್ಸು (ಭ್ರಮತೀವ ಚ] ಗಿರಗಿರನೆ ತಿರುಗುತ್ತಿರುವ ಹಾಗಿದೆ

ಹೀಗೆ ಕೆಟ್ಟ ಲಕ್ಷಣಗಳು ನನ್ನ ಶರೀರದಲ್ಲಿ ಮಾತ್ರವೇ ಅಲ್ಲದೆ :—

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ |**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ||೩೧||**

[ಕೇಶವ] ಬ್ರಹ್ಮರುದ್ರರ ದುಃಖವನ್ನು ಕೂಡ ಕಳೆಯುವಂಥ ಕೃಷ್ಣನೆ, ಕೇಳು [ವಿಪರೀತಾನಿ] ಕಾಣಬಾರದಾದಂಥ ವಿರುದ್ಧಗಳಾದ [ನಿಮಿತ್ತಾನಿ ಚ] ಅಪಶಕುನಗಳನ್ನೂ [ಪಶ್ಯಾಮಿ] ನೋಡುತ್ತೇನೆ ಈ ಅಪಶಕುನಗಳು ಎರಡು ಸೇನೆಯವರಿಗೂ ಕಾಣುವದರಿಂದ ಇವೆಲ್ಲ ಕೌರವರಿಗಿರಬಹುದೆಂದೇಕೆ ತಿಳಿಯಬಾರದೆಂದರೆ ನನ್ನ ಶರೀರದಲ್ಲಿ ಕಾಣುವ ಕೆಟ್ಟ ಲಕ್ಷಣಗಳಿಂದ ಅವು ನನಗೇ ಸಂಬಂಧಿಸಿದಂತೆ ತೋರುತ್ತವೆ. ಅಲ್ಲದೆ ಯುದ್ಧದಲ್ಲಿ ಸಾಯುವದರಿಂದ ಸ್ವರ್ಗವಾಗುವದಾದರೂ [ಸ್ವಜನಂ] ನಂಟರಿಷ್ಟರನ್ನು [ಆಹವೇ] ಯುದ್ಧದಲ್ಲಿ [ಹತ್ವಾ] ಕೊಲ್ಲುವದರಿಂದ [ಶ್ರೇಯಃ ಚ] ಒಳ್ಳೆಯದಾದೀತೆಂದೇನೂ [ನ ಅನು ಪಶ್ಯಾಮಿ] ನನಗೆ ಕಾಣುವದಿಲ್ಲ

ಯುದ್ಧಕ್ಕೆ ಬಂದವರನ್ನು ಕೊಲ್ಲುವದರಿಂದ ರಾಜ್ಯವು ಕೈಸೇರುವದೆಂದು ನೀನು ಹೇಳುವದಾದರೆ —

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥**

[ಕೃಷ್ಣ] ಕೃಷ್ಣನೇ, ಕೇಳು [ವಿಜಯಂ] ಜಯವನ್ನೂ [ನಕಾಂಕ್ಷೇ] ನಾನು ಬಯಸುವದಿಲ್ಲ [ರಾಜ್ಯಂ] ರಾಜ್ಯವನ್ನೂ [ಸುಖಾನಿ ಚ] ರಾಜಯೋಗ್ಯವಾದ ಸುಖಗಳನ್ನೂ [ನ ಚ] ಬಯಸುವದೂ ಇಲ್ಲ [ಗೋವಿಂದ] ಅಂತರ್ಯಾಮಿಯಾಗಿ ಎಲ್ಲವನ್ನೂ ತಿಳಿದಿರುವಂಥ ಕೃಷ್ಣನೆ, ಕೇಳು [ನಃ] ನಮಗೆ ಅಂಥ [ರಾಜ್ಯೇನ] ರಾಜ್ಯದಿಂದ [ಕಿಂ] ಏನು ಪ್ರಯೋಜನ? ಮತ್ತು [ಭೋಗೈಃ] ರಾಜಯೋಗ್ಯವಾದ ಸುಖಗಳಿಂದಾಗಲಿ [ಜೀವಿತೇನ ವಾ] ಬದುಕಿರುವದರಿಂದಲಾಗಲಿ [ಕಿಂ] ಏನು ಪ್ರಯೋಜನ?

ಏಕೆಂದರೆ ಬಂಧುಗಳಿಂದ ಕೂಡಿದ್ದರಲ್ಲವೆ ಇವೆಲ್ಲ ಶೋಭಿಸುವದು?

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥**

[ರಾಜ್ಯಂ] ರಾಜ್ಯವೂ [ಭೋಗಾಃ] ಸುಖದ ಸಾಧನಗಳೂ [ಸುಖಾನಿ ಚ] ಸುಖಗಳೂ ಕೂಡ [ಯೇಷಾಂ ಅರ್ಥೇ] ಯಾರಿಗಾಗಿ [ನಃ] ನಮಗೆ [ಕಾಂಕ್ಷಿತಂ] ಬೇಕಾಗಿವೆಯೋ [ತ ಇಮೇ] ಈ ಇವರು [ಪ್ರಾಣಾನ್] ಜೀವದ ಆಸೆಯನ್ನೂ [ಧನಾನಿ ಚ] ಹಣಕಾಸುಗಳ ಆಸೆಯನ್ನೂ [ತ್ಯಕ್ತ್ವಾ] ಬಿಟ್ಟು [ಯುದ್ಧೇ] ಯುದ್ಧಕ್ಕಾಗಿ [ಅವಸ್ಥಿತಾಃ] ನಿಂತಿದ್ದಾರೆ

ಎಂಥ ನಂಟರಿಷ್ಟರೆಂದರೆ —

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥**

[ಆಚಾರ್ಯಾಃ] ವಿದ್ಯಾಗುರುಗಳು, [ಪಿತರಃ] ತಂದೆಯ ವಾವೆಯವರು, (ಪುತ್ರಾಃ) ಮಕ್ಕಳು, [ತಥೈವ ಚ] ಅದೇ ರೀತಿಯಲ್ಲಿಯೇ [ಪಿತಾಮಹಾಃ] ಅಜ್ಜಂದಿರು,(ಮಾತುಲಾಃ)ಸೋದರಮಾವಂದಿರು, (ಶ್ವಶುರಾಃ) ಮಾವಂದಿರು, (ಪೌತ್ರಾಃ)ಮೊಮ್ಮಕ್ಕಳು, (ಶ್ಯಾಲಾಃ) ಭಾವಮೈದುನರು, (ತಥಾ) ಹಾಗೆಯೇ (ಸಂಬಂಧಿನಃ) ಬೇರೆಬೇರೆ ಸಂಬಂಧವುಳ್ಳವರು

ಇವರೆಲ್ಲರೂ ನನ್ನನ್ನು ಕೊಲ್ಲುವರೆಂದರೆ —

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥**

(ಮಧುಸೂದನ) ಧರ್ಮಮಾರ್ಗವನ್ನು ಬೆಳೆಸುವ ಕೃಷ್ಣನೆ, ಆಚಾರ್ಯರೇ ಮೊದಲಾದವರನ್ನು ಕೊಲ್ಲಬಹುದೆ ? ಹೇಳು ನನ್ನ ಅಭಿಪ್ರಾಯವೇನೆಂದರೆ- (ಘ್ನತೋಽಪಿ) ಅವರಿಂದ ನಾನು ಹೊಡೆತವನ್ನು ತಿಂದರೂ (ತ್ರೈಲೋಕ್ಯ ರಾಜ್ಯಸ್ಯ ಅಪಿ ಹೇತೋಃ) ಸ್ವರ್ಗಮರ್ತ್ಯಪಾತಾಲವೆಂಬ ಮೂರು ಲೋಕಗಳೂ ಸಿಕ್ಕುವವೆಂದರೂ ಕೂಡ (ಏತಾನ್) ಈ ಆಚಾರ್ಯರೇ ಮೊದಲಾದವರನ್ನು (ನ ಹಂತುಂ ಇಚ್ಛಾಮಿ) ಕೊಲ್ಲುವುದಕ್ಕೆ ಮನಸ್ಸು ಮಾಡಲಾರೆನು. (ಕಿಂ ನು ಮಹೀಕೃತೇ) ಇನ್ನು ಬರೀ ಈ ಮರ್ತ್ಯಲೋಕಕ್ಕಾಗಿ ಮಾಡೇನೆ ?

ಆಚಾರ್ಯರ ಮಾತಿರಲಿ, ನಮಗೆ ಎಷ್ಟೋ ಬಗೆಯ ಕೇಡೆಣಿಸಿದ ದುರ್ಯೋಧನಾದಿಗಳನ್ನು ಕೊಲ್ಲಬಹುದಲ್ಲ ? ಎಂದರ —

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ಹತ್ವೈತಾನಾತ ತಾಯಿನಃ* ॥ ೩೬ ॥**

(ಜನಾರ್ದನ) ದುರ್ಜನರನ್ನೆಲ್ಲ ನಾಶಮಾಡುವಂಥ, ಕೃಷ್ಣನೆ, ಕೇಳು. (ಧಾರ್ತರಾಷ್ಟ್ರಾನ್) ಕೌರವರನ್ನು (ನಿಹತ್ಯ) ಕೊಂದರೆ (ನಃ) ನಮಗೆ (ಕಾ ಪ್ರೀತಿಃ ಸ್ಯಾತ್) ಏನು ಸುಖವಾದೀತು ? ಸುಖವಿಲ್ಲದಿರುವದಿಷ್ಟೇ ಅಲ್ಲ. ಶತ್ರುಗಳನ್ನು ಕೊಂದು ಬಾಳಬೇಕೆಂಬುವದು ವ್ಯಾವಹಾರಿಕ ಸುಖವನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳುವ ಮಾತು. ಯಾರಿಗೂ ಯಾವ ಹಿಂಸೆಯನ್ನೂ ಮಾಡಬಾರದೆಂಬುದು ಪಾರಮಾರ್ಥಿಕ ಸುಖವನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳುವ ಮಾತು. ಕ್ಷಣಿಕವಾದ ವ್ಯಾವಹಾರಿಕ ಸುಖದ್ದೇನು ಹೆಚ್ಚುಗಾರಿಕೆ? ಪಾರಮಾರ್ಥಿಕ ಸುಖದ ದೃಷ್ಟಿಯಿಂದ ನೋಡಿದರೆ (ಏತಾನ್) ಈ (ಆತತಾಯಿನಃ) ಸುಡುವದು, ವಿಷವನ್ನುಣಿಸುವದು, ಶಸ್ತ್ರದಿಂದ ಹೊಡೆಯುವದು ಧನವನ್ನು ಸೂರೆಮಾಡಿಕೊಳ್ಳುವದು, ಭೂಮಿಯನ್ನು ಅಪಹರಿಸುವದು, ಹೆಂಗಸರನ್ನು ಅವಮಾನಗೊಳಿಸುವದು–ಈ ಆರು ಬಗೆಯ ಕೇಡುಗಳನ್ನೂ ಎಣಿಸಿದಂಥ ಕೌರವರನ್ನು (ಹತ್ವಾ) ಕೊಂದರೆ [ಅಸ್ಮಾನ್] ನಮ್ಮನ್ನು [ಪಾಪಮೇವ] ಪಾಪವೇ [ಆಶ್ರಯೇತ್] ಬಂದು ಗಂಟುಬಿದ್ದೀತು.

ಆದ್ದರಿಂದ :—

**ತಸ್ಮಾನ್ನಾರ್ಹಾವಯಂ ಹಂತುಂ ಧಾರ್ತ್ತರಾಷ್ಟ್ರಾನ್ಸ್ವಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ? ॥ ೩೭ ॥**

---

"ಅಸ್ಮಾನ್ ಹತ್ವಾ ಏತಾನ್ ಆತತಾಯಿನಃ ಪಾಪಮೇವ ಆಶ್ರಯೇತ್ " ಎಂದು ಅನ್ವಯವನ್ನು ಮಾಡಿದರೆ " ನಮ್ಮನ್ನು ಕೊಂದರೆ ಈ ಕೇಡುಗರನ್ನು ಪಾಪವೇ ಬಂದು ಗಂಟುಬಿದ್ದೀತು" ಎಂದೂ ಅರ್ಥವಾಗುತ್ತದೆ

[ಮಾಧವ] ಲಕ್ಷ್ಮೀಪತಿಯಾದ ಕೃಷ್ಣನೆ, ಕೇಳು [ತಸ್ಮಾತ್] ನಂಟರಿಷ್ಟರ ಕೊಲೆಯಿಂದ ಸ್ವರ್ಗಸುಖ ಮುಂತಾದುದಾಗುವದಕ್ಕೆ ಬದಲಾಗಿ ನಮಗೆ ಪಾಪವೇ ಗಂಟುಬೀಳುವ ಕಾರಣದಿಂದ [ಸ್ವಬಾಂಧವಾನ್] ನಮ್ಮ ನಂಟರಿಷ್ಟರಾದ [ಧಾರ್ತರಾಷ್ಟ್ರಾನ್] ಕೌರವನ ಕಡೆಯವರನ್ನು [ವಯಂ] ನಾವು [ಹಂತುಂ ನ ಅರ್ಹಾಃ] ಕೊಲ್ಲಬಾರದು [ಹಿ] ಏಕೆಂದರೆ [ಸ್ವಜನಂ] ನಂಟರಿಷ್ಟರನ್ನು [ಹತ್ವಾ] ಕೊಂದು [ಕಥಂ] ಹೇಗೆ [ಸುಖಿನಃ ಸ್ಯಾಮ] ಸುಖಿಗಳಾದೇವು ?

ಬಂಧುಗಳಾದ ನಮ್ಮನ್ನು ಕೊಲ್ಲುವದಕ್ಕೆ ಕೌರವರು ಬಂದಿರುವಂತೆ ನಾವೇಕೆ ಅವರ ವಿಷಯದಲ್ಲಿ ನಡೆಯಬಾರದೆಂದರೆ —

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥**

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ?** ॥ ೩೯ ॥

ಹಿರಿಯರೂ ಗುರುಗಳೂ ಎಂಬ ದೃಷ್ಟಿಯಿಂದ ನಾವು ಭೀಷ್ಮರನ್ನೂ ದ್ರೋಣರನ್ನೂ ಮೇಲುಪಙ್ಕ್ತಿಯಾಗಿ ಇಟ್ಟುಕೊಳ್ಳುವದು ಯೋಗ್ಯವಾಗಿದ್ದರೂ ಅವರು ಹಣಕ್ಕಾಗಿ ಕೌರವನ ಸೇವೆಗೆ ಶರೀರವನ್ನು ಮಾರಿಕೊಂಡವರಾಗಿರುತ್ತಾರೆ. ಆದ್ದರಿಂದ (ಲೋಭೋಪಹತ ಚೇತಸಃ) ದುರಾಶೆಯಿಂದ ಹಾಳಾಗಿರುವ ಮನಸ್ಸುಳ್ಳ (ಏತೇ) ಇವರು (ಕುಲಕ್ಷಯಕೃತಂ) ಯುದ್ಧದಲ್ಲಿ ಕುಲವೆಲ್ಲ ನಾಶವಾಗುವದರಿಂದಾಗುವಂಥ (ದೋಷಂ) ಕೆಟ್ಟ ಪರಿಣಾಮವನ್ನೂ (ಮಿತ್ರದ್ರೋಹೇ) ಗೆಳೆಯರಿಗೆ ಎರಡೆಣಿಸುವದರ (ಪಾತಕಂ ಚ) ಪಾಪವನ್ನೂ ಕೂಡ (ಯದ್ಯಪಿ ನ ಪಶ್ಯಂತಿ) ನೋಡದೆ ಇದ್ದರೂ (ಜನಾರ್ದನ) ಕೃಷ್ಣನೆ, ಕೇಳು. (ಕುಲಕ್ಷಯಕೃತಂ) ಯುದ್ಧದಲ್ಲಿ ಕುಲವೆಲ್ಲ ನಾಶವಾಗುವದರಿಂದಾಗುವಂಥ (ದೋಷಂ) ಕೆಟ್ಟ ಪರಿಣಾಮವನ್ನು (ಪ್ರಪಶ್ಯದ್ಭಿಃ) ಚೆನ್ನಾಗಿ ಕಣ್ಣಿಗೆ ಕಟ್ಟಿದ ಹಾಗೆ ಕಾಣುತ್ತಿರುವ (ಅಸ್ಮಾಭಿಃ) ನಮಗೆ

(ಅಸ್ಮಾತ್ ಪಾಪಾತ್) ಈ ಪಾಪದಿಂದ (ನಿವರ್ತಿತುಮ್) ಹಿಮ್ಮೆಟ್ಟುವದಕ್ಕೆ (ಕಥಂ) ಏಕೆ (ನ ಜ್ಞೇಯಂ) ತಿಳಿಯಬಾರದು ?

ಕುಲವೆಲ್ಲ ನಾಶವಾಗುವದರಿಂದಾಗುವ ಕೆಟ್ಟ ಪರಿಣಾಮವೇನೆಂದರೆ -

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦ ॥**

(ಕುಲಕ್ಷಯೇ) ಕುಲವೆಲ್ಲ ನಾಶವಾದರೆ, ಆ ಹಿರಿಯರ ನಷ್ಟದ ಜೊತೆಗೆ (ಸನಾತನಾಃ) ಬಹುಕಾಲದಿಂದ ನಡೆದುಕೊಂಡು ಬಂದಿರುವ (ಕುಲಧರ್ಮಾಃ) ಬೇರೆಬೇರೆ ಕುಲದ ಆಚಾರಗಳು (ಪ್ರಣಶ್ಯಂತಿ) ತೀರ ಹಾಳಾಗಿಹೋಗುತ್ತವೆ (ಉತ) ಮತ್ತು (ಧರ್ಮೇ) ಕುಲಧರ್ಮಗಳು (ನಷ್ಟೇ) ಹಾಳಾಗಿಹೋದರೆ, ಬರೀ ಚಿಕ್ಕಪುಟ್ಟವರಾಗಿ ಉಳಿದುಕೊಂಡಿರುವ (ಕೃತ್ಸ್ನಂ ಕುಲಂ) ಕುಲವನ್ನೆಲ್ಲ (ಅಧರ್ಮಃ) ಅಧರ್ಮವು (ಅಭಿಭವತಿ) ತನ್ನ ಹಿಡಿತಕ್ಕೆ ಸಿಕ್ಕಿಸಿಕೊಳ್ಳುವದು

ಆಮೇಲೆ —

**ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥**

(ಕೃಷ್ಣ) ಕೃಷ್ಣನೆ, ಕೇಳು (ಅಧರ್ಮಾಭಿಭವಾತ್) ಅಧರ್ಮಕ್ಕೆ ಸೋಲು ವದರಿಂದ (ಕುಲಸ್ತ್ರಿಯಃ) ಸತ್ಕುಲದ ಹೆಂಗಸರು, ತಮ್ಮ ಪತಿಗಳು ಕುಲನಾಶ ವನ್ನು ಮಾಡಿದ ಪಾಪದ ಫಲವಾಗಿ (ಪ್ರದುಷ್ಯಂತಿ) ತೀರ ಕೆಟ್ಟುಹೋಗುವರು (ವಾರ್ಷ್ಣೇಯ) ವೃಷ್ಣಿವಂಶದವನಾದ ಕೃಷ್ಣನ, ಕೇಳು. (ಸ್ತ್ರೀಷು) ಸ್ತ್ರೀಯರು (ದುಷ್ಟಾಸು) ಕೆಟ್ಟುಹೋದರೆ (ವರ್ಣಸಂಕರಃ) ಜಾತಿಯ ಬೆರಕೆಯು (ಜಾಯತೇ) ಹುಟ್ಟುತ್ತದೆ

ಅದರಿಂದ ಮುಂದೆ —

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥**

(ಸಂಕರಃ) ಜಾತಿಯ ಬೆರಕೆಯು (ಕುಲಘ್ನಾನಾಂ) ಕುಲನಾಶವನ್ನು ಮಾಡಿದವರಿಗೆ ಮಾತ್ರವೇ ಅಲ್ಲ, (ಕುಲಸ್ಯ ಚ) ಒಟ್ಟು ಕುಲಕ್ಕೆಲ್ಲ (ನರಕಾಯೈವ) ನರಕಕ್ಕೇ ದಾರಿಯಾಗುವದು. ಬೆರಕೆಯ ಜಾತಿಯ ಮಕ್ಕಳಿಂದ ವಂಶಾಭಿವೃದ್ಧಿಯಾಯಿತೆನ್ನಬಹುದೇ ಹೊರತು ಅವರು ಪಿಂಡ ಮೊದಲಾದ್ದನ್ನು ಕೊಟ್ಟರೂ ಅದನ್ನು ಹಿರಿಯರು ತೆಗೆದುಕೊಳ್ಳುವದಿಲ್ಲ. (ಹಿ) ಆದ್ದರಿಂದಲೆ (ಏಷಾಂ) ಈ ಕುಲನಾಶಕರ (ಪಿತರಃ) ಹಿರಿಯರು (ಲುಪ್ತಪಿಂಡೋದಕಕ್ರಿಯಾಃ) ಪಿಂಡಪ್ರದಾನ, ಜಲತರ್ಪಣ-ಮೊದಲಾದ ಕ್ರಿಯೆಗಳನ್ನು ಪಡೆಯದವರಾಗಿ (ಪತಂತಿ) ಸ್ವರ್ಗದಿಂದ ಕೆಳಕ್ಕೆ ಬೀಳುವರು.

ಮತ್ತು —

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥**

(ವರ್ಣಸಂಕರಕಾರಕೈಃ) ಜಾತಿಯ ಬೆರಕೆಯನ್ನು ಮಾಡುವಂಥ (ಕುಲಘ್ನಾನಾಂ) ಕುಲನಾಶಕರ (ಏತೈಃ) ಈ (ದೋಷೈಃ) ದೋಷಗಳಿಂದ (ಶಾಶ್ವತಾಃ) ಎಷ್ಟೋ ಹಿಂದಿನಿಂದ ನಡದು ಬಂದಿರುವ (ಜಾತಿಧರ್ಮಾಃ) ಜಾತಿಯ ಧರ್ಮಗಳೂ (ಕುಲಧರ್ಮಾಶ್ಚ) ಕುಲದ ಧರ್ಮಗಳೂ (ಉತ್ಸಾದ್ಯಂತೇ) ನಿರ್ಮೂಲವಾಗುತ್ತವೆ.

ಇದರಿಂದ —

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ* ವಾಸೋ ಭವತೀತ್ಯನುಶುಶ್ರುಮ ॥ ೪೪ ॥**

(ಜನಾರ್ದನ) ಕೃಷ್ಣನೇ, ಕೇಳು. (ಉತ್ಸನ್ನಕುಲಧರ್ಮಾಣಾಂ) ಕುಲಧರ್ಮಗಳನ್ನೆಲ್ಲ ಬುಡಮೇಲಾಗಿ ಮಾಡಿಕೊಂಡಿರುವ (ಮನುಷ್ಯಾಣಾಂ) ಮನುಷ್ಯರಿಗೆ (ನಿಯತಂ) ಅವಶ್ಯವಾಗಿ (ನರಕೇ) ನರಕದಲ್ಲಿ (ವಾಸಃ) ವಾಸವು

---

* 'ನರಕೇಽನಿಯತಂ' ಎಂದು ಪಾಠಾಂತರವಿದೆ. (ನರಕೇ ಅನಿಯತಂ ವಾಸಃ) ಎಷ್ಟು ದಿನವಾದರೂ ನರಕದಲ್ಲಿರಬೇಕಾಗುವದೆಂದರ್ಥ.

(ಭವತಿ) ಆಗುತ್ತದೆ (ಇತಿ) ಎಂದು (ಅನುಶುಶ್ರುಮ) ದೊಡ್ಡವರ ಬಾಯಿಂದ ಕೇಳುತ್ತಿದ್ದೇವೆ.

ಆದ್ದರಿಂದ ನನಗೆ ತೋರುವ ಪಾಪಭೀತಿಯೇನೆಂದರೆ —

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥೪೫॥**

(ಅಹೋ) ಆಹಾ! (ಬತ) ಎಂಥ ಕೆಲಸ ಮಾಡಿದೆನು! (ರಾಜ್ಯ ಸುಖಲೋಭೇನ) ರಾಜ್ಯದಿಂದಾಗುವ ಸುಖದ ಮೇಲಿನ ದುರಾಶೆಯಿಂದ (ಸ್ವಜನಂ) ನಂಟರಿಷ್ಟರನ್ನು (ಹಂತುಂ) ಕೊಲ್ಲುವದಕ್ಕೆ (ಉದ್ಯತಾಃಯತ್) ಪ್ರಯತ್ನಮಾಡಿದ್ದು (ವಯಂ) ನಾವು (ಮಹತ್ಪಾಪಂ) ದೊಡ್ಡಪಾತಕವನ್ನು (ಕರ್ತುಂ) ಮಾಡುವದಕ್ಕೆ (ವ್ಯವಸಿತಾಃ) ಪ್ರಯತ್ನ ಮಾಡಿದಂತಾಯಿತು.

ಹೀಗೆ ಕೈಬಿಟ್ಟು ಕೂತರೆ ಸಾಯಬೇಕಾದೀತೆಂದರೆ —

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ* ಭವೇತ್ ॥**

(ಅಪ್ರತೀಕಾರಂ) ಬದಲು ಕೈಮಾಡದೆ ಇರುವಂಥ ಮತ್ತು (ಅಶಸ್ತ್ರಂ) ಕೈಯಲ್ಲಿ ಗಾಂಡೀವವಿಲ್ಲದೆ ಇರುವಂಥ (ಮಾಂ) ನನ್ನನ್ನು (ಶಸ್ತ್ರಪಾಣಯಃ) ಧನುರ್ಧಾರಿಗಳಾದ (ಧಾರ್ತರಾಷ್ಟ್ರಾಃ) ಕೌರವರು (ರಣೇ) ಯುದ್ಧದಲ್ಲಿ (ಯದಿ ಹನ್ಯುಃ) ಕೊಂದರೆ (ತತ್) ಅದು (ಮೇ) ನನಗೆ (ಕ್ಷೇಮತರಂ) ಬಹಳ ಒಳ್ಳೆಯದು (ಭವೇತ್) ಆದೀತು ಏಕೆಂದರೆ ನಾನು ಬಂಧುಗಳ ಮೇಲೆ ಯುದ್ಧಕ್ಕೆ ಬಂದ ಪಾಪಕ್ಕೆ ಸಾವೇ ತಕ್ಕ ಪ್ರಾಯಶ್ಚಿತ್ತವು.

**ಸಂಜಯ ಉವಾಚ** ಸಂಜಯನು ಹೇಳಿದ್ದು —

**ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭ ॥**

---

* ಪ್ರಿಯತರಂ ಎಂದು ಪಾಠಾಂತರವಿದೆ.

[ಶೋಕಸಂವಿಗ್ನ ಮಾನಸಃ] ದುಃಖದಿಂದ ಪೀಡಿತವಾದ ಮನಸ್ಸುಳ್ಳ [ಅರ್ಜುನಃ] ಅರ್ಜುನನು [ಏವಂ] ಮೇಲೆ ಹೇಳಿದ ರೀತಿಯಲ್ಲಿ [ಉಕ್ತ್ವಾ] ಹೇಳಿ [ಸಶರಂ] ಬಾಣವನ್ನು ಹೂಡಿದ್ದಂಥ [ಚಾಪಂ] ಗಾಂಡೀವ ಧನುಸ್ಸನ್ನು [ವಿಸೃಜ್ಯ] ಕೈಬಿಟ್ಟು [ಸಂಖ್ಯೇ] ರಣರಂಗದಲ್ಲಿ [ರಥೋಪಸ್ಥಃ] ತೇರಿನ ಮೇಲೆ [ಉಪಾವಿಶತ್] ಕುಳಿತುಕೊಂಡನು

* ಇತಿ ಶ್ರೀ ಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸು
ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ
**ಅ ರ್ಜು ನ ವಿ ಷಾ ದ ಯೋ ಗೋ**
ನಾಮ ಪ್ರಥಮೋಽಧ್ಯಾಯಃ

---

# ಎರಡನೆ ಅಧ್ಯಾಯ

ಈ ರೀತಿಯಲ್ಲಿ ಅರ್ಜುನನು ಯುದ್ಧದಿಂದ ತನಗೆ ಪಾಪವೇ ಗಂಟು ಬೀಳುವದೆಂದು ತಪ್ಪು ತಿಳಿದುಕೊಂಡು ಆ ಪಾಪಕ್ಕೆ ಹೆದರಿ ಕೈಮುದುರಿಕೊಂಡು ಕುಳಿತುಕೊಂಡನೆನ್ನುತ್ತಲೆ ಧರ್ಮಕ್ಷೇತ್ರದ ಪರಿಣಾಮವು ಧರ್ಮಪ್ರಿಯ

---

* "ಇಲ್ಲಿಗೆ ವ್ಯಾಸರು ರಚಿಸಿದ ನೂರುಸಹಸ್ರ ಸಂಖ್ಯೆಯ ಗ್ರಂಥಗಳುಳ್ಳ ಶ್ರೀ ಮಹಾಭಾರತದೊಳಗಣ ಭೀಷ್ಮಪರ್ವದಲ್ಲಿ ಶ್ರೀಕೃಷ್ಣಾರ್ಜುನರ ಮಾತುಗಾರಿಕೆಯ ರೂಪದಲ್ಲಿ ಬ್ರಹ್ಮಜ್ಞಾನವನ್ನು ತಿಳಿಸುವ ಮತ್ತು ಅದರ ಸಾಧನಗಳನ್ನು ಹೇಳುವ ಭಗವದ್ಗೀತೆಯ ಶ್ಲೋಕಗಳೆಂಬ ಉಪನಿಷತ್ತುಗಳಲ್ಲಿ ಅರ್ಜುನವಿಷಾದಯೋಗವೆಂಬ ಮೊದಲನೆ ಅಧ್ಯಾಯವು ಮುಗಿಯಿತು." ಎಂಬುದು ಈ ಸಮಾಪ್ತಿವಾಕ್ಯದ ತಾತ್ಪರ್ಯ. ಮುಂದೆ ಬೇರೆಬೇರೆ ಹೆಸರಿರುವ ಪ್ರತಿ ಅಧ್ಯಾಯದ ಸಮಾಪ್ತಿವಾಕ್ಯಕ್ಕೂ ಈ ಅನುವಾದವನ್ನು ಅನ್ವಯಿಸಿಕೊಳ್ಳಬೇಕು.

ಧರ್ಮಪ್ರಿಯನಾದ ಅರ್ಜುನನ ಮೇಲೆ ಚೆನ್ನಾಗಿ ಆಯಿತೆಂದು ನೆನೆಸಿ ತನ್ನ ಮಕ್ಕಳಿಗಿನ್ನು ಭಯವಿಲ್ಲವೆಂದು ಉತ್ಸಾಹದ ಕಲ್ಪನೆಯನ್ನು ತಂದುಕೊಳ್ಳುತ್ತಿರುವ ಧೃತರಾಷ್ಟ್ರನಿಗೆ,

**ಸಂಜಯ ಉವಾಚ** ಸಂಜಯನು ಹೇಳಿದ್ದು :—

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ** ॥ ೧ ॥

(ತಥಾ) ಆ ರೀತಿಯಲ್ಲಿ ನನ್ನವರನ್ನು ನಾನು ಹೊಡೆಯುವದು ಹೇಗೆಂಬ (ಕೃಪಯಾ) ಮರುಕದಿಂದ (ಆವಿಷ್ಟಂ) ಆವೇಶವನ್ನು ಹೊಂದಿ (ಅಶ್ರುಪೂರ್ಣಾಕುಲೇಕ್ಷಣಮ್) ಕಣ್ಣೀರು ತುಂಬಿರುವದರಿಂದ ದೃಷ್ಟಿ ಮುಂದು ಸರಿಯಲಾರದೆ (ವಿಷೀದಂತಂ) ವ್ಯಥೆಪಡುತ್ತಿರುವಂಥ (ತಂ) ಆ ಅರ್ಜುನನನ್ನು ಕುರಿತು (ಮಧುಸೂದನಃ) ದುಷ್ಟನಾದ ಮಧುವೆಂಬ ರಾಕ್ಷಸನನ್ನು ಕೊಂದ ಶ್ರೀಕೃಷ್ಣನು (ಇದಂ) ಇದರ ಮುಂದೆ ಇಲ್ಲಿ ಹೇಳುವಂಥ (ವಾಕ್ಯಂ) ಮಾತನ್ನು (ಉವಾಚ) ಹೇಳಿದನು.

**ಶ್ರೀಭಗವಾನುವಾಚ** ಐಶ್ವರ್ಯ, ಧರ್ಮ, ಯಶಸ್ಸು, ಶ್ರೀ, ವೈರಾಗ್ಯ, ಜ್ಞಾನ-ಇವೆಲ್ಲ ಪೂರ್ಣವಾಗಿರುವಂಥ ಶ್ರೀಕೃಷ್ಣನು ಹೇಳಿದ್ದು :—

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ** ॥ ೨ ॥

(ಅರ್ಜುನ) ಅರ್ಜುನನೆ, ಕೇಳು. ನೀನು ಈಗ ನಂಟರಿಷ್ಟರನ್ನು ನೋಯಿಸಲಾರೆನೆಂದು ದೊಡ್ಡದೊಂದು ಧರ್ಮವನ್ನು ಮೈಮೇಲೆ ಹಾಕಿಕೊಂಡಿರುವೆಯಲ್ಲ! ಇದೇನು ಮೋಕ್ಷಕ್ಕೆ ಸಾಧನವೆಂದೊ? ಸ್ವರ್ಗಕ್ಕೆ ಸಾಧನವೆಂದೊ? ಅಥವಾ ಈ ಲೋಕದಲ್ಲಿಯೇ ಒಳ್ಳೇ ಹೆಸರಿಗೆ ಸಾಧನವೆಂದೊ? – ಈ ಮೂರರಲ್ಲಿ ಯಾವದಕ್ಕೂ ಇದು ಸಾಧನವಲ್ಲ. ಹೇಗೆಂದರೆ ಮೋಕ್ಷವು ಉತ್ತಮರಿಗೆ ದೊರೆಯತಕ್ಕದ್ದು. ಯುದ್ಧಕ್ಕೆ ಬಂದಿರುವವರನ್ನು ನೋಡಿದಾಗ ಕೈಕಾಲುಗಳು ನಿಃಸತ್ತ್ವವಾಗುವದೇ ಮೊದಲಾದ ದುರ್ಲಕ್ಷಣ

ಗಳೆಲ್ಲಾ ಅಧಮರಲ್ಲಿ ತೋರತಕ್ಕವುಗಳೇ ಹೊರತು ಎಷ್ಟುಮಾತ್ರವೂ ಉತ್ತಮರು ಅವುಗಳನ್ನು ತಮ್ಮೊಳಕ್ಕೆ ಬರಮಾಡಿಕೊಳ್ಳುವದಿಲ್ಲ. ಒಂದು ಪಕ್ಷ ನೀನು ಯುದ್ಧಕ್ಕೆ ಹಿಂದೆಗೆದಿರುವದು ಕನಿಕರದಿಂದಲೇ ಹೊರತು ಭಯದಿಂದಲ್ಲವೆಂದರೂ ಯುದ್ಧದಿಂದ ಹಿಮ್ಮೆಟ್ಟುವದೆಂಬುದೇ ಅಧಮರ ನಡೆವಳಿಕೆ. ಅದು (ಅನಾರ್ಯಜುಷ್ಟಂ) ಉತ್ತಮರ ನಡೆವಳಿಕೆಯಲ್ಲ ಹೀಗೆ ನೀನು ಈಗ ಉತ್ತಮರ ಸಾಲಿಗೆ ಸೇರುವದಿಲ್ಲವಾದ್ದರಿಂದ ಮೋಕ್ಷದ ಆಸೆ ಇಲ್ಲ. ಇಷ್ಟೇ ಅಲ್ಲ, ಇದು ಮೋಕ್ಷಕ್ಕೆ ಅಡ್ಡಿಯನ್ನೇ ತಂದೊಡ್ಡತಕ್ಕದ್ದು ಹೇಗೆಂದರೆ ಮೋಕ್ಷವನ್ನು ಬಯಸುವವರು ತಮ್ಮ ತಮ್ಮ ವರ್ಣಾಶ್ರಮಾಚಾರಗಳನ್ನು ಬಿಡುವದಿಲ್ಲ. ಏಕೆಂದರೆ ಅದರಿಂದಲೇ ಅವರಿಗೆ ಚಿತ್ತ ಶುದ್ಧಿ. ನೀನು ಕ್ಷತ್ರಿಯ. ಯುದ್ಧಮಾಡುವದು ನಿನ್ನ ಧರ್ಮ ನೀನು ಯುದ್ಧದಿಂದ ಹಿಮ್ಮೆಟ್ಟಿದರೆ ನಿನಗೆ ಚಿತ್ತಶುದ್ಧಿ ಹೇಗಾದೀತು? ಚಿತ್ತಶುದ್ಧಿಯೇ ಇಲ್ಲದ ಮೇಲೆ ಜ್ಞಾನದ ಮಾತಂತು ಎಷ್ಟೋ ದೂರ ಆದ್ದರಿಂದ ನಿನಗೆ ಅದು ಮೋಕ್ಷಕ್ಕೆ ಸಾಧನವಲ್ಲ ಇನ್ನು ಸ್ವರ್ಗದ ವಿಷಯವನ್ನು ತೆಗೆದುಕೊಂಡರೆ ಕ್ಷತ್ರಿಯನಿಗೆ ಯುದ್ಧವೇ ಸ್ವರ್ಗದ ಸಾಧನ. ಆದ್ದರಿಂದ ಅಂಥ ಯುದ್ಧವನ್ನು ಬಿಡುವದೆಂಬುದು (ಅಸ್ವರ್ಗ್ಯಂ) ಸ್ವರ್ಗದ ಸಾಧನವಾಗುವದಿಲ್ಲ ಇಷ್ಟೇ ಅಲ್ಲ ನಿನ್ನ ಧರ್ಮವನ್ನು ಉಪೇಕ್ಷೆಮಾಡುವ ನಿನಗೆ ನರಕವೇ ಆದೀತು ಇದನ್ನೂ ಬಿಟ್ಟು ಬರೀ ಈ ಲೋಕದ ಒಳ್ಳೇ ಹೆಸರಿನ ವಿಷಯವನ್ನು ಯೋಚಿಸಿದರೂ ನಂಟರಿಷ್ಟರನ್ನೆಲ್ಲ ಕೊಲ್ಲಬೇಕಾಗುವದೆಂಬದನ್ನು ಲಕ್ಷ್ಯಕ್ಕೆ ತಂದುಕೊಂಡು ಒಂದು ಪಕ್ಷ ಮೊದಲೇ ನೀನು ಯುದ್ಧಕ್ಕೆ ಬರದೇ ಹೋಗಿದ್ದರೂ ಚೆನ್ನಾಗಿತ್ತು. ಬಂದಮೇಲೆ ಹಿಂದೆಗೆಯುವದು ಒಳ್ಳೇ ಹೆಸರನ್ನು ತರುವುದಿಲ್ಲವೆಂದಿಷ್ಟೇ ಅಲ್ಲ, (ಅಕೀರ್ತಿಕರಂ) ಹೆದರಿ ಹಿಮ್ಮೆಟ್ಟಿದನೆಂಬ ಕೆಟ್ಟ ಹೆಸರನ್ನೇ ತರುವದರಿಂದ ನಿವಾತಕವಚರೇ ಮೊದಲಾದವರೊಡನೆ ಹೋರಾಡಿದ ಕೀರ್ತಿಯು ಅಳಿಸಿ ಹೋಗುವದು. ಇಂಥ (ಇದಂ) ಈ (ಕಶ್ಮಲಂ) ಹಗೆಗಳನ್ನು ನೋಡುತ್ತಲೆ ಮೈಯಲ್ಲಿ ನಿಸ್ಸತ್ತ್ವವಾಗುವದೆಂಬ ಮತ್ತು ಹಗೆಗಳು ನನ್ನನ್ನು ಕೊಂದರೂ ನಾನು ಅವರನ್ನು ಕೊಲ್ಲಲಾರೆನೆಂಬ ಹೊಲಸು ವಿಚಾರವು (ತ್ವಾ) ನಿನಗೆ (ವಿಷಮೇ) ಶಸ್ತ್ರಧಾರಿಗಳಾದ ಹಗೆಗಳು ಕೈ ಎತ್ತಿ ನಿಂತಿರುವ ಬಿಕ್ಕಟ್ಟಿನ ಕಾಲದಲ್ಲಿ ಅಥವಾ

ರಣರಂಗದಲ್ಲ (ಕುತಃ)ಯಾವ ಕಾರಣದಿಂದ (ಸಮುಪಸ್ಥಿತಂ) ಬಂದು ಗಂಟು ಬಿತ್ತು! ಆದರಲ್ಲಿಯೂ ತಪ್ಪಿಲ್ಲದೆ ಇರುವ ನಿಮ್ಮನ್ನು ಗೋಳಾಡಿಸುವವರ ವಿಷಯದಲ್ಲಿ ನಿನಗೀಗ ಕನಿಕರಗೊಳ್ಳಬಾರದು ನಿನ್ನಂಥ ಶೂರರನ್ನೇ ಗೋಳಾಡಿಸುವವರು ಸಾಮಾನ್ಯರನ್ನೆಷ್ಟು ಗೋಳಾಡಿಸಬಹುದು! ನೋಡು

ನೀನು ಈಗ ಏನು ಮಾಡಬೇಕೆಂದರೆ —

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥**

(ಪಾರ್ಥ) ಪೃಥೆಯ ಮಗನಾದ ಅರ್ಜುನನೆ, ಕೇಳು. ನಿಮ್ಮ ತಾಯಿಯು ದೇವತಾಪ್ರಸಾದದಿಂದ ನಿನ್ನನ್ನು ಹಡೆದಿರುವಳು. ಆದ್ದರಿಂದ ನಿನ್ನಲ್ಲಿ ಸ್ವಭಾವವಾಗಿ ಹೆಚ್ಚು ಬಲವಿರುವದು ಇಂಥ ನೀನು (ಕ್ಲೈಬ್ಯಂ) ಇಂದ್ರಿಯ ಶಕ್ತಿಯೂ ದೇಹಶಕ್ತಿಯೂ ಹೋಗುವಂಥ ಎದೆಗೇಡಿತನವನ್ನು (ಮಾ ಸ್ಮ ಗಮಃ) ಹೊಂದಬೇಡ (ತ್ವಯಿ) ಈಶ್ವರನೊಡನೆ ಕೂಡ ಹೋರಾಡಿದ ನಿನ್ನಲ್ಲಿ (ಏತತ್) ಹೀಗೆ ಜಳ್ಳೆದೆಯವನಾಗುವಿಕೆಯು (ನ+ ಉಪಪದ್ಯತೇ) ಒಪ್ಪುವದಿಲ್ಲ ನೀನು ಮನಸ್ಸು ಸುತ್ತುತ್ತಿರುವದೇ ಮೊದ ಲಾದ್ದರಿಂದ ಹೀಗೆ ಹಿಂದೆಗೆಯುವೆನೆನ್ನುವದಾದರೂ ಸರಿಯಲ್ಲ. ಏಕೆಂದರೆ ಮನಸ್ಸಿನ ಆ ತಿರುಗುವಿಕೆಯು ಒಂದು ಬಗಯ ಬಲಹೀನತೆಯಿಂದ ಉಂಟಾ ಗಿದೆ. ಆ ಬಲಹೀನತೆಯೊಳಗೆ ಹುರುಳಿಲ್ಲ ವಿವೇಕವೇ ಮನಸ್ಸಿನ ಬಲ. ಅವಿವೇಕವೇ ಮನಸ್ಸಿನ ಬಲಹೀನತೆ ಅದೇ ಮೋಹ ಅತ್ತಕಡೆಗ ನೋಡದೆ ಅದು ಆಡಿದ ಹಾಗೆ ಅದನ್ನು ಬಿಟ್ಟರೆ ಅದು ಬೇಕಾದಷ್ಟು ಭಯಂಕರವಾದ ರೂಪವನ್ನು ತಾಳುತ್ತ ಸಾಗುವದು ಆದರೆ ಒಮ್ಮೆ ವಿವೇಕ ದೃಷ್ಟಿಯ ಪ್ರವಾಹವನ್ನು ಅದರ ಮೇಲೆ ಹಾಯಿಸಿದರೆ ಒಡನೆ ಅದು ಇದ್ದ ಕಡೆಯ ಲ್ಲಿಯೇ ಮಾಯವಾಗುವದು ಆದ್ದರಿಂದ (ಪರಂತಪ) ಶತ್ರುಗಳನ್ನು ಗಡ ಗುಟ್ಟಿಸುವ ಅರ್ಜುನನೆ, ಕೇಳು ನಿನಗೆ ಈ ಎದೆಗೇಡಿತನದ ಮೇಲೆ ಕೈ ಮಾಡುವದೇನೂ ದೊಡ್ಡ ಮಾತಲ್ಲ (ಕ್ಷುದ್ರಂ) ಬಹು ಸುಲಭವಾಗಿ ಕಳ

ಯುವದಕ್ಕೆ ಬರುವಷ್ಟು ಕೀಳಾಗಿರುವಂಥ (ಹೃದಯದೌರ್ಬಲ್ಯಂ) ಮನಸ್ಸಿನ ಅಳುಕನ್ನು (ತ್ಯಕ್ತ್ವಾ) ವಿಚಾರದಿಂದ ಕೊಡವಿಕೊಂಡು ಬಿಟ್ಟು (ಉತ್ತಿಷ್ಠ) ಯುದ್ಧವನ್ನು ಮಾಡುವದಕ್ಕೆ ಏಳು.

ತಾನು ಯುದ್ಧಕ್ಕೆ ಹಿಂದೆಗೆಯುವದಕ್ಕೆ ಅಲ್ಲಿ ಬಂದಿರುವವರು ಬರೀ ತನ್ನ ಸಂಬಂಧಮಾತ್ರದವರೆಂಬುದೇ ಅಲ್ಲದೆ ಹೆಚ್ಚಿನ ಕಾರಣವೂ ಉಂಟೆಂದು,

**ಅರ್ಜುನ ಉವಾಚ** ಅರ್ಜುನನು ಹೇಳಿದ್ದು .—

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ** ॥ ೪ ॥

(ಮಧುಸೂದನ) ಮಧುವೆಂಬ ರಾಕ್ಷಸನನ್ನು ಕೊಂದವನೆ, (ಅರಿಸೂದನ) ಶತ್ರುಗಳನ್ನು ನಾಶಮಾಡುವ ಕೃಷ್ಣನೆ, ಕೇಳು ಲೋಕದಲ್ಲಿ ಶತ್ರುಗಳ ಮೇಲೆ ಕೈಮಾಡುವದು ಯೋಗ್ಯವೇ ಸರಿ. ಆ ಶತ್ರುಗಳು ಒಂದು ಪಕ್ಷ ಸಾಮಾನ್ಯರಾದ ನಂಟರಾದರೂ ಅವರ ಮೇಲೆ ಕೈ ಏಳಬಹುದು (ಪೂಜಾರ್ಹೌ) ಯಾರ ಪಾದಗಳನ್ನು ಗಂಧ, ಹೂ-ಮೊದಲಾದವುಗಳಿಂದ ಪೂಜೆ ಮಾಡಬೇಕೊ ಅಂಥವರ ಮೇಲೆ ಕೈ ಏಳಬಹುದೆ ? ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡು ತಬ್ಬಲಿಗಳಾದ ನಮ್ಮನ್ನು ಮಮತೆಯಿಂದ ಸಾಕಿದ ಸಾಕುತಂದೆಯಾದ (ಭೀಷ್ಮಂ) ಭೀಷ್ಮರನ್ನೂ ಹೊಟ್ಟೆಯಲ್ಲಿ ಹುಟ್ಟಿದ ಅಶ್ವತ್ಥಾಮರಿಗಿಂತಲೂ ಹೆಚ್ಚು ಪ್ರೀತಿಯಿಂದ ನಮ್ಮನ್ನೆಲ್ಲ ಧನುರ್ವಿದ್ಯೆಯಲ್ಲಿ ನಿಪುಣರಾಗಿ ಮಾಡಿದ (ದ್ರೋಣಂ ಚ) ದ್ರೋಣರನ್ನೂ (ಅಹಂ) ನಾನು ವಿನೋದಕ್ಕೆ ಕೂಡ ನೋಯಿಸಬಾರದು ಅಂಥವರನ್ನು (ಸಂಖ್ಯೇ) ಯುದ್ಧದಲ್ಲಿ (ಕಥಂ) ಹೇಗೆ (ಇಷುಭಿಃ) ಬಾಣಗಳಿಂದ(ಪ್ರತಿಯೋತ್ಸ್ಯಾಮಿ) ತಿರುಗಿ ಹೊಡೆಯಲಿ! ಹಿರಿಯವರನ್ನು ನೀನು ತಾನೆಂದರೇನೆ ಅಧೋಗತಿಯಾಗುವದೆನ್ನುವರು ಇನ್ನು ಅವರನ್ನು ಕೈಎತ್ತಿ ಹೊಡೆಯುವದೆಷ್ಟು ಪಾಪವಾಗಬಹುದು !!

ಹಿರಿಯರಾದರೂ ದಾರಿತಪ್ಪಿ ನಡೆಯುವವರಲ್ಲಿ ಪೂಜ್ಯಭಾವನೆಯನ್ನು ಬಿಡಬಹುದಾದ್ದರಿಂದ ಕೌರವನ ಅನ್ಯಾಯದ ಪಕ್ಷಕ್ಕೆ ನೇರವಾಗಿ ಅಡ್ಡದಾರಿಯನ್ನು ಹಿಡಿದು ನಿಂತು ನಿಮ್ಮ ಮೇಲ ಬಂದಿರುವವರನ್ನು ಹೊಡೆಯಬಹುದೆಂದರ—

**ಗುರೂನಹತ್ವಾ ಹಿ ಮಹಾನು ಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ರುಧಿರಪ್ರದಿಗ್ಧಾನ್** ॥ ೫ ॥

ಈ ಸಂದರ್ಭದಲ್ಲಿ ಅವರು ಅಡ್ಡದಾರಿಯನ್ನು ಹಿಡಿದಿರುವಂತೆ ಕಂಡರೂ ಇಷ್ಟೇ ಕಾರಣದಿಂದ ಅವರನ್ನು ನಾವು ಕಡೆಗಾಣುವದು ಯೋಗ್ಯವೆನಿಸುವದಿಲ್ಲ (ಮಹಾನುಭಾವಾನ್) ಶಾಸ್ತ್ರಜ್ಞಾನ, ತಪಶ್ಶಕ್ತಿ-ಮೊದಲಾದ ಅನೇಕ ವಿಷಯಗಳಲ್ಲಿ ಸರಿಜೋಡಿಯಿಲ್ಲದಿರುವಷ್ಟು ದೊಡ್ಡವರಾದ (ಗುರೂನ್*) ಹಿರಿಯರಾದ ಭೀಷ್ಮದ್ರೋಣರನ್ನು (ಅಹತ್ವಾ) ಕೊಲ್ಲದೆ ಬಿಡುವದರಿಂದ, ನಮಗೆ ಪರದಲ್ಲಿ ಸದ್ಗತಿಯಂತು ಆಗಿಯೇ ಆಗುವದು. ಇನ್ನು ಅವರನ್ನು ಕೊಲ್ಲುವದು ಈ ಲೋಕದ ಸುಖಕ್ಕೆ ಸಾಧನವಾಗುವದೆಂದರೆ ಅದು ನನಗೆ ಒಗ್ಗುವದಿಲ್ಲ (ಇಹ ಲೋಕೇ) ಈ ಲೋಕದಲ್ಲಿ ಅವರನ್ನು ಕೊಲ್ಲುವದರಿಂದ ಹೊಟ್ಟೆಹೊರೆಯುವದಕ್ಕಿಂತಲೂ (ಭೈಕ್ಷ್ಯಮಪಿ) ತಿರಿದುತಂದ ಅನ್ನವನ್ನಾದರೂ (ಭೋಕ್ತುಂ) ತಿನ್ನುವದು (ಶ್ರೇಯಃ)ಮೇಲೆಂದು ನನಗೆ ತೋರುತ್ತದೆ. (ಹಿ*) ಇದೇ ನಿಜ. ಇತರರಿಗೆ ಹಾನಿಯಾಗದೆ ತನಗೆ ದೊರೆತದ್ದು ಎಷ್ಟು

---

* ಇಲ್ಲಿ ಭೀಷ್ಮದ್ರೋಣರಿಬ್ಬರನ್ನು ಕುರಿತು ಉಪಯೋಗಿಸಿರುವ ಗುರುವೆಂಬ ಮಾತಿಗೆ ಉಪದೇಶಕರೆಂದರ್ಥವನ್ನಿಟ್ಟುಕೊಂಡರೆ ಅದು ಭೀಷ್ಮರಿಗೆ ವಿಶೇಷಣವಾಗಿ ಹೊಂದುವದಿಲ್ಲ ಆದ್ದರಿಂದ ಹಿರಿಯರೆಂಬರ್ಥವನ್ನು ಇಟ್ಟುಕೊಂಡಿದೆ.

ಒಬ್ಬರು 'ಹಿಮಹಾನುಭಾವನ್' ಎಂದೊಂದೇ ಪದವನ್ನಾಗಿಟ್ಟುಕೊಂಡು (ಹಿಮ ಹ ಅನುಭವಾನ್) ಹಿಮವನ್ನು ಕಳೆಯುವಂಥ ಸೂರ್ಯನಂತೆ

ಕೀಳಾದರೂ ಅದೇ ಮೇಲು. ಹೀಗೆ ಮಾಡದೆ ಪಾಪ! (ಅರ್ಥಕಾಮಾನ್) ದುಡ್ಡಿನಾಸೆಯಿಂದ ದಾಕ್ಷಿಣ್ಯಕ್ಕೆ ಸಿಕ್ಕಿರುವ (ಗುರೂನ್) ಹಿರಿಯರನು (ಹತ್ವಾ ತು) ಕೊಂದದ್ದರಿಂದಾಗುವ ಲಾಭವನ್ನು ನೋಡಿದರೆ, ಪರಲೋಕದ ಸದ್ಗತಿಯ ಆಸೆಯಂತು ಇಲ್ಲವೇ ಇಲ್ಲ. (ಇಹೈವ) ಈ ಲೋಕದಲ್ಲಿಯೋ ಆದರೂ, ಶುದ್ಧವಾದ ಜೀವನವೇನೂ ನಡೆಯಲಾರದು (ರುಧಿರಪ್ರದಿಗ್ಧಾನ ಭೋಗಾನ್) ರಕ್ತದ ಲೇಪವುಳ್ಳ ಭೋಗಗಳನ್ನು–ಎಂದರೆ ರಕ್ತವನ್ನು ಹರಿಸಿ ಪಡೆಯುವ ಸುಖಗಳನ್ನು (ಭುಂಜೀಯ) ಅನುಭವಿಸೇನು. ಅಥವಾ (ಗೂರೂನ್ ಹತ್ವಾ ತು) ಭೀಷ್ಮದ್ರೋಣರನ್ನು ಕೊಂದು (ಇಹೈವ) ಈ ಲೋಕದಲ್ಲಿ ಮಾತ್ರ (ರುಧಿರಪ್ರದಿಗ್ಧಾನ್ ಅರ್ಥಕಾಮಾನ್ ಭೋಗಾನ್ ಭುಂಜೀಯ) ರಕ್ತವನ್ನು ಹರಿಸಿ ಪಡೆಯುವ ಅರ್ಥ, ಕಾಮ–ಎಂಬೆರಡು ಪುರುಷಾರ್ಥದ ಸುಖಗಳನ್ನು ಅನುಭವಿಸೇನು ಪರಲೋಕದ ಪ್ರಯೋಜನವೂ ಇಲ್ಲ, ಧರ್ಮಮೋಕ್ಷಗಳ ಆಸೆಯೂ ಇಲ್ಲ ಆದ್ದರಿಂದ ಗುರುಗಳನ್ನು ಕೊಂದ ಪಕ್ಷದಲ್ಲಿ ನಾನು ಮೋಕ್ಷವನ್ನೂ ಸ್ವರ್ಗವನ್ನೂ ಕಳೆದುಕೊಂಡು ಕೆಟ್ಟ ಹೆಸರಿಗೇ ಗುರಿಯಾಗಬೇಕಾಗುತ್ತದೆಯೋ ಹೊರತು ಕೊಲ್ಲದೆ ಬಿಡುವದರಿಂದ ಆ ಅನರ್ಥಗಳನ್ನು ಹೊಂದಲಾರೆನೆಂದು ತೋರುತ್ತದೆ.

ಶಾಸ್ತ್ರವು ಕ್ಷತ್ರಿಯನಿಗೆ ಭಿಕ್ಷಾನ್ನವನ್ನು ಕೂಡದೆಂದು ಹೇಳಿರುವದರಿಂದ ಮತ್ತು ಯುದ್ಧವನ್ನು ಮಾಡತಕ್ಕದ್ದೆಂದು ಕಟ್ಟುಮಾಡಿರುವದರಿಂದ ಯುದ್ಧ ಮಾಡುವದೇ ಒಳ್ಳೆಯದಲ್ಲವೆ? ಎಂದರೆ —

**ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।**

---

ಅಥವಾ ಅಗ್ನಿಯಂತೆ ಸಾಮರ್ಥ್ಯವುಳ್ಳವರೆಂದರ್ಥವನ್ನು ಮಾಡಿದ್ದಾರೆ. ಎಲ್ಲವನ್ನೂ ಬೆಳಗುವ ಸೂರ್ಯನಿಗೆ ಮತ್ತು ಎಲ್ಲವನ್ನೂ ದಹಿಸುವ ಅಗ್ನಿಗೆ ದುಷ್ಟಪದಾರ್ಥಗಳ ದುಷ್ಟತ್ವದ ಸೋಂಕು ಅಂಟದಿರುವಂತೆ ಭೀಷ್ಮ ದ್ರೋಣರಿಗೆ ಕ್ಷುದ್ರಪಾಪಗಳ ಸೋಂಕಿಲ್ಲವೆಂದು ತಾತ್ಪರ್ಯ.

**ಯಾನೇವ ಹತ್ವಾ ನ ಜಿಜೀವಿಷಾಮ**
**ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ** ॥ ೬ ॥

ಹಿಂಸಾರಹಿತವಾದ ತಿರಿದೂಟ ಮತ್ತು ಹಿಂಸೆಮಯವಾದ ಕಾಳಗ- ಇವೆರಡರಲ್ಲಿ (ನಃ) ನಮಗೆ (ಕತರತ್) ಯಾವದು (ಗರೀಯಃ) ಮೇಲು ? ಸ್ವಧರ್ಮವಾದ್ದರಿಂದ ಯುದ್ಧವೇ ಮೇಲೆಂದರೆ (ಯದ್ವಾಜಯೇಮ) ನಾವೇನು ಅವರನ್ನು ಗೆಲ್ಲುವೆವೊ (ಯ ದಿ ವಾ) ಅಥವಾ (ನೋ ಜಯೇಯುಃ) ಅವರೇ ನಮ್ಮನ್ನು ಗೆಲ್ಲುವರೊ (ಏತತ್) ಇದು ಯಾವದೂ (ನ ಚ ವಿದ್ಮಃ) ನಮಗೆ ತಿಳಿಯುವುದೂ ಇಲ್ಲ. ನಾವು ಅವರಿಗ ಸೋತು ಬದುಕಿದರೆ ಮತ್ತೆ ನಮಗೆ ತಿರಿದೂಟವೇ ಗತಿಯಾಗುವದಲ್ಲ! ಆ ಕಲಸವನ್ನು ಈಗಲೇ ಏಕೆ ಹಿಡಿಯಬಾರದು ? ಇನ್ನು ನಾವೇ ಅವರನ್ನು ಗೆದ್ದರೂ (ಯಾನೇವ) ಯಾರನ್ನೆ (ಹತ್ವಾ) ಕೊಂದ ಮೇಲೆ (ನ ಜಿಜೀವಿಷಾಮಃ) ಬದುಕಿರಬೇಕೆಂದು ನಾವು ಬಯಸುವದಿಲ್ಲವೊ (ತೇ) ಆ (ಧಾರ್ತರಾಷ್ಟ್ರಾಃ) ಕೌರವನ ಕಡೆಯವರು (ಪ್ರಮುಖೇ) ಎದುರಾಗಿ (ಅವಸ್ಥಿತಾಃ) ನಿಂತಿರುವರು. ಆದ್ದರಿಂದ ಇವರನ್ನು ಗೆಲ್ಲುವದೇ ನಮಗೊಂದು ಸೋಲೆಂದು ತಿಳಿಯುತ್ತೇನೆ

ತನಗೆ ತಿಳಿಯದ್ದರಿಂದ ಅರ್ಜುನನು ಕೃಷ್ಣನಿಗೆ ಶರಣುಹೋಗುತ್ತಾನೆ -

**ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್** ॥

(ಕಾರ್ಪಣ್ಯದೋಷೋಪಹತಸ್ವಭಾವಃ) ಯಾವದು ಮೇಲೆಂಬುದನ್ನು ತಿಳಿಯದೆ ಇರುವದರಿಂದಾದ ದೈನ್ಯವೆಂಬ ದೋಷದಿಂದ ನಾನು ಕಳೆಗೆಟ್ಟ ಸ್ವಭಾವವುಳ್ಳವನಾಗಿದ್ದೇನೆ. ಆದ್ದರಿಂದಲೇ ( ಧರ್ಮಸಂಮೂಢಚೇತಾಃ ) ದರ್ಮವನ್ನೇ ಅಧರ್ಮವೆಂದೂ ಅಧರ್ಮವನ್ನೆ ಧರ್ಮವೆಂದೂ ತಿಳಿಯುವ ಸ್ವಭಾವದವನಾಗಿರುವ ನಾನು (ತ್ವಾಂ) ನಿನ್ನನ್ನು (ಪೃಚ್ಛಾಮಿ) ಕೇಳಿಕೊಳ್ಳುತ್ತೇನೆ.

ತಿರಿದೂಟ ಮತ್ತು ಕಾಳಗ-ಇವೆರಡರಲ್ಲಿ (ಯತ್) ಯಾವದು (ಶ್ರೇಯಃ) ಮೇಲಾದದ್ದು (ಸ್ಯಾತ್) ಆದೀತು. (ತತ್) ಆ (ನಿಶ್ಚಿತಂ) ಗೊತ್ತಾದೊಂದನ್ನು (ಮೇ) ನನಗೆ (ಬ್ರೂಹಿ) ಹೇಳು. (ಅಹಂ) ನಾನು (ತೇ) ನನ್ನ ತಿಳಿವಳಿಕೆಯು ನಿನ್ನದಕ್ಕಿಂತ ಬಹು ಕಡಿಮೆಯಾದ್ದರಿಂದ ನಿನಗೆ ಗೆಳೆಯನೆಂಬ ದೃಷ್ಟಿಯನ್ನಿಟ್ಟುಕೊಳ್ಳಬೇಡ, ನಿನಗೆ (ಶಿಷ್ಯಂ) ಶಿಷ್ಯನು (ತ್ವಾಂ) ನಿನ್ನನ್ನು (ಪ್ರಪನ್ನಂ) ಶರಣುಬಂದಿರುವ (ಮಾಂ) ನನ್ನನ್ನು (ಶಾಧಿ) ಬುದ್ಧಿವಾದಗಳನ್ನು ಹೇಳಿ ತಿದ್ದು.

ಯುದ್ಧದಲ್ಲಿ ಗೆದ್ದರೆ ಚಕ್ರವರ್ತಿಪದವಿಯೂ ಸತ್ತರೆ ಇಂದ್ರಪದವಿಯೂ ಸಿಕ್ಕುವದರಿಂದ ಯುದ್ಧವೇ ಮೇಲೆಂಬುದಾದರೆ ಅದರಿಂದ ತನ್ನ ಈಗಿನ ದುಃಖವು ತಣ್ಣಗಾಗಲಾರದೆಂದು ಹೇಳುತ್ತಾನೆ —

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ**
**ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್** ॥ ೮ ॥

ನಮಗೇ ಜಯವಾಗಿ ನಾವು (ಭೂಮೌ) ಈ ಜಗತ್ತಿನಲ್ಲಿ (ಅಸಪತ್ನಂ) ಹಗೆಗಳಿಲ್ಲದಂಥ ಮತ್ತು (ಋದ್ಧಂ) ಹಣಕಾಸುಗಳೂ ಕಾಳುಕಡ್ಡಿಗಳೂ ತುಂಬಿತುಳುಕುತ್ತಿರುವಂಥ (ರಾಜ್ಯಂ) ಅರಸುತನವನ್ನೂ ಮತ್ತು (ಸುರಾಣಾಂ) ದೇವತೆಗಳ (ಆಧಿಪತ್ಯಂ ಚ) ಆಳಿಕೆಯಲ್ಲಿರುವ ಪ್ರಾಂತವನ್ನೂ ಕೂಡ (ಅವಾಪ್ಯ ಅಪಿ) ಪಡೆದರೂ ಈ ಸುಖಗಳೆಲ್ಲ ವಿಚಾರಮಾಡಿ ನೋಡಿದರೆ ಕ್ಷಣಿಕವಾಗಿ ಕಾಣುತ್ತವೆ ಇಷ್ಟೇ ಅಲ್ಲ, ಇವುಗಳಿಂದ ಸುಖವಾಗಿರುವದಕ್ಕಿಂತಲೂ ದುಃಖವೇ ಹೆಚ್ಚೆಂದು ತೋರುತ್ತದೆ. ಹೇಗೆಂದರೆ ಈ ಸುಖಗಳು ಬರುವದಕ್ಕೆ ಮುಂಚೆ ಬಯಕೆಯ ದುಃಖ, ಬರುವಾಗ ನಡೆಸುವ ಪ್ರಯತ್ನದ ಆಯಾಸದ ದುಃಖ, ಬಂದ ಮೇಲೆ ಕಳೆದು ಹೋಗದಂತೆ ಹೇಗೆ ರಕ್ಷಿಸಬೇಕೆಂಬ ದುಃಖ, ಕಳೆದುಹೋದರಂತು ಕೊನೆಮೊದಲಿಲ್ಲದ ದುಃಖ. ಆದ್ದರಿಂದ ಈ ವಿಷಯಸುಖವು ನನ್ನ ಈಗಿನ ದುಃಖವನ್ನು ಕಳೆಯಬಲ್ಲದೆಂದು

ನನಗೆ ತೋರುವದಿಲ್ಲ. ಈಗಿನ ನನ್ನ ದುಃಖಕ್ಕೆ ಪರಿಹಾರಕವು ಯಾವದಿರ ಬಹುದೆಂದು ನಾನೇ ನೋಡಿದರೆ ಗುರುಗಳ ಕೊಲೆಯ ಕಲ್ಪನೆಯ ತಾಪದಿಂದ ತಪಿಸುತ್ತಿರುವ (ಮಮ) ನನ್ನ (ಇಂದ್ರಿಯಾಣಾಂ) ಇಂದ್ರಿಯಗಳನ್ನು (ಉಚ್ಛೋಷಣಂ) ಸೊರಗಿಸುವಂಥ (ಶೋಕಂ) ದುಃಖವನ್ನು (ಯತ್) ಯಾವದು (ಅಪನುದ್ಯಾತ್) ಕಳೆದು ಹಾಕೀತೊ ಅದು (ನಹಿ ಪ್ರಪಶ್ಯಾಮಿ) ನನಗೆ ಕಾಣುವದಿಲ್ಲ.

ಹೀಗೆಂದು ಕೊನೆಗೆ

**ಸಂಜಯ ಉವಾಚ** ಸಂಜಯನು ಹೇಳಿದ್ದು :—

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥**

(ಪರಂತಪಃ) ಶತ್ರುಗಳಿಗೆ ಸಂಕಟವನ್ನು ಕೊಡುವಂಥ ಮತ್ತು (ಗುಡಾಕೇಶಃ) ಆಲಸ್ಯದ ಮೇಲೆ ತನ್ನ ಅಧಿಕಾರವನ್ನಿಟ್ಟುಕೊಂಡಿರುವಂಥ ಅರ್ಜುನನು (ಹೃಷೀಕೇಶಂ) ಕೃಷ್ಣನನ್ನು ಕುರಿತು (ಏವಂ) ಹೀಗೆ (ಉಕ್ತ್ವಾ) ಹೇಳಿ ಮತ್ತು ಕೊನೆಗೆ (ಗೋವಿಂದಂ) ವೇದಾಂತ ವಾಕ್ಯಗಳಿಂದ ಮಾತ್ರ ತಿಳಿಯಲಾಗುವಂಥ ಕೃಷ್ಣನನ್ನು ಕುರಿತು (ನ ಯೋತ್ಸ್ಯೇ) ಯುದ್ಧ ಮಾಡುವದಿಲ್ಲ (ಇತಿ) ಎಂದು (ಉಕ್ತ್ವಾ) ಹೇಳಿ (ತೂಷ್ಣೀಂ ಬಭೂವ ಹ) ಸುಮ್ಮನಾದನು.

ಅರ್ಜುನನು ಕೈಮುದುರಿಕೊಂಡದ್ದರಿಂಧ ತನ್ನ ಮಕ್ಕಳಿಗೊಂದು ದೊಡ್ಡ ಪೀಡೆ ಕಳೆಯಿತೆಂದು ಧೃತರಾಷ್ಟ್ರನು ನೆನೆಸಿಕೊಳ್ಳುವಷ್ಟರಲ್ಲಿ ಸಂಜಯನು ಮತ್ತೆ ಹೇಳುತ್ತಾನೆ :—

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥**

ಕೃಷ್ಣನು ಅರ್ಜುನನಿಗೆ ಗೆಳೆಯನಾದ್ದರಿಂದ ಯಾವಾಗಲೂ ವಿನೋದದಿಂದ ನಗುತ್ತ ಮಾತಾಡುವದೇ ಪದ್ಧತಿ. ಈಗ (ಭಾರತ) ಧೃತರಾಷ್ಟ್ರ

ರಾಯನೆ, ಕೇಳು (ಹೃಷೀಕೇಶಃ) ಕೃಷ್ಣನು (ಉಭಯೋಃ ಸೇನಯೋಃ) ಎರಡು ದಂಡುಗಳ (ಮಧ್ಯೇ) ನಡುವೆ (ವಿಷೀದಂತಂ) ವ್ಯಥೆ ಪಡುತ್ತಿರುವ (ತಂ)ಆ ಅರ್ಜುನನನ್ನು ಕುರಿತು(ಪ್ರಹಸನ್ನಿವ) ನಗುತ್ತ ವಿನೋದದ ಮಾತಾಡುವಂತೆಯೇ ಮನೋಹರವಾಗಿ (ಇದಂ) ಈ ಮುಂದೆ ಹೇಳುವ (ವಚಃ) ಮಾತನ್ನು (ಉವಾಚ) ಹೇಳಿದನು.

ಅರ್ಜುನನ ದುಃಖಕ್ಕೆ ತಕ್ಕ ಮದ್ದನ್ನು ಹೇಳುವದಕ್ಕೆ ತೊಡಗಿ

**ಶ್ರೀಭಗವಾನುವಾಚ** ಶ್ರೀ ಕೃಷ್ಣನು ಹೇಳಿದ್ದು :—

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥**

ಅರ್ಜುನನೆ, ಕೇಳು (ತ್ವಂ) ನೀನು ಈಗ (ಅಶೋಚ್ಯಾನ್) ಯಾರ ವಿಷಯವಾಗಿ ಅಳಬೇಕಾದ್ದಿಲ್ಲವೊ ಅಂಥ ಭೀಷ್ಮದ್ರೋಣರ ವಿಷಯವನ್ನು ಮನಸ್ಸಿಗೆ ಹಚ್ಚಿಕೊಂಡು ಅವರು ನನ್ನಿಂದ ಸಾಯುವರೆಂದೂ ಅವರನ್ನಗಲಿದ ಮೇಲೆ ರಾಜ್ಯದ ಸುಖವಿನ್ನೇಕೆಂದೂ (ಅನ್ವಶೋಚಃ) ಅಳುತ್ತಿ ಇದು ನಿನ್ನ ಅವಿವೇಕವನ್ನು ತೋರಿಸುತ್ತದೆ ನಿನ್ನನ್ನು ಅವಿವೇಕಿಯೆಂದೇ ತಿಳಿಯೋಣವೆಂದರೆ ಕುಲಕ್ಷಯದಿಂದ ಪಿತೃಗಳಿಗೆ ನರಕವುಂಟಾಗುವದೆಂಬುದೇ ಮುಂತಾದ (ಪ್ರಜ್ಞಾವಾದಾಂಶ್ಚ) ವಿವೇಕಿಗಳ ಮಾತುಗಳನ್ನೂ (ಭಾಷಸೇ) ಆಡುತ್ತಿ. ಅದಕ್ಕೇ ಹೆಚ್ಚು ಬೆಲೆಯನ್ನು ಕೊಡೋಣವೆಂದರೆ ಆ ವಿವೇಕವು ದೃಢವಾದದ್ದಲ್ಲವೆಂಬದನ್ನೂ ನೀನೇ ಹೊರಬೀಳಿಸಿಕೊಂಡಿರುತ್ತಿ ಹೇಗೆಂದರೆ ನೀನೇ ಶಿಷ್ಯನೆಂದು ಬೇರೆ ಹೇಳಿಕೊಂಡು ವಿವೇಕವನ್ನು ಬಯಸುತ್ತಿ. ಹಾಗಾದರೂ ಗುರುವಾದ ನನ್ನ ಮೇಲೆ ಎಲ್ಲ ಭಾರವನ್ನೂ ಹಾಕಿರುವೆಯೆಂದು ತಿಳಿಯೋಣವೆಂದರೆ ಯುದ್ಧವನ್ನು ಮಾಡುವದಿಲ್ಲವೆಂದು ಸ್ವಾತಂತ್ರ್ಯವನ್ನು ಬೇರೆ ತಲೆಯ ಮೇಲೆ ಹಾಕಿಕೊಂಡಿದ್ದಿ. ಹೀಗೆ ನೀನು ಹುಚ್ಚನಂತೆ ವಿವೇಕವನ್ನು ಅವಿವೇಕವನ್ನೂ ಶಿಷ್ಯತ್ವವನ್ನೂ ಸ್ವಾಂತತ್ರ್ಯವನ್ನೂ ಒಂದೇಕಾಲದಲ್ಲಿ ತೋರಿಸಿಕೊಳ್ಳುತ್ತಿ. ಅವಿವೇಕವನ್ನು ಮುಚ್ಚಿ ಹಾಕುವದಕ್ಕಾಗಿ ಸಾಯುವವರ ವಿಷಯವಾಗಿ ದುಃಖಪಡುವದು ಪ್ರಾಣಿಮಾತ್ರಕ್ಕೇ ಸಹಜವಾದದ್ದೆಂದು ನೀನು ನೀನು

ದುಃಖಕ್ಕೆ ಕಾರಣವನ್ನು ಹೇಳಬಹುದು. ಬರೀ ಪ್ರಾಣಿಮಾತ್ರರೆನಿಸಿಕೊಳ್ಳುವ ಅವಿವೇಕಿಗಳಿಗೆ ಸತ್ತವರು ಇಲ್ಲದಂತಾಗುವರೆಂದೋ ಅಥವಾ ಅನೇಕ ಕಷ್ಟಗಳಿಗೇನಾದರೂ ಗುರಿಯಾಗಬಹುದೆಂದೋ ಅಳುಬರುವದು. ಇಷ್ಟೇ ಅಲ್ಲ. ಅವರು ಬದುಕಿರುವವರನ್ನು ನೋಡಿಯೂ ಅವರ ಕಷ್ಟಸ್ಥಿತಿಯನ್ನು ಮನಸ್ಸಿಗೆ ಹಚ್ಚಿಕೊಂಡುಕಣ್ಣೀರಿಡುವರು ಪ್ರಾಣಿಗಳಲ್ಲಿ ವಿವೇಕಿಗಳಾದ ಮನುಷ್ಯರೆನಿಸಿ ಲೋಕದಲ್ಲಿ ಮೂರುದಿನದ ಬಾಳಿನದು ಯಾವದೆಂಬದನ್ನೂ ಎಂದೆಂದಿಗು ಅಚ್ಚಳಿಯದೆ ಏಕರೂಪವಾಗಿ ನೆಲೆಯಾಗಿರುವದು ಯಾವದೆಂಬುದನ್ನು ವಿಚಾರಮಾಡಿದ (ಪಂಡಿತಾಃ) ಆತ್ಮಸ್ವರೂಪವನ್ನರಿತವರು(ಗತಾಸೂನ್)ಸತ್ತವರಿಗೂ(ಅಗತಾಸೂಂಶ್ಚ) ಬದುಕಿರುವವರಿಗೂ ಯಾರಿಗೂ(ನ ಅನುಶೋಚಂತಿ) ಗೋಳಿಡುವದಿಲ್ಲ ಏಕೆಂದರೆ ವ್ಯವಹಾರದೃಷ್ಟಿಯಿಂದ ನೋಡಿದರೂ ಕೂಡ ಭೀಷ್ಮದ್ರೋಣರು ಸ್ವಭಾವವಾಗಿಯೇ ಒಳ್ಳೆ ಸದಾಚಾರ ಸಂಪನ್ನರಾಗಿರುವದರಿಂದಲೂ ಮತ್ತು ಅವರು ಯುದ್ಧದಲ್ಲಿ ದೇಹವನ್ನು ಬಿಡುವದರಿಂದಲೂ ಅವರಿಗೆ ಸತ್ತಮೇಲ ಹೆಚ್ಚಿನ ಸುಖವಿರುವ ಪುಣ್ಯಲೋಕಗಳೇ ಸಿಕ್ಕುವವೇ ಹೊರತು ದುಃಖವು ದೊರೆಯುವಸಂಭವವೇ ಇಲ್ಲ. ಬದುಕಿರುವಾಗಲಂತು ಮಹಾಮಹಿಮವಂತರಾದ ಅವರು ಕ್ಷುದ್ರವಾದ ಲೌಕಿಕ ಕಷ್ಟನಿಷ್ಠುರಗಳಿಂದ ನೋಯುವ ಸಂಭವವಿಲ್ಲ ಆದ್ದರಿಂದ ಯಾವ ರೀತಿಯಲ್ಲಿ ನೋಡಿದರೂ ಅವರಿಗಾಗಿ ವ್ಯಥೆ ಪಡುವದು ಯೋಗ್ಯವೆನಿಸುವದಿಲ್ಲ

ಇನ್ನು ಪರಮಾರ್ಥದೃಷ್ಟಿಯಿಂದ ನೋಡಿದರಂತು ಅವರಿಗೆ ಸಾವೇ ಇಲ್ಲ. ಹೇಗೆಂದರೆ —

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರವ್ ॥ ೧೨ ॥**

ಜನರು ನಾನುನಾನೆಂಬ ಮಾತಿನ ಅರ್ಥದಲ್ಲಿ ಸಾಮಾನ್ಯವಾಗಿ ದೇಹವನ್ನೂ ಸೇರಿಸಿಕೊಳ್ಳುವದೇ ರೂಢಿಯಾಗಿದ್ದರೂ ಅದು ಕೇವಲ ಸ್ಥೂಲ ದೃಷ್ಟಿಯ ಮಾತು. 'ಇದು ನಮ್ಮ ಪೂರ್ವಕರ್ಮ' ಎಂದು ಕೆಲ ಕೆಲವು ವೇಳೆ ನಾವು ಮಾತಾಡಿಕೊಳ್ಳುವೆವಷ್ಟೆ ಅಂಥ ನಮ್ಮ ಹಿಂದಿನ ಜನ್ಮಗಳ ಸಂಸ್ಕಾರ

ಗಳೆಷ್ಟೋ ಈಗ ನಮ್ಮಲ್ಲಿ ಸ್ವಭಾವವಾಗಿ ಕಾಣಿಸಿಕೊಳ್ಳುತ್ತಿರುವವು ಉದಾಹರಣೆಗೆ ಮಗು ಮೊಲೆಹಾಲನ್ನು ಚೀಪುವದೇ ಮೊದಲಾದದ್ದು. ಅದಿರಲಿ ನಮ್ಮ ಈಗಿನ ದೇಹವು ಎಲ್ಲರೂ ಕಂಡ ಹಾಗೆ ಈಚೀಚೆಗೆ ಬಂದದ್ದಾದ್ದರಿಂದ ಪೂರ್ವಜನ್ಮದಲ್ಲಿ ನಾವು ಈ ದೇಹಕ್ಕಿಂತ ಬೇರೆಯಾಗಿದ್ದಂತಾಯಿತು ಅಷ್ಟು ದೂರ ತಾನೆ ಏಕೆ ? ನಿದ್ದೆ ಬಂದಾಗ ನಮ್ಮ ಈ ದೇಹವು ಜಡವಾಗಿ ಹಾಸಿಗೆಯ ಮೇಲೆ ಬಿದ್ದಿದ್ದರೂ ಕನಸಿನಲ್ಲಿ ನಾವು ಲೆಕ್ಕವಿಲ್ಲದಷ್ಟು ವ್ಯವಹಾರಗಳನ್ನು ಮಾಡುವದು ನಮ್ಮ ಪ್ರತಿದಿನದ ಅನುಭವದಲ್ಲಿಯೇ ಇದೆ ಕನಸಿನಲ್ಲಿ ವ್ಯವಹಾರವನ್ನು ಮಾಡುವ ನಾವು ಜಡವಾದ ಈ ದೇಹಕ್ಕಿಂತ ಬೇರೆಯೆಂದು ಸ್ಪಷ್ಟವಾಯಿತು. ಆದ್ದರಿಂದ ದೇಹಕ್ಕಿಂತ ಬೇರೆಯಾಗಿ ದೇಹದೊಳಗೆ ಇರುವಂಥ ಚೈತನ್ಯವಿಶೇಷವೇ ನಮ್ಮ 'ನಾನು ನಾನು' ಎಂಬ ಮಾತಿನ ನಿಜವಾದ ಅರ್ಥ. ಈ ಚೈತನ್ಯವಿಶೇಷವೇ ಆತ್ಮ. ಈ ಆತ್ಮವು ತಾನು ಅಖಂಡವಾಗಿ ಒಂದೇ ಆಗಿದ್ದರೂ–ಅಖಂಡವಾದ ಬಯಲು ಬೇರೆಬೇರೆ ಗಡಿಗೆಗಳಲ್ಲಿ ತೋರುವ ದೃಷ್ಟಿಯಿಂದ ಅನೇಕವಾಗಿರುವಂತೆ–ಬೇರೆಬೇರೆ ದೇಹಗಳೊಳಗೆ ಇರುವಂತೆ ತೋರುವ ದೃಷ್ಟಿಯಿಂದ ಅನೇಕರಾಗಿರುವರು. ಸಾವೆಂಬುದು ಯಾವಾಗಲೂ ಜಡವಾದ ದೇಹಕ್ಕೆ ಸಂಬಂಧಪಟ್ಟದ್ದೇ ಹೊರತು ಆತ್ಮಕ್ಕೆ ಸಂಬಂಧಪಟ್ಟದ್ದಲ್ಲ. ಆದ್ದರಿಂದ ಭೀಷ್ಮದ್ರೋಣರ ಆತ್ಮಗಳಿಗೆಂದಿಗೂ ನಾಶವಿಲ್ಲ. ಬರೀ ಭೀಷ್ಮದ್ರೋಣರ ಆತ್ಮಗಳ ಮಾತು ಮಾತ್ರವೇ ಅಲ್ಲ (ಜಾತು) ಹಿಂದೆ ಯಾವ ಕಾಲದಲ್ಲಿಯೂ (ಅಹಂ) ನಾನು (ನ ಆಸಂ) ಇರಲಿಲ್ಲವೆಂಬುವದು (ನ ತು ಏವ) ಇಲ್ಲವೇ ಇಲ್ಲ. (ತ್ವಂ) ನೀನು ಇರಲಿಲ್ಲವೆಂಬುವದು (ನ) ಇಲ್ಲವೇ ಇಲ್ಲ. (ಇಮೇ) ಈ ನೆರೆದಿರುವ (ಜನಾಧಿಪಾಃ) ರಾಜರು ಇರಲಿಲ್ಲವೆಂಬುವದು (ನ) ಇಲ್ಲವೇ ಇಲ್ಲ. ನಾನೂ ನೀನೂ ಈ ರಾಜರೂ ಎಲ್ಲರೂ ಇದ್ದೇ ಇದ್ದೆವು. ಈಗ ಇರುವದಂತು ಪ್ರತ್ಯಕ್ಷವಾಗಿಯೇ ಇದೆ. (ವಯಂ) ನಾವು (ಸರ್ವೇ)ಎಲ್ಲರೂ (ಅತಃ ಪರಂ) ಈ ಶರೀರವು ಬಿದ್ದುಹೋದ ಮೇಲೆ (ನ ಭವಿಷ್ಯಾಮಃ) ಮುಂದೆ ಇರುವುದಿಲ್ಲವೆಂಬುದು (ನ ಚ ಏವ) ಇಲ್ಲವೇ

ಇಲ್ಲ ಮುಂದೆಯೂ ನಾವೆಲ್ಲರೂ ಇದ್ದೇ ಇರುವೆವು. ಹಿಗೆ ನಮಗೆ ಎಷ್ಟೋ ದೇಹಗಳು ಬಂದು ಹೋದರೂ ಆತ್ಮರೂಪದಿಂದ ನಾವೆ ಲ್ಲರೂ ನಿತ್ಯರು.

ಇನ್ನು ದೇಹದೃಷ್ಟಿಯಿಂದ ನೋಡಿದರೂ ಸಾವಿಗಾಗಿ ಯಾರೂ ಅಳ ಬೇಕಾದ್ದಿಲ್ಲ. ಸಾವಿನ ಸ್ವರೂಪವೇನೆಂದರೆ —

**ದೇಹಿನೋಽಸ್ಮಿನ್ ಯಥಾದೇಹೇಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥**

ಹುಡುಗತನದಲ್ಲಿ ತಾಯಿತಂದೆಗಳ ಮುಂದೆ ಚೆಲ್ಲಾಟವಾಡುತ್ತಿದ್ದವನೇ ಪ್ರಾಯಕಾಲದಲ್ಲಿ ಹೆಂಡಿರು ಮಕ್ಕಳೊಡನೆ ವಿನೋದವಾಡುವದೂ ಮತ್ತು ಮುಪ್ಪಿನಲ್ಲಿ ಮುಮ್ಮಕ್ಕಳನ್ನು ಮುದ್ದಿಸುವದೂ ಎಲ್ಲರಿಗೂ ಕಾಣಬರುತ್ತಿದೆ ಯಷ್ಟೆ. ಇದರಿಂದ ಒಂದೇ ದೇಹದಲ್ಲ ಬೇರೆಬೇರೆ ಅವಸ್ಥಾಭೇದಗಳು ಬಂದು ಹೋಗುವವೆಂದು ಸ್ಪಷ್ಟವಾಯಿತು. ಆದರೂ ಶರೀರದಲ್ಲಿ ಹುಡುಗತನದ ಆವಸ್ಥೆ ಹೋಗುತ್ತಲೆ ಹುಡುಗನು ಸತ್ತನೆನಿಸುವದಿಲ್ಲ ಪ್ರಾಯದ ಅವಸ್ಥೆ ಬರುತ್ತಲೆ ಪ್ರಾಯದವನು ಹುಟ್ಟಿದನೆನಿಸುವದಿಲ್ಲ ಆದರಂತ ಪ್ರಾಯದ ಅವಸ್ಥೆ ಹೋದಾಗಲೂ ಮುಪ್ಪಿನ ಅವಸ್ಥ ಬಂದಾಗಲೂ ಅವು ಹುಟ್ಟು ಸಾವುಗಳ ಲೆಕ್ಕಕ್ಕೆ ಸೇರುವದಿಲ್ಲ. ಆತ್ಮನು ಈ ಅವಸ್ಥಾಭೇದಗಳ ಹೋಗಿ ಬರುವಿಕೆಯಿಂದ ಯಾವ ಹೆಚ್ಚುಕಡಿಮೆಯನ್ನೂ ಹೊಂದದೆ ಇದ್ದಂತೆಯೇ ಇರುವನು. (ದೇಹಿನಃ) ದೇಹದಲ್ಲಿ ಇರುವಂತೆ ತೋರುತ್ತಿರುವ ಆತ್ಮನಿಗ (ಅಸ್ಮಿನ್) ಈ (ದೇಹೇ) ದೇಹದಲ್ಲಿ (ಕೌಮಾರಂ) ಹುಡುಗತನವೂ (ಯೌವನಂ) ಪ್ರಾಯವೂ (ಜರಾ) ಮುಪ್ಪೂ, (ಯಥಾ) ಹೇಗೆ ಬರುವವೋ (ದೇಹಾಂತರಪ್ರಾಪ್ತಿಃ) ಬೇರೆ ದೇಹವು ಬರುವದೂ (ತಥಾ) ಹಾಗೆಯೆ (ತತ್ರ) ಹೀಗಿರುವದರಲ್ಲಿ (ಧೀರಃ*) ಹುಟ್ಟುಸಾವುಗಳಲ್ಲ ದೇಹದ್ದೆಂದೂ

---

* "ಜೀವಾಪೇತಂ ವಾವಶರೀರಂ ಮ್ರಿಯತೇ ನ ಜೀವೋ ಮ್ರಿಯತೆ" ಜೀವನು ತೊಲಗಿದ ಶರೀರವು ಸಾಯುತ್ತದೆ, ಜೀವನು ಸಾಯುವದಿಲ್ಲ. ಶ್ರು.

ಆತ್ಮನು ಹುಟ್ಟು ಸಾವುಗಳಿಲ್ಲದವನೆಂದು ತಿಳಿದ ಬುದ್ಧಿಶಾಲಿಯು(ನ ಮುಹ್ಯತಿ) ದೇಹಗಳ ಹುಟ್ಟುಸಾವನ್ನು ಆತ್ಮನದೆಂದು ಭ್ರಮಿಸುವದಿಲ್ಲ ಹುಡುಗತನದ ದೇಹದಲ್ಲಿದ್ದ ನಾನೇ ಪ್ರಾಯದ ದೇಹದಲ್ಲಿರುವವನೆಂದು ಮುಂತಾಗಿ ನಮಗೆ ಹಿಂದಿನ ನೆನಪಿರುವಂತೆ ಈಗ ಈ ದೇಹದಲ್ಲಿರುವ ನಾನು ಹಿಂದೆ ಇಂಥ ದೇಹದಲ್ಲಿದ್ದೆನೆಂಬ ನೆನವು ಸಾಮಾನ್ಯವಾಗಿ ಯಾರಿಗೂ ಇಲ್ಲದಿರುವದೇನೋ ನಿಜ. ಈ ಜನ್ಮದಲ್ಲಿಯೇ ನಾವು ಮಾಡಿದ ಎಷ್ಟೋ ಕಾರ್ಯಗಳು ನಮಗೇ ನೆನಪಿಲ್ಲದಿರುವದುಂಟು ಇನ್ನು ಹಿಂದಿನ ಜನ್ಮದ ಮಾತು ಎಷ್ಟೋ ದೂರ. ಆದರೂ ಯಾರೂ ಕಲಿಸದಿದ್ದರೂ ಹಸಿವಾದರೆ ಅಳುವದೇ ಮೊದಲಾದ ಎಷ್ಟೋ ಸಂಸ್ಕಾರಗಳು ನಾವು ಹಿಂದೆ ಬೇರೊಂದು ದೇಹದಲ್ಲಿದ್ದ ಗುರ್ತುಗಳಾಗಿರುವವು. ಯೋಗಿಗಳಲ್ಲಿ ಕೆಲವರಿಗೆ ಪೂರ್ವಜನ್ಮದ ಸ್ಮರಣೆ ಬರುವದೂ ಉಂಟೆಂದು ಯೋಗಶಾಸ್ತ್ರವೂ ಹೇಳುವದು, ಪುರಾಣದ ಕಥೆಗಳ ದೃಷ್ಟಾಂತರಗಳೂ ಇರುವವು.

ಪರಮಾರ್ಥದೃಷ್ಟಿಯಿಂದ ಆತ್ಮನು ನಿತ್ಯನಾದರೂ ವ್ಯವಹಾರ ದೃಷ್ಟಿಯಿಂದ ಭೀಷ್ಮಾದಿಗಳಿಗೆ ಬಾಣಗಳ ಪೆಟ್ಟಿನಿಂದ ನೋವಾಗುವದನ್ನು ನೆನೆದು ದುಃಖಗೊಳ್ಳುವದು ಸ್ವಾಭಾವಿಕವೆಂದರೆ :—

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

(ಕೌಂತೇಯ) ಕುಂತಿಯ ಮಗನಾದ ಅರ್ಜುನನೆ, (ಮಾತ್ರಾಸ್ಪರ್ಶಾಸ್ತು) ಶಬ್ದಾದಿಗಳನ್ನೆಲ್ಲ ಅಳೆದು ಹೊಯ್ಯುವ ಶ್ರೋತ್ರ ಮೊದಲಾದ ಇಂದ್ರಿಯಗಳಿಗೆ ಶಬ್ದವೇ ಮೊದಲಾದ ವಿಷಯಗಳೊಡನೆ ಆಗುವ ಸಂಬಂಧಗಳು ಅಥವಾ ಇಂದ್ರಿಯಗಳೂ ಮತ್ತು ವಿಷಯಗಳೂ ಎಲ್ಲವೂ (ಶೀತೋಷ್ಣಸುಖದುಃಖದಾಃ) ಶೀತದಂತೆ ಮತ್ತು ಉಷ್ಣದಂತೆ ಸುಖವನ್ನೂ ದುಃಖವನ್ನೂ ಕೊಡತಕ್ಕವುಗಳು ಲೋಕದಲ್ಲಿ ಯಾವದೂ ಯಾವಾಗಲೂಸುಖವೇ ಆಗಿ ಅಥವಾ ದುಃಖವೇ ಆಗಿ ಇರುವದಿಲ್ಲ. ಮೈಗೆ ತಗಲುವ ಶೀತವೂ ಉಷ್ಣವೂ

ಒಮ್ಮೆ ಸುಖವಾಗಿಯೂ ಒಮ್ಮೆ ದುಃಖವಾಗಿಯೂ ಇರುವಂತೆ ಎಲ್ಲ ಇಂದ್ರಿಯ ಗಳಿಗೂ ಅವವುಗಳ ವಿಷಯಗಳ ಸಂಬಂಧವಾದಾಗ ಅದು ಒಮ್ಮೆ ಸುಖವಾಗ ಬಹುದು; ಮತ್ತೊಮ್ಮೆ ಅದೇ ದುಃಖವಾಗಬಹುದು ಹೀಗೆ ಅದು ಅನಿ ಯತವಾಗಿರುವದು ಇದಲ್ಲದೆ ಆ ವಿಷಯೇಂದ್ರಿಯ ಸಂಬಂಧಗಳು (ಆಗ ಮಾಪಾಯಿನಃ)* ಹುಟ್ಟಿ ಹೋಗತಕ್ಕವುಗಳು ಆದ್ದರಿಂದಲೇ (ಅನಿತ್ಯಾಃ) ನೆಲೆಯಾಗಿರತಕ್ಕವುಗಳಲ್ಲ (ಭಾರತ) ಭರತಕುಲದಲ್ಲಿ ಹುಟ್ಟಿದ ಅರ್ಜುನನೆ, ಕೇಳು. (ತಾನ್) ಆ ವಿಷಯೇಂದ್ರಿಯ ಸಂಬಂಧದಿಂದಾಗುವ ಸುಖದುಃಖ ಗಳನ್ನು (ತಿತಿಕ್ಷಸ್ವ) ತಡೆದುಕೊ.

ತಡೆದುಕೊಳ್ಳುವದರಿಂದಾಗುವ ಲಾಭವೇನೆಂದರೆ .—

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

(ಪುರುಷರ್ಷಭ) ಮನುಷ್ಯರಲ್ಲಿ ಶ್ರೇಷ್ಠನಾದ ಅರ್ಜುನನೆ, ಕೇಳು. (ಸಮದುಃಖಸುಖಂ) ಸುಖದುಃಖಗಳು ನೆಲೆಯಾದವುಗಳಲ್ಲವೆಂಬ ವಿಚಾರದ ಬಲದಿಂದ ಸುಖವು ಬಂದಾಗ ಹಿಗ್ಗದೆ ದುಃಖವು ಬಂದಾಗ ತಗ್ಗದೆ ಏಕರೂಪ ವಾಗಿ (ಧೀರಂ) ಆತ್ಮವು ಹೆಚ್ಚುಕುಂದುಗಳಿಗೊಳಗಾಗತಕ್ಕದ್ದಲ್ಲವೆಂದರಿ ಯುವ ಬುದ್ಧಿಶಾಲಿಯಾಗಿ (ಪುರುಷಂ*) ತಾನು ಶರೀರಕ್ಕಿಂತ ಭಿನ್ನ

---

* ಕೆಲವರು ಆಗಮಾಪಾಯಿನಃ ಎಂಬ ಮಾತಿಗೆ 'ಹುಟ್ಟಿ ಹೋಗ ತಕ್ಕ ಮನಸ್ಸಿಗೆ' ಎಂದರ್ಥವನ್ನು ಮಾಡಿ ವಿಷಯೇಂದ್ರಿಯಸಂಬಂದಗಳು ಮನಸ್ಸಿಗೆ ಸುಖ ದುಃಖಗಳನ್ನು ಕೊಡುವವೆಂದು ಅನ್ವಯಿಸಿ ಆತ್ಮನಿಗೆ ಸುಖ ದುಃಖಗಳ ಸಂಬಂಧವಿಲ್ಲವೆಂದು ತಾತ್ಪರ್ಯವನ್ನು ತೆಗೆದಿರುತ್ತಾರೆ. ಆ ಸಂದರ್ಭದಲ್ಲಿ ಮನಸ್ಸು ಎಚ್ಚರದಲ್ಲಿಯೂ ಕನಸಿನಲ್ಲಿಯೂ ಹುಟ್ಟಿ ತೋರಿ ಕೊಂಡು ಗಾಢನಿದ್ರೆಯಲ್ಲಿ ಇಲ್ಲದಂತಾಗುವದರಿಂದ ಅದು ಆಗಮಾಪಾಯಿ ಯಾಯಿತೆಂದು ಅನ್ವರ್ಥನಾಮವಾಗುತ್ತದೆ.

* ಇಲ್ಲಿ ಪುರುಷಂ ಎಂಬ ಮಾತಿಗೆ ಸಾಮಾನ್ಯವಾಗಿ ಗಂಡಸೆಂದರ್ಥ

ನಾಗಿ* ಶರೀರದೊಳಗಿರುವವನೆಂದು ತಿಳಿದಿರುವ (ಯಂ ಹಿ) ಯಾವನನ್ನಾದರೂ (ಏತೇ) ಈ ವಿಷಯಗಳ ಮತ್ತು ಇಂದ್ರಿಯಗಳ ಸಂಬಂಧದಿಂದಾಗುವ ಸುಖದುಃಖಗಳು (ನ ವ್ಯಥಯಂತೇ) ವ್ಯಥೆಗೊಳಿಸುವದಿಲ್ಲವೊ (ಸಃ) ಅವನು ಜಗತ್ತಿನಲ್ಲಿ ಸರ್ವಸಾಮಾನ್ಯವಾಗಿ ದುಃಖಕ್ಕೆ ಕಾರಣವಾಗಿರುವ ವಿಷಯಗಳ ಸೆಳೆತದಿಂದ ಕಳಚಿಕೊಂಡು (ಅಮೃತತ್ವಾಯ) ಮೋಕ್ಷಕ್ಕೆ (ಕಲ್ಪತೇ) ಅರ್ಹನಾಗುತ್ತಾನೆ.

ಇಂದ್ರಿಯಗಳೂ ವಿಷಯಗಳೂ ಅವುಗಳ ಸಂಬಂಧವೂ ಕ್ಷಣಕ್ಷಣಕ್ಕೂ ಹೆಚ್ಚು ಕುಂದುಗಳನ್ನು ಪಡೆಯುತ್ತಿದ್ದರೂ ನಾವು ಇರುವಂತೆಯೇ ಅವೂ ಇರತಕ್ಕವುಗಳಾದ್ದರಿಂದ ಇರುವಿಕೆಯ ಸಮಾನ ಧರ್ಮವುಳ್ಳ ಅವುಗಳನ್ನು ನಾವು ಹೇಗೆ ನಮ್ಮ ಹಿಡಿಯಲ್ಲಿ ಅಡಗಿಸಿಕೊಳ್ಳಬಹುದೆಂದರೆ :—

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥**

(ಅಸತಃ) ಇಲ್ಲದ ವಸ್ತುವಿಗೆ–ಎಂದರೆ ಯಾವದೋ ಒಂದು ದೇಶದಲ್ಲಿ ಯಾವದೋ ಒಂದು ಕಾಲದಲ್ಲಿ ಯಾವದೋ ಒಂದು ಬಿಡಿಯಾದ ವಸ್ತುವೆನಿಸಿರುವದಕ್ಕೆ–(ಭಾವಃ) ಇರುವಿಕೆಯೆಂಬ ಧರ್ಮವು (ನ ವಿದ್ಯತೇ) ಇರುವದಿಲ್ಲ. ಶೀತವನ್ನೂ ಉಷ್ಣವನ್ನೂ ಸುಖವನ್ನೂ ದುಃಖವನ್ನೂ ಕೊಡುವಂಥ ಪ್ರಾಪಂಚಿಕವಸ್ತುಗಳೆಲ್ಲ ಈ ಗುಂಪಿಗೇ ಸೇರಿದವುಗಳು. ಆದ್ದರಿಂದಲೇ ಇವುಗಳ ಸ್ವಭಾವವು ಕ್ಷಣಕ್ಷಣಕ್ಕೆ ಹೆಚ್ಚು ಕುಂದುಗಳನ್ನು ಪಡೆಯತಕ್ಕದ್ದಾಗಿರುವದು ಹೀಗೆ ವಿಕಾರವಾಗುತ್ತಿರುವವುಗಳಿಗೆ ಇರುವಿಕೆಯೆಂಬುದೇ ಇಲ್ಲ.

---

ವಾದರೂ ಮೋಕ್ಷಕ್ಕೆ ಸ್ತ್ರೀಯರೇನೂ ಹೊರಗಲ್ಲವಾದ್ದರಿಂದ ಶರೀರದೊಳಗಿರುವ ಆತ್ಮಸ್ವರೂಪರಾದ ಅವರನ್ನೂ ಈ ಮಾತಿನ ಅರ್ಥದೊಳಗೆ ಗ್ರಹಿಸಬೇಕು.

* "ಸವಾ್ಽಯಂ ಪುರುಷಃ ಸರ್ವಾಸು ಪೂರ್ಷು ಪುರಿ ವಾ ಶಯಃ"– ಆ ಈ ಚೇತನಾತ್ಮನು ಸಮಸ್ತಶರೀರವೆಂಬ ಪುರಗಳಲ್ಲಿ ಅಥವಾ ಪುದಗಳಲ್ಲಿ ವಾಸಮಾಡುವನು ಶ್ರು.

ಮಣ್ಣು ಒಂದಾಕಾರವನ್ನು ಪಡೆದು ಕಣ್ಣಿಗೆ ಗಡಿಗೆಯಾಗಿ ಕಾಣುತ್ತಿರುವ ದಷ್ಟೆ * ಆ ಗಡಿಗೆಯಲ್ಲಿ ಮಣ್ಣಿನ ಹೊರತು ಬೇರೆ ಏನೂ ಇರುವದೇ ಇಲ್ಲ ವಾದ್ದರಿಂದ ಮಣ್ಣು ಮಾತ್ರ ಇರುವ ವಸ್ತು; ಗಡಿಗೆಯೆಂಬ ವಿಕಾರವು ಇಲ್ಲದ ವಸ್ತು ಇದರಂತೆ ವಿಕಾರಗಳಾಗಿರುವ ಪ್ರಾಪಂಚಿಕ ವಸ್ತುಗಳೆಲ್ಲ ಇಲ್ಲದ ವಸ್ತುಗಳು ಅವುಗಳಲ್ಲಿ ಇರುವಿಕೆಯ ಧರ್ಮವೇ ಇಲ್ಲ ಇನ್ನು (ಸತಃ) ಇರುವ ವಸ್ತುವಿಗೆ-ಎಂದರೆ ಎಲ್ಲ ದೇಶದಲ್ಲಿಯೂ ಎಲ್ಲ ಕಾಲದಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ಇರುವ ಆತ್ಮಕ್ಕೆ (ಅಭಾವಃ) ಇಲ್ಲವಾಗುವಿಕೆಯು (ನವಿದ್ಯತೇ) ಇರುವದಿಲ್ಲ. ಬೇರೆಬೇರೆ ಅನೇಕ ವಸ್ತುಗಳನ್ನು ತನ್ನೊಳಗೆ ಅಡಗಿಸಿ ಕೊಳ್ಳುವ ಪೆಟ್ಟಿಗೆಯು ಆ ಎಲ್ಲವಸ್ತುಗಳಿಗಿಂತ ದೊಡ್ಡದಾಗಿರುವಂತೆ ಎಲ್ಲ ದೇಶಗಳೂ ಎಲ್ಲ ಕಾಲಗಳೂ ಎಲ್ಲ ವಸ್ತುಗಳೂ ಆತ್ಮಕ್ಕೆ ವಿಷಯಗಳಾಗುವದ ರಿಂದ-ಆತ್ಮದ ತಿಳಿವಳಿಕೆಯೊಳಗೆ ಅಡಕವಾಗುವದರಿಂದ-ಆತ್ಮವು* ಎಲ್ಲಕ್ಕೂ ಕಾರಣವಾಗಿ ಅವುಗಳಲ್ಲೆಲ್ಲ ವ್ಯಾಪಿಸಿಕೊಂಡು ಅಖಂಡವಾಗಿರುವದು. ಜಗತ್ತಿನಲ್ಲಿ ಬೇರೆ ಬೇರೆ ವಿಕಾರವಿಶೇಷಗಳು ಎಷ್ಟೇ ಕಂಡರೂ ಅವುಗಳಲ್ಲೆಲ್ಲ 'ಬೆಟ್ಟವಿದೆ, ನದಿಯಿದೆ, ಮಣ್ಣಿದೆ ಕಲ್ಲಿದೆ' ಎಂಬ ರೀತಿಯಲ್ಲಿ 'ಇದೆ, ಇದೆ'

---

* "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್"-ವಿಕಾರವು ಬರೀ ಮಾತು ಮಾತ್ರ; ಮಣ್ಣೆಂಬುದೇ ನಿಜ. ಶ್ರು.

* "ಅನ್ನೇನ ಸೌಮ್ಯಶುಂಗೇನಾಪೋಮೂಲಮನ್ವಿಚ್ಛ ಅದ್ಭಿಃ ಸೌಮ್ಯ ಶುಂಗೇನ ತೇಜೋಮೂಲಮನ್ವಿಚ್ಛ ತೇಜಸಾ ಸೌಮ್ಯಶುಂಗೇನ ಸನ್ಮೂಲ ಮನ್ವಿಚ್ಛ ಸನ್ಮೂಲಾಃ ಸೌಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾ ಇತಿ"-ಎಲೈ ಸೌಮ್ಯನಾದ ಶ್ವೇತಕೇತುವೆ, ಪೃಥ್ವಿಯೆಂಬ ಕಾರ್ಯ ದಿಂದ ಅದಕ್ಕೆ ಮೂಲವಾದ ನೀರನ್ನು ಕಾರಣವೆಂದು ನಿಶ್ಚಯಿಸು ನೀರೆಂಬ ಕಾರ್ಯದಿಂದ ತೇಜಸ್ಸೆಂಬ ಕಾರಣವನ್ನು ನಿಶ್ಚಯಿಸು ಆ ತೇಜಸ್ಸೆಂಬ ಕಾರ್ಯ ದಿಂದ 'ಇದೆ' ಎಂಬ ಕಾರಣವನ್ನು ನಿಶ್ಚಯಿಸು. ಈ ಎಲ್ಲ ಪ್ರಜೆಗಳೂ ಆ 'ಇದೆ' ಎಂಬ ವಸ್ತುವಿನಿಂದಲೇ ಹುಟ್ಟಿರುವರು, ಅದರಲ್ಲಿಯೇ ಇರುವರು, ಅದಲ್ಲಿರಯೇ ಲಯವಾಗುವರು. ಶ್ರು.

ಎಂಬ ಸಾಮಾನ್ಯಾಂಶವೊಂದು ತೋರಿಕೊಂಡೇ ಇರುವದು. ಗಡಿಗೆಯಲ್ಲಿ ಪೆಟ್ಟಿಗೆ ಹೇಗೆ ಇಲ್ಲವೋ ಹಾಗೆ ಒಂದು ವಿಕಾರದಲ್ಲಿ ಇನ್ನೊಂದು ವಿಕಾರವಿರುವದಿಲ್ಲ. ಆದರೆ ' ಇದೆ ಎಂದು ತೋರಿಕೊಳ್ಳದೆ ಇರುವ ವಿಕಾರವೇ ಇಲ್ಲ ಹಗ್ಗವು ನೆಲೆಯಾಗಿದ್ದು ಅದರ ಆಧಾರದ ಮೇಲೆ ಹಾವು ಮೊದಲಾದುವು ಕಾಣುವವು ಈ 'ಇದೆ' ಎಂಬ ಸಾಮಾನ್ಯಾಂಶವು ನೆಲೆಯಾಗಿದ್ದು ಅದರ ಆಧಾರದ ಮೇಲೆ ಬಗೆಬಗೆಯಾದ ವಿಕಾರವಿಶೇಷಗಳು ಕಾಣುವವು ಈ ಕಾಣುವ ವಿಕಾರಗಳೆಲ್ಲ ಬರೀತೋರಿಕೆ. ಆ ' ಇದೆ, ಇದೆ ' ಎಂಬ ಸಾಮಾನ್ಯಾಂಶವು ನಿಜವಾಗಿ ಇರುವದು. ಆದ್ದರಿಂದ ಸರ್ವವಿಕಾರಗಳಿಗೂ ಇದೇ ಆತ್ಮ ಇದು ಎಂದೂ ಇಲ್ಲವಾಗುವದಿಲ್ಲ

ಇರುವ ವಸ್ತುವಿನ ಮತ್ತು ಇಲ್ಲದ ವಸ್ತುವಿನ ನಿರ್ಣಯವನ್ನು ಮಾಡುವದಕ್ಕೆ ಇನ್ನೊಂದು ಒಳ್ಳೆ ಒರೆಗಲ್ಲಿದೆ ನಾವು ಸಾಮಾನ್ಯವಾಗಿ ಎಚ್ಚರವನ್ನು ಮಾತ್ರ ಲಕ್ಷ್ಯದಲ್ಲಿಟ್ಟುಕೊಂಡು ವಿಕಾರಾತ್ಮಕವಾದ ವಸ್ತುಗಳನ್ನೆಲ್ಲ ಇರುವ ವಸ್ತುಗಳೆಂದೇ ತಿಳಿಯುತ್ತೇವೆ. ಇದು ಏಕದೇಶವನ್ನು ನೋಡಿ ಮಾಡಿಕೊಂಡ ಅಭಿಪ್ರಾಯ ನಮ್ಮ ಅನುಭವವು ಎಚ್ಚರ ಒಂದೇ ಅಲ್ಲ. ಪ್ರಾಣಿಗಳ ಅನುಭವವನ್ನೆಲ್ಲ ಎಚ್ಚರ, ಕನಸು, ನಿದ್ರೆ-ಎಂಬ ದೊಡ್ಡ ಮೂರು ಭಾಗಗಳಾಗಿ ಮಾಡಬಹುದು. ಈ ಮೂರು ಅನುಭವಗಳನ್ನೂ ಸಮಾಲೋಚನೆ ಮಾಡಿ ಪಡೆಯುವ ನಿರ್ಣಯವೇ ಸರಿಯಾದದ್ದು. ಈ ಮೂರು ಅನುಭವಗಳಲ್ಲಿಯೂ ಎಡೆಬಿಡದೆ ಇರುವದನ್ನು ಇರುವ ವಸ್ತುವೆನ್ನಬೇಕು ಯಾವದೋ ಒಂದವಸ್ಥೆಯದನ್ನು ಅದು ಬರೀ ತೋರಿಕೆಯದಾದ್ದರಿಂದ ಇಲ್ಲದ ವಸ್ತುವೆನ್ನಬೇಕು. ಈಗ ನಮಗೆ ಕಾಣುವ ಜಗತ್ತನ್ನೆಲ್ಲ ಈ ತಕ್ಕಡಿಗೆ ಹಾಕಿ ತೂಕ ಮಾಡಿ ನೋಡೋಣ.

ಎಚ್ಚರದಲ್ಲಿ ನಮಗೆ ಕಾಣುತ್ತಿರುವ ವಿಕಾರಾತ್ಮಕವಾದ ಜಗತ್ತು ಎಚ್ಚರವೊಂದರಲ್ಲಿರುವದೇ ಹೊರತು ಉಳಿದವಸ್ಥೆಗಳಲ್ಲಿಲ್ಲ. ಆದ್ದರಿಂದ ಅದು ಇಲ್ಲದ ವಸ್ತು. ಎದುರಿಗೆ ಕಾಣುತ್ತಿರುವದನ್ನು ಇಲ್ಲವೆನ್ನುವದು ಹೇಗೆಂದರೆ ಅದನ್ನು ಕನಸು ತಿಳಿಸಿಕೊಡುವದು. ಕನಸಿನಲ್ಲಿ ವಿಕಾರಾತ್ಮಕವಾದ ಎಷ್ಟೋ ವಸ್ತು

ಗಳು ಎದುರಿಗೆ ಕಂಡರೂ ಅವುಗಳು ಇಲ್ಲದ ವಸ್ತುಗಳೆಂದು ನಮಗೆ ಎಚ್ಚರದಲ್ಲಿ ತಿಳಿದೇ ತಿಳಿಯುವದು ಇದರಂತೆ ಎಚ್ಚರದಲ್ಲಿ ಎದುರಿಗೆ ಕಾಣುವ ವಸ್ತುಗಳೂ ಇಲ್ಲದ ವಸ್ತುಗಳೆ ಕನಸಿನ ಜಗತ್ತು ಕನಸಿಗೊಂದಕ್ಕೇ ಗಂಟು ಬಿದ್ದದ್ದೇ ಹೊರತು ಉಳಿದ ಅವಸ್ಥೆಗಳಲ್ಲಿ ಅದರ ಗಂಧವೇ ಇಲ್ಲದ್ದರಿಂದಲೂ ಅದು ಇಲ್ಲದ ವಸ್ತು ನಮಗೆ ಎದುರಾಗಿ ವಸ್ತುಗಳು ಕಾಣುವ ಅವಸ್ಥೆಗಳು ಇವೆರಡೆ ಇವೆರಡರ ವಸ್ತುಗಳೂ ಇಲ್ಲದ ವಸ್ತುಗಳೆಂದಾಯಿತು.

ಕನಸನ್ನು ಕಂಡ ನಾನೇ ಎಚ್ಚರವನ್ನು ನೋಡುವೆನೆಂಬ ಅನುಭವವಿರುವದರಿಂದ ಕನಸಿನಲ್ಲಿಯೂ ಎಚ್ಚರದಲ್ಲಿಯೂ ತಾನು ಎಡೆಬಿಡದೆ ಸಾಕ್ಷಿಯಾಗಿದ್ದಂತಾಯಿತು 'ಇದು ಮನೆ' ಎನ್ನುವಾಗ ಇದು ಎಂಬ ಸಾಮಾನ್ಯಾಂಶವು ಮನೆಯೆಂಬ ವಿಶೇಷಾಂಶವನ್ನು ಮುಂದುಮಾಡಿಕೊಂಡು ತೋರುತ್ತಿರುವಂತೆ ಆತ್ಮವಸ್ತುವಿನ ಸಾಮಾನ್ಯಾಂಶವು ಎಚ್ಚರದಲ್ಲಿಯೂ ಕನಸಿನಲ್ಲಿಯೂ ಅಯಾ ಅವಸ್ಥೆಗೆ ಗಂಟುಬಿದ್ದ ಅನೇಕ ವಿಕಾರಾತ್ಮಕ ವಿಶೇಷಗಳನ್ನು ಮುಂದುಮಾಡಿಕೊಂಡು ತೋರುತ್ತಿರುವದು * ಗಾಢನಿದ್ರೆಯಲ್ಲಿ ವಿಕಾರಾತ್ಮಕವಾದ ಯಾವ ಜಗತ್ತೂ ಇರುವದಿಲ್ಲವಾದ್ದರಿಂದ ತೋರಿಸಬೇಕಾದ ವಿಶೇಷವೇನೂ ಇಲ್ಲದ ಕಾರಣ ಆ ಆತ್ಮವು ತಾನೊಂದೇ ತಾನೇತಾನಾಗಿ ಬೆಳಗುತ್ತಿರುವದು. ಕನಸ್ಸನ್ನು ಕಂಡ ನಾನೇ ಎಚ್ಚರವನ್ನು ನೋಡುತ್ತಿರುವೆನೆಂದಂತೆ ಸುಖವಾಗಿ ನಿದ್ರೆಮಾಡಿದ ನಾನೇ ಎಚ್ಚರವನ್ನು ನೋಡುತ್ತೇನೆಂಬ ಅನುಭವದಿಂದಲೆ ಆತ್ಮನು ಮೂರವಸ್ಥೆಗಳಲ್ಲಿಯೂ ಎಡೆಬಿಡದೆ ಇರುವನೆಂದು ಸ್ಪಷ್ಟವಾಗುವದು. ಆದ್ದರಿಂದ ಆತ್ಮನೊಬ್ಬನೇ ಇರುವ ವಸ್ತು ಉಳಿದ ವಸ್ತುಗಳೆಲ್ಲ ಎಷ್ಟುಮಾತ್ರವೂ ಇಲ್ಲದವುಗಳೆಂದು ಗಾಢನಿದ್ರೆಯು ಹೇಳುವದು. ಕಣ್ಣಿಗೆ ಕಾಣುವದನ್ನು ಇಲ್ಲದ್ದೆನ್ನುವದು ಹೇಗೆಂದರೆ ಕನಸು ತನ್ನನ್ನು ನೋಡೆಂದು ಹೇಳುವದು.

---

* "ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ಪಶ್ಯೇತ್" ತನಗೆರಡನೆಯದಾಗಿ ನೋಡುವದಕ್ಕೆ ಅಲ್ಲಿ ಎರಡನೆಯದಿಲ್ಲ—ಶ್ರು.

(ಅನಯೋಃ) ಈ (ಉಭಯೋರಪಿ) ಇಲ್ಲದ್ದು ಮತ್ತು ಇರುವ ದೆಂಬೆರಡೂ ವಸ್ತುಗಳ (ಅಂತಃ ತು*) ನಿರ್ಣಯವಾದರೊ (ತತ್ತ್ವದರ್ಶಿಭಿಃ) ಜಗತ್ತಿನ ಹುಟ್ಟುಸಾವುಗಳಿಗೆಲ್ಲ ಕಾರಣವಾದ ಪರಬ್ರಹ್ಮದ ಸ್ವರೂಪವನ್ನು ಕಣ್ಣಿಗೆ ಕಟ್ಟಿದಹಾಗೆ ನಿಸ್ಸಂಶಯವಾಗಿ ಮನಗಂಡವರಿಂದ (ದೃಷ್ಟಃ) ನೋಡಲ್ಪಟ್ಟಿರುವದು. ಆದ್ದರಿಂದ ನೀನೂ ಅವರ ದಾರಿಯನ್ನು ಹಿಡಿದು ವಿಕಾರಗಳೆಲ್ಲ ನಿಜವಾಗಿ ಇಲ್ಲದವುಗಳೆಂದೂ ಬಿಸಿಲಗುದುರೆ ಮೊದಲಾದವುಗಳಂತೆ ಬರೀ ತೋರಿಕೆಯವುಗಳೆಂದೂ ಮನಗಂಡು ಶೀತೋಷ್ಣ ಮೊದಲಾದವುಗಳನ್ನು ತಡೆದುಕೊ

ಯಾವಾಗಲೂ ಇರುವದೆಂಬ ವಸ್ತು ಎಂಥದ್ದೆಂದರೆ .—

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭ ॥**

(ಯೇನ) ಯಾವ ಆತ್ಮವಸ್ತುವಿನಿಂದ (ಇದಂ) ಈ (ಸರ್ವಂ) ಎಲ್ಲವೂ 'ಇದೆ, ಇದೆ' ಎಂಬ ಸಾಮಾನ್ಯಾಂಶದಿಂದ (ತತಂ) ವ್ಯಾಪಿಸಿಕೊಂಡಿರುವಂಥದ್ದಾಗಿದೆಯೊ (ತತ್ ತು) ಅದಾದರೊ (ಅವಿನಾಶಿ*) ನಾಶವಾಗಿ ಹೋಗತಕ್ಕದ್ದಲ್ಲವೆಂದು (ವಿದ್ಧಿ) ತಿಳಿ ಒಂದು ಕಡೆ ಹಗ್ಗವಿದ್ದು ಅದು ಮಬ್ಬುಗತ್ತಲೆಯಿಂದಲೋ ಏನೊ ಹಾವಿನಂತೆ ಕಾಣುತ್ತಿರುತ್ತದೆ. ಹಗ್ಗದ ಹೊರತು ಆ ಹಾವಿಗೆ ಬೇರೆ ಅವಯವಗಳಿಲ್ಲದ್ದರಿಂದ ಆಗ ಆ ಹಾವನ್ನು ಹಗ್ಗವು ಸರ್ವವಿಧದಿಂದಲೂ ವ್ಯಾಪಿಸಿಕೊಂಡಿರುವದೆನ್ನಬೇಕು. 'ಇದು ಹಾವು' ಎನ್ನುವಾಗ 'ಹಾವು' ಎಂಬ ವಿಶೇಷವಿಕಾರವು ಅಲ್ಲಿ ಇಲ್ಲದಿದ್ದರೂ

---

* ಈ 'ತು' ಎಂಬ ಮಾತನ್ನು 'ತತ್ತ್ವದರ್ಶಿಭಿಃ' ಎಂಬ ಮಾತಿಗೆ ಸೇರಿಸಿಕೊಂಡರೆ ಆ ನಿರ್ಣಯವು ಜ್ಞಾನಿಗಳಿಗಾಗುವದೇ ಹೊರತು ಇತರರಿಗಿಲ್ಲವೆಂದಾಗುತ್ತದೆ.

* ಅವಿನಾಶೀ ವಾ ಅರೇಽಯಮಾತ್ಮಾ—ಎಲೊ, ಈ ಆತ್ಮನು ಅವಿನಾಶಿಯು. ಶ್ರು

'ಇದು' ಎಂದು ಹೇಳಿಸಿಕೊಳ್ಳುವದಕ್ಕೆ ತಕ್ಕದ್ದಾಗಿ ಹಗ್ಗವು ಅಲ್ಲಿ ಇದ್ದೇ ಇರುವದು. ಬೆಳಕು ತರುವದೇ ಮೊದಲಾದ ಕಾರಣಗಳಿಂದ ಹಾವೆಂಬ ವಿಶೇಷವಿಕಾರವು ನಾಶವಾದರೂ ಹಗ್ಗಕ್ಕೇನೂ ಬಾಧೆ ಇಲ್ಲ. ಅದರಂತೆ ಜಗತ್ತಿನಲ್ಲಿರುವ ವಿಕಾರವಿಶೇಷಗಳಿಗೆಲ್ಲ ಆಧಾರವಾಗಿ 'ಇದೆ, ಇದೆ' ಎಂಬ ರೂಪದಲ್ಲಿರುವ ಆತ್ಮವು ಆ ವಿಕಾರವಿಶೇಷಗಳಂತೆ ನಾಶವಾಗತಕ್ಕದ್ದಲ್ಲ. ವಿಕಾರವಿಶೇಷಗಳಿಗೆಲ್ಲ ಅವಯವಗಳಿರುವದರಿಂದ ಯಾರು ಬೇಕಾದರೂ ಅವುಗಳನ್ನು ಇಲ್ಲದಂತೆ ಮಾಡಿಬಿಡಬಹುದು. ಆತ್ಮವಸ್ತುವಿಗೆ ದೇಹ ಮೊದಲಾದವುಗಳಂತೆ ಅವಯವಗಳಿಲ್ಲದ್ದರಿಂದಲೂ ಅದು ಸೊರಗುವಂಥದ್ದಲ್ಲ. ಅಥವಾ ತನ್ನದೆಂಬ ಹಣಕಾಸುಗಳ ಮತ್ತು ಬಂಧು ಮಿತ್ರರ ಹಾನಿಯಿಂದ ಮನುಷ್ಯರಂತೆ ಕ್ಷೀಣಿಸುವದಕ್ಕೆ ಅದಕ್ಕೆ ತನಗಿಂತ ಬೇರೆಯಾಗಿ ತನ್ನದೆಂಬುವದೇನೂ ಇಲ್ಲ ಆದ್ದರಿಂದ ಇಂಥ (ಅವ್ಯಯಸ್ಯ) ಯಾವ ವಿಧವಾದ ಹೆಚ್ಚುಕುಂದುಗಗಳಿಗೊಳಗಾಗದಂಥ (ಅಸ್ಯ) ಈ ಆತ್ಮವಸ್ತುವಿನ (ವಿನಾಶಂ) ಇಲ್ಲದಂತಾಗುವಿಕೆಯನ್ನು (ಕರ್ತುಂ) ಮಾಡುವದಕ್ಕೆ (ನ ಕಶ್ಚಿತ್ ಅರ್ಹತಿ) ಯಾರೂ ಸಮರ್ಥರಲ್ಲ

ಆತ್ಮಕ್ಕಾಗಿ ದುಃಖಿಸದೆ ಹೋದರೂ ದೇಹಕ್ಕಾಗಿ ದುಃಖವಾಗುವದೆಂದರೆ —

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ |**
**ಅನಾಶಿನೋऽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ || ೧೮ ||**

(ನಿತ್ಯಸ್ಯ) ಮೊದಲು ಕಾಣುತ್ತಿದ್ದ ದೇಹವು ಸುಟ್ಟಮೇಲೆ ಕಾಣದೆ ಹೋಗುವಂತೆ ಇಲ್ಲದವನಾಗದೆ ಎಂದೆಂದಿಗೂ ಇರುವಂಥವನಾಗಿಯೂ (ಶರೀರಿಣಃ) ಶರೀರದಲ್ಲಿ ಪ್ರವೇಶ ಮಾಡಿರುವವನಾಗಿಯೂ (ಅನಾಶಿನಃ) ರೋಗಾದಿಗಳಿಂದ ಕೊರಗುವ ಮನುಷ್ಯನಂತೆ ಸವೆಯದವನಾಗಿಯೂ (ಅಪ್ರಮೇಯಸ್ಯ*) ಪ್ರತ್ಯಕ್ಷ, ಅನುಮಾನ, ಉಪಮಾನ–ಮೊದಲಾದ ಜ್ಞಾನಸಾಧನಗ

---

* ಆತ್ಮಸ್ವರೂಪವು ವೇದದಿಂದ ತಿಳಿಯತಕ್ಕದೆಂದು "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" ಎಂಬ ಶ್ರುತಿ ಇರುವದು. ಆದರೆ ಶಾಸ್ತ್ರವು

ಳಿಗೆ ಒಳಗಾಗದವನಾಗಿಯೂ ಇರುವ ಆ ಆತ್ಮನಿಗೆ ಬಿಡಾರದ ಮನೆಗಳಾಗಿರುವ (ಇಮೇ ದೇಹಾಃ) ಈ ಎಲ್ಲ ದೇಹಗಳೂ (ಅಂತವಂತಃ) ಬಿಸಿಲಗುದುರೆ ಮೊದಲಾದವುಗಳು ಮೊದಲು ಕಾಣುತ್ತಿದ್ದು ಪರೀಕ್ಷೆಮಾಡಿ ನೋಡಿದಾಗ ಇಲ್ಲವೆನಿಸುವಂತೆ ಇಲ್ಲವಾಗತಕ್ಕವುಗಳು ಎಂದು(ಉಕ್ತಾಃ) ಎನಿಸಿಕೊಂಡಿವೆ ಆದ್ದರಿಂದ ಅವು ಎಂದಿದ್ದರೂ ಹೋಗಲೇಬೇಕು (ತಸ್ಮಾತ್) ಆದಕಾರಣ (ಭಾರತ) ಅರ್ಜುನನೆ, (ಯುಧ್ಯಸ್ವ) ನಿನ್ನ ಕ್ಷತ್ರಿಯಜಾತಿಯ ಧರ್ಮವಾದ ಯುದ್ಧವನ್ನು ಮಾಡು. ಯುದ್ಧಕ್ಕೆಂದು ಬಂದಿರುವ ನೀನು ಹಿಂದೆಗೆಯಬೇಡ

'ಭೀಷ್ಮಾದಿಗಳು ಸಾಯುವರಲ್ಲ! ಅವರನ್ನು ನಾನು ಹೇಗೆ ಕೊಲ್ಲಲಿ?' ಎಂದು ಹಂಬಲಿಸುವ ನಿನ್ನ ತಿಳುವಳಿಕೆಯು ತಪ್ಪು. ಹೇಗೆಂದರೆ —

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ* ॥**

(ಏನಂ) ನಿತ್ಯನೂ ಅವಿನಾಶಿಯೂ ಆದ ಈ ಆತ್ಮನನ್ನು (ಯಃ) ಯಾವನು (ಹಂತಾರಂ) ಕೊಲ್ಲುವವನೆಂದು (ವೇತ್ತಿ) ತಿಳಿಯುತ್ತಾನೊ (ಏನಂ) ಈ ಆತ್ಮನನ್ನು (ಯಶ್ಚ) ಯಾವನು (ಹತಮ್) ಸತ್ತನೆಂದು (ಮನ್ಯತೇ) ತಿಳಿಯುತ್ತಾನೊ (ತೌ) ಆ (ಉಭೌ) ಇಬ್ಬರೂ (ನ ವಿಜಾನೀತಃ) ನಿಜಸ್ಥಿತಿಯನ್ನು ಚೆನ್ನಾಗಿ ತಿಳಿದವರಲ್ಲ ಅವರು ದೇಹವನ್ನೇ ಆತ್ಮವೆಂದು ತಿಳಿದುಕೊಂಡಿರುವ ಪಾಮರರಾಗಿರುವದರಿಂದ ದೇಹಾದಿಗಳಿಂದ

---

ಪ್ರಮಾಣವಾದರೂ ಅದು ಆತ್ಮನನ್ನು ಹೊಸದಾಗಿ ತಂದು ಕೊಡುವದಿಲ್ಲ ಪ್ರಮಾಣವನ್ನು ಹುಡುಕುವಾಗಲೇ ಹುಡುಕುವವನು ತಾನು ಮೊದಲೇ ಸಿದ್ಧವಾಗಿದ್ದೇಯಿರುವನಷ್ಟೆ ತಾನು ತನಗೆ ಹೊಸ ವಿಷಯವಲ್ಲ ಏನೇನನ್ನೊ ತಾನೆಂದು ತಿಳಿದುಕೊಂಡಿದ್ದ ತಪ್ಪು ತಿಳಿವನ್ನು ತೆಗೆದುಹಾಕುವದಿಷ್ಟೇ ಶಾಸ್ತ್ರದ ಕೆಲಸ ಶಾಸ್ತ್ರವು ಇಷ್ಟಕ್ಕೆ ಮಾತ್ರ ಪ್ರಮಾಣವೇ ಹೊರತು ಆತ್ಮನ ಇರುವಿಕೆಗಲ್ಲ

* "ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಮ್ । ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ-ಶ್ರು (ಶ್ಲೋಕಾರ್ಥವೇ ಇದರರ್ಥ)

ನಡೆಯುವ ಕ್ರಿಯೆಗಳನ್ನೆಲ್ಲ ಆತ್ಮನ ಕ್ರಿಯೆಗಳೆಂದು ತಪ್ಪು ತಿಳಿದುಕೊಂಡಿರುವವರಾಗಿರುವರು. ಹೇಗೆಂದರೆ (ಅಯಂ) ಈ ಆತ್ಮನು (ನ ಹಂತಿ) ಕೊಲ್ಲುವ ಕರ್ತನೂ ಆಗುವದಿಲ್ಲ, (ನ ಹನ್ಯತೇ) ಕೊಲೆಗೆ ವಿಷಯನೂ ಆಗುವದಿಲ್ಲ. ಏಕೆಂದರೆ ಅವನು ಯಾವ ವಿಕಾರಕ್ಕೂ ಒಳಗಾಗತಕ್ಕವನಲ್ಲ

ಆತ್ಮನು ಕೊಲೆಗೆ ವಿಷಯನಲ್ಲವೆಂಬದಕ್ಕೆ ಕರವಲ್ಲಿಯ ಮಂತ್ರಾರ್ಥವನ್ನು ನೋಡು —

***ನ ಜಾಯತೇ ಮ್ರಿಯತೇ ವಾ ಕದಾಚಿ**
**ನ್ನಾಯಂ ಭೂತ್ವಾಽಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥**

(ಅಯಂ) ಈ ಆತ್ಮನು (ಕದಾಚಿತ್) ಎಂದೆಂದಿಗೂ (ನ ಜಾಯತೇ) ಹುಟ್ಟುವದೂ ಇಲ್ಲ-ಎಂದರೆ ಹುಟ್ಟುವಿಕೆಯೆಂಬ ವಿಕಾರವನ್ನೂ ಪಡೆಯುವದಿಲ್ಲ (ನ ಮ್ರಿಯತೇ ವಾ) ಸಾಯುವದೂ ಇಲ್ಲ–ಎಂದರೆ ಸಾಯುವಿಕೆ ಎಂಬ ವಿಕಾರವನ್ನೂ ಪಡೆಯುವದಿಲ್ಲ ಇದ್ದು ಇಲ್ಲದಂತಾದವರನ್ನು ಸತ್ತರೆನ್ನುತ್ತಾರೆ (ಅಯಂ)ಈ ಆತ್ಮನು(ಭೂತ್ವ)ಮೊದಲು ಇದ್ದವನೆನಿಸಿಕೊಂಡು(ನ ಭೂಯಃ* ಅಭವಿತಾ ವಾ) ಮತ್ತೆಮತ್ತೆ ಇಲ್ಲದವನೆನಿಸಿಕೊಳ್ಳುವದೂ ಇಲ್ಲ. ಅಥವಾ ದೇಹದಂತೆ ಇಲ್ಲದಿದ್ದವನೆನಿಸಿಕೊಂಡು ಮತ್ತೆ ಮತ್ತೆ ಹುಟ್ಟಿದವನೆನಿಸಿಕೊಳ್ಳು

* "ನ ಜಾಯತೇ ಮ್ರಿಯತೆ ವಾ ವಿಪಶ್ಚಿನ್ನಾಯಂ ಕುತಶ್ಚಿನ್ನ ಬಭೂವಕಶ್ಚಿತ್ ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ" ಶ್ರು (ಶ್ಲೋಕಾರ್ಥವೇ ಇದರರ್ಥ)

* ಭವಿತಾ ಎಂತಲೂ ಪಾಠಾಂತರವಿದೆ ಆಗ-ಒಮ್ಮೆ ಹುಟ್ಟಿದ ಬಳಿಕ ಮತ್ತೆ ಮತ್ತೆ ಹುಟ್ಟುವದಿಲ್ಲವೆಂತಲೂ ಇಲ್ಲ. ಅದರಂತೆಯೇ ಒಮ್ಮೆ ಹುಟ್ಟಿದ ಬಳಿಕ ಮತ್ತೆ ಮತ್ತೆ ಸಾಯುವದಿಲ್ಲವೆಂತಲೂ ಇಲ್ಲ-ಎಂದರ್ಥ.

ವದೂ ಇಲ್ಲ ಆದ್ದರಿಂದಲೇ ಅವನು (ಅಜಃ) ಹುಟ್ಟಿಲ್ಲದವನು (ನಿತ್ಯಃ) ಸಾವಿಲ್ಲದವನು ಉಳಿದ ಎಷ್ಟು ವಿಕಾರಗಳಿದ್ದರೂ ಇವೆರಡರೊಳಗೇ ಸೇರಿ ದವುಗಳು ಆದರೂ ಹೇಳುತ್ತೇನೆ ಕೇಳು ಹುಟ್ಟುವ ವಿಕಾರವಿಲ್ಲವೆಂಬ ಮಾತಿನಿಂದಲೇ ಇರುವದೆಂಬೊಂದು ವಿಕಾರವೂ ಇಲ್ಲವೆಂದಂತಾಯಿತು. ಏಕೆಂದರೆ ಜಗತ್ತಿನಲ್ಲಿ ಹುಟ್ಟಿ ಇರುವವುಗಳನ್ನೆ ಇರುವದೆನ್ನುವ ರೂಢಿ. (ಅಯಂ) ಈ ಆತ್ಮನು (ಶಾಶ್ವತಃ) ಯಾವಾಗಲೂ ಒಂದೇ ರೀತಿಯಲ್ಲಿರುವ ವನಾದ್ದರಿಂದ ಸೊರಗುವಿಕೆಯೆಂಬ ವಿಕಾರವಿಲ್ಲದವನು ಅವಯುವಗಳಾಗಲಿ ಗುಣಗಳಾಗಲಿ ಉಳ್ಳ ವಸ್ತು ಅವಯುವಗಳು ಬಡವಾಗುವದರಿಂದ ಅಥವಾ ಗುಣಗಳು ಹೋಗುವದರಿಂದ ಸೊರಗುವದು ಆತ್ಮವಸ್ತುವಿಗೆ ಅವಯುವ ಗಳೂ ಇಲ್ಲ. ಗುಣಗಳೂ ಇಲ್ಲ ಆದ್ದರಿಂದ ಅದು ಸೊರಗುವ ಸಂಭವವೇ ಇಲ್ಲ ಇದರಂತೆ (ಪುರಾಣಃ) ಹಿಂದೆಯೂ ಅದು ಹೊಸದನ್ನು ಪಡೆಯದೆ ಹಳೆಯದಾ ಗಿಯೇ ಇದ್ದದ್ದರಿಂದ ಬೆಳೆಯುುವದೆಂಬ ವಿಕಾರವೂ ಅದಕ್ಕಿಲ್ಲ. ಅವಯುವಗ ಳಾಗಲಿ ಗುಣಗಳಾಗಲಿ ಹೆಚ್ಚಾಗಿ ಹೊರಹೊಮ್ಮಿದರೆ ಬೆಳೆಯಿತೆನ್ನಬಹುದು. ಆತ್ಮವಸ್ತುವಿನಲ್ಲಿ ಅದರ ಗಂಧವೇ ಇಲ್ಲ. ಆದ್ದರಿಂದ ಅದಕ್ಕೆ ಬೆಳೆಯುುವ ವಿಕಾರವೂ ಇಲ್ಲ. (ಶರೀರೇ) ಶರೀರವು (ಹನ್ಯಮಾನೇ) ಕೊಲ್ಲಲ್ಪಟ್ಟರೂ ಆತ್ಮನು (ನ ಹನ್ಯತೇ) ರೂಪಾಂತರವಾಗುವ ಪರಿಣಾಮವನ್ನು ಪಡೆಯುುವ ದಿಲ್ಲ. ಎಂದರೆ ಕೊಲ್ಲಲ್ಪಡುವದಿಲ್ಲ ಹೀಗೆ ಆತ್ಮನು ಹುಟ್ಟುವಿಕೆ, ಇರುವಿಕೆ, ಬೆಳೆಯುುವಿಕೆ, ಬೇರೆ ಸ್ಥಿತಿಯನ್ನು ಪಡೆಯುುವಿಕೆ, ಸೊರಗುವಿಕೆ ಇಲ್ಲದಂತಾಗು ವಿಕೆ-ಎಂಬ ಆರು ಬಗೆಯ ವಿಕಾರಗಳೂ ಇಲ್ಲದವನೆಂದಾಯಿತು. ಹೀಗಿರುವ ದರಿಂದ ಭೀಷ್ಮಾದಿಗಳು ನನ್ನಿಂದ ಸಾಯುುವರೆಂದು ನೀನು ತಿಳಿದಿರುವದು ತಪ್ಪು.

ಅದರಂತೆ ಆತ್ಮನು ಕೊಲ್ಲುವವನೂ ಅಲ್ಲ. ಹೇಗೆಂದರೆ :—

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯುವ್ ।**

**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕವ್ ॥**

(ಪಾರ್ಥ) ಅರ್ಜುನನೆ, ಕೇಳು. (ಯಃ) ಯಾವ ಮನುಷ್ಯನು (ಏನಂ) ಈ ಆತ್ಮನನ್ನು (ಅವ್ಯಯಂ) ನಿರವಯವನೂ ನಿರ್ಗುಣನೂ ಆದ್ದ ರಿಂದ ಬಟ್ಟೆಯಲ್ಲಿ ನೂಲು ಸವೆಯುತ್ತ ಬರುವಂತೆ ಅವಯವಗಳಲ್ಲಾಗಲಿ ಶರೀರದಲ್ಲಿ ರೂಪಾದಿಗಳು ವ್ಯಗರೆಯುವಂತೆ ಗುಣದಲ್ಲಾಗಲಿ ಕಡಿಮೆಯಾ ಗುತ್ತ ಹೋಗುವನಲ್ಲದವನನ್ನಾಗಿಯೂ, ನಾಶಕ್ಕೆ ಕಾರಣವಾದಂಥ ಈ ಕಡಿ ಮೆಯಾಗುವಿಕೆಯಿಲ್ಲದ್ದರಿಂದಲೇ (ಅವಿನಾಶಿನಂ) ನಾಶವಿಲ್ಲದವನನ್ನಾಗಿಯೂ (ನಿತ್ಯಂ) ಬೇರೆಬೇರ ಸ್ಥಿತಿಯನ್ನು ಪಡೆಯದೆ ಯಾವಾಗಲೂ ಒಂದೇ ರೀತಿ ಯಲ್ಲಿ ಇರುವವನನ್ನಾಗಿಯೂ, ಆದ್ದರಿಂದಲೆ (ಅಜಂ) ನಾಶಕ್ಕೆ ಕಾರಣವಾದ ಹುಟ್ಟುವಿಕೆಯಿಲ್ಲದವನನ್ನಾಗಿಯೂ (ವೇದ) ತಿಳಿಯುತ್ತಾನೋ (ಸಃ) ಆ (ಪುರುಷಃ) ಮನುಷ್ಯನು, ತಾನೆ ಆ ಆತ್ಮನಾದ್ದರಿಂದ (ಕಥಂ) ಹೇಗೆ (ಕಂ) ಯಾರನ್ನು (ಘಾತಯತಿ) ಹೊಡೆಸುತ್ತಾನೆ! ಹೊಡೆಸುವದಿಲ್ಲ. ಆದ್ದರಿಂದ ನಾನು ಭೀಷ್ಮದ್ರೋಣರನ್ನು ಕೊಲ್ಲಿಸುವವನೂ ಆಗಲಿಲ್ಲ ಮತ್ತು (ಕಂ) ಯಾರನ್ನು ಹೇಗೆ (ಹಂತಿ) ಹೊಡೆಯುತ್ತಾನೆ! ಹೊಡೆಯುವ ದಿಲ್ಲ. ಆದ್ದರಿಂದ ನೀನು ಕೊಲ್ಲುವವನೂ ಆಗುವುದಿಲ್ಲ. ವಿಕಾರಗ ಳಾದ ದೇಹ ಮೊದಲಾದವುಗಳನ್ನೇ ಆತ್ಮನೆಂದು ತಪ್ಪು ತಿಳಿದಿರುವವರಿಗೆ ಆತ್ಮನು ಕೊಲ್ಲಿಸುವವನೂ ಕೊಲ್ಲುವವನೂ ಅಗಬಹುದೇ ಹೊರತು ಆತ್ಮನ ನಿರ್ವಿಕಾರಸ್ವರೂಪದ ವೈಭವವನ್ನು ತಿಳಿದವರಿಗೆ ಯಾವ ಬಗೆಯ ಕರ್ತೃ ತ್ವವೂ ಎಷ್ಟು ಮಾತ್ರವೂ ಸಂಭವಿಸುವದಿಲ್ಲ. ಹೀಗಾದರೆ ವೇದದಲ್ಲಿರುವ ಕರ್ಮಕಾಂಡಕ್ಕೆ ಗತಿಯೇನೆಂದರೆ ಆ ವಿಧಿಗಳೆಲ್ಲ ಆತ್ಮನನ್ನು ಕರ್ತೃವೆಂದು ತಿಳಿ ದಿರುವವರಿಗೆ ಹೇಳಿದ ಮಾತುಗಳು ಜಗತ್ತಿನಲ್ಲಿ ಬಂಧಕವಾಗಿರುವ ಶೋಕ ಮೋಹಗಳನ್ನು ಕಳೆದುಕೊಳ್ಳಬೇಕೆನ್ನುವವರು ಆತ್ಮನಿಗೆ ಕರ್ತೃತ್ವವಿಲ್ಲವೆಂಬ ಜ್ಞಾನವನ್ನು ಪಡೆಯಬೇಕು. ನೀನೂ ನಿನ್ನ ಶೋಕಮೋಹಗಳನ್ನು ಕಳೆದು ಕೊಳ್ಳುವದಕ್ಕಾಗಿ ಈ ಜ್ಞಾನವನ್ನು ಪಡೆ.

ಆತ್ಮನಿಗೆ ನಾಶವಿಲ್ಲದ್ದಕ್ಕೆ ದೃಷ್ಟಾಂತವೇನೆಂದರೆ :—

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**

**ತಥಾ ಶರೀರಾಣಿ ವಿಹಾಯ ಜೀರ್ಣಾ**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

ಜಗತ್ತಿನಲ್ಲಿ ಸಾಮಾನ್ಯವಾಗಿ (ನರಃ) ಮನುಷ್ಯನು (ಜೀರ್ಣಾನಿ) ಹಳೆಯವಾಗಿ ನಲುಗಿದಂಥ (ವಾಸಾಂಸಿ) ಬಟ್ಟೆಗಳನ್ನು (ಯಥಾ) ಹೇಗೆ, ತನ್ನಲ್ಲೇನೂ ವಿಕಾರವನ್ನು ಪಡೆಯದೆ (ವಿಹಾಯ) ಬಿಟ್ಟು (ಅಪರಾಣಿ) ಬೇರೆ (ನವಾನಿ) ಹೊಸ ಬಟ್ಟೆಗಳನ್ನು (ಗೃಹ್ಣಾತಿ) ತೆಗೆದುಕೊಳ್ಳುತ್ತಾನೊ (ತಥಾ) ಹಾಗೆ (ದೇಹೀ) ದೇಹದಲ್ಲಿರುವ ಜೀವನು, ತನ್ನಲ್ಲೇನೂ ವಿಕಾರವನ್ನು ಪಡೆಯದೆ (ಜೀರ್ಣಾನಿ) ಹಳೆಯವಾಗಿ ನಲುಗಿರುವಂಥ (ಶರೀರಾಣಿ) ದೇಹಗಳನ್ನು (ವಿಹಾಯ) ಬಿಟ್ಟು (ಅನ್ಯಾನಿ) ಬೇರೆ(ನವಾನಿ) ಹೊಸ ದೇಹಗಳನ್ನು (ಸಂಯಾತಿ) ಪಡಿಯುವನು. ಹೀಗೆ ಹಳೇ ಬಟ್ಟೆಗಳನ್ನು ಬಿಡುವಾಗ ಮತ್ತು ಹೊಸ ಬಟ್ಟೆಗಳನ್ನು ಧರಿಸುವಾಗ ಮನುಷ್ಯನಲ್ಲಿ ಯಾವ ಬಗೆಯ ನಾಶವೂ ಇಲ್ಲದಿರುವಂತೆ ಶರೀರವು ಬದಲಾಯಿಸುವಾಗ ಆತ್ಮನಿಗೆ ನಾಶವಿಲ್ಲ.

ದೇಹವು ನಾಶವಾಗುವಾಗ ದೇಹದಲ್ಲಿರುವ ಆತ್ಮನಿಗೆ ಧಕ್ಕೆ ತಗಲುವದಿಲ್ಲವೆ ? ಎಂದರೆ .—

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥**

ಯುದ್ಧದಲ್ಲಿ ಆಗುವ ಕತ್ತಿ ಮೊದಲಾದವುಗಳ ಪ್ರಯೋಗಗಳಿಂದ ಅವಯವವುಳ್ಳ ವಸ್ತುಗಳು ಬಿಡಿಬಿಡಿಯಾಗಿ ತುಂಡಾಗುತ್ತವೆ ಆತ್ಮನು ನಿರವಯವನಾದ್ದರಿಂದ (ಏನಂ) ಈ ಆತ್ಮನನ್ನು (ಶಸ್ತ್ರಾಣಿ) ಕತ್ತಿ ಮೊದಲಾದ ಆಯುಧಗಳು (ನ ಛಿಂದಂತಿ) ಕತ್ತರಿಸಿ ತುಂಡುಮಾಡುವದಿಲ್ಲ (ಪಾವಕಃ) ಬೆಂಕಿಯು, ಶರೀರ ಮೊದಲಾದವುಗಳನ್ನು ಸುಟ್ಟು ಬೂದಿಮಾಡುವಂತೆ (ಏನಂ) ಈ ಆತ್ಮನನ್ನು (ನ ದಹತಿ) ಸುಡುವದಿಲ್ಲ. (ಏನಂ) ಈ ಆತ್ಮನನ್ನು

(ಆಪಃ) ನೀರುಗಳು (ನ ಚ ಕ್ಲೇದಯಂತಿ) ನೆನೆಸುವದೂ ಇಲ್ಲ. (ಮಾರುತಃ) ಗಾಳಿಯು (ನ ಶೋಷಯತಿ) ಒಣಗಿಸುವದೂ ಇಲ್ಲ.

ಅದೇಕೆಂದರೆ —

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥**

(ಅಯಂ) ಈ ಆತ್ಮನು (ಅಚ್ಛೇದ್ಯಃ) ಭೂಮಿಯ ಅಂಶಗಳನ್ನು ಹೆಚ್ಚಾಗಿ ಹೊಂದಿರುವ ಯಾವ ಆಯುಧದಿಂದಲೂ ಕತ್ತರಿಸುವದಕ್ಕೆ ಆಗದವನೇ ಆಗಿಯೂ ಇರುವನು. (ಅಯಂ) ಈ ಆತ್ಮನು (ಅದಾಹ್ಯಃ) ಬೆಂಕಿಯಿಂದ ಸುಡುವದಕ್ಕೆ ಆಗದವನೇ ಆಗಿಯೂ ಇರುವನು. (ಅಯಂ) ಈ ಆತ್ಮನು (ಅಕ್ಲೇದ್ಯಃ) ನೀರಿನಿಂದ ನೆನೆಸುವದಕ್ಕೆ ಆಗದವನೇ ಆಗಿಯೂ ಇರುವನು. (ಅಶೋಷ್ಯ ಏವ ಚ) ಗಾಳಿಯಿಂದ ಒಣಗಿಸುವದಕ್ಕೆ ಆಗದವನೇ ಆಗಿಯೂ ಇರುವನು. ಇದಕ್ಕೆ ಕಾರಣವೇನೆಂದರೆ (ಅಯಂ) ಈ ಆತ್ಮನು, ಮೇಲೆ ಹೇಳಿದಂತೆ ಭೂಮಿ, ಬೆಂಕಿ, ನೀರು, ಗಾಳಿ-ಎಂಬ ನಾಲ್ಕು ಭೂತಗಳಿಂದಲೂ ನಾಶಗೊಳಿಸುವದಕ್ಕಾಗದವನಾದ್ದರಿಂದ (ನಿತ್ಯಃ) ಯಾವಾಗಲೂ ಒಂದೇ ರೀತಿಯಲ್ಲಿ ಇರುವನು. ಗಡಿಗೆಬಟ್ಟೆಗಳಂಥ ವಿಕಾರವಾದ ವಸ್ತುಗಳು ಎಲ್ಲಿಯೋ ಒಂದು ಕಡೆ ಇದ್ದಾವು ಈ ಆತ್ಮವಸ್ತು ನಿತ್ಯವಾದ್ದರಿಂದ (ಸರ್ವಗತಃ*) ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವದು. ಎಲ್ಲಿಯೋ ಒಂದು ಕಡೆ ಇರುವಂಥ ವಸ್ತುಗಳು ವಿಕಾರವಾಗುತ್ತ ಹೋದಾವು. ಆತ್ಮವಸ್ತು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವದಾದ್ದರಿಂದ (ಸ್ಥಾಣುಃ*) ಗಡಿಗೆ, ಬಟ್ಟೆ-ಮೊದಲಾದವುಗಳಂತೆ ವಿಕಾರ

---

* "ಆಕಾಶವತ್ಸರ್ವಗತಶ್ಚ ನಿತ್ಯಃ"–ಆತ್ಮನು ಆಕಾಶದಂತೆ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವವನು ಮತ್ತು ಯಾವಾಗಲೂ ಒಂದೇ ರೀತಿಯಲ್ಲಿ ಇರುವವನು—ಶ್ರು.

*ನಿರ್ವಿ"ಕಾರೋಽಕ್ಷರಶ್ಶುದ್ಧಃ"—ಆತ್ಮನು ವಿಕಾರವಿಲ್ಲದ, ಶುದ್ಧ ಸ್ವರೂಪನು.—ಶ್ರು.

ವಾಗದೆ ಮೋಟುಮರದಂತೆ ಸ್ಥಿರವಾಗಿರುವದು. ಗಳಿಗೆಗೊಂದು ಬಗೆಯಾಗುವ ವಸ್ತುಗಳು ಅಲುಗಾಟವನ್ನು ಪಡೆಯುತ್ತಿರುವವು. ಆತ್ಮವಸ್ತು ಯಾವಾಗಲೂ (ಅಚಲಃ)* ಅಲುಗಾಟವಿಲ್ಲದ್ದಾಗಿರುವದು. ಈ ಎಲ್ಲ ಕಾರಣಗಳಿಂದ ಆತ್ಮವಸ್ತು*।(ಸನಾತನಃ) ಬೇರೊಂದು ಕಾರಣದಿಂದ ಹೊಸದಾಗಿ ಆದದ್ದಾಗಿರದೆ ಹಿಂದಿನಿಂದಲೂ ಹೀಗೆಯೇ ಇದ್ದುಕೊಂಡಿರುವಂಥದ್ದಾಗಿರುವದು. ಆಯುಧದಿಂದ ಒಂದು ವಸ್ತುವನ್ನು ಕತ್ತರಿಸಬೇಕಾದರೆ ಆಯುಧವು ಕಡಿಯಬೇಕಾದ ವಸ್ತುವಿಗಿಂತ ಬೇರೆಯಾಗಿ ಹೊರಗೆ ಇರಬೇಕಾಗುವದಷ್ಟೆ. 'ಇದು ಆಯುಧ ಅಥವಾ ಆಯುಧವಿದೆ' ಎಂದು ಮನಸ್ಸಿಗೆ ತೋರುವಾಗ ಆಯುಧವೆಂಬ ವಿಶೇಷಾಂಶದಲ್ಲಿಯೂ 'ಇದು ಅಥವಾ ಇದೆ' ಎಂಬ ಸಾಮಾನ್ಯಾಂಶದ ರೂಪದಲ್ಲಿ ಆತ್ಮವಸ್ತು ವ್ಯಾಪಿಸಿಕೊಂಡಿರುವದರಿಂದ ಆ ಆಯುಧಗಳು ಆತ್ಮನ್ನೇನೂ ಮಾಡಲಾರವು. ಮಹಾವಿಷ್ಣುವಾದ ನನ್ನನ್ನು ಕೊಲ್ಲಬೇಕೆಂದು ಹಿರಣ್ಯಕಶಿಪು ಎಷ್ಟೋ ಹುಡುಕಿದನು. ನಾನು ಆಗ ಅವನ ಹೃದಯವನ್ನು ಹೊಕ್ಕಿದ್ದೆನಾದ್ದರಿಂದ ಅವನು ಆಗ ನನ್ನನ್ನು ಏನು ಮಾಡುವದಕ್ಕೂ ಆಗಲಿಲ್ಲ ಹಾಗೆಯೇ ತಮಗೂ ಆತ್ಮವೇ ಆಗಿರುವ ಆತ್ಮವಸ್ತುವನ್ನು ಆಯುಧಗಳು ಹೇಗೆ ಕತ್ತರಿಸಬಲ್ಲವು? ಹಾಗೆಯೇ ಯಾವ ಭೂತವೂ ತನಗೂ ಆತ್ಮವೇ ಆದ ಆತ್ಮವಸ್ತುವನ್ನು ಎಷ್ಟು ಮಾತ್ರವೂ ನೋಯಿಸಲಾರವು

ಇದಲ್ಲದೆ:—

---

* "ಕೂಟಸ್ಥಮಚಲಂ ಧ್ರುವಮ್"—ಆತ್ಮನು ಬದಲಾವಣೆಯನ್ನು ಹೊಂದದೆ ಇರುವವನಾಗಿ ಅಲುಗಾಟವಿಲ್ಲದೆ ಯಾವಾಗಲೂ ಇರುವವನು. —ಶ್ರು.

* "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್"—ಮೊದಲು ಈ ಆತ್ಮ ಒಂದೇ ಇತ್ತು. —ಶ್ರು.

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥**

ರೂಪ ಮೊದಲಾದ ಗುಣಗಳುಳ್ಳ ದೇಹ ಮೊದಲಾದವುಗಳು ಕಣ್ಣಿಗೆ ಕಾಣುವದರಿಂದ ಅವುಗಳ ಮೇಲೆ ಆಯುಧಗಳನ್ನು ಹಾಯಿಸುವದಕ್ಕೆ ಬರುವದು (ಅಯಂ) ಈ ಆತ್ಮನು (ಅವ್ಯಕ್ತಃ) ಯಾವ ಇಂದ್ರಿಯಕ್ಕೂ ಗೋಚರನಾಗದವನು. ಇಂದ್ರಿಯಗಳಿಗೆ ಗೋಚರವಾಗುವವುಗಳನ್ನು ಪ್ರತ್ಯಕ್ಷವೆನ್ನುತ್ತಾರೆ ಆತ್ಮನು ಇಂದ್ರಿಯಗಳಿಗೆ ಗೋಚರವಾಗುವದಿಲ್ಲವಾದ್ದರಿಂದ ಪ್ರತ್ಯಕ್ಷನಲ್ಲವಾಯಿತು. ಒಂದು ಕಡೆ ಒಂದು ವಸ್ತುವನ್ನು ಪ್ರತ್ಯಕ್ಷವಾಗಿ ನೋಡಿದರೆ ಇನ್ನೊಂದು ಕಡೆ ಅದನ್ನು ಅನುಮಾನದಿಂದ ತಿಳಿಯಬಹುದು ಉದಾಹರಣೆಗೆ ಬೆಂಕಿಯಿದ್ದ ಕಡೆ ಹೊಗೆ ಇರುವದನ್ನು ಪ್ರತ್ಯಕ್ಷವಾಗಿ ನೋಡಿದ್ದರೆ ಆಮೇಲೆ ಒಂದು ಕಡೆ ಹೊಗೆ ಇರುವದನ್ನು ನೋಡಿ ಅಲ್ಲಿ ಬೆಂಕಿಯಿರಬೇಕೆಂದು ಅನುಮಾನವನ್ನು ಮಾಡಬಹುದು (ಅಯಂ) ಆತ್ಮವಸ್ತು, ಪ್ರತ್ಯಕ್ಷವೇ ಅಲ್ಲದ್ದರಿಂದ (ಅಚಿಂತ್ಯಃ*) ಮನಸ್ಸಿನಲ್ಲಿ ಅನುಮಾನದಿಂದ ಊಹಿಸುವದಕ್ಕೂ ಬರುವದಿಲ್ಲ. ಆದ್ದರಿಂದಲೂ ನಿರವಯವನಾದ್ದರಿಂದಲೂ (ಆಯಂ) ಈ ಆತ್ಮನು (ಅವಿಕಾರ್ಯಃ) ಮೊಸರಿನ ಹೆಪ್ಪಿನಿಂದ ಹಾಲು ಮೊಸರಾಗುವಂತೆ ವಿಕಾರವನ್ನು ಪಡೆಯುವವನೆಂದು (ಉಚ್ಯತೇ) ಹೇಳಿಸಿಕೊಂಡಿದ್ದಾನೆ (ತಸ್ಮಾತ್) ಈ ಕಾರಣಗಳಿಂದ (ಏನಂ) ಈ ಬಗೆಯವನೆಂದು (ಏನಂ) ಈ ಆತ್ಮನನ್ನು (ವಿದಿತ್ವಾ) ತಿಳಿದು (ನ ಅನುಶೋಚಿತುಂ ಅರ್ಹಸಿ) ನಾನು ಇವರನ್ನು ಕೊಲ್ಲುವೆನೆಂದೂ ನನ್ನಿಂದ ಇವರು ಸಾಯುವರೆಂದೂ ನೀನು ವ್ಯಥೆ ಪಡಬಾರದು.

ಹೀಗಲ್ಲದೆ :—

---

* "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" —ಆತ್ಮವಸ್ತುವಿನ ಸ್ವರೂಪವನ್ನು ಮಾತಿನಿಂದ ಹೇಳುವದಕ್ಕೆ ಹೊರಟರೆ ಆ ಮಾತು ಅದನ್ನು ಮುಟ್ಟಲಾರದೆ ಮನಸ್ಸಿನೊಡನೆ ಹಿಂಜರಿಯುವದು. -ಶ್ರು.

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥**

ಆತ್ಮಸ್ವರೂಪದ ಜ್ಞಾನವಾಗುವದು ಬಹು ಕಷ್ಟವಾದ್ದರಿಂದ ನಾನು ಹೇಳುವದನ್ನು ತಿಳಿಯಲರಿಯದೆ (ಅಥ) ಒಂದು ಪಕ್ಷ(ಏನಂ) ಈ ಆತ್ಮನನ್ನು (ನಿತ್ಯಜಾತಂ ಚ) ಯಾವಾಗಲೂ ಶರೀರದೊಡನೆ ಹುಟ್ಟುತ್ತಿರುವನೆಂದೂ (ನಿತ್ಯಂ ವಾ ಮೃತಂ) ಯಾವಾಗಲೂ ಸಾಯುತ್ತಿರುವವನೆಂದೂ (ಮನ್ಯಸೇ) ತಿಳಿಯುವೆಯಾದರೆ, (ಮಹಾಬಾಹೋ) ಉತ್ತಮ ಕ್ಷತ್ರಿಯನಾದ ಅರ್ಜುನನೆ, (ತಥಾಪಿ) ಹಾಗಾದರೂ ಕೂಡ (ತ್ವಂ) ನೀನು (ಏವಂ) ನಾನು ಇವರನ್ನು ಕೊಲ್ಲುವೆನೆಂದೂ ನನ್ನಿಂದ ಇವರು ಸಾಯುವರೆಂದೂ ಹೀಗೆ (ಶೋಚಿತುಂ ನ ಅರ್ಹಸಿ) ವ್ಯಥೆ ಪಡಬಾರದು

ಏಕೆಂದರೆ:—

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥**

ನೀನು ಆತ್ಮಸ್ವರೂಪದ ನಿಜವನ್ನು ತಿಳಿಯದೆ ಬರೀ ಶರೀರವನ್ನೇ ಆತ್ಮವೆಂದು ತಿಳಿದುಕೊಂಡು ಭೀಷ್ಮಾದಿಗಳ ಶರೀರವು ಸಾಯುವದನ್ನು ನೋಡಿ ಭೀಷ್ಮಾದಿಗಳೇ ನೋವನ್ನನುಭವಿಸುತ್ತ ಸಾಯುವರೆಂದೂ ಮತ್ತು ಭೀಷ್ಮಾದಿಗಳು ಮುಂದೆ ಇಲ್ಲದೆ ಹೋಗುವರೆಂದೂ ತಿಳಿದಿದ್ದ ಪಕ್ಷದಲ್ಲಿ (ಜಾತಸ್ಯ ಹಿ) ಹುಟ್ಟಿದಂಥ ದೇಹಾದಿಗಳಿಗಾದರೊ (ಮೃತ್ಯುಃ) ಸಾವು (ಧ್ರುವಃ) ತಪ್ಪಿದ್ದಲ್ಲ ನೀನು ಅವನ್ನು ಕೊಲ್ಲದೆ ಹೋದರೂ ಅವು ತಾವೇ ಆದರೂ ಅವಶ್ಯವಾಗಿ ಸತ್ತೇ ಸಾಯುವವು. ಜಗತ್ತಿನಲ್ಲಿ ಯಾವ ದೇಹವೂ ನೆಲೆಯಾಗಿ ಉಳಿಯುವದಿಲ್ಲ. ಇನ್ನು ಆತ್ಮನನ್ನು ದೇಹಕ್ಕಿಂತ ಬೇರೆಯೆಂದೂ ಆ ಆತ್ಮವು ದೇಹವನ್ನು ಬಿಡುತ್ತಲೂ ತೆಗೆದುಕೊಳ್ಳುತ್ತಲೂ ಇರುವದೆಂದೂ ತಿಳಿದು ಆ ಆತ್ಮಕ್ಕೆ ದೇಹವನ್ನು ಬಿಡುವಾಗಿನ ವ್ಯಥೆಯೂ ಅಲ್ಲದೆ ಮತ್ತೆ ದೇಹವನ್ನು ಪಡೆಯುವಾಗಿನ ವ್ಯಥೆಯೂ ಆಗುವದೆಂದು ತಿಳಿದಿದ್ದ ಪಕ್ಷದಲ್ಲಿಯೂ (ಮೃತಸ್ಯ ಚ)

ಸತ್ತವರಿಗೂ (ಜನ್ಮ) ಮತ್ತೆ ಹುಟ್ಟುವದು (ಧ್ರುವಂ ಚ) ತಪ್ಪತಕ್ಕದ್ದಲ್ಲವಾಗಿಯೇ ಇರುವದು. ಅವರವರು ಮಾಡಿದ ಕರ್ಮದ ಫಲಗಳನ್ನು ಅನುಭವಿಸುವದಕ್ಕಾಗಿ ಅವರು ಮತ್ತೆ ಹುಟ್ಟಿಯೇ ತೀರಬೇಕು- (ತಸ್ಮಾತ್) ಆದ್ದರಿಂದ (ಅಪರಿಹಾರ್ಯೇ) ತಪ್ಪಿಸುವದಕ್ಕೆ ಬರದೆ ಇರುವಂಥ (ಅರ್ಥೇ) ಸಂಗತಿಗಳ ವಿಷಯವಾಗಿ (ತ್ವಂ) ನೀನು (ಶೋಚಿತುಂ ನ ಅರ್ಹಸಿ) ವ್ಯಥೆಪಡಬಾರದು.

ವ್ಯಥೆಪಡಬಾರದೆಂಬದಕ್ಕೆ ಮತ್ತೊಂದು ಕಾರಣವೇನೆಂದರೆ .—

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ |**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**

(ಭಾರತ) ಅರ್ಜುನನೆ, ಕೇಳು. (ಭೂತಾನಿ) ಪಂಚಭೂತಗಳಿಂದಾಗಿರುವ ದೇಹ ಮೊದಲಾದವುಗಳನ್ನು ಪಡೆದಿರುವ ಭೀಷ್ಮದ್ರೋಣರೇ ಮೊದಲಾದ ಎಲ್ಲ ಪ್ರಾಣಿಗಳೂ (ಅವ್ಯಕ್ತಾದೀನಿ) ಹುಟ್ಟುವದಕ್ಕೆ ಮೊದಲು ಕಾಣಬರದೆ ಇದ್ದ ಸ್ಥಿತಿಯಲ್ಲಿದ್ದೇ ಇದ್ದವರು ಈಗ (ವ್ಯಕ್ತಮಧ್ಯಾನಿ) ಹುಟ್ಟಿಗೂ ಸಾವಿಗೂ ನಡುವೆ ಕಾಣುತ್ತಲೇ ಇರತಕ್ಕವರು. ಮುಂದೆ (ಅವ್ಯಕ್ತನಿಧನಾನಿ ಏವ) ಸತ್ತಮೇಲೆ ಕಾಣಬರದಂತೆಯೇ ಆಗತಕ್ಕವರು. ಮೊದಲೂ ಕೊನೆಗೂ ಇಲ್ಲದ ಕನಸಿನ ಅಥವಾ ಇಂದ್ರಜಾಲದ ಜಗತ್ತುಗಳು ನಡುವೆ ಕಂಡರೂ ಇಲ್ಲದ ಹಾಗೆಯೇ ಎಂಬುದು ಎಲ್ಲರ ಅನುಭವದಲ್ಲಿಯೂ ಇದೆಯಷ್ಟೆ (ತತ್ರ) ಇಂಥ ತೋರಿಕೆಯ ಪ್ರಾಣಿಗಳ ವಿಷಯದಲ್ಲಿ (ಪರಿದೇವನಾ) ದುಃಖವು (ಕಾ) ಎಲ್ಲಿಯದು? ಕನಸಿನಲ್ಲಿ ಅಥವಾ ಇಂದ್ರಜಾಲದಲ್ಲಿ ಕಾಣುವವರ ಸಾವಿಗೆ ಯಾರು ಅಳುತ್ತಾರೆ?

ಈ ಆತ್ಮಸ್ವರೂಪದ ಜ್ಞಾನವು ತಿಳಿಯುವದಕ್ಕೆಷ್ಟು ಕಷ್ಟವಾಗಿರುವದೆಂದರೆ :—

ಆಶ್ಚರ್ಯವತ್ಪಶ್ಯತಿ ಕಶ್ಚಿದೇನ
ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಽಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯ ॥

ಜಗತ್ತಿನಲ್ಲಿ 'ನಾನು, ನಾನು' ಎಂದೆಲ್ಲರೂ ವ್ಯವಹರಿಸುತ್ತಾರಾದರೂ ಆ 'ನಾನು, ನಾನು' ಎಂಬ ಮಾತಿನ ಅರ್ಥವಾದ ಆತ್ಮನ ನಿಜಸ್ಥಿತಿ ಯಾರಿಗೂ ತಿಳಿದಿರುವದಿಲ್ಲ ತಾನು ಯಾರೆನ್ನುವದು ತನಗೆ ತಿಳಿಯದೆನ್ನುವದೇ ಒಂದು ದೊಡ್ಡ ಆಶ್ಚರ್ಯ ಈ ಸ್ವರೂಪ ಜ್ಞಾನವು ಶ್ರುತಿಯಿಂದ ಮತ್ತು ಗುರುಗಳಿಂದ ತಿಳಿಯಬೇಕಾಗಿರುವದು. (ಕಶ್ಚಿತ್) ಅನೇಕ ಜನ್ಮಗಳಲ್ಲಿ ಹೆಚ್ಚಿನ ಆರಾಧನೆಯನ್ನು ಚೆನ್ನಾಗಿ ನಡೆಸಿ ಈಶ್ವರನ ಅನುಗ್ರಹಕ್ಕೆ ಪಾತ್ರನಾದ ಯಾವನೋ ಒಬ್ಬನು (ಏನಂ) ಈ ಆತ್ಮನನ್ನು* (ಆಶ್ಚರ್ಯವತ್) ಇಂದ್ರಜಾಲ ಮೊದಲಾದ ಕಡೆಯಲ್ಲಿ ಹಿಂದೆ ಎಂದೂ ಕಾಣದೆ ಇದ್ದ ಆಶ್ಚರ್ಯಕರವಾದ ಪದಾರ್ಥಗಳನ್ನು ಕಾಣುವ ಹಾಗೆ (ಪಶ್ಯತಿ) ನೋಡುತ್ತಾನೆ. ಏಕೆ ಆಶ್ಚರ್ಯವೆಂದರೆ ಎಲ್ಲೆಲ್ಲಿಯೂ ಇದ್ದರೂ ಎಲ್ಲಿಯೂ ಕಾಣುವದಿಲ್ಲ, ಚೈತನ್ಯರೂಪನಾದರೂ ಜಡರೂಪನಾಗಿ ಕಾಣುತ್ತಿರುವನು; ವಿಕಾರವಿಲ್ಲದವನಾದರೂ ವಿಕಾರವುಳ್ಳವನಾಗಿ ತೋರುವನು ಇಂಥ ಆತ್ಮನನ್ನು ಕಾಣುವವರೇ ಕಡಿಮೆ ಕಂಡರೂ ಬಹುಜನ ತಮ್ಮಷ್ಟಕ್ಕೆ ತಾವು ಆ ಆನಂದದಲ್ಲಿ ಮುಳುಗಿ ಹೋಗಿರುವರೇ ಹೊರತು ಇದನ್ನು ಇತರರಿಗೆ ತಿಳಿಸಬೇಕೆಂದು ದೀಕ್ಷೆಯನ್ನು ವಹಿಸುವವರು ಇನ್ನೂ ಕಡಿಮೆ. ಶುಕರಿಗೆ ವ್ಯಾಸರು ಸಾಕಾಗದೆ ಜ್ಞಾನೋಪದೇಶಕ್ಕೆ ಜನಕನ ಬಳಿಗೆ ಹೋಗಬೇಕಾಯಿತಂತೆ ಆದ್ದರಿಂದ (ತಥೈವ ಚ)

---

* (ಕಶ್ಚಿತ್ ಏನಂ ಪಶ್ಯತಿ) ಯಾವನೋ ಒಬ್ಬನು ಈ ಆತ್ಮನನ್ನು ನೋಡುತ್ತಾನಲ್ಲ! ಅವನು (ಆಶ್ಚರ್ಯವತ್) ಆಶ್ಚರ್ಯಕ್ಕೆ ಸಮಾನನು. ಹಾಗೆಯೇ ಹೇಳುವವನೆಂದರೂ ಕೇಳುವವನೆಂದರೂ ಆಶ್ಚರ್ಯವೆ ಏಕೆಂದರೆ ಅಂಥವರು ಬಹು ಕಡಿಮೆಯಾದ್ದರಿಂದ-ಎಂದೂ ಒಬ್ಬರು ಅರ್ಥವನ್ನು ಮಾಡಿದ್ದಾರೆ.

ಆತ್ಮಸ್ವರೂಪವನ್ನು ಹೇಗೆ ಎಲ್ಲಿಯೋ ಒಬ್ಬನು ತಿಳಿದಿರುವನೊ ಹಾಗೆ (ಅನ್ಯಃ) ಮಾತಿನಲ್ಲಿ ಕುಶಲನಾದ ಯಾವನೋ ಒಬ್ಬನು (ಆಶ್ಚರ್ಯವತ್) ಆಶ್ಚರ್ಯವಾದ ವಿಷಯವನ್ನು ಹೇಳುವಂತೆ (ವದತಿ) ಹೇಳುತ್ತಾನೆ. ಆಶ್ಚರ್ಯವೇಕೆಂದರೆ ಮಾತಿನಿಂದ ತಿಳಿಸುವುದಕ್ಕೆ ಬರುವ ವಿಷಯದಲ್ಲಿ ಉಪದೇಶವು ಒಪ್ಪುತ್ತದೆ * ಆತ್ಮಜ್ಞಾನವು ಮಾತಾಡದೆ ಉಪದೇಶಿಸತಕ್ಕದ್ದು ಮಾತಿಗೆ ನಿಲುಕದ್ದರಿಂದಲೇ ಆಶ್ಚರ್ಯದಂತೆ ಹೇಳಿದಂತಾಗುವುದು ಒಂದು ಪಕ್ಷ ಹೀಗೆ ಹೇಳುವವರೂ ಹೊರಟರೂ ಈ ವಿಚಾರವನ್ನು ಕೇಳುವವರು ಬಹು ಕಡಿಮೆ. ಏಕೆಂದರೆ ಬರಬರುತ್ತ ಜನರೆಲ್ಲರೂ ಪ್ರತ್ಯಕ್ಷಪ್ರಮಾಣಕ್ಕೆ ಮರುಳಾಗುತ್ತಿರುವರೇ ಹೊರತು ಶಾಸ್ತ್ರಪ್ರಮಾಣದ ಕಡೆಗೆ ಒಲಿಯುವದಿಲ್ಲ. ಒಲಿದ ಕೆಲವರು ವಿಷಯ ಸುಖಗಳನ್ನು ಕೊಡುವ ಕಾಮ್ಯಕರ್ಮಗಳಲ್ಲಿ ಉತ್ಸಾಹಗೊಳ್ಳುವರೇ ಹೊರತು ಇತ್ತ ಕಡೆಗೆ ಕಣ್ಣು ಹಾಕುವುದಿಲ್ಲ. * ಹಾಗೆ ಕಣ್ಣು ಹಾಕಿದ ಮೇಲೆ ದೇವತೆಗಳ ಕಣ್ಣು ಕೆಂಪಾಗುವದು ಬೇರೆ ಮನುಷ್ಯರು ಬ್ರಹ್ಮವನ್ನು ತಿಳಿದುಬಿಟ್ಟರೆ ಅವರು ತಮಗಿಂತ ದೊಡ್ಡವರೆನಿಸಿಕೊಳ್ಳುವರೆಂದು ದೇವತೆಗಳು ಅವರಿಗೆ ಅಡ್ಡಿಗಳನ್ನು ತಂದೊಡ್ಡುವರು (ಅನ್ಯಃ) * ಆ ಅಡ್ಡಿಗಳನ್ನು ಹಿಮ್ಮೆಟ್ಟಿಸಿದ ಯಾವನೋ ಒಬ್ಬನು ( ಏನಂ ) ಈ ಆತ್ಮನನ್ನು ( ಆಶ್ಚರ್ಯವಚ್ಚ ) ಆಶ್ಚರ್ಯಕರವಾದ್ದನ್ನು ಕೇಳುವಂತೆಯೇ (ಶೃಣೋತಿ) ಕೇಳುವನು. (ಏನಂ) ಈ ಆತ್ಮನ ವಿಷಯವನ್ನು (ಶ್ರುತ್ವಾಽಪಿ) ಕೇಳಿದರೂ ಕೂಡ (ಕಶ್ಚಿತ್) ಯಾವನೊಬ್ಬನೂ ( ನಚೈವ ವೇದ ) * ತಿಳಿಯುವುದೇ ಇಲ್ಲ ಮನಸ್ಸಿಗೆ

---

* " ಅವಚನೇನೈವ ಪ್ರೋವಾಚ "–ಮೌನದಿಂದಲೇ ಹೇಳಿದನು–ಶ್ರು

* " ಯದೇತದ್ಬ್ರಹ್ಮ ಮನುಷ್ಯಾ ವಿದುಸ್ತದೇಷಾಂ ದೇವನಾಮ ಪ್ರಿಯಮ್ " ಮನುಷ್ಯರು ಬ್ರಹ್ಮನನ್ನು ತಿಳಿಯುವುದು ಈ ದೇವತೆಗಳಿಗೆ ಹಿತವಲ್ಲ–ಶ್ರು

* " ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ " – ಬಹುಜನಕ್ಕೆ ಕೇಳುವದಕ್ಕೆ ಕೂಡ ಸಿಕ್ಕುವದಿಲ್ಲ –ಶ್ರು.

* " ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ " – ಕೇಳಿದವರಾದರೂ ಕೂಡ ಬಹುಜನರು ಈ ಆತ್ಮನನ್ನು ತಿಳಿಯಲಿಲ್ಲ–ಶ್ರು

ಜ್ಞಾನವಾಗದಂತೆ ಪಾಪಗಳು ತಡೆಯಾಗಿರುವವು. ಇಂದ್ರ, ವಿರೋಚನ -- ಎಂಬಿಬ್ಬರೂ ಆತ್ಮಸ್ವರೂಪವನ್ನು ತಿಳಿಯಲು ಬ್ರಹ್ಮನ ಹತ್ತಿರಕ್ಕೆ ಹೋದರೂ ನೂರಾರುವರ್ಷ ಬ್ರಹ್ಮಚರ್ಯೆಯಲಿದ್ದು ಗುರು ಸೇವೆಯನ್ನು ಮಾಡಿದ ಮೇಲೆ ಪಾಪವೆಲ್ಲ ಹೋಗಿ ಇಂದ್ರನಿಗೆ ಜ್ಞಾನವಾಯಿತು. ವಿರೋಚನನಿಗೆ ಆಗಲೇ ಇಲ್ಲ ಜಡಭರತನು ಎಷ್ಟೋಸಲ ಆತ್ಮವಿಚಾರವನ್ನು ಮಾಡಿದರೂ ಮೂರು ಜನ್ಮಗಳನ್ನೆತ್ತಬೇಕಾಯಿತು. ಜನ್ಮಾಂತರವನ್ನು ಕೊಡುವಂಥ ಪ್ರಾರಬ್ಧವು ಪ್ರಬಲವಾಗಿದ್ದದರಿಂದ ವಾಮದೇವನು ಶ್ರವಣಮಾಡಿದ್ದರೂ ಗರ್ಭಕ್ಕೆ || ಬರುತ್ತಲೇ ಜ್ಞಾನವಾಯಿತು.

ಇದರಿಂದಾದ ನಿರ್ಣಯವೇನೆಂದರೆ —

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥೩೦॥**

(ಭಾರತ) ಅರ್ಜುನನೆ, ಕೇಳು. ದೇಹಗಳಂತು ಎಂದಿದ್ದರೂ ನಾಶ ವಾಗತಕ್ಕವುಗಳೆಂದು ಕಂಡೇ ಇರುವೆಯಷ್ಟೆ. (ಸರ್ವಸ್ಯ) ಎಲ್ಲ ಪ್ರಾಣಿಗಳ ಮತ್ತು ಎಲ್ಲ ಮರ ಮೊದಲಾದವುಗಳ ( ದೇಹೇ ) ಶರೀರದಲ್ಲಿರುವ (ಅಯಂ) ಈ ( ದೇಹೀ ) ದೇಹವುಳ್ಳ ಆತ್ಮನು ( ನಿತ್ಯಂ ) ಎಂದಿಗೂ ( ಅವಧ್ಯಃ ) ಕೊಲೆಗೊಳಗಾಗತಕ್ಕವನಲ್ಲ. (ತಸ್ಮಾತ್) ದೇಹವು ಉಳಿಯುವುದಿಲ್ಲವಾದ್ದ ರಿಂದಲೂ ಆತ್ಮವು ಸಾಯುವದಲ್ಲವಾದ್ದರಿಂದಲೂ (ಸರ್ವಾಣಿ ಭೂತಾನಿ) ಭೀಷ್ಮದ್ರೋಣರೇ ಮೊದಲಾದ ಯಾರನ್ನು ಕುರಿತೂ ( ತ್ವಂ ) ನೀನ ( ಶೋಚಿತುಂ ನ ಅರ್ಹಸಿ ) ವ್ಯಥೆಪಡಬಾರದು

ಕಾಲಗತಿಯಿಂದಾದ ಸಾವಿಗೆ ಈ ಸಮಾಧಾನವು ಒಪ್ಪಬಹುದೇ ಹೊರತು ಆತ್ಮಹತ್ಯವೂ ಮತ್ತು ಮತ್ತೊಬ್ಬರನ್ನು ಕೊಲ್ಲುವದೂ ಪಾತಕ ಗಳಲ್ಲಿಯೇ ಎಣಿಕೆಯಾಗಿರುವವಲ್ಲ ! ಯುದ್ಧದಲ್ಲಿ ಅವರನ್ನು ಕೊಲ್ಲುವದು ಹೇಗೆ ? ಎಂದರೆ —

---

|| " ಗರ್ಭಸ್ಥ ಏವ ವಾಮದೇವಃ ಪ್ರತಿಪೇದೇ " - ವಾಮದೇವನು ಗರ್ಭದಲ್ಲಿಯೇ ತಾನು ಸರ್ವಸ್ವರೂಪನೆಂದು ತಿಳಿದನು- ಶ್ರು.

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯನ ವಿದ್ಯತೇ।**

ಯಾರೂ ಯಾರನ್ನೂ ನೋಯಿಸಬಾರದೆಂಬುದು ಸಾಮಾನ್ಯಧರ್ಮ. ಯುದ್ಧದಲ್ಲಿ ಮಲೆತು ನಿಂದವರನ್ನು ಕೊಲ್ಲಬೇಕೆನ್ನುವದು ಕ್ಷತ್ರಿಯವರ್ಣಕ್ಕೆ ವಿಹಿತವಾದ ವಿಶೇಷಧರ್ಮವು ಸಾಮಾನ್ಯವಾಗಿ ಹೇಳಿದ ಮಾತಿಗಿಂತ ಒಂದು ವಿಶೇಷಸಂದರ್ಭದಲ್ಲಿ ಹೇಳಿದ ಮಾತಿಗೆ ಬೆಲೆ ಹೆಚ್ಚು. (ಸ್ವಧರ್ಮಮಪಿ ಚ) ಧರ್ಮವನ್ನೂರ್ಜಿತಗೊಳಿಸುವದಕ್ಕಾಗಿಯೂ ಪ್ರಜೆಗಳನ್ನು ಕಾಪಾಡುವದಕ್ಕಾಗಿಯೂ ಕ್ಷತ್ರಿಯನಾದ ನಿನಗೆ ಯುದ್ಧವು ನಿನ್ನ ಧರ್ಮವೆಂಬುದನ್ನಾದರೂ ( ಅವೇಕ್ಷ್ಯ ) ನೋಡಿ ( ನ ವಿಕಂಪಿತುಮರ್ಹಸಿ ) ನೀನು ಕದಲಬಾರದು. ರಣದಿಂದ ಹಿಮ್ಮೆಟ್ಟುವದು ಕ್ಷತ್ರಿಯನಿಗೆ ದೊಡ್ಡ ಪಾಪವು. (ಹಿ) ಏಕೆಂದರೆ (ಕ್ಷತ್ರಿಯಸ್ಯ) ಕ್ಷತ್ರಿಯನಿಗೆ (ಧರ್ಮ್ಯಾತ್) ತನ್ನ ಸ್ವಭಾವಕ್ಕನುಗುಣವಾದ ಧರ್ಮವೆಂದು ವಿಹಿತವಾಗಿರುವಂಥ (ಯುದ್ಧಾತ್) ಯುದ್ಧವನ್ನು ಬಿಟ್ಟು (ಅನ್ಯತ್) ಬೇರ ( ಶ್ರೇಯಃ) ಶ್ರೇಯಸ್ಸು [ನ ವಿದ್ಯತೇ] ಇಲ್ಲ

ಇದನ್ನೆ ಹೆಚ್ಚಿನದೆಂದು ಹೇಳುವದೇಕೆಂದರೆ.—

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥೩೨॥**

ಸ್ವಜನರನ್ನು ಕೊಂದು ಹೇಗೆ ಸುಖಿಯಾದೇನೆಂದು ನೀ... ಹೇಳಿದ್ದೆಯಲ್ಲ! [ಪಾರ್ಥ] ಅರ್ಜನನೆ, ಕೇಳು. [ ಯದೃಚ್ಛಯಾ ಚ ] ನೀನು ಬಯಸದೇ ತಾನಾಗಿಯೇ [ಉಪಪನ್ನಂ] ಬಂದಿರುವಂಥ ಮತ್ತು [ಅಪಾವೃತಂ] ಹಾರಹೊಡೆದ [ಸ್ವರ್ಗದ್ವಾರಂ] ಸ್ವರ್ಗದ ಬಾಗಿಲಾಗಿರುವಂಥ[ಈದೃಶ್ಯಮ್] ಈ ಬಗೆಯಾದ [ಯುದ್ಧಂ] ಕದನವನ್ನು [ಸುಖಿನಃ] ಸುಖಕ್ಕೆ ಭಾಗಿಗಳಾದ [ಕ್ಷತ್ರಿಯಾಃ] ಕ್ಷತ್ರಿಯರು [ಲಭಂತೇ] ಪಡೆಯುತ್ತಾರೆ ಈ ಯುದ್ಧದಿಂದ ಭೀಷ್ಮದ್ರೋಣರೇ ಮೊದಲಾದವರೊಡನೆ ಯುದ್ಧಮಾಡಿದ ಯಶಸ್ಸು ಬರು

ವದು, ಗೆದ್ದರೆ ರಾಜ್ಯವು ಕೈ ಸೇರುವದು; ಯುದ್ಧದಲ್ಲಿ ಸತ್ತರೆ ವೀರಸ್ವರ್ಗ ವುಂಟಾಗುವದು. ಇವುಗಳಿಗಿಂತ ಇನ್ನೇನು ಸುಖಸಾಧನವು ಬೇಕು ?

ಹೀಗೆ ಯುದ್ಧವನ್ನು ಮಾಡುವದು ನಿನ್ನ ಕರ್ತವ್ಯವಾಗಿದ್ದರೂ,

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥**

[ಅಥ] ಯುದ್ಧವು ನನ್ನ ಕರ್ತವ್ಯವೆಂಬುದನ್ನು ಉಪೇಕ್ಷೆಮಾಡಿ [ತ್ವಂ] ನೀನು [ಇಮಂ] ಈ [ಧರ್ಮ್ಯಂ] ಧರ್ಮಸಂಮತವಾದಂಥ [ಸಂಗ್ರಾಮಂ] ಯುದ್ಧವನ್ನು [ನ ಕರಿಷ್ಯಸಿ ಚೇತ್] ಮಾಡುವದಿಲ್ಲವಾದರೆ [ತತಃ] ಅದರಿಂದ * [ಸ್ವಧರ್ಮಂ] ವೇದದಲ್ಲಿ ಹೇಳಿರುವಂತೆ ನೀನು ಕಟ್ಟಿಗೆ ಬಿದ್ದಿರುವ ನಿನ್ನಧರ್ಮವನ್ನು [ಕೀರ್ತಿಂಚ] ಈಶ್ವರನೊಡನೆ ಹೋರಾಡಿದವನೆಂಬುದೇ ಮುಂತಾದ ಕೀರ್ತಿಯನ್ನೂ [ಹಿತ್ವಾ] ಕಳೆದುಕೊಂಡು [ಪಾಪಂ] ಯುದ್ಧ ದಿಂದ ಹಿಮ್ಮೆಟ್ಟಿದ ದೋಷವನ್ನು [ಅವಾಪ್ಸ್ಯಸಿ] ಗಂಟುಹಾಕಿಕೊಳುತ್ತಿ ಆದ್ದರಿಂದ ಯುದ್ಧವನ್ನು ಮಾಡಿದರೆ ಪಾಪವು ಬರುವದೆಂದು ನೀನು ತಿಳಿದು ಕೊಂಡಿರುವದು ತಪ್ಪು ಯುದ್ಧವನ್ನು ಬಿಟ್ಟರೇ ನಿನಗೆ ಪಾಪ.

ಹೀಗೆ ನಿನ್ನನ್ನು ಧರ್ಮವೂ ಯಶಸ್ಸೂ ಕೈಬಿಡುವದಿಷ್ಟೇ ಅಲ್ಲ —

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥೩೪॥**

---

* ಅಥವಾ [ಸ್ವಧರ್ಮಂ] ಯುದ್ಧದಲ್ಲಿ ಹಿಮ್ಮೆಟ್ಟಬಾರದೆಂಬ ನಿನ್ನ ಧರ್ಮವನ್ನು (ಹಿತ್ವಾ) ಬಿಟ್ಟು ಓಡಿ ಹೋಗಿ ಕೌರವರ ಕೈಯಿಂದ ಸತ್ತು (ಪಾಪಂ) ಅವರ ಪಾಪಗಳನ್ನೆಲ್ಲ [ಅವಾಪ್ಸ್ಯಸಿ] ನೀನು ಹೊಂದುತ್ತಿ. ಏಕೆಂದರೆ ಯುದ್ಧದಲ್ಲಿ ಹಿಮ್ಮೆಟ್ಟಿದವನು ತಾನು ಮಾಡಿದ ಪುಣ್ಯಗಳನ್ನೆಲ್ಲ ಕಳೆದುಕೊಂಡು ತನ್ನ ಶತೃವಿನ ಪಾಪಗಳಿಗೆಲ್ಲ ಪಾಲುದಾರನಾಗುವನು.

[ಭೂತಾನಿ] ಜಗತ್ತಿನಲ್ಲಿರುವ ಎಲ್ಲರೂ [ಅವ್ಯಯಾಂ] ಎಂದೆಂದಿಗೂ ಕಡಿಮೆಯಾಗದೆ ಇರುವಂಥ [ತೇ] ನಿನ್ನ [ಅಕೀರ್ತಿಂ ಚಾಪಿ] ಹೇಡಿತನದ ಅಪಯಶಸ್ಸನ್ನು ಕೂಡ [ಕಥಯಿಷ್ಯಂತಿ] ಹೇಳಿಕೊಳ್ಳುತ್ತಿರುವರು. ದುರ್ಯೋಧನನಿಗಾದರೂ ನಿರಪರಾಧಿಗಳಾದ ನಿಮ್ಮ ಮೇಲೆ ಕೈಮಾಡಿದನೆಂಬ ಕೆಟ್ಟ ದೂರು ಬರುವಂತೆ ನಿನಗೂ ಒಂದು ದೂರು ಬಂದರೆ ಬಾಧಕವೇನೆಂದು ನೀನು ಉಪೇಕ್ಷಿಸುವ ಹಾಗಿಲ್ಲ ದುರ್ಯೋಧನನು ಹುಟ್ಟಿದಂದಿನಿಂದಲೂ ಅಪಕೀರ್ತಿಯ ರೂಪನೇ ಆಗಿರುವುದರಿಂದ ಕತ್ತಲೆಯಲ್ಲಿ ಮಸಿಯ ಕಲೆಯು ಕಾಣಿಸದಿರುವಂತೆ ಅವನಿಗೆ ಆ ಅಪಕೀರ್ತಿಯು ಎದ್ದು ಕಾಣುವದೇ ಇಲ್ಲ. [ಸಂಭಾವಿತಸ್ಯಚ] ಒಳ್ಳೆಯೋಗ್ಯನೆಂದು ಹೆಸರುಗೊಂಡಿರುವವನಿಗಾದರೊ [ಅಕೀರ್ತಿಃ] ಅಪಯಶಸ್ಸೆಂಬುವದು [ಮರಣಾತ್] ಸಾವಿನದುಃಖಕ್ಕಿಂತಲೂ [ಅತಿರಿಚ್ಯತೇ] ಹೆಚ್ಚಿನದಾಗಿರುವದು ಏಕೆಂದರೆ ಅಕೀರ್ತಿಯನ್ನು ಪಡೆದ ಮನುಷ್ಯನನ್ನು ಈ ಲೋಕದ ಜನರು ಹೀಯಾಳಿಸುತ್ತಿರುವರಲ್ಲದೆ ಅವನು ಸತ್ತು ಬೇರೆ ಲೋಕಕ್ಕೆ ಹೋದರೂ ಅವನನ್ನು ಅಲ್ಲಿ ದೇವರ್ಷಿಗಳೇ ಮೊದಲಾದವರೂ ಹೇಡಿಯೆಂದು ಕಡೆಗಾಣುವರು ಇಷ್ಟೇ ಅಲ್ಲದೆ ಈ ಕೆಟ್ಟ ಹೆಸರು ಅವನೊಬ್ಬನಿಗೆ ಮಾತ್ರವೇ ಅಂಟಿಕೊಂಡಿರದೆ ಅವನ ವಂಶದವರೆನ್ನೆಲ್ಲಿ ಇಲ್ಲಿಯವರು ಹೇಡಿಯ ವಂಶದವರೆಂದು ಅಪಹಾಸ್ಯ ಮಾಡುವರು. ಆದ್ದರಿಂದ ಅಪಯಶಸ್ಸಿನ ಕೆಟ್ಟಪರಿಣಾಮವು ಮರಣಕ್ಕಿಂತ ಹೆಚ್ಚು ತೀವ್ರವಾದದ್ದು

ಕರುಣೆಯಿಂದ ಹಿಮ್ಮೆಟ್ಟುವ ನನಗೆ ಈ ಕೆಟ್ಟ ಹೆಸರು ಹೇಗೆ ಬಂದೀತೆಂದರೆ.–

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ**
**ಲಾಘವಮ್ ॥೩೫॥**

ನೀನು ಕರುಣೆಯಿಂದ ಹಿಮ್ಮೆಟ್ಟಿದನೆಂದು ಯಾರೂ ತಿಳಿಯುವುದಿಲ್ಲ [ಭಯಾತ್] ಕರ್ಣ ಮೊದಲಾದವರ ಹೆದರಿಕೆಯಿಂದ [ರಣಾತ್] ಯುದ್ಧದಿಂದ [ಉಪರತಂ] ಹಿಮ್ಮೆಟ್ಟಿದನೆಂದು [ತ್ವಾಂ] ನಿನ್ನನ್ನು [ಮಹಾರ

ದುರ್ಯೋಧನನೇ ಮೊದಲಾದ ಪರಾಕ್ರಮಿಗಳು [ಮಂಸ್ಯಂತೇ]ಎಣಿಸುತ್ತಾರೆ. [ಯೇಷಾಂ ಚ] ಆ ದುರ್ಯೋಧನ ಮೊದಲಾದವರಿಗೆ ಕೂಡ [ತ್ವಂ] ನೀನು [ಬಹುಮತೋ] ಶೌರ್ಯ, ಧೈರ್ಯ-ಮೊದಲಾದ ಬಹಳ ಗುಣಗಳುಳ್ಳವ ನೆಂದು [ಭೂತ್ವಾ] ಎಣಿಸಿಕೊಂಡಿದ್ದು, ಈಗ [ಲಾಘವಮ್] ಕೀಳೆನಿಸಿಕೊಳ್ಳು ವಿಕೆಯನ್ನು [ಯಾಸ್ಯಸಿ] ಹೊಂದುತ್ತಿ.

ಮತ್ತೇನೆಂದರೆ .—

**ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥೩೬॥**

ಹೊರಗಣಿಂದ ಸಹಾಯಕ್ಕೆಂದು ಬಂದಿರುವ ರಾಜರು ನಿನ್ನನ್ನು ಹೇಡಿ ಯೆಂದು ತಿಳಿದುಕೊಂಡರೂ ಯುದ್ಧದ ಭಾರವಿಳಿದದ್ದೇ ಸಾಕೆಂದು ತಮ್ಮಷ್ಟಕ್ಕೆ ತಾವು ಸುಮ್ಮನಿರಬಹುದು, (ತವ) ನಿನ್ನ (ಅಹಿತಾಃ) ಹಗೆಗಳಾದ ದುರ್ಯೋಧನ ಮೊದಲಾದವರು (ತವ) ನಿನ್ನ (ಸಾಮರ್ಥ್ಯಂ) ಪರಾಕ್ರಮ ವನ್ನು (ನಿಂದತಃ) ಜರಿಯುವವರಾಗಿ (ಬಹೂನ್) ತಮ್ಮ ಬಾಯಿ ತೀಟಿ ಹೋಗುವವರೆಗೂ ಅನೇಕವಾದ [ಅವಾಚ್ಯವಾದಾಂಶ್ಚ] ಆಡಬಾರದ ಮಾತು ಗಳನ್ನು ಕೂಡ [ವದಿಷ್ಯಂತಿ] ಹೇಳುವರು. [ತತಃ] ಆ ಕೇಳಬಾರದ ಮಾತನ್ನು ಕೇಳುವದಕ್ಕಿಂತ [ದುಃಖತರಂ] ಹೆಚ್ಚು ದುಃಖಕರವಾದುದು [ಕಿಂ ನು] ಮತ್ತೇನಿದೆ?

ಆದ್ದರಿಂದ ಕರ್ಣನೇ ಮೊದಲಾದವರೊಡನೆ ಯುದ್ಧವನ್ನು ಮಾಡಿದರೆ.—

**ಹತೋ ವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇಮಹೀಮ್।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥೩೭॥**

[ಹತೋ ವಾ] ಒಂದು ಪಕ್ಷ ನೀನು ಯುದ್ಧದಲ್ಲಿ ಸತ್ತರೆ (ಸ್ವರ್ಗಂ) ವೀರ ಸ್ವರ್ಗವನ್ನು (ಪ್ರಾಪ್ಸ್ಯಸೇ) ಪಡೆಯುತ್ತಿ. (ಜಿತ್ವಾವಾ) ಹಾಗಲ್ಲದೆ ನೀನು

ಕರ್ಣನೇ ಮೊದಲಾದವರನ್ನು ಗೆದ್ದರೆ (ಮಹೀಂ) ಏಕಚ್ಛತ್ರಾಧಿಪತ್ಯವನ್ನು (ಭೋಕ್ಷ್ಯಸೇ) ಅನುಭವಿಸುತ್ತಿ. ಯುದ್ಧವನ್ನು ಮಾಡುವದು, ಬಿಡುವದು— ಎಂಬೆರಡರಲ್ಲಿ ಯಾವದು ಮೇಲೆಂಬದನ್ನು ತಿಳಿಯೆನೆಂದು ಹೇಳಿದೆಯಲ್ಲ ! ಈಗ ನೋಡು, ಯುದ್ಧವನ್ನು ಮಾಡುವದರಿಂದ ಎರಡು ಬಗೆಯಿಂದ ನೋಡಿದರೂ ಲಾಭವೇ ಆಗಿರುವದು. (ತಸ್ಮಾತ್) ಈ ಕಾರಣದಿಂದ-(ಕೌಂತೇಯ) ಅರ್ಜುನನೆ, ಕೇಳು— (ಕೃತನಿಶ್ಚಯಃ) ಹಗೆಗಳನ್ನು ಬಲಿಹಾಕುತ್ತೇನೆಂದೂ ಇಲ್ಲದಿದ್ದರೆ ಪ್ರಾಣವನ್ನಾದರೂ ಬಿಡುವೆನೆಂದೂ ಮನಸ್ಸಿನಲ್ಲಿ ಗಟ್ಟಿಮಾಡಿಕೊಂಡು (ಯುದ್ಧಾಯ) ಯುದ್ಧಕ್ಕಾಗಿ (ಉತ್ತಿಷ್ಠ) ಏಳು. ಈ ಸಮಯದಲ್ಲಿ ನೀನು ಏನು ಮಾಡುವದೊಳ್ಳೆಯದೆಂಬದನ್ನು ಹೇಳೆಂದು ನನ್ನನ್ನು ಕೇಳಿದ್ದೆಯಲ್ಲ! ಇದೇ ನನ್ನ ಅಭಿಪ್ರಾಯ.

ಸ್ವರ್ಗದ ಬಯಕೆಯಿಂದಾಗಲಿ ರಾಜ್ಯದ ಬಯಕೆಯಿಂದಾಗಲಿ ಕಾದಿದರೆ ಸ್ವಾರ್ಥಕ್ಕಾಗಿ ಪರರ ಹಾನಿಯನ್ನು ಮಾಡುವ ಇದರಲ್ಲಿ ಪಾಪವುಂಟಾಗುವದೆಂದರೆ ಆ ಪಾಪವೆಂಬ ಹುಳಿಯನ್ನು ಕಶೀಮಾಡುವ ಉಪಾಯವನ್ನು ಹೇಳುತ್ತೇನೆ ಕೇಳು:—

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥೩೮॥**

ಫಲವನ್ನು ಬಯಸಿ ಮಾಡುವವರಿಗೆ ಆ ಫಲದ ಜೊತೆಗೆ ಪರರನ್ನು ನೋಯಿಸಿದ ಪಾಪವೂ ಬರುವದು ಫಲವನ್ನು ಬಯಸದೆ ತನ್ನ ಕರ್ತವ್ಯವೆಂದು ತಿಳಿದು ಮಾಡಿದ ಪಕ್ಷದಲ್ಲಿ - ಹಣ್ಣಿಗಾಗಿ ಮಾವಿನಮರವನ್ನು ಹಾಕಿದವರಿಗೆ ಅವರು ಬಯಸದಿದ್ದರೂ ನೆರಳೂ ಸುವಾಸನೆಯೂ ದೊರೆಯುವಂತೆ-ಆ ಫಲವೂ ದೊರೆಯುವದಲ್ಲದೆ ತನ್ನ ಕರ್ತವ್ಯವೂ ನೆರವೇರುವದು. ಆದ್ದರಿಂದ (ಸುಖದುಃಖೇ) ಸುಖ, ದುಃಖ - ಎಂಬೆರಡರ ಜೋಡಿಯನ್ನೂ (ಲಾಭಾಲಾಭೌ) ಲಾಭ, ನಷ್ಟ, ಎಂಬೆರಡರ ಜೋಡಿಯನ್ನೂ (ಜಯಾಜಯೌ) ಗೆಲವು, ಸೋಲು, ಎಂಬೆರಡರ ಜೋಡಿಯನ್ನೂ (ಸಮೇಕೃತ್ವಾ) ಸಮವಾಗಿ ಮಾಡಿಕೊಂಡು- ಎಂದರೆ ಸುಖ, ಲಾಭ, ಜಯ ಇವುಗಳಾದವೆಂದು ಹಿಗ್ಗದೆ

ದುಃಖ ನಷ್ಟ, ಸೋಲು—ಇವುಗಳಾದವೆಂದು ತಗ್ಗದೆ ಸುಖ, ಲಾಭ, ಜಯ-ಇವುಗಳ ಮೇಲಿನ ಪ್ರೀತಿಯನ್ನೂ ದುಃಖ, ನಷ್ಟ, ಸೋಲು—ಇವುಗಳ ಮೇಲಿನ ಹಗೆತನವನ್ನೂ ಬಿಟ್ಟು—(ತತಃ) ಆಮೇಲೆ, ಇದು ನನ್ನ ಕರ್ತವ್ಯವೆಂಬ ಬುದ್ಧಿಯಿಂದ (ಯುದ್ಧಾಯ) ಯುದ್ಧಕ್ಕೆ (ಯುಜ್ಯಸ್ವ ಸನ್ನಾಹ ಮಾಡು. (ಏವಂ) ಹೀಗೆ ಮಾಡಿದರೆ (ಪಾಪಂ) ಪಾಪವನ್ನು (ನ ಅವಾಪ್ಸ್ಯಸಿ) ನೀನು ಪಡೆಯುವದಿಲ್ಲ.

ಇನ್ನು ಆ ಸಮಬುದ್ಧಿಯ ವಿಷಯವನ್ನು ವಿವರಿಸುತ್ತೇನೆ: ಕೇಳು.—

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ**
**ಪ್ರಹಾಸ್ಯಸಿ ॥೩೯॥**

(ಪಾರ್ಥ) ಅರ್ಜುನನೆ, ಕೇಳು. ತಪ್ಪುತಿಳಿವಳಿಕೆಯೂ ಅದರಿಂದ ಬೆಳದಿದ್ದ ದುಃಖವೂ ದೂರವಾಗುವದಕ್ಕಾಗಿ (ತೇ) ನಿನಗೆ (ಸಾಂಖ್ಯೇ) ಜಗತ್ತಿನಲ್ಲಿ ಬರೀ ತೋರಿಕೆಯ ಪದಾರ್ಥಗಳ ಗುಂಪನ್ನು ಬೇರ್ಪಡಿಸಿ ಯಾವಾಗಲೂ ನೆಲೆಯಾಗಿ ಇರುವ ವಸ್ತು ಯಾವದೆಂಬದನ್ನು ಅವುಗಳಿಂದ ಬಿಡಿಸಿ ತಿಳಿಯುವ ವಿಷಯದಲ್ಲಿ (ಏಷಾ) ಈ (ಬುದ್ಧಿಃ) ತಿಳಿವಳಿಕೆಯು (ಅಭಿಹಿತಾ) ಹೇಳಿದ್ದಾಯಿತು ಇನ್ನು ಯುದ್ಧವನ್ನು ಮಾಡೆಂದರೆ ಮನುಷ್ಯನು ಕರ್ಮಗಳನ್ನು ಮಾಡುವದರಿಂದಲೆ ಅವುಗಳ ಫಲಗಳನ್ನು ಅನುಭವಿಸುವದಕ್ಕಾಗಿ ಹುಟ್ಟುಸಾವುಗಳನ್ನು ಪಡೆಯುತ್ತಿರಬೇಕಾಗುವದೆಂದು ಹೆದರುತ್ತೀಯಷ್ಟೆ. (ಯಯಾ) ಯಾವ (ಬುದ್ಧ್ಯಾ) ತಿಳಿವಳಿಕೆಯಿಂದ (ಯುಕ್ತಃ) ಕೂಡಿದವನಾದರೆ (ಕರ್ಮಬಂಧಂ) ಕರ್ಮದಿಂದಾಗುವ ಹುಟ್ಟುಸಾವುಗಳ ತೊಡಕನ್ನು (ಪ್ರಹಾಸ್ಯಸಿ) ಕಳಚಿಕೊಳ್ಳುವೆಯೊ ಅಂಥ (ಯೋಗೇ ತು) ಜ್ಞಾನಸಾಧನವಾದ ಕರ್ಮಗಳನ್ನು ಮಾಡುವ ವಿಷಯದಲ್ಲಾದರೊ(ಇಮಾಂ) ಮುಂದೆ ಹೇಳುವ ಮಾತನ್ನು (ಶೃಣು) ಕೇಳು. ನೀನು ಕೇಳುತ್ತಲೇ ಇರುವೆಯಾದರೂ ಹೆಚ್ಚು ಲಕ್ಷ್ಯವನ್ನು ಕೊಡು.

ನಡೆವಳಿಕೆಯಲ್ಲಿ ಎಳ್ಳಷ್ಟು ಕೊರತೆಯಾದರೂ ಕರ್ಮಗಳು ವ್ಯರ್ಥವಾಗುವವೆಂಬದನ್ನು ನೆನೆಸಿಕೊಂಡು ಈಗ ಹಿಂಜರಿಯಬೇಡ ಏಕೆಂದರೆ.—

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥೪೦॥**

ಫಲದ ಬಯಕೆಯಿಂದ ಮಾಡುವ ಕರ್ಮಗಳು ಕೊರತೆಯ ಫಲವಾಗಿ ವ್ಯರ್ಥವಾಗಬಹುದು. (ಇಹ) ಈಗ ನಾನು ಹೇಳುವ ಕರ್ಮಯೋಗದಲ್ಲಿ (ಅಭಿಕ್ರಮನಾಶಃ) ಕಾಳುಕಡ್ಡಿಗಳನ್ನು ಬಿತ್ತಿದ ಮೇಲೆ ಮುಂದಿನ ಉಪಚಾರದಲ್ಲೇನಾದರೂ ಕೊರತೆಯಾದರೆ ಆ ಬಿತ್ತನೆಯ ಕೆಲಸವನ್ನು ಮೊದಲು ಮಾಡಿದ್ದು ವ್ಯರ್ಥವಾದಂತೆ ಕರ್ಮಯೋಗವನ್ನು ಮೊದಲು ಮಾಡಿದ್ದರ ವ್ಯರ್ಥತೆಯು (ನ ಅಸ್ತಿ) ಇಲ್ಲ ಫಲವನ್ನು ಬಯಸಿ ಮಾಡುವ ಯಜ್ಞ ಮೊದಲಾದ ಕರ್ಮಗಳಲ್ಲಿ ಏನಾದರೊಂದು ಕೊರತೆಯಾದರೆ ಮಾಡುವವನಿಗೆ ಅವರಿಂದೊಂದು ದೋಷವೇ ಬಂದು ಗಂಟುಬೀಳುವದು. ಈ ಕರ್ಮಯೋಗವಲ್ಲಿ (ಪ್ರತ್ಯವಾಯಃ) ನಡೆವಳಿಕೆಯ ಕೊರತೆಯಿಂದಾಗುವ ದೋಷವು (ನ ವಿದ್ಯತೇ) ಇಲ್ಲ. (ಅಸ್ಯ) ಈ (ಧರ್ಮಸ್ಯ) ಕರ್ಮಯೋಗವೆಂಬ ಧರ್ಮದ (ಸ್ವಲ್ಪಮಪಿ) ಸ್ವಲ್ಪವೇ ಸಾಗಿದರೂ, ಅದು ಮಾಡಿದವನಿಗೆ ಚಿತ್ತಶುದ್ಧಿಯನ್ನೂ ಜ್ಞಾನವನ್ನೂ ಕೊಟ್ಟು (ಮಹತಃ) ಹುಟ್ಟುಸಾವುಗಳೆಂಬ ದೊಡ್ಡ (ಭಯಾತ್) ಹೆದರಿಕೆಯಿಂದ ಬಿಡಿಸಿ (ತ್ರಾಯತೇ) ಕಾಪಾಡುತ್ತದೆ.

ಕರ್ಮಯೋಗಿಗಳಿಗಿರಬೇಕಾದ ತಿಳಿವಳಿಕೆಯೇನೆಂದರೆ:—

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥**

(ಕುರುನಂದನ) ಅರ್ಜುನನೆ, ಕೇಳು. (ಇಹ) ಈ ಕರ್ಮಯೋಗದಲ್ಲಿ (ವ್ಯವಸಾಯಾತ್ಮಿಕಾ) ಕರ್ಮದಿಂದ ಪಡೆಯುವ ಫಲಗಳೆಲ್ಲ ಮೂರುದಿನದ ಬಾಳಿನವುಗಳಾದ್ದರಿಂದ ಅವುಗಳ ಕಡೆಗೆ ಕಣ್ಣುಹಾಕುವದು ವ್ಯರ್ಥವೆಂದು ಆ ವಾಸನೆಗಳನ್ನೆಲ್ಲ ಹಿಮ್ಮೆಟ್ಟಿಸುವಂಥ ನಿರ್ಣಯ ಸ್ವರೂಪವಾದ (ಬುದ್ಧಿಃ)

ತಿಳಿವಳಿಕೆಯು (ಏಕಾ) ಏಕಮುಖವಾಗಿ ಆಗಿರುವದು. (ಅವ್ಯವಸಾಯಿನಾಮ್) ಆ ರೀತಿಯಲ್ಲಿ ವಿಚಾರದಿಂದ ನಿರ್ಣಯಕ್ಕೆ ಬರದೆ ಇರುವವರ (ಬುದ್ಧಯಃ) ತಿಳಿವಳಿಕೆಗಳು (ಬಹುಶಾಖಾಃ) ಬಗೆಬಗೆಯ ಫಲಗಳನ್ನು ಬಯಸುತ್ತ ಕಂಡಕಂಡ ಕಡೆಗೆ ತಿರುಗುವವರಿಂದ ಅನೇಕ ಕವಲುಳ್ಳವುಗಳಾಗಿ (ಅನಂತಾಶ್ಚ ಹಿ) ಲೆಕ್ಕವಿಲ್ಲದಷ್ಟಿರುವವು

ಫಲದ ಬಯಕೆಯಿಂದಾಗುವ ಅನನುಕೂಲವೇನೆಂದರೆ —

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ * ॥ ೪೨ ॥**
**ಕಾಮಾತ್ಮಾನಃ ಸ್ವರ್ಗಪರಾಃ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩ ॥**
**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥**

(ಪಾರ್ಥ, ಅರ್ಜುನನೆ ಕೇಳು (ಅವಿಪಶ್ಚಿತಃ) ವಿಚಾರಮಾಡಿ ತಾತ್ಪರ್ಯವನ್ನು ಗ್ರಹಿಸುವ ಯೋಗ್ಯತೆ ಇಲ್ಲದವರಾಗಿಯೂ (ವೇದವಾದರತಾಃ) ವೇದದಲ್ಲಿ ಅಭಿರುಚಿಯನ್ನು ಹುಟ್ಟಿಸುವದಕ್ಕಾಗಿ ಹೇಳಿರುವ ಫಲಸ್ತುತಿಯ ವಾಕ್ಯಗಳ ಮೇಲೆ ಹೆಚ್ಚು ಆಸಕ್ತಿಯನ್ನಿಟ್ಟವರಾಗಿಯೂ (ನ ಅನ್ಯತ್ ಅಸ್ತಿ) ಇತಿವಾದಿನಃ) ಸ್ವರ್ಗವೆಂಬ ಫಲವನ್ನೂ ಅದರ ಸಾಧನವಾದ ಯಜ್ಞಯಾಗಾದಿಗಳ ವಿಷಯವನ್ನೂ ಹೇಳುವ ಕರ್ಮಕಾಂಡದ ಮಾತುಗಳಿಗೆ ಸಂಬಂಧವಿಲ್ಲದ ಬೇರೆ ಮಾತುಗಳೇ ವೇದದಲ್ಲಿಲ್ಲವೆಂದು ಹೇಳುವವರಾಗಿಯೂ (ಕಾಮಾತ್ಮಾನಃ) ಬಯಕೆಗಳಲ್ಲಿಯೇ ಮುಳುಗಿ ಹೋಗಿರುವವರಾಗಿಯೂ (ಸ್ವರ್ಗ

---

* ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ—ಯಜ್ಞಯಾಗಗಳೂ ಮತ್ತು ಕೆರೆಬಾವಿಗಳನು ಮಾಡಿಸುವ ಕೆಲಸಗಳೂ ಹೆಚ್ಚಿನ ಯೋಗ್ಯತೆಯುವೆಂದು ತಿಳಿದವರಾಗಿ ಕೇವಲ ಮೂಢರಾದ ಜನರು ಬೇರೆ ಹಿತವಾದ ಸಾಧನವನ್ನು ತಿಳಿಯುವದೇ ಇಲ್ಲ. ಶ್ರು.—

ಪರಾಃ) ಊರ್ವಶಿ, ನಂದನವನ, ಅಮೃತ—ಇವುಗಳೆಲ್ಲ ಇರುವ ಸ್ವರ್ಗವೇ ಸರ್ವೋತ್ಕೃಷ್ಟವೆಂದು ತಿಳಿದಿರುವವರಾಗಿಯೂ ಇರುವವರು (ಭೋಗೈಶ್ವರ್ಯ ಗತಿಂ ಪ್ರತಿ) ಅಮೃತಪಾನ, ಅಪ್ಸರಸ್ತ್ರೀಯರೊಡನೆ ವಿಹಾರ, ಪಾರಿಜಾತದ ಸುವಾಸನೆ—ಮೊದಲಾದ ಸುಖಾನುಭವಗಳನ್ನೂ ದೇವತೆಗಳಿಗೆಲ್ಲ ದೊರೆಯಾಗುವಿಕೆ ಮೊದಲಾದ ಐಶ್ವರ್ಯವನ್ನೂ ಪಡೆಯುವದಕ್ಕಾಗಿ (ಜನ್ಮಕರ್ಮಫಲಪ್ರದಾಂ) ಹುಟ್ಟುಸಾವುಗಳೆಂಬ ಕರ್ಮಫಲವನ್ನು ಕೊಡುವಂಥ (ಕ್ರಿಯಾವಿಶೇಷಬಹುಲಾಂ) ಬಗೆಬಗೆಯಾದ ಅನೇಕಕರ್ಮಗಳ ವಿಷಯವನ್ನು ಹೇಳುವಂಥ (ಪುಷ್ಪಿತಾಂ) ಹೂಬಿಟ್ಟಿರುವ ಮುತ್ತುಗದ ಮರವು ನೋಡುವದಕ್ಕೆ ಮನೋಹರವಾಗಿರುವಂತೆ ಕೇಳುವದಕ್ಕೆ ಮನೋಹರವಾಗಿರುವ (ಯಾಂ) ಯಾವ (ಇಮಾಂ) ಈ (ವಾಚಂ) ಮಾತನ್ನು (ಪ್ರವದಂತಿ) ಹೇಳುತ್ತಾರೊ (ಭೋಗೈಶ್ವರ್ಯಪ್ರಸಕ್ತಾನಾಂ)ಸುಖಾನುಭವಗಳಲ್ಲಿಯೂ ಐಶ್ವರ್ಯದಲ್ಲಯೂ ಹೆಚ್ಚು ಆಸಕ್ತರಾದಂಥ (ತಯಾಪಹೃತಚೇತಸಾಂ) ಆ ಫಲಸ್ತುತಿಯ ಮಾತುಗಳ ಸೆಳೆತಕ್ಕೆ ಸಿಕ್ಕಿದ ಮನಸ್ಸುಳ್ಳ ಅವರಿಗೆ (ಸಮಾಧೌ*) ಎಲ್ಲ ಸುಖಾನುಭವಗಳಿಗೂ ಆಧಾರಸ್ಥಾನವಾದ ಮನಸ್ಸಿನಲ್ಲಿ (ವ್ಯವಸಾಯಾತ್ಮಿಕಾ) ಏಕಮುಖವಾದ (ಬುದ್ಧಿಃ) ತಿಳಿವಳಿಕೆಯು (ನ) ವಿಧೀಯತೇ ಉಂಟಾಗುವದಿಲ್ಲ

ಹಾಗಾದರೆ ಈ ಕರ್ಮಕಾಂಡವು ಯಾರಿಗೆ ಹೇಳಿದ್ದೆಂದರೆ —

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

(ವೇದಾಃ) ಕರ್ಮಕಾಂಡದ ರೂಪದಲ್ಲಿರುವ ವೇದದ ಮಾತುಗಳು (ತ್ರೈಗುಣ್ಯವಿಷಯಾಃ) ಸತ್ತ್ವರಜಸ್ತಮೋಗುಣಗಳಿಂದ ಕೂಡಿದ ಸಂಸಾರದ

---

* (ಸಮಾಧೌ) ಎಲ್ಲಕ್ಕೂ ಆಧಾರಭೂತನಾದ ಪರಮಾತ್ಮನ ವಿಷಯದಲ್ಲಿ (ವ್ಯವಸಾಯಾತ್ಮಿಕಾ ಬುದ್ಧಿಃ ನ ವಿಧೀಯತೇ) ವಿಚಾರದಿಂದ ತಾತ್ಪರ್ಯವನ್ನು ನಿರ್ಣಯ ಮಾಡುವ ತಿಳಿವಳಿಕೆಯು ಉಂಟಾಗುವದಿಲ್ಲ—ಎಂದೂ ಕೆಲವರ ಅರ್ಥ.

ವಿಚಾರವನ್ನು ಹೇಳತಕ್ಕವುಗಳು ಸತ್ತ್ವಗುಣದ ಲಕ್ಷಣ ಶಾಂತಿ; ರಜೋಗುಣದ ಲಕ್ಷಣ ಗಡಿಬಿಡಿ, ತಮೋಗುಣದ ಲಕ್ಷಣ ಆಲಸ್ಯ ಕರ್ಮಕಾಂಡಗಳಲ್ಲಿ ಹೇಳಿರುವ ಮಾತುಗಳೆಲ್ಲ ಈ ಮೂರು ಗುಣಗಳ ಮಿಶ್ರಣದ ಸ್ವಭಾವಕ್ಕೆ ಒಗ್ಗುವಂಥವುಗಳು (ಅರ್ಜುನ) ಅರ್ಜುನನೆ, ಕೇಳು ನೀನು (ನಿಸ್ತ್ರೈಗುಣ್ಯಃ) ಈ ಮೂರು ಗುಣಗಳ ಮಿಶ್ರಣದ ಕಟ್ಟಿನಿಂದ ಕಳಚಿಕೊಂಡಂಥವನು (ಭವ) ಆಗು ರಜೋಗುಣವು ದುಃಖವನ್ನೂ ತಮೋಗುಣವು ಸುಖದುಃಖಗಳನ್ನು ತಿಳಿಯದಂಥ ಜಡಸ್ವಭಾವವನ್ನೂ ಕೊಡುವದರಿಂದ ಸುಖವನ್ನು ಬಯಸುವವನು ಅವೆರಡನ್ನಂತು ದಾಟಲೇ ಬೇಕಷ್ಟೆ ಇನ್ನು ಅವನು ಸತ್ವಗುಣವನ್ನೂ ದಾಟಬೇಕಾಗಿರುವದು ಏಕೆಂದರೆ ನಾವು ಯಾರನ್ನು ಸಾಮಾನ್ಯವಾಗಿ ಸತ್ವಗುಣದವರೆನ್ನುತ್ತೇವೊ ಅವರ ಸತ್ವಗುಣದಲ್ಲಿ ರಜೋಗುಣವೂ ಮಿಶ್ರವಾಗಿದ್ದೇ ಇರುವದು. ಆ ಸತ್ತ್ವಗುಣವನ್ನು ಕೂಡ ಗೆಲ್ಲಬೇಕಾದರೆ ನಾವು ಶುದ್ಧಸತ್ತ್ವಗುಣವನ್ನು ಪಡೆಯಬೇಕು ಇದರಲ್ಲಿ ಉಳಿದ ಗುಣಗಳ ಸಂಬಂಧವಿಲ್ಲದ್ದರಿಂದ ಮೂರು ಗುಣಗಳ ಮಿಶ್ರಣವನ್ನು ದಾಟದಂತಾಗುವದು ¬ ಶುದ್ಧಸತ್ತ್ವದಲ್ಲಿರುವದಕ್ಕೆ (ನಿರ್ದ್ವಂದ್ವಃ) ಸುಖ, ದುಃಖ-ಮೊದಲಾದ ಜೋಡಿಗಳನ್ನು ಗೆಲ್ಲುವವನಾಗು. ಆ ಸ್ಥಿತಿಯು ಮೈಗೂಡುವದಕ್ಕೆ (ನಿತ್ಯಸತ್ತ್ವಸ್ಥಃ) ಯಾವಾಗಲೂ ಸತ್ತ್ವಗುಣವನ್ನೆ ಆಶ್ರಯಿಸಿಕೊಂಡಿರುವವನಾಗು. ಹೊಟ್ಟೆಬಟ್ಟೆಗಳನ್ನು ನೋಡಿಕೊಳ್ಳಬೇಕಾದದ್ದೊಂದಿರುವಾಗ ಯಾವಾಗಲೂ ಸತ್ತ್ವಗುಣವಲ್ಲಿಯೇ ಇರುವದು ಹೇಗೆಂದರೆ(ನಿರ್ಯೋಗಕ್ಷೇಮಃ) ಇಲ್ಲದ್ದನ್ನು ಪಡೆಯುವ ಮತ್ತು ಇದ್ದದ್ದನ್ನು ಕಾಪಾಡಿಕೊಳ್ಳುವ ಯೋಚನೆಯನ್ನು ಬಿಟ್ಟವನಾಗು. ಯೋಗಕ್ಷೇಮವನ್ನೆ ನೋಡಿಕೊಳ್ಳದೆ ಬಿಟ್ಟರೆ ಜೀವನ ಯಾತ್ರೆಯು ಹೇಗೆ ಸಾಗುವದೆಂದರೆ (ಆತ್ಮವಾನ್*) ಪರಮಾತ್ಮನನ್ನುಳ್ಳವನಾಗು-ಎಂದರೆ ಕಾಮಗಳನ್ನೆಲ್ಲ ಬಿಟ್ಟು ಈಶ್ವರಾರಾಧನೆಯನ್ನು ಮಾಡು. ಆ ಯೋಗಕ್ಷೇಮಗಳ ಭಾರವನ್ನು ಈಶ್ವರನು ನೋಡಿಕೊಳ್ಳುವನು.

---

* 'ಆತ್ಮವಾನ್ ಭವ' ಎಂದರೆ ಅಪ್ರಮತ್ತನಾಗೆಂದೂ ಕೆಲವರರ್ಥ.

ಯಾವ ಫಲವೂ ಬೇಡವೆನಿಸಿದ ಮೇಲೆ ಅವುಗಳನ್ನಿನ್ನೇಕೆ ಮಾಡ ಬೇಕೆಂದರೆ.—

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ |**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ||೪೬||**

(ಉದಪಾನೇ) ಬಾವಿ ಮೊದಲಾದ ನೀರ್ದಾಣಗಳಲ್ಲಿ (ಯಾವಾನರ್ಥಃ) ಸ್ನಾನ, ಕುಡಿಯುವದು-ಮೊದಲಾದ ಯಾವಯಾವ ಪ್ರಯೋಜನಗಳಾಗು ವವೋ (ಸರ್ವತಃ ಸಂಪ್ಲುತೋದಕೇ) ಎಲ್ಲೆಲ್ಲಿಯೂ ನೀರಾಗಿರುವ ದೊಡ್ಡ ದೊಡ್ಡ ಕೆರೆ ಮೊದಲಾದವುಗಳಲ್ಲಿ (ತಾವಾನ್) ಆ ಪ್ರಯೋಜನಗಳೆಲ್ಲವೂ ಆಗಿಯೇ ಆಗುವವು ಇವರಂತೆ (ಸರ್ವೇಷು ವೇದೇಷು) ಕರ್ಮಕಾಂಡದ ಎಲ್ಲ ಮಂತ್ರಗಳಲ್ಲಿಯೂ ಹೇಳಿರುವ ಕರ್ಮಗಳನ್ನು ಮಾಡುವದರಿಂದಾಗುವ ಫಲಗಳೆಲ್ಲ (ವಿಜಾನತಃ*)ಪರಮಾತ್ಮಸ್ವರೂಪವನ್ನರಿತ(ಬ್ರಾಹ್ಮಣಸ್ಯ) ಬ್ರಾಹ್ಮ ಣನಿಗೆ ಆಗುವವು. ಕರ್ಮಕಾಂಡದ ಕರ್ಮಗಳು ಸಣ್ಣ ಬಾವಿಗಳಿಗೆ ಸಮಾನ ವಾದವುಗಳಾದರೂ ದೊಡ್ಡ ಕೆರೆ ಇಲ್ಲದವರು ಅವುಗಳನ್ನೇ ಆಶ್ರಯಿಸುವಂತೆ ಬ್ರಹ್ಮಜ್ಞಾನದ ಅಧಿಕಾರವಿಲ್ಲದವರು ಅದನ್ನು ಪಡೆಯುವುದಕ್ಕೆ ಮೊದಲು ಕರ್ಮಗಳನ್ನು ಮಾಡಬೇಕು.

ನಿನಗಾದರೂ :—

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವ**
**ಕರ್ಮಣಿ || ೪೭ ||**

ನಾನು ನಿನಗೆ ಜ್ಞಾನೋಪದೇಶವನ್ನು ಮಾಡಿದರೂ ನಿನಗೆ ಅದು ಹಿಡಿಯಲಿಲ್ಲವಾದ್ದರಿಂದ ನಿನ್ನ ಮನಸ್ಸಿನ್ನೂ ಆತ್ಮಸ್ವರೂಪವನ್ನು ತಿಳಿಯು

---

* 'ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' —ಬ್ರಹ್ಮನೇ ಮೊದಲಾದ ಉಳಿದ ಪ್ರಾಣಿಗಳೆಲ್ಲರೂ ಈ ಬ್ರಹ್ಮಾನಂದದ ಯಾವದೊ ಒಂದಂಶದಿಂದಲೇ ಬದುಕುವರು—ಶ್ರು.

ವಷ್ಟು ಶುದ್ಧವಾಗಿಲ್ಲವಕಾರಣ (ತೇ) ನಿನಗೆ (ಕರ್ಮಣ್ಯೇವ) ಕರ್ಮದಲ್ಲಿಯೇ (ಅಧಿಕಾರಃ) ಪಾತ್ರತೆಯು ಆ ಕರ್ಮಗಳಿಗೆ ಫಲವನ್ನು ಬಯಸಿದರೆ ಆ ಫಲಗಳು ಆ ಮನುಷ್ಯನನ್ನು ಹುಟ್ಟುಸಾವುಗಳ ಬಲೆಯಲ್ಲಿ ಬೀಳಿಸುವದರಿಂದ (ಕದಾಚನ) ಎಂದಿಗೂ (ಫಲೇಷು) ಫಲಗಳಲ್ಲಿ (ಮಾ) ನಿನಗೆ ಪಾತ್ರತೆ ಇಲ್ಲದೆ ಇರಲಿ, ಎಂದರೆ ನೀನು ಫಲವನ್ನೆಂದೂ ಬಯಸಬೇಡ ಮತ್ತೆ ಅದೇ ಅಭಿಪ್ರಾಯವನ್ನೇ ಒತ್ತಿ ಹೇಳುತ್ತೇನೆ ಕೇಳು. ನೀನು (ಕರ್ಮಫಲ ಹೇತುಃ) ಕರ್ಮಗಳ ಫಲವಾದ ಹುಟ್ಟುಸಾವುಗಳಿಗೆ ಕಾರಣಭೂತನು (ಮಾ ಭೂಃ) ಆಗಬೇಡ ಅಥವಾ ಕರ್ಮಗಳ ಫಲವೆಲ್ಲ ದುಃಖವೆಂದು (ತೇ) ನಿನಗೆ (ಅಕರ್ಮಣಿ) ಕರ್ಮವನ್ನು ಬಿಟ್ಟಿರುವದರಲ್ಲಿ (ಸಂಗಃ) ಪ್ರೀತಿಯು (ಮಾ ಅಸ್ತು) ಉಂಟಾಗಬೇಡ. ಕರ್ಮಗಳ ಫಲವು ಅದನ್ನು ಬಯಸಿದವ ವರಿಗೆ ಗಂಟು ಬೀಳುವದೇ ಹೊರತು ಕರ್ತವ್ಯವೆಂದು ತಿಳಿದು ಮಾಡುವವ ರನ್ನು ಸೋಕುವದಿಲ್ಲ

ಫಲದ ಬಯಕೆಯಿಂದ ಮಾಡಬಾರದಾದ ಮೇಲೆ ಮತ್ತೆ ಹೇಗೆ ಮಾಡ ಬೇಕೆಂದರೆ :—

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥**

(ಧನಂಜಯ) ಅರ್ಜುನನೆ, ಕೇಳು. (ಯೋಗಸ್ಥಃ) ಯೋಗದಲ್ಲಿರುವವ ನಾಗಿ (ಸಂಗಂ) ಸ್ವರ್ಗ ಮೊದಲಾದ ಫಲದ ಮೇಲಿನ ಪ್ರೀತಿಯನ್ನು (ತ್ಯಕ್ತ್ವಾ) ಬಿಟ್ಟು (ಸಿದ್ಧ್ಯಸಿದ್ಧ್ಯೋಃ) ಚಿತ್ತಶುದ್ಧಿಯೂ ಜ್ಞಾನಪ್ರಾಪ್ತಿಯೂ ಆದರೂ ಆಗದಿದ್ದರೂ (ಸಮೋ ಭೂತ್ವಾ) ಸಮನಾಗಿದ್ದುಕೊಂಡು—ಎಂದರೆ ಆದಾಗ ಹಿಗ್ಗದೆ, ಆಗದೆ ಹೋದಾಗ ತಗ್ಗದೆ— (ಕರ್ಮಾಣಿ) ಕರ್ಮಗಳನ್ನು (ಕುರು) ಮಾಡು ಯೋಗವೆಂಬ ಮಾತಿನ ಅರ್ಥವೇನೆಂದರೆ (ಸಮತ್ವಂ) ಚಿತ್ತಶುದ್ಧಿಯೂ ಜ್ಞಾನವೂ ಆದರೆ ಹಿಗ್ಗದೆ, ಆಗದಿದ್ದರೆ ತಗ್ಗದೆ ಒಂದೇ ರೀತಿ ಯಲ್ಲಿರುವದೇ (ಯೋಗ ಉಚ್ಯತೇ) ಯೋಗವೆನಿಸುವದು.

ಈ ಸಮತ್ವಬುದ್ಧಿಯು ಬಹು ಹೆಚ್ಚಿನದು ಹೇಗೆಂದರೆ —

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**

(ಧನಂಜಯ) ಅರ್ಜುನನೆ, ಕೇಳು (ಬುದ್ಧಿಯೋಗಾತ್) ಸಮತ್ವ ಬುದ್ಧಿಯಿಂದ ಕೂಡಿ ಮಾಡುವ ಕರ್ಮಯೋಗದ ಜೊತೆಗೆ ಹೋಲಿಸಿ ನೋಡಿದರೆ (ಕರ್ಮ) ಫಲದ ಬಯಕೆಯಿಂದ ಮಾಡುವ ಕರ್ಮವು (ದೂರೇಣ ಹಿ ಅವರಂ) ಬಹಳ ಕೀಳಾದದ್ದು ಆದ್ದರಿಂದ (ಬುದ್ಧೌ) ಆ ಸಮತ್ವಬುದ್ಧಿಯಲ್ಲಿ (ಶರಣಂ) ಬೆಂಬಲವನ್ನು (ಅನ್ವಿಚ್ಛ) ಬಯಸು ಏಕೆಂದರೆ [ಫಲಹೇತವಃ] ಫಲದ ಬಯಕೆಯುಳ್ಳವರು (ಕೃಪಣಾಃ) ದೀನರು

ಸಮತ್ವಬುದ್ಧಿಯಿಂದ ಕೂಡಿದವನಿಗೆ ಆಗುವ ಫಲವೇನೆಂದರೆ —

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥**

ಫಲದ ಬಯಕೆಯಿಂದ ಕರ್ಮವನ್ನು ಮಾಡುವವನು ಅದರ ಫಲವಾಗಿ ಈಗಲೂ ಸತ್ತಮೇಲೆಯೂ ಪುಣ್ಯಕರ್ಮಗಳ ಮತ್ತು ಪಾಪಕರ್ಮಗಳ ಕಟ್ಟಿಗೆ ಸಿಕ್ಕಿರುವನು ಅಲ್ಲದೆ ಅವುಗಳ ವೇಗವು ಈಗ ಒಂದು ಪಕ್ಷ ತೀವ್ರವಾಗಿಲ್ಲದಿದ್ದರೂ ಸತ್ತಮೇಲೇನಾಗುವದೋ ಎಂಬ ಅಳುಕಿನಿಂದ ಕೂಡಿರುವನು (ಬುದ್ಧಿಯುಕ್ತಃ ಫಲದ ಬಯಕೆ ಇಲ್ಲದೆ ಸಮತ್ವಬುದ್ಧಿಯಿಂದ ಕೂಡಿದವನು [ಇಹ] ಇಲ್ಲಿ ಬದುಕಿರುವಾಗಲೆ [ಉಭೇ ಸುಕೃತದುಷ್ಕೃತೇ] ಪುಣ್ಯಪಾಪಗಳೆರಡನ್ನೂ [ಜಹಾತಿ] ದೂರಮಾಡಿಕೊಳ್ಳುತ್ತಾನೆ—ಎಂದರೆ ಅವೆರಡೂ ತನ್ನ ಮೇಲೆ ಕೈಮಾಡದಂತೆ ಮಾಡಿಕೊಂಡವನಾಗುತ್ತಾನೆ ಪಾಪವಂತು ದುಃಖವನ್ನು ಕೊಡುವದರಿಂದ ಅದು ದೂರವಾಗುವದು ಇಷ್ಟವೇ ಅಷ್ಟೆ. ಪುಣ್ಯವು ಕೂಡ ತನ್ನ ಫಲವಾದ ಸುಖವನ್ನು ಕೊಡುವದಕ್ಕಾಗಿ ಹುಟ್ಟು ಸಾವುಗಳನ್ನು ಕೊಡುವದರಿಂದ ಅದೂ ದೂರಮಾಡಿಕೊಳ್ಳತಕ್ಕದ್ದೇ ಆಗಿರುವದು. ಸಮತ್ವ

ಬುದ್ಧಿಯ ಮುಂದೆ ತಮ್ಮ ಆಟವನ್ನು ಹೂಡುವವಕ್ಕೆ ಇವೆರಡೂ ಹೆದರುವವು. ಸಮತ್ವಬುದ್ಧಿಯ ಫಲವಾಗಿ ಚಿತ್ತ ಶುದ್ಧಿಯೂ ಜ್ಞಾನವೂ ಆದ ಮೇಲಂತು ಅವು ಹೆಸರಿಲ್ಲದಂತೆ ಹೋಗುವವು [ತಸ್ಮಾತ್] ಆದ್ದರಿಂದ [ಯೋಗಾಯ] ಆ ಸಮತ್ವಬುದ್ಧಿರೂಪವಾದ ಯೋಗಕ್ಕೆ [ಯುಜ್ಯಸ್ವ] ಸನ್ನಾಹವನ್ನು ಮಾಡು ಏಕೆಂದರೆ [ಕರ್ಮಸು] ಕರ್ಮಗಳಲ್ಲಿ [ಯೋಗಃ] ಸಮತ್ವಬುದ್ಧಿಯು, ಮನುಷ್ಯನನ್ನು ಕಟ್ಟಿನೊಳಕ್ಕೆ ಸಿಕ್ಕಿಸುವ ಅದರ ಸ್ವಭಾವವನ್ನೇ ತಿರುಗಿಸಿಬಿಡುವದರಿಂದ [ಕೌಶಲಂ] ಚಾತುರ್ಯವು.

ಅದು ಹೇಗೆಂದರೆಃ—

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥ ೫೧ ॥**

[ಹಿ] ಏಕೆಂದರೆ [ಬುದ್ಧಿಯುಕ್ತಾಃ] ಸಮತ್ವಬುದ್ಧಿಯಿಂದ ಕೂಡಿದವರು [ಕರ್ಮಜಂ] ತಾವು ಮಾಡುವ ಕರ್ಮಗಳಿಂದ ಉಂಟಾಗುವ [ಫಲಂ] ತಮಗೆ ಹಿತವೆನಿಸಿದ ಮತ್ತು ಅಹಿತವೆನಿಸಿದ ಫಲಗಳನ್ನು [ತ್ಯಕ್ತ್ವಾ] ಬಯಸದೆ ಬಿಟ್ಟು [ಮನೀಷಿಣಃ] ಪರಮಾತ್ಮಸ್ವರೂಪದ ಜ್ಞಾನವನ್ನು ಪಡೆದವರಾಗಿ [ಜನ್ಮಬಂಧವಿನಿರ್ಮುಕ್ತಾಃ] ತಾವು ದೇಹದಲ್ಲಿರುವಾಗಲೇ ಹುಟ್ಟುವಿಕೆ ಯೆಂಬ ಕಟ್ಟನ್ನು ಕಳಚಿಕೊಂಡು [ಅನಾಮಯಂ] ಯಾವತೊಂದರೆಯೂ ಇಲ್ಲದೆ ಇರುವಂಥ [ಪದಂ] ಮೋಕ್ಷವೆಂಬ ಪದವಿಯನ್ನು [ಗಚ್ಛಂತಿ] ಪಡೆಯುತ್ತಾರೆ.

ಯಾವಾಗ ನಮಗೆ ಚಿತ್ತಶುದ್ಧಿಯಾಗಿ ವೈರಾಗ್ಯವು ನಮ್ಮಲ್ಲಿ ನೆಲೆಗೊಳ್ಳುವದೆಂದರೆ :—

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥**

[ತೇ] ನಿನ್ನ [ಬುದ್ಧಿಃ] ಅಂತಃಕರಣವು [ಯದಾ] ಯಾವಾಗ [ಮೋಹಕಲಿಲಂ] ಜಗತ್ತಿನಲ್ಲಿ ಮೂರು ದಿನದ ಬಾಳಿನವು ಯಾವದೆಂಬದನ್ನೂ ಯಾವಾಗಲೂ ಇರುವದು ಯಾವದೆಂಬುದನ್ನೂ ವಿವೇಕದಿಂದ

ಬೇರೆ ಬೇರೆ ಮಾಡಿ ತಿಳಿಯಲರಿಯದೆ ಮೂರು ದಿನದ ಬಾಳಿನವುಗಳಾದ ವಿಷಯಗಳ ಕಡೆಗೆ ಸುಖಕ್ಕಾಗಿ ಬಾಯಿನೀರು ಸುರಿಸುವಿಕೆಯನ್ನು (ವ್ಯತಿತರಿಷ್ಯತಿ) ದಾಟುವದೊ (ತದಾ) ಆಗ ( ಶ್ರೋತವ್ಯಸ್ಯ ) ಮುಂದೆ ನಿನ್ನ ಕಿವಿಗೆ ಬೀಳುವ ಮತ್ತು ( ಶ್ರುತಸ್ಯ ಚ ) ಇದುವರೆಗೆ ನಿನ್ನ ಕಿವಿಗೆ ಬಿದ್ದಿರುವ ಫಲಶ್ರುತಿಗಳ ವಿಷಯದಲ್ಲಿ ( ನಿರ್ವೇದಂ ) ವೈರಾಗ್ಯವನ್ನು (ಗಂತಾಸಿ) ಪಡೆಯುತ್ತಿ. ಎಂದರೆ ಕರ್ಮಗಳ ಫಲಗಳೆಲ್ಲ ಮೂರುದಿನದ ಬಾಳಿನವುಗಳಾದ್ದರಿಂದ ವ್ಯರ್ಥವೆಂದು ತಿಳಿಯುತ್ತಿ.

ಈ ವಿವೇಕವೈರಾಗ್ಯಗಳು ಬಂದಮೇಲೆ ಜ್ಞಾನವು ಯಾವಾಗ ಆಗುವದೆಂದರೆ —

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥೫೩॥**

(ಶ್ರುತಿವಿಪ್ರತಿಪನ್ನಾ) ಬೇರ ಬೇರೆ ಫಲಗಳುಳ್ಳ ಬೇರೆ ಬೇರೆ ಕರ್ಮಗಳನ್ನು ಹೇಳುವ ಬೇರೆ **ಬೇರೆ** ಶ್ರುತಿಗಳ ಸೆಳೆತಕ್ಕೆ **ಸಿಕ್ಕಿದ ಅಥವಾ** ಕರ್ಮ, ಉಪಾಸನೆ, ಜ್ಞಾನ—ಇವುಗಳನ್ನು ಪ್ರತಿಪಾದಿಸುವ ಬೇರೆ ಬೇರೆ ಶ್ರುತಿಗಳಲ್ಲ ಯಾವದಕ್ಕೆ ಹೆಚ್ಚು ಬೆಲೆಯನ್ನು ಕೊಡಬೇಕೆಂಬ ನಿರ್ಣಯವನ್ನರಿಯದೆ ಹೊಯ್ದಾಡುತ್ತಿರುವ ( ತೇ ) ನಿನ್ನ ( ಬುದ್ಧಿಃ ) ಅಂತಃಕರಣವು (ಯದಾ) ಯಾವಾಗ (ನಿಶ್ಚಲಾ) ವಿಷಯಗಳ ಮೇಲೆರಗುವದನ್ನು ಬಿಟ್ಟು (ಸಮಾಧೌ *) ಸಮಸ್ತಕ್ಕೂ ಆಶ್ರಯಭೂತವಾದ ಆತ್ಮವಸ್ತುವಿನಲ್ಲಿ ( ಅಚಲಾ ) ಅತ್ತಿತ್ತ

* ' ಸಮಾಧೌ ' ಎಂಬ ಮಾತಿಗೆ ಮನಸ್ಸಿನ ಏಕಾಗ್ರತೆಯ ಪರಮಾವಧಿಯಾದ ' ಸಮಾಧಿಯಲ್ಲಿ ' ಎಂಬುದು ಸಹಜವಾದರ್ಥ. ಇಲ್ಲಿ ಆ ಅರ್ಥವನ್ನು ಮಾಡಿದರೆ ಯೋಗಶಾಸ್ತ್ರದಲ್ಲಿ ಹೇಳಿರುವ ಸಮಾಧಿಯನ್ನು ಪಡೆದಾಗಲೆ ಜ್ಞಾನವಾಗುವದೆಂದರ್ಥವಾಗುವದು ಆ ಸಮಾಧಿಯು ಯೋಗಮಾರ್ಗದ ಒಂದು ಸಾಧನ. ಮುಮುಕ್ಷುಗಳೆಲ್ಲರೂ ಅದನ್ನು ಪಡೆಯಲೇಬೇಕೆಂಬ ನಿಯಮವಿಲ್ಲ. ವಿಚಾರದಿಂದಲೇ ಜ್ಞಾನವಾಗಬಹುದು. ಆದ್ದರಿಂದ 'ಸಮಾಧಿ' ಎಂಬ ಮಾತಿಗೆ ' ಆತ್ಮ ' ಎಂದರ್ಥವನಿಟ್ಟುಕೊಂಡರೆ ಇಲ್ಲಿ ಸಮಂಜಸವಾಗುವದು. ಸಂಪ್ರದಾಯವೂ ಹೀಗೆಯೇ ಇರುವದು.

ಕದಲದೆ (ಸ್ಥಾಸ್ಯತಿ) ನೆಲೆಯಾಗಿ ನಿಲ್ಲುವದೊ (ತದಾ) ಆಗ (ಯೋಗಂ) ಫಲದ ಬಯಕೆಯಿಲ್ಲದೆ ಮಾಡಿದ ಕರ್ಮದ ಫಲವಾದ ಜ್ಞಾನವನ್ನು [ಅವಾಪ್ಸ್ಯಸಿ] ಪಡೆಯುತ್ತಿ.

ಅಂಥ ಜ್ಞಾನಿಯ ಲಕ್ಷಣವನ್ನು ತಿಳಿದುಕೊಳ್ಳಬೇಕೆಂದು:

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು :—

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಯಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ಪ್ರಜೇತ ಕಿಮ್ ॥ ೫೪ ॥**

(ಕೇಶವ) ಕೃಷ್ಣನೆ, ಕೇಳು (ಸಮಾಧಿಸ್ಥಸ್ಯ) ನಿಜವಾದ ಆತ್ಮ ರೂಪದಲ್ಲಿರುವ (ಸ್ಥಿತಪ್ರಜ್ಞಸ್ಯ) ದೃಢವಿವೇಕಿಯ ( ಭಾಷಾ ) ಲಕ್ಷಣವು ( ಕಾ ) ಏನು ? ಮತ್ತು (ಸ್ಥಿತಧೀಃ) ದೃಢವಿವೇಕವುಳ್ಳ ಆ ಜ್ಞಾನಿಯು, ಮಾತಾಡುವಾಗ ಪಾಮರರಂತಲ್ಲದೆ (ಕಿಂ ಪ್ರಭಾಷೇತ) ಏನು ಹೇಳುತ್ತಾನೆ? (ಕಿಮಾಸೀತ) ಇರುವಾಗ ಹೇಗಿರುತ್ತಾನೆ? (ವ್ರಜೇತ ಕಿಂ) ಮಾಡುವಾಗ ಏನು ಮಾಡುತ್ತಾನೆ ?

ಜ್ಞಾನಿಯ ಲಕ್ಷಣಗಳು ಸಾಧಕರಿಗೆ ಒಳ್ಳೆ ಸಾಧನಗಳಾದ್ದರಿಂದ ಅವುಗಳನ್ನು ಅರ್ಜುನನಿಗೆ ತಿಳಿಸಬೇಕೆಂದು,

**ಶ್ರೀ ಭಗವಾನುವಾಚ** ಶ್ರೀ ಕೃಷ್ಣನು ಹೇಳಿದ್ದು :—

**ಪ್ರಜಹಾತಿ ಯದಾ ಕಾಮಾನ್ಸರ್ವಾನ್ಪಾರ್ಥ ಮನೋಗತಾನ್ * ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥**

(ಪಾರ್ಥ) ಅರ್ಜುನನೆ ಕೇಳು. ಮನುಷ್ಯನು (ಯದಾ) ಯಾವಾಗ (ಮನೋಗತಾನ್) ಮನಸ್ಸಿನಲ್ಲಿರುವಂಥ (ಸರ್ವಾನ್) ಎಲ್ಲ (ಕಾಮಾನ್) ಬಯಕೆಗಳನ್ನು [ಪ್ರಜಹಾತಿ] ಬೇರುಸಹಿತ ಕಿತ್ತೊಗೆಯುವನೊ, ಮತ್ತು

---

* "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ" —ಯಾವನ ಮನಸ್ಸಿನಲ್ಲಿರುವ ಬಯಕೆಗಳೆಲ್ಲ ಒಂದೂ ಉಳಿಯದಂತೆ ಯಾವಾಗ ಕಳಚಿ ಕೊಂಡು ಹೋಗುವವೊ ಅವನು ಆಗ ಮರಣರಹಿತನಾಗಿ ಈ ದೇಹದಲ್ಲಿ ಇದ್ದುಕೊಂಡೇ ಬ್ರಹ್ಮವನ್ನು ಪಡೆಯುತ್ತಾನೆ.

ಹಾಗೆ ಬಯಕೆಗಳನೆಲ್ಲ ಬಿಟ್ಟಮೇಲೆ ತೃಪ್ತಿಯ ಸಾಧನಗಳಾದ ವಿಷಯಗಳೇ ಇಲ್ಲದೆ ಬದುಕುವದು ಹೇಗೆಂದು ಹೊಯ್ದಾಡದೆ, (ಆತ್ಮನ್ಯೇವ) ತನ್ನಲ್ಲಿಯೇ (ಆತ್ಮನಾ) ತನ್ನೊಳಗಿರುವ ಆತ್ಮನ ದರ್ಶನವೆಂಬ ಅಮೃತರಸದ ಪಾನದಿಂದ (ತುಷ್ಟಃ) ತೃಪ್ತಿಯಿಂದ ಇರುವನೊ (ತದಾ) ಆಗ (ಸ್ಥಿತಪ್ರಜ್ಞಃ ಉಚ್ಯತೇ) ದೃಢವಿವೇಕವುಳ್ಳವನೆನಿಸಿಕೊಳ್ಳುತ್ತಾನೆ.

ಮತ್ತು —

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥**

(ದುಃಖೇಷು) ಎಲ್ಲರಿಗೂ ಬರುವಂತೆ ರೋಗ- ಮನೋವ್ಯಥೆ, ವಿಪತ್ತು ಮೊದಲಾದ ದುಃಖಗಳು ತಮ್ಮ ಭಯಂಕರಸ್ವರೂಪವನ್ನು ತೋರಿಸುತ್ತ ಬಂದ ಸಮಯದಲ್ಲಿ (ಅನುದ್ವಿಗ್ನಮನಾಃ) ನಾನು ಪಾಪಿಯೆಂದೂ ನನ್ನ ಜನ್ಮವನ್ನು ಸುಡಬೇಕೆಂದೂ–ಹೀಗೆಲ್ಲ ಅವನ ಮನಸ್ಸಿನಲ್ಲಿ ತಳಮಳವು ತಲೇ ಎತ್ತುವದಿಲ್ಲ. ಹೀಗೆ ಪಶ್ಚಾತ್ತಾಪ ಪಡುವವರನ್ನು ನೋಡಿ ಇದೊಂದು ಬಗೆಯ ವಿವೇಕವೆಂದೇ ಸಾಮಾನ್ಯರು ತಿಳಿಯುವರು. ಈ ತುದಿನಾಲಿಗೆಯ ಮಾತು ಕೇಳುಬಗೆಯ ವಿವೇಕ ಪಾಪವನ್ನು ಮಾಡುವ ಕಾಲದಲ್ಲಿಯೇ ಅದರ ಭೀತಿಯುಂಟಾಗುವದು ಉತ್ತಮವಾದ ಬಗೆ. ಮಾಡಿದ ಮೇಲೆ ಮಾಡಿದ್ದನ್ನುಣ್ಣುವದಕ್ಕೆ ಹಿಂದೆಗೆಯದ ಇರುವದು ಇನ್ನೂ ಉತ್ತಮವಾದದ್ದು (ಸುಖೇಷು) ಎಲ್ಲರಿಗೂ ಬರುವಂತೆ ಪಾಂಡಿತ್ಯಾದಿಗಳ ಅಭಿಮಾನ, ಸ್ತ್ರೀಪುತ್ರಾದಿಗಳ ಸಮಾಗಮ, ಮಲಯಮಾರುತಸೇವನೆ – ಮೊದಲಾದ ಸುಖಗಳು ತಮ್ಮ ಮೋಹಕ ಸ್ವರೂಪದಿಂದ ಮರಳು ಮಾಡುತ್ತ ಬಂದಾಗ (ವಿಗತಸ್ಪೃಹಃ) ಈ ಸುಖಗಳೇ ನನಗೆ ಯಾವಾಗಲೂ ಇರಲೆಂದು ಅವನು ಬಯಸುವದಿಲ್ಲ ಪುಣ್ಯವನ್ನು ಮಾಡದೆ ಪುಣ್ಯದ ಫಲಗಳ ಮುಂದೆ 'ಭಿಕ್ಷಾಂ ದೇಹಿ' ಎನ್ನುವದು ಹೇಗೆ ವಿವೇಕವೆನಿಸೀತು? (ವೀತರಾಗಭಯಕ್ರೋಧಃ) ಆತನಿಗೆ ತನ್ನ ಆತ್ಮಸ್ವರೂಪದ ಹೊರತು ಉಳಿದವುಗಳೆಲ್ಲ ಬರೀ ತೋರಿಕೆಯವುಗಳೆಂಬ ಕಾರಣದಿಂದ ಯಾವದರ ಮೇಲೆಯೂ ಪ್ರೀತಿಯೆಂಬುದಿಲ್ಲ, ಹೀಗೆ ಅವನಿಗೆ ಎಂದೆಂದಿಗೂ ಏಕರೂಪವಾಗಿದ್ದೇ ಇರುವ ತನ್ನ ಆತ್ಮಕ್ಕಿಂತ ಪ್ರಿಯವಾದ ಬೇರೆ

ವಸ್ತುವೇ ಅಲ್ಲದ್ದರಿಂದ ತನ್ನ ಪ್ರಿಯವಸ್ತುವಿಗೆ ಹಾನಿಯುಂಟಾದೀತೆಂಬ ಹೆದರಿಕೆಯೂ ಇಲ್ಲ, ಆದ್ದರಿಂದಲೇ ಪ್ರಿಯವಸ್ತುವಿನ ನಾಶಕವಾದ ಕಾರಣಕ್ಕೆ ಪ್ರತೀಕಾರವನ್ನು ಮಾಡಲಾರದವರಿಗೆ ಬರುವ ಸಿಟ್ಟಿನ ವೇಗವೂ ಅವನಿಗಿಲ್ಲ ಹೀಗಿದ್ದು (ಮುನಿಃ) ಯಾವಾಗಲೂ ಆತ್ಮವಿಚಾರದಲ್ಲಿಯೇ ಮನಸ್ಸಿಟ್ಟಿರುವವನು (ಸ್ಥಿತಧೀಃ ಉಚ್ಯತೇ) ದೃಢವಿವೇಕಿಯೆನಿಸಿಕೊಳ್ಳುವನು.

ಮತ್ತು .—

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

( ಯಃ ) ಯಾವನು ( ಸರ್ವತ್ರ ) ತನ್ನ ಶರೀರ ಮೊದಲುಗೊಂಡು ಎಲ್ಲದರಲ್ಲಿಯೂ ( ಅನಭಿಸ್ನೇಹಃ ) ಅತಿಮಮತೆ ಇಲ್ಲದವನಾಗಿರುವನೊ (ತತ್ತತ್ ಶುಭಾಶುಭಮ್) ತನ್ನ ಪುಣ್ಯದ ಫಲವಾದ ಸುಖಗಳನ್ನೂ ಪಾಪದ ಫಲವಾದ ದುಃಖಗಳನ್ನೂ (ಪ್ರಾಪ್ಯ) ಪಡೆದಾಗ (ನಾಭಿನಂದತಿ) ಸುಖವು ಚೆನ್ನಾಗಿರುವದೆಂದು ಹೊಗಳುವದಿಲ್ಲವೊ (ನ ದ್ವೇಷ್ಟಿ) ದುಃಖವು ಚೆನ್ನಾಗಿಲ್ಲವೆಂದು ಅದರ ಮೇಲೆ ಹಗೆತನವನ್ನು ತೋರಿಸುವದಿಲ್ಲವೊ (ತಸ್ಯ) ಅವನ (ಪ್ರಜ್ಞಾ) ವಿವೇಕವ ಬುದ್ಧಿಯು (ಪ್ರತಿಷ್ಠಿತಾ) ಒಂದು ನೆಲೆಗೆ ನಿಂತಿರುವದು

ಮತ್ತು —

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥**

[ಕೂರ್ಮಃ] ಆಮೆಯು (ಅಂಗಾನೀವ) ತನ್ನ ಅವಯವಗಳನ್ನೆಲ್ಲ ಒಳಕ್ಕೆ ಸೆಳೆದುಕೊಳ್ಳುವಂತೆ (ಯದಾ) ಯಾವಾಗ (ಅಯಂ) ಇವನು (ಇಂದ್ರಿಯಾಣಿ) ತನ್ನ ಇಂದ್ರಿಯಗಳನ್ನು (ಇಂದ್ರಿಯಾರ್ಥೇಭ್ಯಃ)ವಿಷಯಗಳಿಂದ ( ಸರ್ವಶಃ ) ಎಲ್ಲ ಬಗಯಿಂದಲೂ (ಸಂಹರತೇ ಚ) ಹಿಮ್ಮೆಟ್ಟಿಸಿ ತೆಪ್ಪಗಿಟ್ಟುಕೊಳ್ಳುವನೋ (ತಸ್ಯ) ಅವನ ( ಪ್ರಜ್ಞಾ ) ವಿವೇಕ ಬುದ್ಧಿಯು ( ಪ್ರತಿಷ್ಠಿತಾ ) ಒಂದು ನೆಲೆಗೆ ನಿಂತಿರುವದು.

ಇಂದ್ರಿಯಗಳನ್ನು ಬಿಗಿಹಿಡಿದರೂ ಮನಸ್ಸಿನಲ್ಲಿರುವ ವಿಷಯಗಳ ಮೇಲಿನ ಪ್ರೀತಿಗೇನು ಗತಿಯೆಂದರೆ :—

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥**

(ವಿಷಯಾಃ) ಶಬ್ದ, ಸ್ಪರ್ಶ-ಮೊದಲಾದ ವಿಷಯಗಳು (ನಿರಾಹಾರಸ್ಯ) ಅವುಗಳನ್ನು ಉಪಯೋಗಮಾಡದೆ ಹೆರದಿಂದ ಬಿಡುವಂಥ ( ದೇಹಿನಃ ) ಪ್ರಾಣಿಮಾತ್ರಕ್ಕೇ — ಎಂದರೆ ಮೂರ್ಖರಿಗೂ ರೋಗಿಗಳಿಗೂ ಕೂಡ (ರಸವರ್ಜಂ) ತಾವು ಅವನಲ್ಲಿ ಉಂಟುಮಾಡಿರುವ ಪ್ರೀತಿಯನ್ನು ಹಾಗೆಯೇ ಅಲ್ಲಿಯೇ ಬಿಟ್ಟು ( ವಿನಿವರ್ತಂತೇ ) ಹಿಮ್ಮೆಟ್ಟುತ್ತವೆ ( ಅಸ್ಯ ) ಈ ಜ್ಞಾನಿಗಾದರೊ (ಪರಂ) ಪರಮಾತ್ಮಸ್ವರೂಪವನ್ನು [ ದೃಷ್ಟ್ವಾ ] ಕಂಡ ಮೇಲೆ [ರಸೋಽಪಿ] ಆ ಪ್ರೀತಿಯು ಕೂಡ [ನಿವರ್ತತೇ] ಹಿಮ್ಮೆಟ್ಟುತ್ತದೆ

ಪರಮಾತ್ಮದರ್ಶನದಿಂದ ವಿವೇಕವನ್ನು ನೆಲೆಗೆ ನಿಲ್ಲಿಸಿಕೊಳ್ಳಬೇಕೆನ್ನುವವರು ಮೊದಲು ಇಂದ್ರಿಯಗಳನ್ನು ಹಿಡಿತದಲ್ಲಿ ನಿಲ್ಲಿಸಿಕೊಳ್ಳುವದಕ್ಕೆ ಹೆಣಗಬೇಕು ಇಲ್ಲದಿದ್ದರೆ —

**ಯತತೋ ಹ್ಯಪಿ ಕೌಂತೇಯ ಪುರಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦ ॥**

[ಕೌಂತೇಯ] ಅರ್ಜುನನೆ, ಕೇಳು. [ಯತತಃ] ಎಷ್ಟೋ ಹೆಣಗುತ್ತಿರುವ [ವಿಪಶ್ಚಿತಃ] ವಿವೇಕಿಯಾದ [ಪುರುಷಸ್ಯ ಹ್ಯಪಿ] ಪುರುಷನಿಗೆ ಕೂಡ, ಕಾವಲುಗಾರರಿಗೆಲ್ಲ ಮಂಕುಬೂದಿಯನ್ನು ಹಾಕಿ ಕಳ್ಳರು ಹಣಗಾರನ ಹಣವನ್ನು ಎತ್ತಿಕೊಂಡು ಹೋಗುವಂತೆ, [ಪ್ರಮಾಥೀನಿ] ಮನುಷ್ಯನನ್ನು ಹತ್ತುಕಡೆಗೂ ಜಗ್ಗಿ ಮುಂಗಾಣದಂತೆ ಮಾಡುವಂಥ [ಇಂದ್ರಿಯಾಣಿ] ಇಂದ್ರಿಯಗಳು [ಪ್ರಸಭಂ] ಅವನ ಕಣ್ಣೆದುರಿಗೇ [ಮನಃ] ವಿವೇಕದಿಂದ ಕೂಡಿದ್ದ ಅವನ ಮನಸ್ಸನ್ನು [ಹರಂತಿ] ಹಾರಿಸಿಕೊಂಡು ಹೋಗುತ್ತವೆ

ಆದ್ದರಿಂದ :—

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥**

[ತಾನಿ] ಆ [ಸರ್ವಾಣಿ] ಎಲ್ಲ ಇಂದ್ರಿಯಗಳನ್ನೂ [ಸಂಯಮ್ಯ] ಬಿಗಿಹಿಡಿದು [ಮತ್ಪರಃ] ಪರಮಾತ್ಮನಾದ ನಾನೇ ತನಗೆ ಹೆಚ್ಚಿನ ಗತಿಯೆಂದು [ಯುಕ್ತಃ] ನನ್ನಲ್ಲಿ ಮನಸ್ಸಿಟ್ಟವನಾಗಿ [ಆಸೀತ] ಆಗಿರಬೇಕು. [ಹಿ] ಏಕೆಂದರೆ [ಯಸ್ಯ] ಯಾರಿಗೆ [ಇಂದ್ರಿಯಾಣಿ] ಇಂದ್ರಿಯಗಳು [ವಶೇ] ಹಿಡಿತದಲ್ಲಿರುವವೊ [ತಸ್ಯ] ಅವನಿಗೆ, ಅಭ್ಯಾಸದ ಬಲದಿಂದ [ಪ್ರಜ್ಞಾ] ವಿವೇಕದ ಬುದ್ಧಿಯು [ಪ್ರತಿಷ್ಠಿತಾ] ಒಂದು ನೆಲೆಗೆ ನಿಂತಿರುವದು.

ವಿಷಯಗಳಿಗೆ ಸೋತರೆ ಆಗುವ ಅನರ್ಥವೇನೆಂದರೆ :—

**ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ**
**ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥ ೬೩ ॥**

[ವಿಷಯಾನ್] ಶಬ್ದ, ಸ್ಪರ್ಶ- ಮೊದಲಾದವುಗಳ ಸುಖಗಳನ್ನೂ ಅವುಗಳ ಸಾಧನಗಳನ್ನೂ [ಧ್ಯಾಯತಃ] ಆಲೋಚಿಸುತ್ತಿರುವ [ಪುಂಸಃ] ಪುರುಷನಿಗೆ [ತೇಷು] ಆ ವಿಷಯಗಳಲ್ಲಿ [ಸಂಗಃ] ಬಹು ಚೆನ್ನಾಗಿರುವದೆಂಬ ಪ್ರೀತಿಯು [ಉಪಜಾಯತೇ] ಹುಟ್ಟುತ್ತದೆ. [ಸಂಗಾತ್] ಆ ಪ್ರೀತಿಯಿಂದ [ಕಾಮಃ] ಅದು ಬೇಕೆಂಬ ಬಯಕೆಯು [ಸಂಜಾಯತೇ] ಹುಟ್ಟುತ್ತದೆ. [ಕಾಮಾತ್] ಆ ಬಯಕೆಯಿಂದ [ಕ್ರೋಧಃ] ಅದನ್ನು ದೊರೆಯದ ಹಾಗೆ ಮಾಡುವವರ ಮೇಲಿನ ಸಿಟ್ಟು [ಅಭಿಜಾಯತೇ] ತಲೆ ಎತ್ತುತ್ತದೆ. [ಕ್ರೋಧಾತ್] ಆ ಸಿಟ್ಟಿನಿಂದ [ಸಮ್ಮೋಹಃ] ವಿವೇಕವನ್ನು ಹಾಳುಮಾಡುವ ಭ್ರಮೆಯು [ಭವತಿ] ಉಂಟಾಗುತ್ತದೆ. [ಸಮ್ಮೋಹಾತ್] ಆ ಭ್ರಮೆಯಿಂದ [ಸ್ಮೃತಿವಿಭ್ರಮಃ] ಶಾಸ್ತ್ರವೂ ಆಚಾರ್ಯರೂ ಹೇಳಿದ ಉಪದೇಶದ ನೆನಪಾಗುವ ಪ್ರಸಂಗವು ಬಂದರೂ ನೆನಪಾಗದೆ ಹೋಗುವದು. [ಸ್ಮೃತಿಭ್ರಂಶಾತ್] ನೆನಪಾಗದೆ ಹೋಗುವದರಿಂದ [ಬುದ್ಧಿನಾಶಃ] ವಿವೇಕದಿಂದ ನಿರ್ಣಯ

ಮಾಡುವ ಬುದ್ಧಿಯೇ ಹಾಳಾಗಿ ಹೋಗುವದು. [ಬುದ್ಧಿನಾಶಾತ್] ಬುದ್ಧಿ ಹಾಳಾಗಿಹೋಗುವದರಿಂದ (ಪ್ರಣಶ್ಯತಿ) ಅವನೇ ನಾಶವಾಗುವನು. ಬುದ್ಧಿಯು ನಾಶವಾದ ಮೇಲೆ ಅವನು ಧರ್ಮ, ಅರ್ಥ, ಕಾಮ, ಮೋಕ್ಷ— ಎಂಬ ಪುರುಷಾರ್ಥಗಳನ್ನು ಪಡೆಯುವದಕ್ಕೆ ಅಯೋಗ್ಯನಾಗುವದರಿಂದ ಅವನಿದ್ದರೂ ಇಲ್ಲದಂತೆಯೆ.

ವಿಷಯಗಳ ಧ್ಯಾನವು ಹೀಗೆ ಅನರ್ಥಕ್ಕೆ ಕಾರಣವಾದ ಮೇಲೆ ಮೋಕ್ಷಕ್ಕೇನು ಮಾಡಬೇಕಾಗುವದೆಂದರೆ :—

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ** ॥ ೬೪ ॥

ಮನಸ್ಸು ಹಿಡಿತದಲ್ಲಿಲ್ಲದವನು ವಿಷಯಗಳಲ್ಲಿ ಒಂದು ಬೇಕೆಂದೂ ಇನ್ನೊಂದು ಬೇಡವೆಂದೂ ವ್ಯವಹಾರಮಾಡುತ್ತ ಅನರ್ಥಕ್ಕೆ ಗುರಿಯಾಗುವನಷ್ಟೆ (ವಿಧೇಯಾತ್ಮಾ) ಮನಸ್ಸನ್ನು ತಾನು ಹೇಳಿದಂತೆ ಕೇಳುವ ಹಾಗೆ ಮಾಡಿಕೊಂಡಿರುವವನು (ರಾಗದ್ವೇಷವಿಯುಕ್ತೈಸ್ತು) ಬೇಕೆಂದು ಒಂದರ ಮೇಲೆ ಪ್ರೀತಿಯೂ ಬೇಡವೆಂದು ಇನ್ನೊಂದರಮೇಲೆ ಹಗೆತನವೂ ಇಲ್ಲದೆ ಇರುವಂಥ ಮತ್ತು (ಆತ್ಮವಶ್ಯೈಃ) ತಾನು ಹೇಳಿದ ಹಾಗೆ ಕೇಳುವಂಥ (ಇಂದ್ರಿಯೈಃ) ಕಣ್ಣು, ಕಿವಿ—ಮೊದಲಾದ ಇಂದ್ರಿಯಗಳಿಂದ [ವಿಷಯಾನ್] ರೂಪ, ಶಬ್ದ— ಮೊದಲಾದ ವಿಷಯಗಳೊಡನೆ [ಚರನ್] ವ್ಯವಹಾರವನ್ನು ಮಾಡಿ [ಪ್ರಸಾದಂ] ಚಿತ್ತಶುದ್ಧಿಯ ಲಕ್ಷಣವಾದ ಪ್ರಸನ್ನತೆಯನ್ನು [ಅಧಿಗಚ್ಛತಿ] ಪಡೆಯುತ್ತಾನೆ

ಆ ಪ್ರಸನ್ನತೆಯ ಫಲವೇನೆಂದರೆ :—

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ** ॥ ೬೫ ॥

[ ಅಸ್ಯ ] ಹೀಗೆ ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡಿರುವವನಿಗೆ [ ಪ್ರಸಾದೇ ] ಪ್ರಸನ್ನತೆಯುಂಟಾದರೆ [ ಸರ್ವದುಃಖಾನಾಂ ] ರೋಗ, ಮನೋವ್ಯಥೆ, ವಿಪತ್ತು—ಮೊದಲಾದ ಎಲ್ಲ ದುಃಖಗಳ [ಹಾನಿಃ] ನಾಶವು [ಉಪಜಾಯತೇ] ಉಂಟಾಗುತ್ತದೆ. [ಪ್ರಸನ್ನಚೇತಸಃ ಹಿ] ಮನಸ್ಸಿನಲ್ಲಿ ಪ್ರಸನ್ನತೆಯುಂಟಾದವನಿಗೆ [ ಆಶು ] ಬೇಗ [ ಬುದ್ಧಿಃ ] ಅಂತಃಕರಣವು [ಪರ್ಯವತಿಷ್ಠತೆ] ಆತ್ಮಸ್ವರೂಪದಲ್ಲಿಯೇ ನೆಲೆಗೊಳ್ಳುತ್ತದೆ ಹೀಗೆ ಮನಸ್ಸಿನ ಪ್ರಸನ್ನತೆಯನ್ನು ಪಡೆದವರು ಕೃತಕೃತ್ಯರಾಗುವದರಿಂದ ಸಾಧಕರು ವಿಷಯ ಗಳೊಡನೆ ವ್ಯವಹಾರಮಾಡುವಾಗ ಒಂದನ್ನು ಬೇಕೆನ್ನದೆ ಇನ್ನೊಂದನ್ನು ಬೇಡವೆನ್ನದೆ ಶಾಸ್ತ್ರಕ್ಕೆ ಸಮ್ಮತವಾದ ರೀತಿಯಲ್ಲಿರಬೇಕು.

ಈ ಪ್ರಸನ್ನತೆಯಿಲ್ಲದವರ ಬಾಳು ವ್ಯರ್ಥವೆಂಬುದನ್ನು ಕೇಳು —

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥ ೬೬ ॥**

[ಅಯುಕ್ತಸ್ಯ] ಮನಸ್ಸನ್ನು ಪರಮಾತ್ಮನಲ್ಲಿ ಏಕಾಗ್ರವಾಗಿ ಇರಿಸಿ ಕೊಳ್ಳಲಾರದವನಿಗೆ [ಬುದ್ಧಿಃ] ಆತ್ಮಸ್ವರೂಪವನ್ನು ಗ್ರಹಿಸುವ ಬುದ್ಧಿಯು [ನಾಸ್ತಿ] ಇರುವದಿಲ್ಲ [ಅಯುಕ್ತಸ್ಯ] ಮನಸ್ಸಿನ ಆ ಏಕಾಗ್ರತೆ ಇಲ್ಲದವನಿಗೆ [ನ ಚ ಭಾವನಾ] ಆ ಆತ್ಮಸ್ವರೂಪದ ಮೇಲಿನ ವಿಶೇಷಪ್ರೀತಿಯೂ ಇರುವದಿಲ್ಲ [ ಅಭಾವಯತಃ ] ಪರಮಾತ್ಮನ ಮೇಲೆ ಆ ವಿಶೇಷ ಪ್ರೀತಿಯಿಲ್ಲದವನಿಗೆ [ನ ಚ ಶಾಂತಿಃ] ವಿಷಯಗಳ ಸೆಳೆತವನ್ನು ತಪ್ಪಿಸಿಕೊಂಡ ಶಾಂತಿಯೂ ಇಲ್ಲ [ ಅಶಾಂತಸ್ಯ ] ಆ ಶಾಂತಿ ಇಲ್ಲದವನಿಗೆ [ ಸುಖಂ ] ಸುಖವು [ ಕುತಃ ] ಎಲ್ಲಿಯದು !

ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿರಿಸಿಕೊಳ್ಳಲಾರದವನಿಗೆ ಆತ್ಮಸ್ವರೂ ಪವನ್ನು ಗ್ರಹಿಸುವ ಬುದ್ಧಿ ಏಕಿಲ್ಲವೆಂದರೆ .—

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭ ॥**

(ಹಿ) ಏಕೆಂದರೆ (ಚರತಾಂ) ತಮ್ಮ ತಮ್ಮ ವಿಷಯಗಳೊಡನೆ ವ್ಯವಹಾರಮಾಡುವಂಥ (ಇಂದ್ರಿಯಾಣಾಂ) ಇಂದ್ರಿಯಗಳನ್ನು (ಯತ್ ಮನಃ ಅನುವಿಧೀಯತೇ) ಮನಸ್ಸು ಹಿಂಬಾಲಿಸಿ ಹೋಗುವದೆಂಬುವದು ಯಾವದೋ (ತತ್) ಅದು (ಅಂಭಸಿ) ನೀರಿನಲ್ಲಿ ಪ್ರಯಾಣಮಾಡುವ (ನಾವಂ) ಹಡಗನ್ನು (ವಾಯುಃ ಇವ) ಗಾಳಿ ಹೇಗೆ ಅಡ್ಡದಾರಿಗೆ ಹೊಡೆದುಕೊಂಡು ಹೋಗುವದೋ ಹಾಗೆ (ಅಸ್ಯ) ಈ ಸಾಧಕನ (ಪ್ರಜ್ಞಾಂ) ವಿವೇಕದ ಬುದ್ಧಿಯನ್ನು (ಹರತಿ) ಹಾರಿಸಿಕೊಂಡು ಹೋಗುತ್ತದೆ

ಇದರಿಂದ ನಿರ್ಣಯವಾಗುವದೇನೆಂದರೆ —

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**

(ಮಹಾಬಾಹೋ) ಅರ್ಜುನನೆ, ಕೇಳು. (ತಸ್ಮಾತ್) ಹೀಗೆ ಇಂದ್ರಿಯಗಳು ತಮ್ಮ ಮನಸ್ಸುಬಂದಂತೆ ವಿಷಯಗಳೊಡನೆ ವ್ಯವಹಾರ ಮಾಡುವದರಲ್ಲಿ ದೋಷವಿರುವದರಿಂದ (ಯಸ್ಯ) ಯಾರ (ಇಂದ್ರಿಯಾಣಿ) ಇಂದ್ರಿಯಗಳು (ಇಂದ್ರಿಯಾರ್ಥೇಭ್ಯಃ) ಅವವುಗಳ ವಿಷಯಗಳಿಂದ (ಸರ್ವಶಃ) ಎಲ್ಲ ಬಗೆಯಿಂದಲೂ (ನಿಗೃಹೀತಾನಿ) ಹಿಡಿತದಲ್ಲಿ ನಿಂತವುಗಳಾಗುವವೊ (ತಸ್ಯ) ಆವನ (ಪ್ರಜ್ಞಾ) ವಿವೇಕದ ಬುದ್ಧಿಯು (ಪ್ರತಿಷ್ಠಿತಾ) ಒಂದು ನೆಲೆಗೆ ನಿಂತಿರುವದು.

ವಿವೇಕದ ಬುದ್ಧಿಯು ನೆಲೆಗೊಂಡವರಲ್ಲಿ ವ್ಯವಹಾರವು ಕಂಡರೂ ಅದು ಹೇಗಿರುವದೆಂದರೆ —

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥**

(ಸರ್ವಭೂತಾನಾಂ) ಎಲ್ಲ ಜೀವರಾಶಿಗೂ (ಯಾ) ಯಾವದು [ನಿಶಾ] ರಾತ್ರಿಯೊ [ತಸ್ಯಾಂ] ಅದರಲ್ಲಿ [ಸಂಯಮೀ] ಇಂದ್ರಿಯಗಳನ್ನೆಲ್ಲ ಹಿಡಿತದಲ್ಲಿಟ್ಟುಕೊಂಡಿರುವವನು [ಜಾಗರ್ತಿ] ಎಚ್ಚತ್ತು ನೋಡುತ್ತಿರುವನು

ರಾತ್ರಿಕಾಲದಲ್ಲಿ ಸಾಮಾನ್ಯವಾಗಿ ಯಾರಿಗೂ ಏನೂ ಕಾಣುವದಿಲ್ಲವಷ್ಟೆ. ಸಮಸ್ತಪ್ರಾಣಿಗಳಿಗೂ ಆತ್ಮಸ್ವರೂಪವು ರಾತ್ರಿಯಂತೆ ಆ ಆತ್ಮಸ್ವರೂಪವೆಂಬ ರಾತ್ರಿಯಲ್ಲಿ ಜಿತೇಂದ್ರಿಯನು ಎಚ್ಚರವಾಗಿದ್ದು ನೋಡುತ್ತಿರುವನು. ಯಾರಿಗೂ ಕಾಣದೆ ಇರುವ ಆತ್ಮ ತತ್ತ್ವವು ಅವನಿಗೆ ಹಗಲಿನಂತೆ ಚೆನ್ನಾಗಿ ಕಾಣುತ್ತಿರುವದು [ಭೂತಾನಿ] ಎಲ್ಲ ಪ್ರಾಣಿಗಳೂ [ಯಸ್ಯಾಂ] ಯಾವ ವಿಷಯದಲ್ಲಿ [ಜಾಗ್ರತಿ] ಹಗಲಿನಂತೆ ಎಚ್ಚತ್ತು ನೋಡುತ್ತಿರುವವೋ [ಸಾ] ಅದು [ಪಶ್ಯತಃ] ಆತ್ಮಸ್ವರೂಪವನ್ನು ನೋಡಬಲ್ಲ [ಮುನೇಃ] ಮುನಿಗೆ [ನಿಶಾ] ರಾತ್ರಿಯು. ಎಲ್ಲ ಪ್ರಾಣಿಗಳೂ ಪ್ರಪಂಚವ್ಯವಹಾರವನ್ನು ಚೆನ್ನಾಗಿ ಕಾಣುತ್ತಿರುವರಷ್ಟೆ. ಅದು ಅವರಿಗೆ ಹಗಲಿನಂತೆ. ಆ ಪ್ರಪಂಚವ್ಯವಹಾರ ವೆಂಬ ಎಲ್ಲರ ಹಗಲಿನಲ್ಲಿ ಆ ಆತ್ಮತತ್ತ್ವವನ್ನರಿತವರು ಏನನ್ನೂ ಕಾಣದಿರು ವರು. ಅವರಿಗೆ ಪ್ರಪಂಚವು ಸತ್ಯವೆಂಬ ಬುದ್ಧಿಯಿಲ್ಲದ್ದರಿಂದ ಅವರ ಭಾಗಕ್ಕೆ ಅದು ಇದ್ದೂ ಇಲ್ಲದಂತೆಯೆ. ಆದ್ದರಿಂದ ಅದು ಅವರಿಗೆ ರಾತ್ರಿ. ನೋಡಿ ದವರಿಗೆ ಅವರು ವ್ಯವಹಾರದಲ್ಲಿರುವರೆಂದು ಕಾಣುವರೇ ಹೊರತು ಅವರು ಅದನ್ನು ಸತ್ಯವೆಂದು ನಡೆಸುತ್ತಿರುವದಿಲ್ಲ

ಹೀಗೆ ಆತ್ಮವಸ್ತುವೊಂದೇ ಯಾವಾಗಲೂ ಇರುವದೆಂದು ತಿಳಿದು ವಿಷಯಪ್ರಪಂಚವನ್ನೆಲ್ಲ ಮೂರು ದಿನದ ಬಾಳಿನದೆಂದು ಬಯಕೆಯನ್ನು ಬಿಟ್ಟವರಿಗೇ ಮೋಕ್ಷವಲ್ಲದೆ ಇತರರಿಗಲ್ಲವೆಂಬುದಕ್ಕೆ ದೃಷ್ಟಾಂತವೇನೆಂದರೆ –

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ೭೦ ॥**

[ಆಪೂರ್ಯಮಾಣಂ] ಎಲ್ಲ ಕಡೆಯಿಂದ ನೀರು ಬಂದು ತುಂಬುತ್ತಿರುವ ಮತ್ತು [ಅಚಲಪ್ರತಿಷ್ಠಂ] ಅಲ್ಲಾಡದೆ ಒಂದೇ ಸ್ಥಿತಿಯಲ್ಲಿರುವ [ಸಮುದ್ರಂ

ಸಮುದ್ರವನ್ನು [ಆಪಃ]ಎಲ್ಲಕಡೆಯಿಂದ ಬರುವ ದೊಡ್ಡ ಮತ್ತು ಚಿಕ್ಕ ನೀರಿನ ತೊರೆಗಳು (ಯದ್ವತ್) ಹೇಗೆ ಆ ಸಮುದ್ರದಲ್ಲೇನೂ ಹೆಚ್ಚುಕಡಿಮೆಯಾಗಿ ತೊರದೆ ಇರುವ ರೀತಿಯಲ್ಲಿ, (ಪ್ರವಿಶಂತಿ) ಗಂಗಾ, ಸಿಂಧೂ—ಮೊದಲಾದ ತಮ್ಮ ಹೆಸರನ್ನೂ ರೂಪವನ್ನೂ ಕಳೆದುಕೊಂಡು ಅದರಲ್ಲಿಯೇ ಒಂದಾಗಿ ಹೊಗುವವೊ (ತದ್ವತ್) ಹಾಗೆ(ಸರ್ವೇ) ಎಲ್ಲ (ಕಾಮಾಃ)ಬಯಕೆಗಳು(ಯಂ) ಯಾವ ಮುನಿಯನ್ನ(ಪ್ರವಿಶಂತಿ) ಅವನಲ್ಲೇನೂ ಹೆಚ್ಚು ಕಡಿಮೆಯನ್ನುಂಟು ಮಾಡಲಾರದೆ ತಾವೇ ತಮ್ಮ ಸ್ವರೂಪವನ್ನು ಕಳೆದುಕೊಂಡು ಅವನಲ್ಲಿ ಒಂದಾಗಿ ಹೋಗುವವೊ ( ಸಃ ) ತಾನಾಗಿ ಬಂದ ಆ ವಿಷಯಗಳನ್ನು ಅನುಭವಿಸಿದರೂ ಮನಸ್ಸಿನಲ್ಲಿ ಹಿಗ್ಗುತಗ್ಗುಗಳಿಲ್ಲದೆ ಇರುವ ಅವನು (ಶಾಂತಿಂ) ಮೋಕ್ಷರೂಪವಾದ ಶಾಂತಿಯನ್ನು (ಆಪ್ನೋತಿ) ಪಡೆಯುತ್ತಾನೆ. (ಕಾಮಕಾಮಿ) ಬಯಕೆಗಳನ್ನು ಬಯಸುವವನು ( ನ ) ಆ ಮೋಕ್ಷವನ್ನು ಪಡೆಯುವದಿಲ್ಲ.

ಆದ್ದರಿಂದ —

**ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಃಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧ ॥**

(ಯಃ) ಯಾವ (ಪುಮಾನ್) ಪುರುಷನು (ಕಾಮಾನ್) ವಿಷಯಗಳಿಗೂ ಇಂದ್ರಿಯಗಳಿಗೂ ಸಂಬಂಧವಾಗುವದರಿಂದುಂಟಾಗುವ ಸುಖದ ಬಯಕೆಗಳನ್ನು (ಸರ್ವಾನ್) ಎಲ್ಲವನ್ನೂ (ವಿಹಾಯ) ಬಿಟ್ಟು (ನಿಃಸ್ಪೃಹಃ) ಕೊನೆಗೆ ಶರೀರವನ್ನು ಪುಷ್ಟಿಮಾಡಿಕೊಳ್ಳಬೇಕೆಂಬ ಆಸೆಯನ್ನು ಕೂಡ ತೊರೆದು ( ಚರತಿ ) ಬದುಕಿರುವಷ್ಟರ 'ಮಟ್ಟಿಗೆ ವಿಷಯಗಳೊಡನೆ ವ್ಯವಹಾರ ಮಾಡುತ್ತಿರುವನೊ [ನಿರ್ಮಮಃ) ಪ್ರಾಣರಕ್ಷಣೆಗಾಗಿ ಇರುವ ಉಪಕರಣಗಳಲ್ಲಿ ಕೂಡ ನನ್ನದೆಂಬುದಿಲ್ಲದಿರುವಂಥ ಮತ್ತು (ನಿರಹಂಕಾರಃ) ನಾನು ಪಂಡಿತನೆಂಬ ಮುಂತಾದ ದುರಭಿಮಾನವಿಲ್ಲದಂಥ (ಸಃ) ಅವನು (ಶಾಂತಿಂ) ಹುಟ್ಟು, ಸಾವು-ಮೊದಲಾದ ಎಲ್ಲ ದುಃಖಗಳೂ ಹುಟ್ಟಳಿದು ಹೋದ ಸ್ಥಿತಿಯನ್ನು (ಅಧಿಗಚ್ಛತಿ) ಪಡೆಯುತ್ತಾನೆ

ಅದರ ಫಲವೇನೆಂದರೆ —

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಽಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨ ॥**

(ಪಾರ್ಥ) ಅರ್ಜುನನೆ, ಕೇಳು (ಏಷಾ) ಈ ಸ್ಥಿತಿಯು (ಬ್ರಾಹ್ಮೀ ಸ್ಥಿತಿಃ) ಬ್ರಹ್ಮಸ್ವರೂಪದಲ್ಲಿಯೇ ನೆಲೆಗೊಂಡಿರುವ ಬ್ರಹ್ಮನಿಷ್ಠೆಯು (ಏನಾಂ) ಈ ಬ್ರಹ್ಮನಿಷ್ಠೆಯನ್ನು (ಪ್ರಾಪ್ಯ) ಪಡೆದ ಮೇಲೆ [ನ ವಿಮುಹ್ಯತಿ] ನೀನು ಈಗ ಬ್ರಾಹ್ಮಣರ ಧರ್ಮವಾದ ಭಿಕ್ಷಾಚರ್ಯೆಯನ್ನು ಕ್ಷತ್ರಿಯನಾದ ನಿನಗೆ ಯೋಗ್ಯವಾದದ್ದೆಂದೂ ಭೀಷ್ಮ ದ್ರೋಣ-ಮೊದಲಾದವರ ದೇಹಗಳು ಸತ್ತರ ಅವರೇ ಸತ್ತರೆಂದೂ ಮುಂತಾಗಿ ಮೋಹಗೊಂಡಿರುವಂತೆ ಯಾರೂ ಮೋಹಗೊಳ್ಳುವದಿಲ್ಲ. ಈ ಸ್ಥಿತಿಯು ನಿನಗೆ ಇನ್ನೂ ಬಂದಿಲ್ಲವೆಂದು ನೀನು ನಿರಾಶನಾಗಬೇಡ [ಅಸ್ಯಾಂ] ಈ ಬ್ರಹ್ಮನಿಷ್ಠೆಯ ಸ್ಥಿತಿಯಲ್ಲಿ [ಅಂತಕಾಲೇಽಪಿ]* ಸಾಯುವಾಗಲಾದರೂ [ಸ್ಥಿತ್ವಾ] ಇದ್ದರೆ [ಬ್ರಹ್ಮನಿರ್ವಾಣಂ] * ತಾನು ಶುದ್ಧಬ್ರಹ್ಮವೇ ಆಗಿ ಪ್ರಾಣ ಮೊದಲಾದ ಯಾವ ಸಂಬಂಧವೂ ಇಲ್ಲದ ಸ್ಥಿತಿಯನ್ನು [ಋಚ್ಛತಿ] ಪಡೆಯುತ್ತಾನೆ

---

* 'ಅಂತಕಾಲೇಽಪಿ' ಎಂಬ ಮಾತಿಗೆ 'ಸಾಯುವಾಗ ಕೂಡ' ಎಂದು ಸಹಜವಾಗಿ ಅರ್ಥವಾದರೂ ಅದು ಇಲ್ಲಿ ಹೊಂದುವದಿಲ್ಲ. ಏಕೆಂದರೆ ಬ್ರಹ್ಮಜ್ಞಾನವೆಂಬುವದು ಮನಸ್ಸಿನಲ್ಲಿ ಅಳಿದು ಹೋಗುತ್ತಿರುವ ಕೆಲಸವಲ್ಲ ಅಳಿದು ಹೋಗುವದು ಭಾವನೆ. ಭಾವನೆಯಿಂದ ಮುಂದೆ ಒಳ್ಳೆ ಜನ್ಮ ಬರುವದೆ ಹೊರತು ಬ್ರಹ್ಮನಿರ್ವಾಣವು ದೊರೆಯುವದಿಲ್ಲ. ಬ್ರಹ್ಮನಿರ್ವಾಣವು ಜ್ಞಾನದ ಫಲ. ಆ ಜ್ಞಾನವು ಸಾಯುವಾಗ ಬಂದರೂ ಕೂಡ ಒಡನೆ ಅವನು ಬ್ರಹ್ಮನೇ ಆಗಿಬಿಡುವನು ಆದ್ದರಿಂದ ಆ ಮಾತಿಗೆ 'ಸಾಯುವಾಗಲಾದರೂ' ಎಂದರ್ಥ

* "ನ ತಸ್ಯ ಪ್ರಾಣಾ ಉತ್ಕ್ರಾಮಂತ್ಯತ್ರೈವ ಸಮವಲೀಯಂತೇ ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ" - ಅವನ ಪ್ರಾಣಗಳು ಅಲ್ಲಿಂದ ಬಿಟ್ಟು ಹೊರಡುವದಿಲ್ಲ. ಅಲ್ಲಿಯೇ ಅಡಗಿ ಹೋಗುವವು. ಅವನು ಬ್ರಹ್ಮನೇ ಆಗಿದ್ದು ಬ್ರಹ್ಮವನ್ನು ಪಡೆಯುವನು. — ಶ್ರು.

ಈ ರೀತಿಯಲ್ಲಿ ಸಾಯುವಾಗ ಬಂದ ಸ್ಥಿತಿಯಿಂದಲೇ ಇಂಥ ಫಲವಾಗುತ್ತಿರುವಾಗ ಚಿಕ್ಕಂದಿನಿಂದ ಆ ಸ್ಥಿತಿಯಲ್ಲಿದ್ದರಂತು ಹೇಳುವದೇನು !

ಇಲ್ಲಿಗೆ **ಸಾಂಖ್ಯಯೋಗ** ವೆಂಬ
ಎರಡನೆ ಅಧ್ಯಾಯವು ಮುಗಿಯಿತು



# ಮೂರನೆ ಅಧ್ಯಾಯ

ಅರ್ಜುನನ ಶೋಕಮೋಹಗಳನ್ನು ಹೋಗಲಾಡಿಸುವದಕ್ಕಾಗಿ ಶ್ರೀ ಕೃಷ್ಣನು ಅವನಿಗೆ ಆತ್ಮಜ್ಞಾನವನ್ನುಪದೇಶಮಾಡಿದನು ಅದು ಅವನ ಮನಸ್ಸಿನ ಮೇಲೆ ಹೆಚ್ಚು ಕಾರ್ಯಕಾರಿಯಾದಂತೆ, ಕಾಣಲಿಲ್ಲ, ಆದ್ದರಿಂದ ಅವನಿಗೆ ಆತ್ಮಜ್ಞಾನವನ್ನು ಗ್ರಹಿಸುವ ಯೋಗ್ಯತೆಯನ್ನು ಬರಮಾಡಿಕೊಡಬೇಕೆಂದು ಅವನು ಕರ್ಮಯೋಗವನ್ನುಪದೇಶಮಾಡಿ ಅದರ ಸಿದ್ಧಿಯರೂಪವಾಗಿ ಜ್ಞಾನವಾಗುವದೆಂದು ಹೇಳಿ ಆ ಜ್ಞಾನನಿಷ್ಠೆಯನ್ನು ಬಾಯತುಂಬ ಹೊಗಳಿದನು ಯಾರಿಗೂ ತೊಂದರೆ ಇಲ್ಲದ ಮತ್ತು ಎಲ್ಲಕ್ಕಿಂತಲೂ ಹೆಚ್ಚಿನದಾಗಿರುವ ಜ್ಞಾನನಿಷ್ಠೆಯನ್ನು ಬಿಟ್ಟು ಅದಕ್ಕಿಂತ ಕೀಳಾದ ಕರ್ಮಯೋಗವನ್ನು ನಡೆಸುವದಕ್ಕೆ ಮನಸ್ಸೊಗ್ಗದ್ದೆ,

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು —

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ? ॥**

( ಜನಾರ್ದನ ) ಹುಟ್ಟುಸಾವುಗಳನ್ನು ಕಳೆಯುವವನೆ, ( ಕೇಶವ ) ಸರ್ವೇಶ್ವರನಾದ ಕೃಷ್ಣನೆ, ಕೇಳು (ತೇ) ನಿನಗೆ (ಕರ್ಮಣಃ) ಕರ್ಮ

ಕ್ಕಿಂತಲೂ (ಬುದ್ಧಿಃ) ಜ್ಞಾನವು (ಜ್ಯಾಯಸೀ) ಹೆಚ್ಚಿನದೆಂದು (ಮತಾಚೇತ್) ಅಭಿಪ್ರಾಯವಿದ್ದರೆ (ತತ್ಕಿಂ) ಆದೇಕೆ (ಮಾಂ) ನನ್ನನ್ನು (ಘೋರೇ) ಅನೇಕ ಹಾನಿಯಾಗುವಂಥ (ಕರ್ಮಣಿ) ಕರ್ಮದಲ್ಲಿ (ನಿಯೋಜಯಸಿ) ತೊಡಗಿಸುತ್ತಿ ?

ಮತ್ತೇನೆಂದರೆ —

**ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥**

ನೀನು ತಪ್ಪುತಿಳಿವಳಿಕೆಯೆಲ್ಲ ಹೋಗುವಂತೆ ಸ್ಪಷ್ಟವಾಗಿಯೇ ಹೇಳುವವನಾದರೂ ಈಗ (ವ್ಯಾಮಿಶ್ರೇಣೈವ) ಎರಡರ್ಥಗಳನ್ನೇ ಕೊಡುವ (ವಾಕ್ಯೇನ) ಮಾತಿನಿಂದ (ಮೇ) ನನ್ನ (ಬುದ್ಧಿಂ) ಅಂತಃಕರಣವನ್ನು (ಮೋಹಯಸೀವ) ಮೋಹಗೊಳಿಸುವಂತೆ ತೋರುತ್ತಿ. ಏಕೆಂದರೆ ಒಮ್ಮೆ ಮೂರು ಗುಣಗಳನ್ನೂ ಗೆಲ್ಲೆಂದು ಹೇಳಿದೆ (೨-೪೫). ಅದರ ಮುಂದೆಯೇ 'ನಿನಗೆ ಕರ್ಮದಲ್ಲಿಯೇ ಅಧಿಕಾರ (೨-೪೭)' ಎಂದು ಹೇಳಿದೆ. ಒಮ್ಮೆ ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತ ಹೆಚ್ಚಿನದು ಯಾವದೂ ಇಲ್ಲವೆಂದು (೨-೩೧) ಪ್ರವೃತ್ತಿಮಾರ್ಗವನ್ನು ಹೇಳಿದೆ. ಆಮೇಲೆ ಯೋಗಕ್ಷೇಮದ ಚಿಂತೆಯನ್ನು ಕೂಡ ಬಿಡೆಂದು (೨-೪೫) ನಿವೃತ್ತಿ ಮಾರ್ಗವನ್ನು ತೋರಿಸಿದೆ. ಇವೆರಡನ್ನೂ ಒಬ್ಬನೇ ಏಕಕಾಲದಲ್ಲಿ ನಡೆಸುವದಂತು ಅಸಂಭವ. ಬೇರೆಬೇರೆಯವರು ನಡೆಸುವ ಮಾರ್ಗಗಳಾದರೆ ನನಗೆ ಎರಡನ್ನೂ ಹೇಳುವ ಕಾರಣವೇ ಇರಲಿಲ್ಲ. ಆದ್ದರಿಂದ ನಿನ್ನ ಮಾತು ನನಗೆ ಭ್ರಾಂತಿಯನ್ನುಂಟುಮಾಡಿದೆ. ಈ ಕಾರಣದಿಂದ (ಯೇನ) ಯಾವದರ ಅವಲಂಬನೆಯಿಂದ (ಅಹಂ) ನಾನು (ಶ್ರೇಯಃ) ಮೋಕ್ಷವನ್ನು (ಆಪ್ನುಯಾಂ) ಪಡೆಯುವೆನೊ (ತದೇಕಂ) ಆ ಒಂದನ್ನು (ನಿಶ್ಚಿತ್ಯ) ಗೊತ್ತುಮಾಡಿ (ವದ) ಹೇಳು.

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇಣ ಯೋಗಿನಾಮ್ ॥**

[ಅನಘ] ಪಾಪರಹಿತನಾದ ಅರ್ಜುನನೆ, ಕೇಳು ಈ ಬ್ರಹ್ಮಾಂಡ ದಲ್ಲಿ ಉಳಿದ ಲೋಕಗಳೆಲ್ಲ ಪುಣ್ಯದ ಫಲವಾದ ಸುಖವನ್ನೋ ಪಾಪದ ಫಲವಾದ ದುಃಖವನ್ನೊ ಬರೀ ಅನುಭವಿಸತಕ್ಕವುಗಳು ಭೂಲೋಕವು ಆ ಪುಣ್ಯಪಾಪಗಳನ್ನು ಸಂಪಾದಿಸುವ ಸ್ಥಲ ಆದ್ದರಿಂದ [ ಅಸ್ಮಿನ್] ಈ [ಲೋಕೇ] ಲೋಕದಲ್ಲಿ, ಶಾಸ್ತ್ರದಲ್ಲಿ ಹೇಳಿದಂತೆ ನಡೆಯುವ ಯೋಗ್ಯತೆ ಯುಳ್ಳ ಜನರಿಗಾಗಿ [ ಪುರಾ ] * ಸೃಷ್ಟಿಯ ಕಾಲದಲ್ಲಿಯೇ [ ಮಯಾ ] ನನ್ನಿಂದ, ಜನರ ಏಳಿಗೆಗೆ ಸಾಧನವಾದ [ನಿಷ್ಠಾ] ಸ್ಥಿತಿಯು [ಸಾಖ್ಯಾನಾಂ] ಆತ್ಮಜ್ಞಾನವನ್ನು ಪಡೆದಿರುವವರಿಗೆ [ಜ್ಞಾನಯೋಗೇನ] ಜ್ಞಾನಯೋಗದ ಪ್ರಕಾರದಿಂದ ಮತ್ತು [ಯೋಗಿನಾಂ] ಆ ತತ್ತ್ವಜ್ಞಾನವನ್ನು ಪಡೆಯ ಬೇಕೆಂದು ಯತ್ನಿಸುವ ಸಾಧಕರಿಗೆ [ಕರ್ಮಯೋಗೇಣ] ಕರ್ಮಯೋಗದ ಪ್ರಕಾರದಿಂದ, ಹೀಗೆ [ದ್ವಿವಿಧಾ] ಎರಡು ಪ್ರಕಾರವಾಗಿ [ಪ್ರೋಕ್ತಾ] ಹೇಳಲ್ಪಟ್ಟಿತು.

ನೀನು ಕರ್ಮಯೋಗಕ್ಕೆ ಅಧಿಕಾರಿಯೆಂದು ಹೇಳಿದ್ದರೂ, ' ಅದ ಪಾಪಕರ ' ವೆಂಬ ಭಾವನೆಯಿಂದ ಅದನ್ನು ಕೈಗೊಳ್ಳದಿರುವದು ಏಳಿಗೆಗೆ ಸಾಧನವಾಗುವದಿಲ್ಲ ಏಕೆಂದರೆ —

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ |**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ || ೪ ||**

[ಪುರುಷಃ] ಮನುಷ್ಯನು [ಕರ್ಮಣಾಂ] ಈ ಜನ್ಮದ ಮತ್ತು ಹಿಂದಿನ ಜನ್ಮಗಳ ಪಾಪಗಳನ್ನು ಕಳೆದು ಮನಸ್ಸನ್ನು ಶುದ್ಧಿಮಾಡಿ ಜ್ಞಾನವನ್ನು ಗ್ರಹಿಸುವ ಯೋಗ್ಯತೆಯನ್ನು ತಂದುಕೊಡುವಂಥ ಯಜ್ಞ ಮೊದಲಾದ ಕರ್ಮಗಳ [ಅನಾರಂಭಾತ್] ಪ್ರಾರಂಭವನ್ನೆ ಮಾಡದೆ ಹಿಂದುಳಿಯುವ ದರಿಂದ [ ನೈಷ್ಕರ್ಮ್ಯಂ ] ಆತ್ಮನಿಗೆ ಕರ್ಮಗಳ ಸಂಬಂಧವಿಲ್ಲವೆಂಬ ಜ್ಞಾನದಿಂದಿರುವಿಕೆಯನ್ನು [ನ ಅಶ್ನುತೇ] ಪಡೆಯುವದಿಲ್ಲ ' ಕರ್ಮಗಳನ್ನು ಹಿಡಿಯದೆ ಹೋದರೆ ನಿಷ್ಕ್ರಿಯಾತ್ಮ ಸ್ಥಿತಿ ಬರುವದಿಲ್ಲವೆಂದ ಮೇಲೆ ಕರ್ಮ

* ಈ ಮಾತಿಗೆ ಹಿಂದಿನ ಅಧ್ಯಾಯದಲ್ಲೆಂದೂ ಅರ್ಥವನ್ನು ಮಾಡಬಹುದು

ಗಳನ್ನು ಹಿಡಿದರೆ ಅದು ಬರುವದೆಂದಾಯಿತಲ್ಲ!' ಎಂದರೆ ನಿಜ, ಬರುತ್ತದೆ ಕರ್ಮಯೋಗವು ಜ್ಞಾನಯೋಗಕ್ಕೆ ಸಾಧನವಾದ ಉಪಾಯ ಕರ್ಮದಿಂದ ಚಿತ್ತಶುದ್ಧಿಯಾಗಿ ಜ್ಞಾನವಾಗುವದು. [ಸಂನ್ಯಸನಾದೇವ] ಆತ್ಮನು ಕರ್ಮಗಳ ಸಂಬಂಧವಿಲ್ಲದವನೆಂಬ ಜ್ಞಾನವಿಲ್ಲದೆ ಸುಮ್ಮನೆ ಹಿಡಿದ ಕರ್ಮಗಳನೆಲ್ಲ ಬಿಟ್ಟ ಮಾತ್ರಕ್ಕೇ [ಸಿದ್ಧಿಂ] ಜ್ಞಾನಯೋಗದ ಸ್ಥಿತಿಯನ್ನು [ನ ಚ ಸಮಧಿಗಚ್ಛತಿ] ಪಡೆಯುವದೂ ಇಲ್ಲ.

ಕರ್ಮಗಳನ್ನು ಬಿಡುವದರಿಂದ ನೈಷ್ಕರ್ಮ್ಯವು ಏಕೆ ಸಿದ್ಧಿಸುವದಿಲ್ಲ ವೆಂದರೆ —

**ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

[ಕಶ್ಚಿತ್] ಯಾವನೂ [ಜಾತು] ಎಂದೂ [ಕ್ಷಣಮಪಿ] ಒಂದು ರೆಪ್ಪೆ ಹೊಡೆಯುವಷ್ಟು ಹೊತ್ತು ಕೂಡ [ಅಕರ್ಮಕೃತ್] ಕರ್ಮವನ್ನು ಮಾಡದೆ [ನ ಹಿ ತಿಷ್ಠತಿ] ಇರುವದಿಲ್ಲ. ಹೇಗೆಂದರೆ – [ಸರ್ವಃ] ಪ್ರತಿಯೊಬ್ಬನೂ [ಪ್ರಕೃತಿಜೈಃ] ತಮ್ಮ ಸ್ವಭಾವವಾಗಿ ಹುಟ್ಟಿ ಬಂದಿರುವ [ಗುಣೈಃ] ಸತ್ತ್ವರಜಸ್ತಮೋಗುಣಗಳ ಬಲುಮೆಯಿಂದ [ಅವಶಃ] ತಮ್ಮ ಆಟವೇನೂ ಸಾಗದೆ [ಕರ್ಮ] ಕರ್ಮವನ್ನು [ಕಾರ್ಯತೇ ಹಿ] ಮಾಡಿಸಲ್ಪಡುತ್ತಾನೆ ಎಂದರೆ ಪ್ರತಿಯೊಬ್ಬನೂ ತನ್ನ ಹುಟ್ಟುಗುಣದ ಸೆಳೆತದಂತೆ ಕರ್ಮವನ್ನು ಮಾಡುತ್ತಾನೆ.

ತಿಳಿವಳಿಕೆಯಿಲ್ಲವವರು ತಮ್ಮ ವರ್ಣ ಧರ್ಮಗಳನ್ನು ಮಾಡುವದಿಲ್ಲವೆನ್ನುವದು ಸುಳ್ಳು ಹೇಗೆಂದರೆ .—

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥**

(ಯಃ) ವಿಷಯಗಳ ಮೇಲಿನ ಪ್ರೀತಿ ಮತ್ತು ಹಗೆತನ – ಇವುಗಳಿಂದ ಹೊಲಸಾದ ಮನಸ್ಸುಳ್ಳ ಯಾವನು (ಕರ್ಮೇಂದ್ರಿಯಾಣಿ) ಮಾತು, ಕೈ, ಕಾಲು — ಮೊದಲಾದ ಕರ್ಮೇಂದ್ರಿಯಗಳನ್ನು (ಸಂಯಮ್ಯ

ಬರೀ ಕುತೂಹಲದಿಂ ಬಿಗಿಹಿಡಿದುಕೊಂಡು(ಇಂದ್ರಿಯಾರ್ಥಾನ್)ಶಬ್ದ, ಸ್ಪರ್ಶ ಮೊದಲಾದ ವಿಷಯಗಳನ್ನು (ಮನಸಾ) ಮನಸ್ಸಿನಿಂದ (ಸ್ಮರನ್) ನೆನೆಸುತ್ತ (ಆಸ್ತೇ) ಪರಮಾತ್ಮಸ್ವರೂಪದ ನೆನಪನ್ನು ತಂದುಕೊಳ್ಳದೆ ಇರುತ್ತಾನೊ (ವಿಮೂಢಾತ್ಮಾ) ತಪ್ಪುತಿಳಿವಳಿಕೆಯ ಮನಸ್ಸಿನವನಾದ (ಸಃ) ಅವನು (ಮಿಥ್ಯಾಚಾರಃ) ಸುಳ್ಳುನಟನೆಯುವನು (ಉಚ್ಯತೇ) ಎನಿಸುವನು.

ಹಾಗಲ್ಲದೆ —

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥**

(ಅರ್ಜುನ) ಅರ್ಜುನನೆ, ಕೇಳು (ಯಸ್ತು) ವಿಷಯಗಳೆಲ್ಲ ಮೂರು ದಿನದ ಬಾಳಿನವುಗಳೆಂದು ಉಪೇಕ್ಷೆಯಿಂದ ಯಾವನು (ಇಂದ್ರಿಯಾಣಿ) ಕಣ್ಣು, ಕಿವಿ–ಮೊದಲಾದ ಜ್ಞಾನೇಂದ್ರಿಯಗಳನ್ನು (ಮನಸಾ) ಮನಸ್ಸಿನಿಂದ (ನಿಯಮ್ಯ) ತಡೆದುಕೊಂಡು (ಕರ್ಮೇಂದ್ರಿಯೈಃ) ಮಾತು, ಕೈ, ಕಾಲು-ಮೊದಲಾದ ಕರ್ಮೇಂದ್ರಿಯಗಳಿಂದ (ಕರ್ಮಯೋಗಂ) ನಿಷ್ಕಾಮಕರ್ಮವನ್ನು (ಆರಭತೇ) ಮಾಡುತ್ತಾನೊ (ಅಸಕ್ತಃ) ಫಲದ ಬಯಕೆ ಇಲ್ಲದ (ಸಃ) ಅವನು (ವಿಶಿಷ್ಯತೇ) ಹೆಚ್ಚಿನವನೆನಿಸುತ್ತಾನೆ

ಆದ್ದರಿಂದ —

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ ॥ ೮ ॥**

(ನಿಯತಂ) ಫಲವನ್ನು ಹೇಳದೆ 'ಇದನ್ನು ಮಾಡತಕ್ಕದ್ದು ನಿನ್ನ ಕರ್ತವ್ಯ' ಎಂದು ಹೇಳಿರುವಂಥ (ಕರ್ಮ) ಕರ್ಮವನ್ನು (ತ್ವಂ) ನೀನು (ಕುರು) ಮಾಡು. (ಹಿ) ಏಕೆಂದರೆ (ಅಕರ್ಮಣಃ) ಯಾವ ಕರ್ಮವನ್ನೂ ಮಾಡುವದಿಲ್ಲವೆಂದು ಕುಳಿತುಕೊಳ್ಳುವದಕ್ಕಿಂತ (ಕರ್ಮ) ಮಾಡುವದು (ಜ್ಯಾಯಃ) ಒಳ್ಳೆಯದು. ಹೇಗೆಂದರೆ ಯುದ್ಧಕರ್ಮವನ್ನು ಬಿಟ್ಟರೂ ಭಿಕ್ಷಾಚರಣೆಯ ಕರ್ಮವನ್ನಾದರೂ ನಡೆಸುತ್ತೇನೆಂದು ನೀನೇ ಹೇಳುತ್ತಿ

ಹಾಗೆ ಹೇಳಬೇಕಾಗುವದು ನಿಜ. ಏಕೆಂದರೆ (ಅಕರ್ಮಣಃ) ಯಾವ ಕರ್ಮವನ್ನೂ ಮಾಡದೆ ಇರುವ (ತೇ) ನಿನಗೆ (ಶರೀರಯಾತ್ರಾಪಿ ಚ) ಶರೀರವನ್ನಿಟ್ಟುಕೊಂಡಿರುವಿಕೆಯು ಕೂಡ (ನ ಪ್ರಸಿಧ್ಯೇತ್) ಸಾಧ್ಯವಾಗಲಾರದು

ಕರ್ಮಗಳೆಂಬುವೆಲ್ಲ ಬಂಧಕಗಳೆಂದು ನೀನು ತಿಳಿದಿರುವದು ತಪ್ಪು.

ಹೇಗೆಂದರೆ :—

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯ ॥**

(ಯಜ್ಞಾರ್ಥಾತ್)* ಯಜ್ಞಪುರುಷನಾದ ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡುವ (ಕರ್ಮಣಃ) ಕರ್ಮಗಳನ್ನು ಬಿಟ್ಟರೆ (ಅನ್ಯತ್ರ) ಉಳಿದ ದೇಹೇಂದ್ರಿಯಾದಿಗಳ ಹಿತಾರ್ಥವಾಗಿ ಮಾಡುವ ಸಂದರ್ಭದಲ್ಲಿ (ಅಯಂ) ಈ (ಲೋಕಃ) ಲೋಕವು (ಕರ್ಮಬಂಧನಃ) ಕರ್ಮವ ಕಟ್ಟಿಗೊಳಪಟ್ಟದ್ದಾಗುವದು. ಯಜ್ಞಪುರುಷನ ಪ್ರೀತ್ಯರ್ಥವಾಗಿ ಮಾಡಿದ ಕರ್ಮವು ಬಂಧಕವಲ್ಲ. ಆದ್ದರಿಂದ (ಕೌಂತೇಯ) ಅರ್ಜುನನೆ, ಕೇಳು (ಮುಕ್ತಸಂಗಃ) ಫಲದ ಬಯಕೆಯನ್ನು ಬಿಟ್ಟು (ತದರ್ಥಂ) ಆ ಯಜ್ಞಪುರುಷನ ಪ್ರೀತ್ಯರ್ಥವಾಗಿ (ಕರ್ಮ) ಕರ್ಮವನ್ನು (ಸಮಾಚಾರ) ನೆರವೇರಿಸು

---

* ಯಜ್ಞವೆಂಬ ಮಾತಿಗೆ ವೇದದಲ್ಲಿ ಹೇಳಿರುವ ಯಜ್ಞವೆಂಬ ಕರ್ಮವೆಂದು ಸಹಜವಾಗಿ ಅರ್ಥವಾಗುತ್ತದೆ. ಆದರೆ ಆ ಅರ್ಥವು ಇಲ್ಲಿ ಹೊಂದುವದಿಲ್ಲ. ಏಕೆಂದರೆ ಇಲ್ಲಿ ಯಜ್ಞಕ್ಕೋಸ್ಕರ ಮಾಡುವ ಕರ್ಮಗಳ ಹೊರತು ಉಳಿದ ಕರ್ಮಗಳೆಲ್ಲ ಬಂಧಕಗಳೆಂದರ್ಥವಿದೆ ;ಯಜ್ಞವೇ ಕರ್ಮವಾದ್ದರಿಂದ ಯಜ್ಞವೆಂಬ ಮಾತಿನ ಸರ್ವಸಾಮಾನ್ಯವಾದ ಅರ್ಥಕ್ಕೆ ಇಲ್ಲಿ ಅವಕಾಶವಿಲ್ಲ "ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಂಗೋಯಜ್ಞವಾಹನಃ" -ಎಂಬ ವಿಷ್ಣು ಸಹಸ್ರನಾಮದಂತೆ ಯಜ್ಞಶಬ್ದವು ಪರಮಾತ್ಮನ ಹೆಸರಾಗಿರುವದು. "ಯಜ್ಞೋ ವೈ ವಿಷ್ಣುಃ" — ಎಂದು ಶ್ರುತಿಯೂ ಇರುವದು (ತೈ. ಶ್ರು.)

ಇನ್ನೊಂದು ಕಾರಣವೇನೆಂದರೆ —

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦ ॥**

(ಸಹಯಜ್ಞಾಃ) ಈಶ್ವರಪ್ರೀತ್ಯರ್ಥವಾಗಿ ಮಾಡುವ ಬೇರೆ ಬೇರೆ ಕರ್ಮಗಳಿಗೆ ಅಧಿಕಾರಿಗಳಾದಂಥ (ಪ್ರಜಾಃ) ಜನರನ್ನು (ಸೃಷ್ಟ್ವಾ) ಹುಟ್ಟಿಸಿ (ಪ್ರಜಾಪತಿಃ) ಸೃಷ್ಟಿಕರ್ತನಾದ ಬ್ರಹ್ಮನು (ಪುರಾ) ಹುಟ್ಟಿಸಿದ ಕಾಲವಲ್ಲಿಯೇ (ಉವಾಚ) ಹೇಳಿದನು ಏನೆಂದರೆ (ಅನೇನ) ಈ ಕರ್ಮಗಳಿಂದ (ಪ್ರಸವಿಷ್ಯಧ್ವಂ) ಏಳಿಗೆಯನ್ನು ಹೊಂದಿರಿ. (ಏಷಃ) ಈ ಕರ್ಮವು (ವಃ) ನಿಮಗೆ (ಇಷ್ಟಕಾಮಧುಕ್) ಬೇಕೆನಿಸಿದ ಬಯಕೆಗಳನ್ನೆಲ್ಲ ಕೊಡುವಂಥದ್ದು [ಅಸ್ತು] ಆಗಲಿ

ಅದು ಹೇಗೆಂದರೆ —

**ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥೧೧॥**

[ಅನೇನ] ಈ ಕರ್ಮದಿಂದ [ದೇವಾನ್] ಇಂದ್ರನೇ ಮೊದಲಾದ ದೇವತೆಗಳನ್ನು [ಭಾವಯತ] ಸಂತೋಷಗೊಳಿಸಿ [ತೇ] ಆ [ದೇವಾಃ] ನಿಮ್ಮಿಂದ ಸಂತುಷ್ಟರಾದ ದೇವತೆಗಳು [ವಃ] ನಿಮ್ಮನ್ನು ನಿಮಗೆ ಬೇಕಾದ ಮಳೆಯನ್ನು ಕೊಟ್ಟು [ಭಾವಯಂತು] ಸಂತೋಷಗೊಳಿಸಲಿ. [ಪರಸ್ಪರಂ] ಒಬ್ಬರಿಗೊಬ್ಬರು [ಭಾವಯಂತಃ] ಸಂತೋಷಗೊಳಿಸುವವರಾಗಿ [ಪರಂ] ಚಿತ್ತಶುದ್ಧಿಯನ್ನೂ ಜ್ಞಾನವನ್ನೂ ಪಡೆಯುವದರ ಮೂಲಕ ಮೋಕ್ಷರೂಪವಾದ [ಶ್ರೆಯಃ] ಶ್ರೇಯಸ್ಸನ್ನು [ಅವಾಪ್ಸ್ಯಥ] ಪಡೆಯಿರಿ.

ಮತ್ತೇನೆಂದರೆ —

**ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥**

[ಯಜ್ಞಭಾವಿತಾಃ] ಬೇರೆ ಬೇರೆ ಕರ್ಮಗಳಿಂದ ಸಂತೋಷಗೊಂಡಂಥ [ದೇವಾಃ] ಇಂದ್ರನೇ ಮೊದಲಾದ ದೇವತೆಗಳು [ವಃ] ನಿಮಗೆ [ಇಷ್ಟಾನ್]

ಬೇಕೆನಿಸಿದಂಥ [ಭೋಗಾನ್] ಹೆಂಡತಿ, ಮಕ್ಕಳು, ಐಶ್ವರ್ಯ-ಮೊದಲಾದ ಸುಖಸಾಧನಗಳನ್ನು [ದಾಸ್ಯಂತೇ ಹಿ] ಕೊಡುತ್ತಾರಷ್ಟೆ. ಆದ್ದರಿಂದ [ತೈಃ] ಆ ಇಂದ್ರನೇ ಮೊದಲಾದ ದೇವತೆಗಳಿಂದ [ದತ್ತಾನ್] ಕೊಡಲ್ಪಟ್ಟ ಸುಖ ಸಾಧನಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು [ಏಭ್ಯಃ] ಅವರಿಗೆ [ಅಪ್ರದಾಯ] ಸಾಲವನ್ನು ತೀರಿಸಿದಂತೆ ಹೋಮಗಳ ರೂಪವಾಗಿ ಕೊಡದೆ (ಯಃ) ಯಾವನು (ಭುಂಕ್ತೇ) ತನ್ನ ದೇಹೇಂದ್ರಿಯಾದಿಗಳನ್ನು ಮಾತ್ರವೇ ತೃಪ್ತಿ ಪಡಿಸಿಕೊಳ್ಳುತ್ತಾನೊ (ಸಃ) ಅವನು (ಸ್ತೇನ ಏವ) ದೇವತೆಗಳ ಸ್ವತ್ತನ್ನು ಅಪಹರಿಸಿದ ಕಳ್ಳನೇ ಸರಿ

ಹೀಗೆ ಮಾಡದೆ —

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥**

(ಯಜ್ಞಶಿಷ್ಟಾಶಿನಃ ಸಂತಃ) ದೇವಯಜ್ಞ ಮೊದಲಾದವುಗಳಿಗೆಲ್ಲ ಉಪ ಯೋಗಮಾಡಿ ಉಳಿದ ಪದಾರ್ಥಗಳನ್ನು ಉಪಭೋಗಮಾಡುವವರು (ಸರ್ವ ಕಿಲ್ಬಿಷೈಃ) ಆ ಉಪಭೋಗದಿಂದ ಶಕ್ತಿಯನ್ನು ಹೊಂದಿ ತಾವು ಮಾಡುವ ಸಮಸ್ತ ಪಾಪಗಳಿಂದಲೂ (ಮುಚ್ಯಂತೇ) ಬಿಡುಗಡೆಯನ್ನು ಹೊಂದುತ್ತಾರೆ ತಾನು ಯಾವ ಪಾಪವನ್ನೂ ಮಾಡುವದಿಲ್ಲವೆಂದು ತನಗೆ ತೋರಬಹುದು. ತನಗರಿವಿಲ್ಲದೆ ಆಗುವ ಪಾಪಗಳು ಕೂಡ ಉಂಟು ಅವು ಯಾವವೆಂದರೆ :- [೧] ಕುಟ್ಟುವಾಗ [೨] ಬೀಸುವಾಗ, [೩] ಬೇಯಿಸುವಾಗ-ಆ ಧಾನ್ಯದಲ್ಲಿರುವ ಪ್ರಾಣಿಗಳಿಗೆ ಬಾಧೆತಟ್ಟುವದು ಮತ್ತು [೪] ನೀರುತುಂಬುವಾಗ, [೫] ಮನೆ ಯನ್ನು ಗುಡಿಸಿ ಸಾರಿಸುವಾಗ-ಆ ವಾತಾವರಣದಲ್ಲಿರುವ ಜೀವಿಗಳಿಗೆ ಹಿಂಸೆ ಯಾಗುವದು. ಈ ಐದು ಬಗೆಯ ಪಾಪಗಳನ್ನು ಶಾಸ್ತ್ರಜ್ಞರು ಪಂಚ ಸೂನವೆಂದು ಕರೆಯುತ್ತಾರೆ. ಈ ಪಾಪವನ್ನು ಕಳೆದುಕೊಳ್ಳುವದ ಕ್ಕಾಗಿ ಮನುಷ್ಯನು ಐದು ಬಗೆಯ ಯಜ್ಞಗಳನ್ನು ಮಾಡಬೇಕು. ಅವು ಯಾವವೆಂದರೆ .—[೧] ದೇವರ ಧ್ಯಾನದ ಮತ್ತು ಪೂಜೆಯ

ರೂಪವಾದ ದೇವಯಜ್ಞ, (೨) ಸತ್ತು ಹೋಗಿರುವ ಹಿರಿಯರಿಗಾಗಿ ಮಾಡುವ ಶ್ರಾದ್ಧದ ರೂಪವಾದ ಪಿತೃಯಜ್ಞ, ೩) ಮನೆಗೆ ಬಂದ ಅತಿಥಿಯನ್ನು ಆದರಿಸುವ ಮನುಷ್ಯಯಜ್ಞ, (೪) ಪಶುಪಕ್ಷಿಗಳಿಗೆ ಮೇವನ್ನು ಹಾಕುವ ಭೂತಯಜ್ಞ, (೫) ವೇದವನ್ನು ತಾನು ಓದುವ ಮತ್ತು ಇತರರಿಗೆ ಹೇಳಿ ಕೊಡುವ ಬ್ರಹ್ಮಯಜ್ಞ ಅಥವಾ ಋಷಿಯಜ್ಞ. ಈ ಯಜ್ಞಗಳನ್ನು ಮಾಡುವವರು ಆ ಎಲ್ಲ ಪಾಪಗಳನ್ನೂ ಕಳೆದುಕೊಳ್ಳುವರು. ಹೀಗೆ ಮಾಡದೆ ( ಯೇ ) ಯಾರು ( ಆತ್ಮಕಾರಣಾತ್ ) ತಮ್ಮ ಹೊಟ್ಟೆಗಾಗಿ ( ಪಚಂತಿ ) ಬೇಯಿಸುತ್ತಾರೊ ( ಪಾಪಾಃ ) ಪಾಪಗಳಾದ ( ತೇ ತು ) ಅವರಾವರೊ (ಅಘಂ) * ಪಾಪವನ್ನು (ಭುಂಜತೇ) ಉಣ್ಣುತ್ತಾರೆ.

ಕರ್ಮವು ಜಗಚ್ಚಕ್ರದ ಕೀಲೂ ಆಗಿರುವದು ಹೇಗೆಂದರೆ —

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥**
**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥**

(ಅನ್ನಾತ್) * ಹೆಂಗಸರೂ ಗಂಡಸರೂ ತಿಂದ ಅನ್ನದಿಂದ, ಅದು ರಕ್ತವಾಗಿಯೂ ರೇತಸ್ಸಾಗಿಯೂ ಪರಿಣಮಿಸುವದರ ಮೂಲಕ ಎಲ್ಲರೂ ಕಾಣುವಂತೆ ( ಭೂತಾನಿ ) ಪ್ರಾಣಿಗಳು ( ಭವಂತಿ ) ಹುಟ್ಟುತ್ತವೆ [ ಪರ್ಜನ್ಯಾತ್ ]* ಮಳೆಯಿಂದ [ಅನ್ನಸಂಭವಃ] ಅನ್ನವು ಎಂದರೆ ತಿನ್ನುವ ಧಾನ್ಯಗಳು ಹುಟ್ಟುತ್ತವೆ (ಯಜ್ಞಾತ್) ದೇವತೆಗಳ ಪ್ರೀತಿಗಾಗಿ ಮಾಡುವ

* "ಕೇವಲಾಘೋ ಭವತಿ ಕೇವಲಾದಿ" —ಸುಮ್ಮನೆ ತಿನ್ನುವವನು ಬರೀ ಪಾಪಿಯಾಗುತ್ತಾನೆ—ಶ್ರು.

* " ಅನ್ನಾದ್ಭೂತಾನಿ ಜಾಯಂತೇ " ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ — ಶ್ರು.

* " ಪರ್ಜನ್ಯೇನೋಷಧಿವನಸ್ಪತಯಃ ಪ್ರಜಾಯಂತೇ, ಓಷಧಿವನಸ್ಪತಿಭಿರನ್ನಂ ಭವತಿ " — ಮಳೆಯಿಂದ ಗಿಡಮರಗಳು ಹುಟ್ಟುತ್ತವೆ. ಗಿಡಮರಗಳಿಂದ ಧಾನ್ಯವು ಹುಟ್ಟುತ್ತದೆ.

ಯಜ್ಞದಿಂದ (ಪರ್ಜನ್ಯಃ) ಮಳೆಯು [ಭವತಿ] ಆಗುತ್ತದೆ. [ಯಜ್ಞಃ] ಯಜ್ಞವು [ ಕರ್ಮಸಮುದ್ಭವಃ ] ಋತ್ವಿಕ್ಕುಗಳ ಮತ್ತು ಯಜಮಾನನ ನಡೆವಳಿಕೆಗಳಿಂದಾದದ್ದು. [ಕರ್ಮ ] ಆ ನಡೆವಳಿಕೆಗಳ ಪ್ರಕಾರವು [ಬ್ರಹ್ಮೋದ್ಭವಂ] ವೇದದಲ್ಲಿ ಹುಟ್ಟಿದ್ದು-ಎಂದು [ವಿದ್ಧಿ] ತಿಳಿ. [ಬ್ರಹ್ಮ] ಆ ವೇದವು [ಅಕ್ಷರಸಮುದ್ಭವಂ] ನಾಶರಹಿತನಾದ ಪರಮಾತ್ಮನ ಮುಖದಿಂದ ಬಂದದ್ದು. [ ತಸ್ಮಾತ್ ] ಆ ಕಾರಣದಿಂದ [ ಬ್ರಹ್ಮ ] ವೇದವು [ ಸರ್ವಗತಂ ] ಸರ್ವ ವಿಷಯಗಳನ್ನೂ ತಿಳಿಸಿಕೊಡುತ್ತದೆಯಾದರೂ [ ನಿತ್ಯಂ ] ಯಾವಾಗಲೂ [ಯಜ್ಞೇ] ಮನುಷ್ಯನಿಗೆ ಕೃತಾರ್ಥತೆಯನ್ನು ತಂದುಕೊಡುವ ಚಿತ್ತಶುದ್ಧಿಗೂ ಜ್ಞಾನಕ್ಕೂ ಸಾಧನವಾದ ಯಜ್ಞ ಕರ್ಮದಲ್ಲಿ [ ಪ್ರತಿಷ್ಠಿತಂ ] ಹೆಚ್ಚು ಪ್ರಾಶಸ್ತ್ಯವನ್ನು ಹೊಂದಿರುವದು.

ಇದರಿಂದ ನಾವು ಎಚ್ಚರಗೊಳ್ಳಬೇಕಾದ್ದೇನೆಂದರೆ —

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**

**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥**

(ಪಾರ್ಥ) ಅರ್ಜುನನೆ, ಕೇಳು (ಏವಂ) ಪರಮಾತ್ಮನು ಹೇಳಿರುವ ವೇದದ ಕರ್ಮಕಾಂಡದಲ್ಲಿರುವ ಯಜ್ಞಕರ್ಮಗಳಿಂದ ಮಳೆ, ಮಳೆಯಿಂದ ಧಾನ್ಯ, ಧಾನ್ಯದಿಂದ ಪ್ರಾಣಿಗಳು, ಪ್ರಾಣಿಗಳಿಂದ ಯಜ್ಞಕರ್ಮಗಳು, ಯಜ್ಞಕರ್ಮಗಳಿಂದ ಮಳೆ—ಈ ರೀತಿಯಲ್ಲಿ (ಪ್ರವರ್ತಿತಂ) ಮುಂದುವರಿಸಿರುವ (ಚಕ್ರಂ) ಜಗತ್ತೆಂಬ ಚಕ್ರವನ್ನು (ಇಹ) ಈ ಲೋಕದಲ್ಲಿ (ಯಃ) ಕರ್ಮವನ್ನು ತನ್ನ ಕರ್ತವ್ಯವಾಗಿ ಉಳ್ಳಯಾವನು (ನ ಅನುವರ್ತಯತಿ) ಸಾಗಿಸುವದಿಲ್ಲವೊ (ಅಘಾಯುಃ) ಪಾಪದ ಬಾಳಿನವನೂ (ಇಂದ್ರಿಯಾರಾಮಃ) ಇಂದ್ರಿಯಗಳೊಡನೆ ವಿನೋದ ಕಾಲಕ್ಷೇಪವನ್ನು ಮಾಡುವವನೂ ಆದ (ಸಃ) ಅವನು (ಮೋಘಂ) ವ್ಯರ್ಥವಾಗಿ (ಜೀವತಿ) ಬದುಕುತ್ತಾನೆ.

ಹೀಗೆ ಕರ್ಮವನ್ನು ಮಾಡಲೇಬೇಕೆಂಬುದು ಎಲ್ಲರಿಗೂ ಹೇಳಿದ ಮಾತೋ ಅಥವಾ ಸಾಧಕರಿಗೆ ಹೇಳಿದ ಮಾತೋ ? ಎಂದರೆ —

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ । ***
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥**

(ಯಸ್ತು ಮಾನವಃ) ಆತ್ಮಜ್ಞಾನದಲ್ಲಿ ನಿಷ್ಠನಾದ ಮನುಷ್ಯನಾದರೊ (ಆತ್ಮರತಿರೇವ) ಹೆಂಡತಿ ಮತ್ತು ಮಕ್ಕಳು ಮೊದಲಾದವರಲ್ಲಿ ಪ್ರೇಮವುಳ್ಳವನಾಗಿರದೆ ಆತ್ಮಸ್ವರೂಪದಲ್ಲಿಯೇ ಪ್ರೇಮವುಳ್ಳವನಾಗಿಯೂ (ಆತ್ಮತೃಪ್ತಶ್ಚ) ಹೆಂಡತಿ ಮಕ್ಕಳ ಮೇಲಿನ ಪ್ರೇಮದವರು ಹೆಂಡತಿ ಮಕ್ಕಳಿಂದ ತೃಪ್ತರಾಗದೆ ಅನ್ನರಸ ಮೊದಲಾದವುಗಳಿಂದ ತೃಪ್ತರಾಗುವಂತೆ ಇರದೆ ತನ್ನ ಆತ್ಮಸ್ವರೂಪದಿಂದಲೇ ತೃಪ್ತರಾದವರಾಗಿಯೂ (ಆತ್ಮನ್ಯೇವಚ ಸಂತುಷ್ಟಃ) ಅನ್ನರಸ ಮೊದಲಾದವುಗಳಿಂದ ತೃಪ್ತರಾದವರು ಅದರಿಂದಲೇ ಸಂತೋಷಪಡದೆ ಹೊರಗಣಿಂದ ಬರುವ ಲಾಭಗಳಿಂದ ಸಂತೋಷಪಡುವಂತೆ ಇರದೆ ಆತ್ಮಸ್ವರೂಪದಲ್ಲಿಯೇ ಸಂತೋಷವನ್ನು ಹೊಂದುವವನೂ ಆಗಿಯೂ (ಸ್ಯಾತ್) ಇರುವನೊ [ತಸ್ಯ] ಆ ಜ್ಞಾನಿಗೆ [ಕಾರ್ಯಂ] ಮಾಡಬೇಕಾದ ಕರ್ಮವು [ನ ವಿದ್ಯತೇ] ಇರುವದಿಲ್ಲ

ಏಕೆಂದರೆ .—

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ । ***
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥**

---

* " ಆತ್ಮಕ್ರೀಡ ಆತ್ಮರತಿಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ " —ಬ್ರಹ್ಮಸ್ವರೂಪವನ್ನು ತಿಳಿದವರಲ್ಲಿ ಶ್ರೇಷ್ಠನಾದವನು ಆತ್ಮನಲ್ಲಿಯೇ ವಿನೊದಕಾಲಕ್ಷೇಪವನ್ನು ಮಾಡುವವನೂ ಆತ್ಮನಲ್ಲಿಯೇ ಪ್ರೇಮವನ್ನು ಮಾಡುವವನೂ ಆಗಿರುವನು—ಶ್ರು

* " ನೈನಂ ಕೃತಾಕೃತೋ ತಪತಃ " — ಮಾಡಿದ ಕರ್ಮಗಳು, ಮಾಡದೆ ಇರುವ ಕರ್ಮಗಳು ಎರಡೂ ಇವನಿಗೆ ತಾಪವನ್ನು ಕೊಡುವದಿಲ್ಲ — ಶ್ರು

[ ತಸ್ಯ ] ಆ ಜ್ಞಾನಿಗೆ [ ಕೃತೇನ ] ತಾನು ಮಾಡಿದ ಕರ್ಮದಿಂದ [ಅರ್ಥಃ] ಪ್ರಯೋಜನವು [ನೈವ] ಇಲ್ಲವೆ ಇಲ್ಲ ಈ ಲೋಕವೂ ಪರ ಲೋಕವೂ ಬರೀ ತೋರಿಕೆಯವೆಂದೂ ಮೂರು ದಿನದ ಬಾಳಿನವುಗಳೆಂದೂ ಅವನು ತಿಳಿದಿರುವದರಿಂದ ಕರ್ಮಗಳು ಕೊಡುವದಕ್ಕೆ ಬರುವ ಆ ಫಲಗಳನ್ನು ಅವನು ಕಡೆಗಣ್ಣಿನಿಂದಲೂ ನೋಡುವದಿಲ್ಲ. ( ಅಕೃತೇನ ) ಮಾಡದೆ ಇರುವದರಿಂದ (ಇಹ) ಈ ಲೋಕದಲ್ಲಿ (ಕಶ್ಚನ) ಯಾವ ಹಾನಿಯೂ (ನ) ಇಲ್ಲ. ಕರ್ಮಗಳನ್ನು ಮಾಡದೆ ಹೋದರೆ ದೋಷವು ಗಂಟು ಬೀಳುವದೆಂದು ಮೀಮಾಂಸಕರು ಹೇಳುತ್ತಾರೆ. ವಿಚಾರವೆಂಬ ಒರೆಗಲ್ಲಿನ ಮೇಲೆ ತಿಕ್ಕಿದರೆ ಆ ಅಭಿಪ್ರಾಯವ ಕಂದು ಬಣ್ಣವು ಎದ್ದು ಕಾಣುತ್ತದೆ. ಅದೇನೆಂದರೆ–ತಾಯಿ ಇದ್ದರೆ ಮಕ್ಕಳು ಹುಟ್ಟುವಂತೆ ಇರುವ ವಸ್ತುವಿನಿಂದ ಮತ್ತೊಂದು ಹುಟ್ಟೀತು ತಾಯಿಯೇ ಇಲ್ಲದೆ ಮಕ್ಕಳು ಹೇಗೆಹುಟ್ಟುವದಿಲ್ಲವೊ ಹಾಗೆ ಕರ್ಮವೆಂಬು ವದು ನಡೆಯದೆ ಅದರಿಂದ ದೋಷವಾಗಲಿ ಗುಣವಾಗಲಿ ಯಾವದೂ ಹುಟ್ಟ ಲಾರದು ಆದ್ದರಿಂದ ಕರ್ಮವನ್ನು ಮಾಡದಿರುವದರಿಂದ ದೋಷವು ಬರುವ ದೆಂಬ ಮಾತು ನಿಲ್ಲುವದಿಲ್ಲ. ಕರ್ಮವನ್ನು ಮಾಡದೆ ಹೋದರೆ ಚಿತ್ತವು ತನ್ನ ಹೊಲಸಿನ ಸ್ಥಿತಿಯಲ್ಲಿಯೇ ಉಳಿದುಕೊಂಡಿರುವದೆಂದು ಹೇಸಿ ಅದರ ಶುದ್ಧಿಯ ಲಾಭದದೃಷ್ಟಿಯನಿಟ್ಟು ಕರ್ಮವನ್ನು ಮಾಡಬೇಕೇ ಹೊರತು ದೋಷದ ಹೆದ ರಿಕೆಯಿಂದ ಮಾಡುವದು ಅಷ್ಟು ಸಾಧುವಲ್ಲ. ಒಂದು ಪಕ್ಷ ಮೀಮಾಂಸಕರ ಮಾತಿಗೆ ಗೌರವವನ್ನು ಕೊಟ್ಟು ದೋಷ ಬರುವದೆಂದೊಪ್ಪಿಕೊಂಡರೂ ಆ ದೋಷವು ಬಂದು ಜ್ಞಾನಿಯ ಆತ್ಮವನ್ನೇನೂ ಕಳೆದುಬಿಡಲಾರದು. ಅಥವಾ ಒಬ್ಬನು ಕರ್ಮವನ್ನು ಬಿಟ್ಟಿದ್ದರಿಂದ ದೇವತೆಗಳು ಕೋಪಗೊಂಡು ಅವನ ದಾರಿಗೆ ಕಲ್ಲುಮುಳ್ಳು ಹಾಕುವರೆಂದು ಹೇಳಿದರೂ ಇದು ಸಾಧಕರ ವಿಷಯ ಕ್ಕಾದರೆ ಹೊಂದುವದು. ಅವರಿನ್ನೂ ಆತ್ಮಜ್ಞಾನವನ್ನು ಪಡೆಯಬೇಕಾಗಿರುವ ದರಿಂದ ತಮಗೆ ದೇವತೆಗಳು ಅಡ್ಡಬರದಂತೆ ಅವರು ಕರ್ಮಗಳನ್ನು ಮಾಡ ಬೇಕಾಗಬಹುದು ಇನ್ನು ಜ್ಞಾನವಾಗಿದ್ದರೂ ಮೋಕ್ಷಕ್ಕೇನಾದರೂ ಅಡ್ಡ ಬಂದಾರೆಂಬ ಭಯವೇ ಇಲ್ಲ. ಏಕೆಂದರೆ ಜ್ಞಾನಿಯ ಮೇಲೆ ಅವರ

ಮೇಲೆ ಅವರ ಕೈ ಏನೂ ನಡೆಯುವದಿಲ್ಲ. ಇದಲ್ಲದೆ ಜ್ಞಾನಿಗಳು * ದೇವತೆಗಳಿಗೂ ಆತ್ಮಸ್ವರೂಪರಾಗಿರುವರು ಮತ್ತೇನೆಂದರೆ ಜ್ಞಾನ ಮತ್ತು ಮೋಕ್ಷ - ಎಂಬೆರಡು ಬೇರೆಬೇರೆಯೂ ಅಲ್ಲ ಜ್ಞಾನವಾಗುತ್ತಲೆ ಮೋಕ್ಷವಾಗಿಯೇ ಇರುವದು ಹಗ್ಗವೆಂದು ಕಾಣುತ್ತಲೆ ಅದರಲ್ಲಿ ಕಾಣುತ್ತಿದ್ದ ಹಾವಿನ ಭಯವು ಹೋಗಿಯೇ ಬಿಡುವಂತೆ ತನ್ನ ಆತ್ಮಸ್ವರೂಪದ ಜ್ಞಾನವಾಗುತ್ತಲೆ ಅದರ ಆಧಾರದಿಂದ ಆತ್ಮದಂತೆ ತೋರುತ್ತಿದ್ದ ದೇಹಾದಿಗಳ ನಾಶದ ಭಯವು ಹೋಗಿಯೇ ಬಿಡುವದು ಆದ್ದರಿಂದ ಕರ್ಮವನ್ನು ಮಾಡದೆ ಇರುವದರಿಂದ ಜ್ಞಾನಿಗೆ ಯಾವ ಹಾನಿಯೂ ಇಲ್ಲ. (ಅಸ್ಯ) ಈ ಜ್ಞಾನಿಗೆ (ಸರ್ವಭೂತೇಷು) ಜಗತ್ತಿನಲ್ಲಿರುವ ಯಾವ ವಸ್ತುವಿನಲ್ಲಿಯೂ (ಅರ್ಥವ್ಯಪಾಶ್ರಯಃ) ತನಗಾಗಬೇಕಾದ ಪ್ರಯೋಜನಕ್ಕೆ ಸಾಧಕವಾದದ್ದು (ಕಶ್ಚಿತ್) ಯಾವದೂ (ನ ಚ) ಇಲ್ಲವೂ ಇಲ್ಲ

ನಿನಗೆ ಆ ಜ್ಞಾನವಿನ್ನೂ ಆಗಿಲ್ಲವಾದ್ದರಿಂದ :—

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥**

(ತಸ್ಮಾತ್) ಜ್ಞಾನಿಗೆ ಮಾತ್ರ ಕರ್ಮವಿಲ್ಲದ್ದರಿಂದ, ನೀನು (ಸತತಂ) ಯಾವಾಗಲೂ (ಕಾರ್ಯಂ) ಕರ್ತವ್ಯವಾದ (ಕರ್ಮ) ಕರ್ಮವನ್ನು (ಅಸಕ್ತಃ) ಫಲದ ಬಯಕೆ ಇಲ್ಲದೆ (ಸಮಾಚರ) ನೆರವೇರಿಸು (ಹಿ) ಏಕೆಂದರೆ (ಪೂರುಷಃ) ಮೋಕ್ಷವನ್ನು ಬಯಸುವ ಸಾಧಕನು (ಅಸಕ್ತಃ) ಫಲದ ಬಯಕೆ ಇಲ್ಲದೆ (ಕರ್ಮ) ಕರ್ಮವನ್ನು (ಆಚರನ್) ಮಾಡಿ, ಚಿತ್ತಶುದ್ಧಿಯನ್ನು ಹೊಂದಿ (ಪರಂ) ಪರಬ್ರಹ್ಮಸ್ವರೂಪವನ್ನು (ಆಪ್ನೋತಿ) ಪಡೆಯುತ್ತಾನೆ.

---

* “ ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತ ಆತ್ಮಾ ಹ್ಯೇಷಾಂ ಸ ಭವತಿ ”—ಅವನನ್ನು ದೇವತೆಗಳೂ ಪರಾಭವಗೊಳಿಸುವದಕ್ಕೆ ಸಮರ್ಥರಲ್ಲ ಏಕೆಂದರೆ ಅವನು ಅವರಿಗೆಲ್ಲ ಆತ್ಮನಾಗಿರುವನು. — ಶ್ರು.

ಇನ್ನೂ ಒಂದು ಕಾರಣವೇನೆಂದರೆ —

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ಕರ್ತುಮರ್ಹಸಿ ॥ ೨೦ ॥**

(ಜನಕಾದಯಃ) ಮೋಕ್ಷವನ್ನು ಪಡೆದವರೆಂದು ಪ್ರಸಿದ್ಧರಾಗಿರುವ ಜನಕ, ಅಶ್ವಪತಿ — ಮೊದಲಾದ ಹಿಂದಿನ ರಾಜರು (ಕರ್ಮಣೈವ) ಕರ್ಮವನ್ನು ನಡೆಸುವದರಿಂದಲೇ (ಸಂಸಿದ್ಧಿಂ) ಮೋಕ್ಷವನ್ನು (ಆಸ್ಥಿತಾಃ ಹಿ) ಪಡೆದಿರುವವರಾದರು. ಹೀಗೆ ಅವರನ್ನು ಜ್ಞಾನಿಗಳೆಂದಿಟ್ಟುಕೊಂಡರೆ ಅವರು ಇತರರಿಗೆ ಮೇಲುಪಙ್ಕ್ತಿಯಾಗಿ ಕರ್ಮವನ್ನು ಮಾಡುತ್ತಿದ್ದೇ ತಮ್ಮ ಆಯುಸ್ಸನ್ನು ಮುಗಿಸಿದರೆಂದು ಹೇಳಬೇಕಾಗುತ್ತದೆ. ಅವರಿನ್ನೂ ಜ್ಞಾನಿಗಳಾಗಿರಲಿಲ್ಲವೆಂದಿಟ್ಟುಕೊಂಡರೆ ಜ್ಞಾನದ ಸಾಧನವಾದ ಚಿತ್ತಶುದ್ಧಿಗಾಗಿ ಕರ್ಮವನ್ನು ಮಾಡುತ್ತ ಮೋಕ್ಷವನ್ನು ಹೊಂದಿದರೆಂದು ಹೇಳಬೇಕಾಗುತ್ತದೆ. ಅವರು ಜ್ಞಾನಿಗಳಲ್ಲದ್ದರಿಂದ ಕರ್ಮವನ್ನು ಮಾಡುತ್ತಿದ್ದರೆಂದ ಮಾತ್ರದಿಂದಲೆ ಜ್ಞಾನಿಗಳು ಕರ್ಮವನ್ನು ಬಿಡಬೇಕೆಂದೇನೂ ಆಗುವದಿಲ್ಲ. ಆದ್ದರಿಂದ ನೀನು (ಲೋಕಸಂಗ್ರಹಮೇವಾಪಿ) ಜನರು ಅಡ್ಡದಾರಿಗೆ ಹೋಗುವದನ್ನು ತಪ್ಪಿಸಬೇಕೆಂಬುವದನ್ನಾದರೂ (ಸಂಪಶ್ಯನ್) ಚೆನ್ನಾಗಿ ಲಕ್ಷ್ಯಕ್ಕೆ ತಂದುಕೊಂಡು (ಕರ್ತುಂ ಅರ್ಹಸಿ) ಮಾಡತಕ್ಕದ್ದು.

ಏಕೆಂದರೆ —

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥**

(ಶ್ರೇಷ್ಠಃ) ದೊಡ್ಡವನೆನಿಸಿಕೊಂಡಿರುವವನು (ಯದ್ಯದಾಚರತಿ) ಯಾವ ಯಾವ ಕರ್ಮಗಳನ್ನು ಮಾಡುತ್ತಾನೊ (ಇತರಃ) ಉಳಿದ (ಜನಃ) ಜನರು (ತತ್ತದೇವ) ಆ ಆ ಕರ್ಮಗಳನ್ನೆ ನಡೆಸುತ್ತಾರೆ. (ಸಃ) ದೊಡ್ಡವನೆನಿಸಿಕೊಂಡವನು (ಯತ್) ಯಾವದನ್ನು (ಪ್ರಮಾಣಂ) ಸರಿಯಾದದ್ದೆಂದು

ತಿಳಿದು (ಕುರುತೇ) ಮಾಡುತ್ತಾನೊ (ಲೊಕಃ) ಜನರು (ತತ್) ಅದನ್ನು (ಅನುವರ್ತತೇ) ಹಿಂಬಾಲಿಸುತ್ತಾರೆ.

ಒಳ್ಳೆ ಉದಾಹರಣೆಗಾಗಿ ಮಾಡಬೇಕೆಂಬುದಕ್ಕೆ ನನ್ನನ್ನು ನೋಡು

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥**

(ಪಾರ್ಥ) ಅರ್ಜುನನೆ, ಕೇಳು (ತ್ರಿಷು ಲೋಕೇಷು) ಸ್ವರ್ಗ, ಮರ್ತ್ಯ, ಪಾತಾಳ – ಎಂಬ ಮೂರು ಲೋಕಗಳಲ್ಲಿಯೂ (ಮೇ) ನನಗೆ (ಕರ್ತವ್ಯಂ) ಮಾಡಿತೀರಬೇಕಾದದ್ದೆನ್ನುವದು (ನ ಅಸ್ತಿ ಕಿಂಚನ) ಏನೇನೂ ಇಲ್ಲ ಮತ್ತು (ಅವಾಪ್ತವ್ಯಂ) ಪಡೆಯುವದಕ್ಕೆ ಯೋಗ್ಯವಾದದ್ದೆನಿಸಿ ಕೊಂಡದ್ದು (ಅನವಾಪ್ತಂ) ದೊರೆತಿಲ್ಲದ್ದಾಗಿ (ನ) ಯಾವದೂ ಇಲ್ಲ ಆದರೂ (ಕರ್ಮಣಿ) ಕರ್ಮದಲ್ಲಿ (ವರ್ತ ಏವ ಚ) ತೊಡಗಿಕೊಂಡೇ ಇದ್ದೇನೆ.

ಏಕೆಂದರೆ —

**ಯದಿ ಹ್ಯಹಂ ನ ವರ್ತೇಯಂ * ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

(ಪಾರ್ಥ) ಅರ್ಜುನನೆ, ಕೇಳು [ಅಹಂ] ನಾನು [ಜಾತು] ಎಂದಿಗೂ [ಅತಂದ್ರಿತಃ] ಆಲಸ್ಯವಿಲ್ಲದವನಾಗಿ [ಕರ್ಮಣಿ] ಕರ್ಮದಲ್ಲಿ [ಯದಿ ಹಿ ನ ವರ್ತೇಯಂ] ತೊಡಗದೆ ಇದ್ದರೆ [ಮನುಷ್ಯಾಃ] ಮನುಷ್ಯರು [ಸರ್ವಶಃ] ಎಲ್ಲ ಬಗೆಯಿಂದಲೂ [ಮಮ] ದೊಡ್ಡವನೆನಿಸಿಕೊಂಡಿರುವ ನನ್ನ [ವರ್ತ್ಮ] ದಾರಿಯನ್ನು [ಅನುವರ್ತಂತೇ] ಹಿಂಬಾಲಿಸುತ್ತಾರೆ.

ಅದರಿಂದಾಗುವ ಹಾನಿಯೇನೆಂದರೆ .—

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪ ॥**

* " ನ ವರ್ತೇಯ " ಎಂದು ಪಾಠಾಂತರ.

[ಅಹಂ] ಎಲ್ಲರನ್ನೂ ಉದ್ಧಾರಮಾಡಬೇಕೆಂದಿರುವ ನಾನು [ಕರ್ಮ] ನನಗೆ ಶಾಸ್ತ್ರದಲ್ಲಿ ವಿಹಿತವಾಗಿರುವ ಕರ್ತವ್ಯವನ್ನು [ನ ಕುರ್ಯಾಂ ಚೇತ್] ಮಾಡದೆ ಹೋದರೆ, ಎಲ್ಲರೂ ನನ್ನಂತೆ ಕರ್ಮಗಳನ್ನು ಬಿಡುವವರಿಂದ [ಇಮೇ] ಕರ್ಮದಿಂದ ಹುಟ್ಟಿದ ಈ [ಲೋಕಾಃ] ಲೋಕಗಳು [ಉತ್ಸೀದೇಯುಃ] ಕರ್ಮಗಳೊಡನೆಯೇ ನಾಶವಾಗುವವು ಇದರಿಂದಾಗುವದೇನೆಂದರೆ ಜಗತ್ತೆಲ್ಲ ಹುಡುಗರ ಪಾಳ್ಯವಾಗಿ ಎಲ್ಲರೂ ತಮ್ಮ ತಮ್ಮ ಮೂಗಿನ ನೇರಕ್ಕೆ ನೋಡಿಕೊಂಡು ನಡೆಯುವದರಿಂದ (ಸಂಕರಸ್ಯ ಚ) ಬೆರಕೆಯ ಜಾತಿ ಹುಟ್ಟುವದಕ್ಕೂ (ಕರ್ತಾ ಸ್ಯಾಂ) ಕಾರಣನಾಗುವೆನು ಇಷ್ಟೇ ಅಲ್ಲ ಇದರಿಂದ (ಇಮಾಃ) ಈ (ಪ್ರಜಾಃ) ಜನರನ್ನೆಲ್ಲ (ಉಪಹನ್ಯಾಂ) ಕೊಂದವನೂ ಆಗುವೆನು ಹೇಗೆಂದರೆ ಜನರೆಲ್ಲ ಮನುಷ್ಯತ್ವಕ್ಕೆ ಸಾರ್ಥಕವಾದ ಧರ್ಮವನ್ನು ಕಳೆದುಕೊಳ್ಳುವದರಿಂದ ಅವರ ಬಾಳು ಇದ್ದರೂ ಇಲ್ಲದಂತಾಗುವದು

ಆದ್ದರಿಂದ —

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥**

(ಭಾರತ) ಅರ್ಜುನನೆ, ಕೇಳು. (ಕರ್ಮಣಿ) ಕರ್ಮದಲ್ಲಿ (ಸಕ್ತಾಃ) ನಾನು ಮಾಡುವವನೆಂಬಭಿಮಾನವನ್ನೂ ನನಗೆ ಸ್ವರ್ಗ ಮೊದಲಾದವು ಬೇಕೆಂಬ ಬಯಕೆಯನ್ನೂ ಹೊಂದಿ(ಅವಿದ್ವಾಂಸಃ) ಆತ್ಮಸ್ವರೂಪವನ್ನರಿಯದವರು (ಯಥಾ) ಯಾವ ರೀತಿಯಲ್ಲಿ (ಕುರ್ವಂತಿ) ಮಾಡುತ್ತಾರೊ (ತಥಾ) ಆ ರೀತಿಯಲ್ಲಿ (ವಿದ್ವಾನ್) ಆತ್ಮಸ್ವರೂಪವನ್ನರಿತವನು [ಲೋಕಸಂಗ್ರಹಂ] ಜನರಿಗೆಮೇಲ್ಪಂಕ್ತಿಯಾದ ಆಚರಣೆಯನ್ನು [ಚಿಕೀರ್ಷುಃ] ಮಾಡಬೇಕೆನ್ನುವವನಾಗಿ (ಅಸಕ್ತಃ) ನಾನು ಮಾಡುವೆನೆಂಬ ಅಭಿಮಾನವೂ ನನಗೊಂದು ಫಲವಾಗಬೇಕೆಂಬ ಬಯಕೆಯೂ ಇಲ್ಲದವನಾಗಿ (ಕುರ್ಯಾತ್) ಮಾಡಬೇಕು

ಆದ್ದರಿಂದ ಈ ಸಂದರ್ಭದಲ್ಲಿ ಜ್ಞಾನಿಗಳಿಗೆ ಹೇಳಬೇಕಾಗಿರುವ ಮಾತೇನೆಂದರೆ.—

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥**

(ಅಜ್ಞಾನಾಂ) ಆತ್ಮಸ್ವರೂಪವನ್ನರಿಯದೆ ನಾವು (ಕರ್ಮಸಂಗಿನಾಂ) ಇದನ್ನು ಮಾಡುವವರೆಂಬ ಮತ್ತು ಇಂಥದ್ದೊಂದು ಬಯಕೆಯನ್ನು ತೀರಿಸಿ ಕೊಳ್ಳುವವರೆಂಬ ಬಲವಾದ ಅಭಿಮಾನವುಳ್ಳವರಿಗೆ (ಬುದ್ಧಿಭೇದಂ) ಆತ್ಮನು ಮಾಡುವವನೂ ಉಣ್ಣುವವನೂ ಅಲ್ಲವೆಂಬ ತತ್ತ್ವವಿಚಾರವನ್ನು ಹೇಳಿ ಅವರ ತಿಳಿವಳಿಕೆಯ ಬವಲಾವಣೆಯನ್ನು (ನ ಜನಯೇತ್) ಹುಟ್ಟಿಸಬಾರದು. ನಿಜವಾದ ತತ್ತ್ವವನ್ನು ಮುಚ್ಚಿಡುವದು ಸರಿಯಲ್ಲವೆಂದು ಅದನ್ನು ಉಪದೇಶ ಮಾಡುವ ಸಡಗರದಲ್ಲಿ ಆ ಉಪದೇಶವನ್ನು ಕೇಳುವವನ ಗ್ರಹಣ ಶಕ್ತಿಯು ಅದನ್ನು ಹಿಡಿದುಕೊಂಡಿತೋ ಇಲ್ಲವೊ ಎಂಬದರ ಕಡೆಗೆ ಕಣ್ಣು ಹಾಕದೆ ಬಿಡಬಾರದು ಆತ್ಮವಿಚಾರವನ್ನು ಗ್ರಹಿಸುವದಕ್ಕೆ ಸ್ವಲ್ಪಮಟ್ಟಿಗಾದರೂ ಬುದ್ಧಿಯ ಶುದ್ಧತೆ ಬೇಕಾಗುವದು ಆ ಶುದ್ಧತೆ ಬರುವದಕ್ಕಾಗಿ ಬಯಕೆಯನ್ನು ಬಿಟ್ಟು ಕರ್ಮವನ್ನು ಮಾಡುವದು ಹೆಚ್ಚು ಒಳ್ಳೆಯದೆಂದು ಮಾತ್ರ ಉಪದೇಶ ಮಾಡಬಹುದು ಆದರೆ ಆತ್ಮನು ಅಕರ್ತನೆಂಬ ತಿಳಿವಳಿಕೆ ತನಗಿರುವದೆಂದು ತಾನು ಕರ್ಮವನ್ನು ಬಿಡುವದರ ಮೂಲಕ ಆ ತಿಳಿವಳಿಕೆಯನ್ನು ಹಿಡಿದುಕೊಳ್ಳಲಾರದವನು ತನ್ನನ್ನು ನೋಡಿ ಕರ್ಮವನ್ನು ಬಿಡುವದಕ್ಕೆ ದಾರಿಯನ್ನು ಕೊಡಬಾರದು ಅವನ ಮೇಲ್ಪಂಕ್ತಿಯ ಉಪಯೋಗವೆಷ್ಟೆಂದರೆ (ವಿದ್ವಾನ್) ಆತ್ಮಸ್ವರೂಪವನ್ನರಿತವನು (ಯುಕ್ತಃ) ಬಯಕೆ ಇಲ್ಲದಿರುವ ಬುದ್ಧಿಯಿಂದ ಕೂಡಿದವನಾಗಿ (ಸಮಾಚರನ್) ಮಾಡುತ್ತ (ಸರ್ವಕರ್ಮಾಣಿ) ಶಾಸ್ತ್ರೋಕ್ತವಾದ ಎಲ್ಲ ಕರ್ಮಗಳನ್ನೂ (ಜೋಷಯೇತ್) ಮಾಡಿಸಬೇಕು. ಹೀಗೆ ಕರ್ಮಗಳನ್ನು ಮಾಡಿ ಚಿತ್ತಶುದ್ಧಿಯಾದಮೇಲೆ ಆತ್ಮವಿಚಾರದ ಮಾತು.

ಕರ್ಮವನ್ನು ನಡೆಸುವದರಲ್ಲಿ ಜ್ಞಾನಿಯೂ ಅಜ್ಞಾನಿಯೂ ಒಂದೆ ಆಗಿ ಕಂಡರೂ ಅದರಲ್ಲಿ ಅಜ್ಞಾನಿಯ ತಿಳಿವಳಿಕೆಯೇನೆಂದರೆ.—

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ |**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ || ೨೭ ||**

(ಸರ್ವಶಃ) ಎಲ್ಲ ಬಗೆಯಿಂದಲೂ (ಅಹಂಕಾರವಿಮೂಢಾತ್ಮಾ) ದೇಹ ಮತ್ತು ಇಂದ್ರಿಯ–ಮೊದಲಾದವುಗಳನ್ನೆ ಆತ್ಮವೆಂದು ತಪ್ಪು ತಿಳಿದುಕೊಂಡಿರುವ ಮನಸ್ಸಿನವನು (ಪ್ರಕೃತೇಃ) ಪರಮಾತ್ಮನ ಮಾಯಾಶಕ್ತಿಯ (ಗುಣೈಃ) ಸತ್ತ್ವ, ರಜ, ತಮ-ಎಂಬ ಮೂರು ಗುಣಗಳಿಂದಾಗಿರುವ ದೇಹ ಮತ್ತು ಇಂದ್ರಿಯ– ಮೊದಲಾದವುಗಳಿಂದ ( ಕ್ರಿಯಮಾಣಾನಿ ) ಮಾಡಲ್ಪಡುವ (ಕರ್ಮಾಣಿ) ಲೌಕಿಕವಾದ ಮತ್ತು ವೈದಿಕವಾದ ಎಲ್ಲ ಕರ್ಮಗಳನ್ನೂ (ಅಹಂ) ನಾನು (ಕರ್ತಾ) ಮಾಡುವವನು (ಇತಿ) ಎಂದು (ಮನ್ಯತೇ) ತಿಳಿಯುತ್ತಾನೆ.

ಜ್ಞಾನಿಯ ತಿಳಿವಳಿಕೆಯೇನೆಂದರೆ .—

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ |**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ || ೨೮ ||**

(ಮಹಾಬಾಹೋ) ಅರ್ಜುನನೆ, ಕೇಳು. (ಗುಣಕರ್ಮವಿಭಾಗಯೋಃ) ಸತ್ತ್ವರಜಸ್ತಮಗಳಿಂದಾಗಿರುವಂಥ ಮನಸ್ಸು, ಪ್ರಾಣ, ಇಂದ್ರಿಯಗಳು, ದೇಹ, ಹೊರಗಣ ವಿಷಯಗಳು-ಇವುಗಳ ವಿಭಾಗಗಳ ಮತ್ತು ನೋಡುವದು ಮೊದಲಾದ ಕರ್ಮೇಂದ್ರಿಯದ ಕೆಲಸಗಳ, ಉಸಿರಾಡುವ ಪ್ರಾಣದ ಕೆಲಸದ, ಸಂಕಲ್ಪಿಸುವ ಮನಸ್ಸಿನ ಕೆಲಸದ-ಈ ಎಲ್ಲ ವಿಭಾಗಗಳ (ತತ್ತ್ವವಿತ್ತು) ನಿಜಸ್ಥಿತಿಯನ್ನರಿತವನಾದರೊ (ಗುಣಾಃ) ಗುಣಗಳ ಕಾರ್ಯಗಳಾದ ದೇಹೇಂದ್ರಿಯಾದಿಗಳು (ಗುಣೇಷು) ಗುಣಗಳ ಕಾರ್ಯಗಳಾದ ವಿಷಯಗಳಲ್ಲಿ (ವರ್ತಂತೇ) ವ್ಯವಹರಿಸುತ್ತವೆ, ಆತ್ಮನಿಗೂ ಕರ್ಮಗಳಿಗೂ ಸಂಬಂಧವಿಲ್ಲ (ಇತಿ) ಎಂದು (ಮತ್ವಾ) ತಿಳಿದು (ನ ಸಜ್ಜತೇ) ನಾನು ಮಾಡುತ್ತೇನೆಂದು ಅಭಿಮಾನಗೊಳ್ಳುವದಿಲ್ಲ

ಅಜ್ಞಾನಿಗಳಾದರೊ :—

**ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ಕೃತ್ಸ್ನವಿನ್ನ ವಿಚಾಲಯೇತ್ ॥**

(ಪ್ರಕೃತೇಃ) ಪರಮಾತ್ಮನ ಮಾಯಾಶಕ್ತಿಯ (ಗುಣಸಮ್ಮೂಢಾಃ) ಸತ್ತ್ವ, ರಜ, ತಮ–ಎಂಬ ಗುಣಗಳ ಕಾರ್ಯಗಳಾದ ದೇಹ, ಇಂದ್ರಿಯ–ಮೊದಲಾದವುಗಳನ್ನೇ ಆತ್ಮವೆಂದು ತಪ್ಪು ತಿಳಿದುಕೊಂಡವರು (ಗುಣ ಕರ್ಮಸು) ಆ ದೇಹೇಂದ್ರಿಯಾದಿಗಳು ಮಾಡಿದ ಕರ್ಮದಲ್ಲಿ (ಸಜ್ಜಂತೇ) ನಾವು ಫಲದ ಬಯಕೆಯಿಂದ ಮಾಡಿದೆವೆಂದು ಅಭಿಮಾನಗೊಳ್ಳುತ್ತಾರೆ (ಅಕೃತ್ಸ್ನವಿದಃ)* ಫಲದ ಬಯಕೆಯನ್ನು ಮಾತ್ರ ಅರಿತವರಾಗಿ ಗುಣಕರ್ಮ ವಿಭಾಗವನ್ನರಿಯದೆ ಸ್ವಲ್ಪಮಾತ್ರ ತಿಳಿದವರೆನಿಸಿರುವ (ಮಂದಾನ್) ದಡ್ಡ ರಾದ (ತಾನ್) ಆ ಕರ್ಮಾಸಕ್ತರನ್ನು (ಕೃತ್ಸ್ನವಿತ್) ಫಲದ ಹಣೆಯ ಬರಹವನ್ನೂ ಗುಣಕರ್ಮವಿಭಾಗವನ್ನೂ ಎಲ್ಲವನ್ನೂ ಅರಿತಿರುವ ಆತ್ಮ ಜ್ಞಾನಿಯು (ನ ವಿಚಾಲಯೇತ್) ಕರ್ಮವನ್ನು ಮಾಡಬೇಕೆಂಬ ಬುದ್ಧಿ ಯಿಂದ ಕದಲಿಸಬಾರದು ಅವರು ಚಿತ್ತಶುದ್ಧಿಯಾಗುವವರೆಗೂ ಕರ್ಮ ವನ್ನು ಮಾಡುತ್ತಿರುವಂತೆ ಅವರ ಬುದ್ಧಿಯನ್ನು ಹಾಗೆಯೇ ಇರಗೊಡಬೇಕು.

ಮೋಕ್ಷವನ್ನು ಬಯಸುವವರು ಕರ್ಮವನ್ನು ಮಾಡುವ ರೀತಿ ಹೇಗೆಂದರೆ —

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

(ಸರ್ವಾಣಿ) ಎಲ್ಲ (ಕರ್ಮಾಣಿ) ಕರ್ಮಗಳನ್ನೂ (ಮಯಿ) ಸರ್ವ ಜ್ಞನಾದ ಮತ್ತು ಪರಮೇಶ್ವರನಾದ ನನ್ನಲ್ಲಿ (ಅಧ್ಯಾತ್ಮಚೇತಸಾ)

---

* 'ಅಕೃತ್ಸ್ನವಿದಃ' ಎಂದರೆ ಯಾವದನ್ನು ತಿಳಿದರೆ ಅದರ ಹೊರತು ಮತ್ತೇನನ್ನೂ ತಿಳಿದಂತಾಗುವದಿಲ್ಲವೊ ಅಂಥ ಕ್ಷುದ್ರವಿಷಯಗಳನ್ನು ತಿಳಿದವ ರೆಂದೂ 'ಕೃತ್ಸ್ನವಿದಃ' ಎಂದರೆ ಯಾವದನ್ನು ತಿಳಿದರೆ ಎಲ್ಲವನ್ನೂ ತಿಳಿ ದಂತಾಗುವದೊ ಅಂಥ ಪರಮಾತ್ಮಸ್ವರೂಪವನ್ನು ತಿಳಿದವರೆಂದೂ ಅರ್ಥ ವನ್ನು ಹೇಳಬಹುದು.

ಸರ್ವಾಂತರ್ಯಾಮಿಯೆಂಬ ಬುದ್ಧಿಯಿಂದ (ಸಂನ್ಯಸ್ಯ) ಒಪ್ಪಿಸಿಬಿಟ್ಟು- ಎಂದರೆ ಪರಮಾತ್ಮನ ಆಳಾಗಿ ದುಡಿಯುತ್ತೇನೆಂದು ಭಾವಿಸಿ ಕರ್ಮವನ್ನು ಮಾಡುತ್ತ (ನಿರಾಶೀಃ) ಯಾವ ಬಯಕೆಯೂ ಇಲ್ಲದವನಾಗಿ (ನಿರ್ಮಮಃ) ದೇಹಾದಿಗಳಲ್ಲಿಯೂ ಹೆಂಡಿರು, ಮಕ್ಕಳು-ಮೊದಲಾದವರಲ್ಲಿಯೂ ನನ್ನವರೆಂಬಭಿಮಾನವಿಲ್ಲದವನು (ಭೂತ್ವಾ) ಆಗಿ (ವಿಗತಜ್ವರಃ) ಬದುಕಿರುವಾಗ ಅಪಕೀರ್ತಿಯಾಗಲಿ ಸತ್ತ ಮೇಲೆ ನರಕವಾಗಲಿ ಗಂಟುಬೀಳುವದೆಂಬ ಸಂತಾಪವನ್ನು ಹಚ್ಚಿಕೊಳ್ಳದೆ (ಯುಧ್ಯಸ್ವ) ನೀನು ಉದ್ದೇಶ ಮಾಡಿರುವ ಯುದ್ಧವನ್ನು ಮಾಡು.

ಇದರ ಫಲವೇನೆಂದರೆ —

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನುಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ**

ಆತ್ಮಜ್ಞಾನಿಗಳಂತು ತಮಗೆ ಕರ್ಮದ ಸಂಬಂಧವಿಲ್ಲವೆಂದು ತಿಳಿದವರಾಗಿ ಮುಕ್ತರಾಗುವರಷ್ಟೆ (ನಿತ್ಯಂ) ಸೃಷ್ಟಿಕಾಲದಿಂದಲೂ ನಡೆದುಕೊಂಡು ಬಂದಿರುವಂಥ (ಇದಂ) ಈ (ಮೇ) ನನ್ನ [ಮತಂ] ಅಭಿಪ್ರಾಯವನ್ನು [ಶ್ರದ್ಧಾವಂತಃ] ನಿಜವಾಗಿ ಫಲಕಾರಿಯೆಂದು ನನ್ನ ಮೇಲೆ ವಿಶ್ವಾಸವುಳ್ಳವರಾಗಿ [ಅನಸೂಯಂತಃ] ದುಃಖರೂಪವಾದ ಯುದ್ಧವನ್ನು ಮಾಡೆಂಬ ಮಾತು ನಿರ್ದಯವನ್ನು ಸೂಚಿಸುವದೆಂದು ಮುಂತಾಗಿ ನನ್ನಲ್ಲಿ ಕುಳುಕನ್ನು ಹುಡುಕದವರಾಗಿ [ಯೇ] ಯಾವ [ಮಾನವಾಃ] ಮನುಷ್ಯರು [ಅನುತಿಷ್ಠಂತಿ] ಆಚರಿಸುತ್ತಾರೊ [ತೇಽಪಿ] ಅವರು ಕೂಡ, ಚಿತ್ತಶುದ್ಧಿಯನ್ನೊ ಜ್ಞಾನವನ್ನೊ ಹೊಂದಿ [ಕರ್ಮಭಿಃ] ಪುಣ್ಯಪಾಪಗಳಿಂದ [ಮುಚ್ಯಂತೇ] ಬಿಡುಗಡೆಯನ್ನು ಹೊಂದುತ್ತಾರೆ.

ಹಾಗಲ್ಲದೆ —

---

* ಈ ಮಾತಿಗೆ 'ಯಾವಾಗಲೂ' ಎಂಬರ್ಥವನ್ನು ಮಾಡಿ 'ಅನುತಿಷ್ಠಂತಿ' ಎಂಬ ಮಾತಿಗೆ ವಿಶೇಷಣವಾಗಿಯೂ ಅರ್ಥವನ್ನು ಮಾಡಬಹುದು.

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥ ೩೨ ॥**

(ಯೇ ತು) ಮತ್ತೆ ಯಾರು (ಏತತ್) ಈ (ಮೇ) ನನ್ನ (ಮತಂ) ಅಭಿಪ್ರಾಯವನ್ನು (ಅಭ್ಯಸೂಯ-ತಃ) ದೋಷದೃಷ್ಟಿಯಿಂದ ನೋಡುವವರಾಗಿ (ನಾನುತಿಷ್ಠಂತಿ) ನಡೆಸುವದಿಲ್ಲವೊ (ತಾನ್) ಅವರನ್ನು (ಸರ್ವಜ್ಞಾನ ವಿಮೂಢಾನ್) ಕರ್ಮಜ್ಞಾನ, ಆತ್ಮಜ್ಞಾನ —, ಮೊದಲಾದ ಎಲ್ಲ ತಿಳಿವಳಿಕೆ ಗಳನ್ನೂ ತಪ್ಪಾಗಿ ತಿಳಿದುಕೊಂಡಿರುವವರನ್ನಾಗಿಯೂ (ನಷ್ಟಾನ್) ಪುರುಷಾರ್ಥಗಳನ್ನೆಲ್ಲ ಕಳೆದುಕೊಂಡು ಹಾಳಾಗಿ ಹೋದವರನ್ನಾಗಿಯೂ, (ಅಚೇತಸಃ) ಅವಿವೇಕಿಗಳನ್ನಾಗಿಯೂ (ವಿದ್ಧಿ) ತಿಳಿ

ಜನರು ಇಂಥ ಸನ್ಮಾರ್ಗದಲ್ಲೇಕೆ ಮುಂದುವರಿಯುವದಿಲ್ಲವೆಂದರೆ:—

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥೩೩॥**

(ಜ್ಞಾನವಾನಪಿ) ಒಳ್ಳೆಯದನ್ನೂ ಕೆಟ್ಟದ್ದನ್ನೂ ಬಿಡಿಸಿ ತಿಳಿಯಬಲ್ಲ ವನು ಕೂಡ (ಸ್ವಸ್ಯಾಃ) ತನ್ನ (ಪ್ರಕೃತೇ) ಹುಟ್ಟುಗುಣಕ್ಕೆ ಅಂದರೆ ಹಿಂದಿನ ಅನೇಕ ಜನ್ಮಗಳಲ್ಲಿ ಮಾಡಿದ ಧರ್ಮಾಧರ್ಮಗಳೇ ಪರಿಣಾಮವಾಗಿ ಈ ಜನ್ಮದಲ್ಲಿ ಬಂದಿರುವ ಮನಸ್ಸಿನ ಸಂಸಾರಕ್ಕೆ (ಸದೃಶಂ) ಸರಿಯಾಗಿ (ಚೇಷ್ಟತೇ) ನಡೆಯುವನು. ಏಕೆಂದರೆ ಸಹಜವಾಗಿ (ಭೂತಾನಿ) ಎಲ್ಲ ಪ್ರಾಣಿಗಳೂ [ಪ್ರಕೃತಿಂ] ಹುಟ್ಟುಗುಣವನ್ನು [ಯಾಂತಿ] ಹಿಂಬಾಲಿಸುತ್ತವೆ. [ನಿಗ್ರಹಃ] ಅವರ ಎದೆಯನ್ನು ಮೆಟ್ಟಿ ತುಳಿಯುವ ಉದ್ಯೋಗವು ಕಿಂ ಕರಿಷ್ಯತಿ] ಏನು ಮಾಡುತ್ತದೆ? ಹೀಗೆ ಸಾಮಾನ್ಯವಾಗಿ ಹುಟ್ಟುಗು ಣವನ್ನು ಎದುರಿಸುವದು ಬಹು ಬಿಗಿಯಾದ ಕೆಲಸವಾದ್ದರಿಂದ ಪಾಪವು ನರ ಕಕ್ಕೆ ಸಾಧನವೆಂದು ತಿಳಿದಿದ್ದರೂ ಮನುಷ್ಯನು ತನ್ನ ಮನಸ್ಸಿನಲ್ಲಿರುವ ಬಲವಾದ ಪಾಪಸಂಸ್ಕಾರದ ಪ್ರೇರಣೆಯಿಂದ ಪಾಪಕರ್ಮದಲ್ಲಿಯೇ ಮುಂದು ವರಿಯುತ್ತಾನೆ.

ಹೀಗೆ ಪುರುಷಪ್ರಯತ್ನವೇನು ಸಾಗುವದಿಲ್ಲವೆಂದಮೇಲೆ ಇಂಥದ್ದನ್ನು ಮಾಡೆಂಬ ಅಥವಾ ಇಂಥದ್ದನ್ನು ಬಿಡೆಂಬ ಶಾಸ್ತ್ರಗಳೆಲ್ಲ ಕೆಲಸಕ್ಕೆ ಬರದೆ ಹೋಗುವವಲ್ಲ! ಎಂದರೆ —

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥೩೪॥**

[ ಇಂದ್ರಿಯಸ್ಯೇಂದ್ರಿಯಸ್ಯ ] ಕಣ್ಣು, ಕಿವಿ — ಮೊದಲಾದ ಎಲ್ಲ ಇಂದ್ರಿಯಗಳಿಗೂ [ ಅರ್ಥೇ ] ರೂಪ, ಶಬ್ದ — ಮೊದಲಾದ ಅವವುಗಳ ವಿಷಯಗಳಲ್ಲಿ [ರಾಗದ್ವೇಷೌ] ಬೇಕೆನಿಸಿದಾಗ ಪ್ರೀತಿಯೂ ಬೇಡವೆನಿಸಿದಾಗ ಹಗೆತನವೂ ತೋರುವದು [ವ್ಯವಸ್ಥಿತೌ] ನಿಯಮವಾಗಿದೆ. ಶಾಸ್ತ್ರಜ್ಞಾನ ವಿಲ್ಲದೆ ಬರೀ ಹುಟ್ಟುಗುಣದ ಬಾಲವನ್ನು ಹಿಡಿದುಕೊಂಡು ಸಾಗುವವರು ಯಾವದಾದರೊಂದು ವಿಷಯವನ್ನು ಕಂಡೊಡನೆ ಅದು ಬೇಕೆಂಬ ಪ್ರೀತಿಗೊ ಅಥವಾ ಬೇಡವೆಂಬ ಹಗೆತನಕ್ಕೊ ಒಳಗಾಗಿಬಿಡುತ್ತಾರೆ ಶಾಸ್ತ್ರಾರ್ಥ ವನ್ನು ತಿಳಿದು ನಡೆಯುವವರು ಶಾಸ್ತ್ರವು ಹೇಳಿದಂತೆ ಮಾಡುವೆವೆಂದು ಮಾಡಬೇಕೇ ಹೊರತು [ತಯೋಃ] ಹುಟ್ಟುಗುಣದಿಂದ ತೋರುವ ರಾಗದ್ವೇಷಗಳಿಗೆ [ವಶಂ ನಾಗಚ್ಛೇತ್] ಅಡಿಯಾಳಾಗಬಾರದು [ ಹಿ ] ಏಕೆಂದರೆ ( ತೌ ) ಆ ಹುಟ್ಟುಗುಣದಿಂದ ತೋರುವ ರಾಗದ್ವೇಷಗಳು ( ಅಸ್ಯ ) ಈ ಮನುಷ್ಯನಿಗೆ ( ಪರಿಪಂಥಿನೌ ) ಶ್ರೇಯೋಮಾರ್ಗಕ್ಕೆ ಅಡ್ಡವಾದಂಥವುಗಳು

ಭಿಕ್ಷಾಚರಣೆಯು ಶಾಸ್ತ್ರವಿಹಿತವಾದ ಕರ್ಮವೇ ಆದ್ದರಿಂದ ದುಃಖ ರೂಪವಾದ ಯುದ್ಧವನ್ನು ಬಿಟ್ಟು ಅದನ್ನೇಕೆ ಹಿಡಿಯಬಾರದೆಂದರೆ :—

**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩೫॥**

( ಸ್ವಧರ್ಮಃ ) ಶಾಸ್ತ್ರದಲ್ಲಿ ತನತನಗೆ ವಿಹಿತವಾಗಿರುವ ಧರ್ಮವು ( ವಿಗುಣಃ ) ಗುಣದಲ್ಲಿ ಕೊರತೆಯಾದದ್ದೆಂದು ಕಂಡರೂ, ಅದನ್ನು ಆಚರಿಸುವದು (ಸ್ವನುಷ್ಠಿತಾತ್) ಚೆನ್ನಾಗಿ ನೆರವೇರಿಸಿದಂಥ (ಪರಧರ್ಮಾತ್)

ಮತ್ತೊಬ್ಬನಿಗೊಪ್ಪುವ ಧರ್ಮಕ್ಕಿಂತ ಎಂದರೆ ಮತ್ತೊಬ್ಬನಿಗೆಂದು ಶಾಸ್ತ್ರದಲ್ಲಿ ವಿಹಿತವಾಗಿರುವ ಧರ್ಮವನ್ನು ತಾನು ಚೆನ್ನಾಗಿ ನೆರವೇರಿಸಿದ್ದಕ್ಕಿಂತ (ಶ್ರೇಯಾನ್) ಮೇಲು ಏಕೆಂದರೆ (ಸ್ವಧರ್ಮೇ) ಶಾಸ್ತ್ರದಲ್ಲಿ ತನಗೆ ವಿಹಿತವಾಗಿರುವ ಧರ್ಮವನ್ನು ನಡೆಸುವದರಲ್ಲಿ (ನಿಧನಂ) ಸಾವು ಒದಗಿದರೂ (ಶ್ರೇಯಃ) ಪರಧರ್ಮದಲ್ಲಿ ಬದುಕುವವಕ್ಕಿಂತ ಒಳ್ಳೆಯದು. ಹೇಗೆಂದರೆ ಅದರಿಂದ ಬದುಕಿರುವಾಗ ಕೀರ್ತಿಯೂ ಸತ್ತ ಮೇಲೆ ಸ್ವರ್ಗವೂ ದೊರೆಯುವವು. (ಪರಧರ್ಮಃ) ಹೆಚ್ಚು ಗುಣವು ಕಂಡರೂ ಮತ್ತೊಬ್ಬನಿಗೆ ಹೇಳಿರುವ ಧರ್ಮವು (ಭಯಾವಹಃ) ಭಯವನ್ನುಂಟುಮಾಡುವದು ಹೇಗೆಂದರೆ ಅದರಿಂದ ಬದುಕಿರವಾಗ ಅಪಯಶಸ್ಸೂ ಸತ್ತಮೇಲೆ ನರಕವೂ ಆಗುವವು ಅರ್ಜುನನೆ ಕೇಳು. ನೀನು ಕ್ಷತ್ರಿಯ. ಯುದ್ಧವು ನಿನ್ನ ಧರ್ಮ. ಭಿಕ್ಷಾಚರಣೆಯು ಬ್ರಾಹ್ಮಣರ ಧರ್ಮ. ನೀನು ಬ್ರಾಹ್ಮಣರ ಧರ್ಮವನ್ನು ಹಿಡಿಯುವದಕ್ಕಿಂತ ನಿನ್ನ ಧರ್ಮವಾದ ಯುದ್ಧದಲ್ಲಿ ಸಾಯುವದಾದರೂ ಮೇಲು.

ಮನುಷ್ಯನಿಗಾಗುವ ಅನರ್ಥಗಳಿಗೆಲ್ಲ ಮೂಲವಾದ ಒಂದನ್ನು ತಿಳಿಯಬೇಕೆಂದು,

**ಅರ್ಜುನ ಉವಾಚ** ಅರ್ಜುನನು ಹೇಳಿದ್ದು :—

**ಅಥ ಕೇನ ಪ್ರಯುಕ್ತೋऽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥೩೬॥**

(ವಾರ್ಷ್ಣೇಯ) ಕೃಷ್ಣನೆ, ಕೇಳು. (ಅಥ) ಇನ್ನು (ಅಯಂ) ಈ (ಪೂರುಷಃ) ಮನುಷ್ಯನು (ಕೇನ) ಯಾರಿಂದ (ಪ್ರಯುಕ್ತಃ) ಅಪ್ಪಣೆಯನ್ನು ಹೊಂದಿ (ಅನಿಚ್ಛನ್ನಪಿ) ತನಗೆ ಬೇಡವಾದರೂ (ಬಲಾತ್) ತನಗಿಂತ ಬಲಿಷ್ಠರಾದ ರಾಜ ಮೊದಲಾದವರಿಂದ (ನಿಯೋಜಿತ ಇವ) ಅಪ್ಪಣೆಯನ್ನು ಹೊಂದಿ ನಡೆಸುವವನ ಹಾಗೆ (ಪಾಪಂ) ಪಾಪಕರ್ಮವನ್ನು (ಚರತಿ) ಮಾಡುತ್ತಾನೆ ?

**ಶ್ರೀಭಗವಾನುವಾಚ** ಭಗವಂತನಾದ ಶ್ರೀ ಕೃಷ್ಣನು ಹೇಳಿದ್ದು .—

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ । ***
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥೩೭॥**

ಎಲ್ಲ ಅನರ್ಥಗಳಿಗೂ ಕಾರಣವಾಗಿ ಲೋಕಕ್ಕೆಲ್ಲ ಶತ್ರುವಾಗಿರುವ ಅದು ಯಾವದೆಂದರೆ (ರಜೋಗುಣಸಮುದ್ಭವಃ) ರಜೋಗುಣವೇ ಉತ್ಪತ್ತಿಸ್ಥಾನವಾಗಿರುವ ಅಥವಾ ರಜೋಗುಣದಿಂದ ಹುಟ್ಟಿರುವ (ಏಷಃ) ಈ (ಕಾಮಃ) ಬಯಕೆಯು ಮನುಷ್ಯನಿಗೆ ಬಯಕೆಯುಂಟಾಗುತ್ತಲೆ ಅದು ತನ್ನ ಚಟವನ್ನು ತೀರಿಸಿಕೊಳ್ಳುವದಕ್ಕಾಗಿ ಮನುಷ್ಯನನ್ನು ರಜೋಗುಣದ ಕಾರ್ಯವಾದ ದುಡಿತದಲ್ಲಿ ತೊಡಗಿಸುತ್ತದೆ. ದುಡಿತದಿಂದ ದುಃಖವಾಗುವದು ಎಲ್ಲರಿಗೂ ಗೊತ್ತೇ ಇದೆ. (ಏಷಃ) ಇದೆ (ಕ್ರೋಧಃ) ಸಿಟ್ಟು. ಬಯಕೆ ತೀರುವದಕ್ಕೇನಾದರೂ ಅಡಚಣೆಯುಂಟಾದರೆ ಆ ಬಯಕೆಯೇ ಸಿಟ್ಟಿನ ರೂಪದಲ್ಲಿ ಕಾಣುತ್ತದೆ. ಈ ಕಾಮವು ಬಹಳ ಕೆಟ್ಟದ್ದು ಏಕೆಂದರೆ ಇದು (ಮಹಾಶನಃ) ಎಷ್ಟು ಹೊಟ್ಟೆಗೆ ಹಾಕಿದರೂ ನುಂಗಿ ನೀರು ಕುಡಿದು ಇನ್ನೂ ಬೇಕೆಂದು ಹಾಹಾಕಾರ ಮಾಡುವದು. ಅಗ್ನಿಗೆ ತುಪ್ಪವನ್ನು ಎರೆದಷ್ಟೂ ಅದು ಮತ್ತಷ್ಟು ಬೇಕೆಂದು ನಾಲಿಗೆಯನ್ನು ಮುಂದಕ್ಕೆ ಚಾಚುವಂತೆ ಮನುಷ್ಯನಿಗೆ ಎಷ್ಟು ಸುಖಸೌಕರ್ಯಗಳು ದೊರೆತರೂ ಸಾಲದೆ ಇನ್ನೂ ಬೇಕು ಬೇಕೆನಿಸುವದು ಇದರ ಮೇಲೆ ಇದು (ಮಹಾಪಾಪ್ಮಾ) ಬಹು ದೊಡ್ಡ ಪಾಪಿಯು. ಮನುಷ್ಯನನ್ನು ನಿರ್ದಯದಿಂದ ಪಾಪದ ಕಡೆಗೇ ನೂಕುತ್ತಿರುವದು. ಆದ್ದರಿಂದ (ಇಹ) ಈ ಲೋಕದಲ್ಲಿ (ಏನಂ) ಈ ಕಾಮವನ್ನು (ವೈರಿಣಂ) ಹಗೆಯನ್ನಾಗಿ (ವಿದ್ಧಿ) ತಿಳಿ.

ಅದು ಬಂದು ಹೇಗೆ ಮುತ್ತಿಗೆಯನ್ನು ಹಾಕಿರುವದೆಂದರೆ :—

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥**

---

* "ಕಾಮಮಯ ಏವಾಯಂ ಪುರುಷಃ" — ಈ ಪುರುಷನು ಬಯಕೆಯ ಮೂರ್ತಿಯಾಗಿರುವನು — ಶ್ರು.

( ಯಥಾ ) ಹೇಗೆ ( ವಹ್ನಿಃ ) ಬೆಳಕು ಕೊಡುವ ಸ್ವಭಾವದ ಅಗ್ನಿಯು ( ಧೂಮೇನ ) ತನ್ನಿಂದಲೇ ಹುಟ್ಟಿದ ಕತ್ತಲೆಯ ರೂಪವಾದ ಹೊಗೆಯಿಂದ ( ಆವ್ರಿಯತೇ ) ಮುಸಕನ್ನು ಹಾಕಿಕೊಂಡಿರುವದೊ, ಮತ್ತು ಅಷ್ಟೇ ಏಕೆ ? ಇನ್ನೂ ದಟ್ಟವಾಗಿ (ಆದರ್ಶಃ) ಕನ್ನಡಿಯು [ ಮಲೇನಚ ] ಧೂಲಿಯಿಂದ ಮುಚ್ಚಿಕೊಂಡಿರುವದೊ, ಇನ್ನೂ ಚೆನ್ನಾಗಿ ನೋಡಿದರೆ [ಯಥಾ] ಹೇಗೆ [ಗರ್ಭಃ] ಹೊಟ್ಟೆಯೊಳಗಿರುವ ಗರ್ಭವು [ಉಲ್ಬೇನ] ಜರಾಯುವೆಂಬ ಚರ್ಮದ ಚೀಲದಿಂದ [ಆವೃತಃ] ಮುಚ್ಚಿಕೊಂಡಿರುವದೊ [ತಥಾ] ಹಾಗೆ [ತೇನ] ಆ ಕಾಮದಿಂದ [ಇದಂ] ಇದು [ಆವೃತಂ] ಹೆಚ್ಚು ಹೆಚ್ಚು ದಟ್ಟವಾಗಿ ಮುಚ್ಚಿಕೊಂಡಿರುವದು.

ಕಾಮವು ಯಾವದನ್ನು ಮುಚ್ಚಿಕೊಂಡಿರುವದೆಂದರೆ :—

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥ ೩೯ ॥**

[ಕೌಂತೇಯ] ಅರ್ಜುನನೆ, ಕೇಳು. ಅವಿವೇಕಿಗೆ ತಾನು ಬಯಸಿದ ವಸ್ತು ದೊರೆತಾಗ ಆ ಬಯಕೆಯು ಗೆಳೆಯನಂತೆ ಕಂಡರೂ [ಜ್ಞಾನಿನಃ] ವಿವೇಕಿಗೆ [ನಿತ್ಯವೈರಿಣಾ] ಈ ಬಯಕೆಯು ನನ್ನನ್ನು ಅನರ್ಥವೆಂಬ ಕೊಂಕಲಿಗೆ ಕೆಡಹುವದೆಂದು ಮೊದಲೇ ಗೊತ್ತಿರುವದರಿಂದ ಬಯಸಿದ ವಸ್ತು ದೊರತಾಗಲೂ – ಯಾವಾಗಲೂ – ಹಗೆಯಾಗಿರುವಂಥ ಮತ್ತು ಅವಿವೇಕಿಗಳಿಗಾದರೂ ದೊರೆತ ವಸ್ತು ಕಳೆದುಹೋದರೆ ದುಃಖವಾಗುವದಿಷ್ಟೇ! ಅಲ್ಲದೆ ಅದು ದೊರೆತಿರುವಾಗಲೂ [ದುಷ್ಪೂರೇಣ] ಎಷ್ಟು ಹಾಕಿದರೂ ತುಂಬದೆ ಇರುವಂಥ [ ಅನಲೇನ ಚ ] ಸಾಕೆನಿಸದಿರುವಂಥಾದ್ದೂ ಆದ [ಏತೇನ] ಈ [ಕಾಮರೂಪೇಣ] ಬಯಕೆಯೆಂಬುವರಿಂದ [ ಜ್ಞಾನಂ ] ವಿವೇಕದ ಬುದ್ಧಿಯು [ಆವೃತಂ] ಮುಚ್ಚಿಹಾಕಲ್ಪಟ್ಟಿರುವದು

ಅದು ಎಲ್ಲಿ ಮನೆ ಮಾಡಿಕೊಂಡಿರುವದೆಂದರೆ .—

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥೪೦॥**

ರಾಜನಿಗೆ ಬೆಟ್ಟದ ಮೇಲಿನ ಕೋಟೆಯು ವಾಸಸ್ಥಾನವಾಗಿರುವಂತೆ ಬಯಕೆಗೆ [ಇಂದ್ರಿಯಾಣಿ] ಜ್ಞಾನೇಂದ್ರಿಯಗಳು [ಮನಃ] ಮನಸ್ಸು [ಬುದ್ಧಿಃ] ಬುದ್ಧಿಯು – ಇವು [ಅಸ್ಯ] ಈ ಬಯಕೆಯ [ಅಧಿಷ್ಠಾನಂ] ವಾಸಸ್ಥಾನವು [ ಉಚ್ಯತೇ ] ಎನಿಸುವದು [ ಏತೈಃ ] ಈ ಮೂರು ಆಶ್ರಯಗಳಿಂದಲೆ [ ಏಷಃ ] ಈ ಬಯಕೆಯು [ ಜ್ಞಾನಂ ] ವಿವೇಕದ ಬುದ್ಧಿಯನ್ನು [ ಆವೃತ್ಯ ] ಮುಚ್ಚಿಕೊಂಡು [ ದೇಹಿನಮ್ ] ದೇಹಾಭಿಮಾನಿಯಾದ ಜೀವನನ್ನು [ವಿಮೋಹಯತಿ] ಚೆನ್ನಾಗಿ ಮಂಕುಬೂದಿಯನ್ನು ತಳಿಯುವದು.

ಆದ್ದರಿಂದ —

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹೀಹ್ಯೇನಂ * ಜ್ಞಾನವಿಜ್ಞಾನನಾಶನಮ್ ॥**

[ಭರತರ್ಷಭ] ಅರ್ಜುನನೆ, ಕೇಳು. [ತಸ್ಮಾತ್] ಇಂದ್ರಿಯಗಳು, ಮನಸ್ಸು, ಬುದ್ಧಿ – ಇವೇ ಬಯಕೆಗೆ ಆಶ್ರಯವಾದ್ದರಿಂದ [ತ್ವಂ] ನೀನು [ ಆದೌ ] ಮೊದಲೇ [ ಇಂದ್ರಿಯಾಣಿ ] ಇಂದ್ರಿಯ ಮನೋಬುದ್ಧಿಗಳನ್ನು [ನಿಯಮ್ಯ] ಹಿಡಿಯಲ್ಲಿಟ್ಟುಕೊಂಡು [ಪಾಪ್ಮಾನಂ] ಪಾಪಸ್ವಭಾವದ್ದಾದಂಥ ಮತ್ತು [ಜ್ಞಾನವಿಜ್ಞಾನನಾಶನಮ್] ಶಾಸ್ತ್ರದಿಂದಲೂ ಗುರುಗಳಿಂದಲೂ ಆತ್ಮವಿಚಾರವಾಗಿ ತಿಳಿದ ಜ್ಞಾನವನ್ನೂ ಅದನ್ನು ಆದಷ್ಟು ಅಳವಡಿಸಿಕೊಂಡ-ಎಂದರೆ ವೈಗೂಡಿಸಿಕೊಂಡ–ವಿಜ್ಞಾನವನ್ನೂ ಹಾಳುಮಾಡುವಂಥ [ಏನಂ] ಈ ಬಯಕೆಯನ್ನು [ಪ್ರಜಹೀಹಿ] ತೊರೆದುಬಿಡು.

ಯಾವವರ ಬೆಂಬಲದಿಂದ ಬಯಕೆಯನ್ನು ಗೆಲ್ಲಬೇಕೆಂದರೆ —

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥**

---

* "ಪ್ರಜಹಿ ಹ್ಯೇನಂ" ಎಂಬ ಪಾಠಾಂತರವಿದೆ [ ಹಿ ] ಆದ್ದರಿಂದ [ಏನಂ] ಈ ಬಯಕೆಯನ್ನು [ಪ್ರಜಹಿ] ನಾಶಮಾಡು–ಎಂದರ್ಥ

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥**

[ ಇಂದ್ರಿಯಾಣಿ ] ಸೂಕ್ಷ್ಮವಾಗಿಯೂ ತಿಳಿಯುವವುಗಳಾಗಿಯೂ ವ್ಯಾಪಕಗಳಾಗಿಯೂ ಒಳಗಿರುವವುಗಳಾಗಿಯೂ, ಇರುವ ಇಂದ್ರಿಯಗಳು [ಪರಾಣಿ] ಸ್ಥೂಲವೂ ಜಡವೂ ಪರಿಚ್ಛಿನ್ನವೂ ಹೊರಗಣದೂ ಆದ ದೇಹವೇ ಮೊದಲಾದ ಎಲ್ಲ ವಸ್ತುಗಳಿಗಿಂತ ಹೆಚ್ಚಿನ ಯೋಗ್ಯತೆಯುವೆಂದು [ಆಹುಃ] ಹೇಳುವರು. [ ಇಂದ್ರಿಯೇಭ್ಯಃ ] ಆ ಇಂದ್ರಿಯಗಳಿಗಿಂತಲೂ [ ಮನಃ ] ಇಂದ್ರಿಯಗಳಿಗ ಪ್ರೇರಕವಾದಂಥ ಮನಸ್ಸು [ ಪರಂ ] ಹೆಚ್ಚಿನ ಯೋಗ್ಯತೆಯದು. [ಮನಸಸ್ತು] ಆ ಮನಸ್ಸಿಗಿಂತಲೂ [ ಬುದ್ಧಿಃ ] ಆ ಮನಸ್ಸಿನ ಮೇಲೆಯೂ ಅಧಿಕಾರವನ್ನು ಮಾಡುವ ಬುದ್ಧಿಯು [ ಪರಾ ] ಹೆಚ್ಚಿನ ಯೋಗ್ಯತೆಯದು [ಬುದ್ಧೇಃ] ಆ ಬುದ್ಧಿಗಿಂತಲೂ [ಪರತಸ್ತು] ಮೇಲಿನವನಾಗಿ [ ಯಃ ] ಎಲ್ಲಕ್ಕೂ ಒಳಗೆ ಯಾವನಿರುವನೊ, ಯಾವನನ್ನು ಬಯಕೆಯು ಮುಸಕಿಕೊಂಡಿರುವದೆಂದು ಹೇಳಿದೆವೊ ಅವನು [ ಸಃ ] ಆ ಪರಮಾತ್ಮನು [ಮಹಾಬಾಹೋ] ಅರ್ಜುನನೆ, ಕೇಳು. ವಿಷಯಗಳ ಮೇಲಿನ ಪ್ರೀತಿಯು ಪರಮಾತ್ಮದರ್ಶನವಾದಾಗ ಮಾತ್ರ ಹೋಗುವದೆಂದು ಹಿಂದೆ ಹೇಳಿದ್ದನ್ನು ಲಕ್ಷ್ಯದಲ್ಲಿಟ್ಟುಕೊಂಡು [ಏವಂ] ಹೀಗೆ [ಆತ್ಮಾನಂ] ತನ್ನ ಆತ್ಮಸ್ವರೂಪವನ್ನು [ಬುದ್ಧೇಃ] ಬುದ್ಧಿಗಿಂತಲೂ [ಪರಂ] ಒಳಗಿನದಾಗಿ [ಬುದ್ಧ್ವಾ] ತಿಳಿದುಕೊಂಡು [ಆತ್ಮನಾ] ತನ್ನ ಶುದ್ಧವಾದ ಮನಸ್ಸಿನಿಂದ [ಸಂಸ್ತಭ್ಯ] ಆ ಭಾವನೆಯನ್ನು ಚೆನ್ನಾಗಿ ನಿಲ್ಲಿಸಿಕೊಂಡು [ದುರಾಸದಂ] ಬಹು ಕಷ್ಟದಿಂದ ವಶಮಾಡಿಕೊಳ್ಳಬೇಕಾಗಿರುವಂಥ [ ಕಾಮರೂಪಂ ] ಬಯಕೆಯೆಂಬ [ಶತ್ರುಂ] ಹಗೆಯನ್ನು [ಜಹಿ] ಕೊಲ್ಲು

ಇಲ್ಲಿಗೆ **ಕರ್ಮಯೋಗ**ವೆಂಬ

ಮೂರನೆ ಅಧ್ಯಾಯವು ಮುಗಿಯಿತು.



# ನಾಲ್ಕನೆಯ ಅಧ್ಯಾಯ

ಶೋಕಮೋಹಗಳನ್ನು ಕಳೆಯುವದಕ್ಕಾಗಿ ಹೇಳಬೇಕಾದ ಜ್ಞಾನ ನಿಷ್ಠೆಯೂ ಅದನ್ನು ಗ್ರಹಿಸುವದಕ್ಕೆ ತಕ್ಕ ಯೋಗ್ಯತೆಯನ್ನು ತಂದುಕೊಡುವ ಸಾಧನವಾಗಿ ಹೇಳಬೇಕಾದ ಕರ್ಮಯೋಗವೂ ಮುಗಿಯಿತೆಂಬುದನ್ನು ಸೂಚಿಸುವದಕ್ಕಾಗಿ ಈ ವಿದ್ಯೆಯು ಸಾಗಿ ಬಂದಿರುವ ಪರಂಪರೆಯನ್ನು ತಿಳಿಸುವದಕ್ಕೆ ತೊಡಗುತ್ತಾನೆ —

**ಶ್ರೀ ಭಗವಾನುವಾಚ** ಶ್ರೀ ಕೃಷ್ಣನು ಹೇಳಿದ್ದು .—

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್** ॥ ೧ ॥

[ಅವ್ಯಯಂ] ಎಂದಿಗೂ ಮುಕ್ಕಾಗದಂಥ ಮೋಕ್ಷವನ್ನು ಕೊಟ್ಟೇಕೊಡುವದರಿಂದ ನಾಶವಿಲ್ಲದಂಥ [ಇಮಂ] * ಈ [ಯೋಗಂ] ಜ್ಞಾನಯೋಗವನ್ನು ಅವಕ್ಕೆ ಸಾಧನವಾದ ಕರ್ಮಯೋಗವನ್ನೂ [ಅಹಂ] ನಾನು [**ವಿವಸ್ವತೇ**] ಈ ಮನ್ವಂತರದ ಆದಿಪುರುಷನಾದ ಸೂರ್ಯನಿಗೆ, ಜಗದ್ರಕ್ಷಣೆ ಮೊದಲಾದವುಗಳ ಸಾಮರ್ಥ್ಯ ಉಂಟಾಗುವದಕ್ಕಾಗಿ ಸೃಷ್ಟಿಯ ಆರಂಭದಲ್ಲಿಯೇ

---

* 'ಇಮಂ' ಎಂಬುದು ಏಕವಚನವಾದ್ದರಿಂದ ಇದಕ್ಕೆ ಜ್ಞಾನಯೋಗವನ್ನಾಗಲಿ ಕರ್ಮಯೋಗವನ್ನಾಗಲಿ ಯಾವದಾದರೂ ಒಂದನ್ನು ಅರ್ಥವಾಗಿ ಹೇಳಬೇಕೆಂಬುವರ ಮೇಲೆ ಎರಡನ್ನೂ ಇಲ್ಲಿ ಸೇರಿಸಿ ಹೇಳಿರುವದು ಸರಿಯಾಗಲಾರದೆಂದು ಸಂಶಯಗೊಳ್ಳಬಾರದು. ಜ್ಞಾನಯೋಗವೂ ಕರ್ಮಯೋಗವೂ ಒಂದಕ್ಕೊಂದು ಸಂಬಂಧವಿಲ್ಲದ ಬೇರೆ ಬೇರೆ ಸ್ವತಂತ್ರಯೋಗಗಳಾಗಿರದೆ ಕರ್ಮಯೋಗವು ಜ್ಞಾನಯೋಗಕ್ಕೆ ಅಂಗವಾದ್ದರಿಂದ ಒಂದೇ ಎಂಬ ದೃಷ್ಟಿಯಿಂದ ಇಲ್ಲಿ ಮಾಡಿರುವ ಅರ್ಥವು ಹೊಂದುವದು. ಈ ಅರ್ಥಕ್ಕೆ ಹಿಂದಿನ ಅಧ್ಯಾಯದ ೩ನೇ ಶ್ಲೋಕದಲ್ಲಿ ಜ್ಞಾನಕರ್ಮಗಳೆರಡನ್ನೂ ಒಳಗೊಂಡ ಉಪದೇಶವನ್ನು ಸೂಚಿಸುವ 'ನಿಷ್ಠಾ' ಎಂಬ ಏಕವಚನದ ಪ್ರಯೋಗದ ಮತ್ತು ಮುಂದಿನ ಅಧ್ಯಾಯದ ೪ನೇ ಶ್ಲೋಕದ ಬೆಂಬಲವೂ ಇರುವದು.

(ಪ್ರೋಕ್ತವಾನ್) ಹೇಳಿದೆನು (ವಿವಸ್ವಾನ್) ಆ ಸೂರ್ಯನು (ಮನವೇ) ತನ್ನ ಮಗನಾದ ಮನುವಿಗೆ (ಪ್ರಾಹ) ಹೇಳಿದನು (ಮನುಃ) ಆ ಮನುವು (ಇಕ್ಷ್ವಾಕವೇ) ತನ್ನ ಮಗನಾದ ಇಕ್ಷ್ವಾಕುವಿಗೆ (ಅಬ್ರವೀತ್) ಹೇಳಿದನು.

ಆ ಯೋಗದ ಈಗಿನ ಸ್ಥಿತಿ ಹೇಗೆಂದರೆ :—

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨ ॥**

(ಪರಂತಪ] ಅರ್ಜುನನೆ, ಕೇಳು. (ಏವಂ) ಹೀಗೆ (ಪರಂಪರ ಪ್ರಾಪ್ತಂ) ಹಿಂದಿನಿಂದ ಒಬ್ಬರಿಂದೊಬ್ಬರಿಗೆ ನಡೆದು ಬಂದಂಥ (ಇಮಂ) ಇದನ್ನು (ರಾಜರ್ಷಯಃ) ರಾಜರೂ ಆಗಿ ಋಷಿಗಳ ಯೋಗ್ಯತೆಯನ್ನೂ ಪಡೆದಿದ್ದ ನಿಮಿ, ಜನಕ, ಅಜಾತಶತ್ರು, ಕೈಕೇಯ - ಮುಂತಾದವರು (ವಿದುಃ) ತಿಳಿದುಕೊಂಡರು (ಸಃ) ಆ (ಯೋಗಃ) ಯೋಗವು (ಇಹ) ಈಗ (ಮಹತಾ ಕಾಲೇನ) ಬಹು ಕಾಲದಿಂದ, ಜನರು ಇಂದ್ರಿಯಗಳನು ಹಿಡಿತದಲ್ಲಿಟ್ಟುಕೊಳ್ಳಲಾರದವರಾದ್ದರಿಂದ (ನಷ್ಟಃ) ಕೇಳುವವರೇ ದಿಕ್ಕಿಲ್ಲದೆ ಹೋಯಿತು

ಅದಕ್ಕೆ ಹೊಸ ಹುರುಪನ್ನು ತಂದುಕೊಡುವದಕ್ಕಾಗಿ :—

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥**

(ಮೇ) ನನಗೆ (ಭಕ್ತಃ ಅಸಿ) ಭಕ್ತನೂ ಆಗಿದ್ದಿ ; (ಸಖಾ ಚ) ಗೆಳೆಯನೂ ಆಗಿದ್ದಿ - (ಇತಿ) ಎಂದು (ಪುರಾತನಃ) ಬಹು ಹಿಂದಿನದಾದ (ಸ ಏವ) ಅದೇ (ಅಯಂ) ಈ (ಯೋಗಃ) ಯೋಗವು (ಅದ್ಯ) ಈಗ (ಮಯಾ) ನನ್ನಿಂದ (ತೇ) ನಿನಗೆ (ಪ್ರೋಕ್ತಃ) ಹೇಳಲ್ಪಟ್ಟಿರುವದು. (ಹಿ) ಇಷ್ಟೇಕೆ ಹೇಳುವೆನೆಂದರೆ, ಇದು ಕಂಡಕಂಡವರಿಗೆ ಹೇಳತಕ್ಕದ್ದಲ್ಲ (ಏತತ್) ಇದು (ಉತ್ತಮಮ್) ಹೆಚ್ಚಿನ (ರಹಸ್ಯಂ) ಗುಟ್ಟು.

ಈಗ ನನ್ನ ಓರಗೆಯವನಾದ ಇವನು ಸೃಷ್ಟಿಯ ಆದಿಯಲ್ಲಿಯೇ ಸೂರ್ಯನಿಗೆ ಹೇಗೆ ಹೇಳಿದನೆಂದು ಸಂಶಯಗೊಂಡು :—

**ಅರ್ಜುನ ಉವಾಚ ಅರ್ಜುನನು ಹೇಳಿದ್ದು —**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥**

(ಭವತಃ) ನಿನ್ನ (ಜನ್ಮ) ಹುಟ್ಟು (ಅಪರಂ) ಮೊನ್ನೆ ಮೊನ್ನೆ ವಸುದೇವನ ಮನೆಯಲ್ಲಾದದ್ದು. (ವಿವಸ್ವತಃ) ಸೂರ್ಯನ (ಜನ್ಮ) ಹುಟ್ಟು (ಪರಂ) ಸೃಷ್ಟಿಯ ಆರಂಭದ ಕಾಲದ್ದು. ಹೀಗಿರುವಾಗ ಈಗ ನನಗೆ ಹೇಳುತ್ತಿರುವ (ತ್ವಂ) ನೀನು (ಆದೌ) ಸೃಷ್ಟಿಯ ಆದಿಯಲ್ಲಿ (ಪ್ರೋಕ್ತವಾನ್) ಸೂರ್ಯನಿಗೆ ಹೇಳಿದವನು (ಇತಿ) ಎಂದು (ಏತತ್) ಇದನ್ನು [ಕಥಂ] ಹೇಗೆ (ವಿಜಾನೀಯಾಂ) ಸಮಂಜಸವೆಂದು ತಿಳಿಯಲಿ?

ಅರ್ಜುನನ ಈ ದೇಹಾತ್ಮಬುದ್ಧಿಯನ್ನು ತೊಲಗಿಸಿ ಅವನಿಗೆ ತನ್ನ ಅಮಾನುಷತ್ವವನ್ನು ಮನಗಾಣಿಸಬೇಕೆಂದು :—

**ಶ್ರೀ ಭಗವಾನುವಾಚ ಶ್ರೀಕೃಷ್ಣನು ಹೇಳಿದ್ದು :—**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ ೫ ॥**

(ಅರ್ಜುನ) ಅರ್ಜುನನೆ, ಕೇಳು. (ಮೇ) ನನಗೂ (ತವ ಚ) ನಿನಗೂ (ಬಹೂನಿ) ಲೆಕ್ಕವಿಲ್ಲದಷ್ಟು (ಜನ್ಮಾನಿ) ಹುಟ್ಟುಗಳು (ವ್ಯತೀತಾನಿ ಕಳೆದುಹೋಗಿವೆ. (ಪರಂತಪ) ಹಗೆಗಳಿಗೆ ಧಗೆಯನ್ನುಂಟುಮಾಡುವಂಥ ಅರ್ಜುನನೆ, ಕೇಳು. [ಅಹಂ] ಯಾವಾಗಲೂ ಶುದ್ಧನಾಗಿ, ಜ್ಞಾನ ಸ್ವರೂಪನಾಗಿ, ಯಾವದೊಂದು ಮುಸುಕಿಗೂ ಒಳಪಡದಿರುವ ನಾನು [ತಾನಿ] ಆ [ಸರ್ವಾಣಿ] ಎಲ್ಲವನ್ನೂ [ವೇದ] ಬಲ್ಲೆನು. [ತ್ವಂ] ಪುಣ್ಯ ಪಾಪಗಳ ಮುಸುಕಿನೊಳಗೆ ಸಿಕ್ಕಿಬಿದ್ದಿರುವ ನೀನು [ನ ವೇತ್ಥ] ತಿಳಿಯೆ.

ಪುಣ್ಯಪಾಪಗಳಿಲ್ಲದ ನನಗೆ ಹುಟ್ಟುವಿಕೆ ಹೇಗೆಂದರೆ :—

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೬ ॥**

ನಾನು [ ಅಜೋಽಪಿ ಸನ್ ] ಹುಟ್ಟುವಿಕೆ ಇಲ್ಲದವನಾದರೂ [ ಅವ್ಯಯಾತ್ಮಾ ] ಅಚ್ಚಳಿಯದಿರುವ ಜ್ಞಾನಶಕ್ತಿಯುಳ್ಳವನಾದರೂ [ಭೂತಾನಾಂ] ಚತುರ್ಮುಖಬ್ರಹ್ಮನನ್ನು ಮೊದಲುಗೊಂಡು ಒಂದು ಮೋಟುಮರದವರೆಗೆ ಇರುವ ಎಲ್ಲ ಪ್ರಾಣಿಗಳಿಗೂ [ ಈಶ್ವರೋಽಪಿಸನ್ ] ಆಳುವವನಾದರೂ, ಯಾವ ಮಾಯೆಗೊಳಗಾಗಿ ಯಾರೂ ನನ್ನನ್ನು ಅರಿಯದಿರುವರೊ ಅಂಥ [ಸ್ವಾಂ] ನನ್ನ [ಪ್ರಕೃತಿಂ] ಸತ್ತ್ವರಜಸ್ತಮೋಗುಣಾತ್ಮಕವಾದ ಮಾಯಾಶಕ್ತಿಯನ್ನು [ಅಧಿಷ್ಠಾಯ] ನನ್ನ ವಶದಲ್ಲಿಟ್ಟುಕೊಂಡು [ಆತ್ಮಮಾಯಯಾ] ಆ ನನ್ನ ಮಾಯೆಯಿಂದ [ಸಂಭವಾಮಿ] ದೇಹದೊಡನೆ ಹುಟ್ಟಿದವನಂತೆ ಕಾಣಿಸಿಕೊಳ್ಳುತ್ತೇನೆ ಹೀಗೆ ನನ್ನ ಹುಟ್ಟು ಮಾಯೆಯಿಂದ ತೋರುವದೇ ಹೊರತು ನಿಜವಾದದ್ದಲ್ಲ

ಆ ಹುಟ್ಟುವಿಕೆಯ ಸಮಯವು ಯಾವದೆಂದರೆ :—

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ ೭ ॥**

[ಭಾರತ] ಅರ್ಜುನನೆ, ಕೇಳು. [ ಧರ್ಮಸ್ಯ ] ಬಯಕೆಯಿಂದ ಮಾಡಿದರೆ ಈ ಲೋಕದ ಸುಖಗಳನ್ನೂ ಸ್ವರ್ಗಲೋಕದ ಸುಖಗಳನ್ನೂ ಕೊಡುತ್ತ ಬಯಕೆಯನ್ನು ಬಿಟ್ಟೊಡನೆ ಚಿತ್ತಶುದ್ಧಿಯನ್ನೂ ಜ್ಞಾನವನ್ನೂ ಮೋಕ್ಷವನ್ನೂ ಗಳಿಸಿಕೊಡುವಂಥ ವರ್ಣಾಶ್ರಮಧರ್ಮಗಳ [ ಗ್ಲಾನಿಃ ] ಇಳುಗಡೆಯೂ [ ಅಧರ್ಮಸ್ಯ ] ಮಾಡಬಾರದೆಂದು ವೇದದಲ್ಲಿ ಹೇಳಿರುವ ಕರ್ಮಗಳ [ಅಭ್ಯುತ್ಥಾನಂ] ಏರಿಕೆಯೂ [ ಯದಾ ಯದಾ ಹಿ ] ಯಾವ ಯಾವ ಸಮಯದಲ್ಲಿ [ಭವತಿ] ಆಗುತ್ತದೊ [ತದಾ] ಆಗ [ಆತ್ಮಾನಂ] ನನ್ನನ್ನು [ಅಹಂ] ನಾನು [ಸೃಜಾಮಿ] ಮಾಯೆಯಿಂದ ಹುಟ್ಟಿಸುತ್ತೇನೆ.

ಆ ಹುಟ್ಟುವಿಕೆಯ ಪ್ರಯೋಜನವೇನೆಂದರೆ :—

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥**

[ಸಾಧೂನಾಂ] ತಮ್ಮ ಉನ್ನತಿಗಾಗಿಯೂ ಇತರರಿಗೆ ಮೇಲು ಪಚಾಕ್ರಿತ್ಯಯಾಗಿಯೂ ಪುಣ್ಯಕರ್ಮಗಳನ್ನು ಮಾಡುವಂಥ ಜನರ [ಪರಿತ್ರಾಣಾಯ] ರಕ್ಷಣೆಗಾಗಿಯೂ [ದುಷ್ಕೃತಾಂ] ತಮ್ಮ ಹಾನಿಯನ್ನೂ ಮಾಡಿಕೊಂಡು ಒಳ್ಳೆಯವರೆನಿಸಿಕೊಂಡಿರುವವರ ಗಂಟಲಿಗೆ ಗಾಣವಾಗಿ ಮಾಡಬಾರದಾವ ಕೆಲಸಗಳನ್ನು ಮಾಡುವವರ [ವಿನಾಶಾಯ ಚ) ನಾಶಕ್ಕಾಗಿಯೂ ಇವೆರಡರ ಮೂಲಕವಾಗಿ [ಧರ್ಮಸಂಸ್ಥಾಪನಾರ್ಥಾಯ] ಜಗತ್ತಿನಲ್ಲಿ ಸತ್ಕರ್ಮಗಳನ್ನು ಚೆನ್ನಾಗಿ ನೆಲೆಗೊಳಿಸುವದಕ್ಕಾಗಿಯೂ [ಯುಗೇ ಯುಗೇ] ಪ್ರತಿಯುಗದಲ್ಲಿಯೂ—ಎಂದರೆ ಇಂಥದೊಂದು ಯುಗವೆಂಬ ನಿಯಮವಿಲ್ಲದೆ ಆಗಾಗ [ಸಂಭವಾಮಿ] ಹುಟ್ಟುತ್ತೇನೆ.

ಹೀಗೆ ತಿಳಿಯುವದು ಕೂಡ ಎಷ್ಟು ಫಲಕಾರಿಯಾಗಿರುವದೆಂದರೆ .—

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥**

[ದಿವ್ಯಂ] ಸತ್ತ್ವರಜಸ್ತಮೋಗುಣಗಳ ಸಂಬಂಧವಿಲ್ಲದೆ ಸ್ವತಂತ್ರವಾಗಿರುವಂಥ [ಮೇ] ನನ್ನ [ಜನ್ಮ] ಹುಟ್ಟನ್ನು [ಕರ್ಮ ಚ] ಕರ್ಮವನ್ನೂ [ಏವಂ] ಹುಟ್ಟು ಮಾಯೆಯಿಂದಾಗರುವದೇ ಹೊರತು ಸಾಮಾನ್ಯರಂತೆ ಸುಖದುಃಖಕ್ಕೆ ಕಟ್ಟುಬಿದ್ದದ್ದಲ್ಲವೆಂದೂ ಕರ್ಮವು ಧರ್ಮದ ಸ್ಥಾಪನೆಗೇ ಹೊರತು ಸ್ವಪ್ರಯೋಜನಕ್ಕಲ್ಲವೆಂದೂ [ಯಃ] ಯಾವನು [ತತ್ತ್ವತಃ] ಇದ್ದದ್ದನ್ನಿದ್ದ ಹಾಗೆ [ವೇತ್ತಿ] ತಿಳಿಯುತ್ತಾನೊ ಅವನು [ದೇಹಂ] ದೇಹವನ್ನು (ತ್ಯಕ್ತ್ವಾ) ಬಿಟ್ಟ ಮೇಲೆ (ಪುನರ್ಜನ್ಮ ಮತ್ತೆ ಹುಟ್ಟುವಿಕೆಯನ್ನು (ನೈತಿ) ಪಡೆಯುವದಿಲ್ಲ. ಮತ್ತೇನೆಂದರೆ (ಅರ್ಜುನ) ಅರ್ಜುನನೆ, ಕೇಳು. (ಸಃ) ಅವನು (ಮಾಂ) ನನ್ನನ್ನು (ಏತಿ) ಪಡೆಯುತ್ತಾನೆ ಎಂದರೆ ಮುಕ್ತನಾಗುತ್ತಾನೆ.

ಈ ಮೋಕ್ಷ ಮಾರ್ಗವು ಇಂದು ನಿನ್ನೆಯದಲ್ಲ:—

**ವೀತರಾಗಭಯಕ್ರೋಧಾಃ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥**

(ವೀತರಾಗಭಯಕ್ರೋಧಾಃ) ಸ್ವರ್ಗ ಮೊದಲಾದವುಗಳನ್ನು ಪಡೆದು ಕೊಳ್ಳಬೇಕೆಂಬ ಪ್ರೀತಿಯನ್ನೂ ಹೆಂಡತಿಮಕ್ಕಳನ್ನೂ ಹಣಕಾಸನ್ನೂ ಉಪೇಕ್ಷಿಸಿ ಜ್ಞಾನಮಾರ್ಗವನ್ನು ಹಿಡಿದ ನನ್ನ ಜೀವನ ಯಾತ್ರೆ ಹೇಗೆ ಸಾಗೀತೆಂಬ ಭಯವನ್ನೂ ವಿಷಯಗಳ ಮೇಲೆ ವೈರಾಗ್ಯವನ್ನು ಹುಟ್ಟಿಸುವ ಜ್ಞಾನ ಮಾರ್ಗವು ನನಗೆ ।ಹೇಗೆ ಹಿತವಾದೀತೆಂಬ ಹಗೆತನದ ಸಿಟ್ಟನ್ನೂ ಕಳೆದು ಕೊಂಡಿರುವವರಾಗಿಯೂ [ಮನ್ಮಯಾಃ] ನನ್ನ ವಿಷಯದಲ್ಲಿಯೇ ಮನಸ್ಸನ್ನು ಹಾಕಿ ನನ್ನನ್ನು ಚೆನ್ನಾಗಿ ತಿಳಿದುಕೊಂಡಿರುವವರಾಗಿಯೂ (ಮಾಮುಪಾಶ್ರಿತಾಃ) ಬರೀ ತಿಳಿದುಕೊಂಡಿರುವದಿಷ್ಟೋ ಅಷ್ಟೇ ಅಲ್ಲದೆ ನನಗೇ ಶರಣು ಬಂದಿರುವವರಾಗಿಯೂ (ಜ್ಞಾನತಪಸಾ) ಉಳಿದ ಯಾವ ತಪಸ್ಸುಗಳ ಗೋಜಿಗೂ ಹೋಗದೆ ಪರಮಾತ್ಮವಿಷಯಕವಾದ ಜ್ಞಾನವನ್ನು ಮೈಗೂಡಿಸಿಕೊಳ್ಳುವದೆಂಬ ತಪಸ್ಸಿನಿಂದ (ಪೂತಾಃ) ಪರಿಶುದ್ಧರಾದವರಾಗಿಯೂ ಇರುವ (ಬಹವಃ) ಅನೇಕರು (ಮದ್ಭಾವಂ) ಪರಮಾತ್ಮಸ್ವರೂಪವನ್ನು ಎಂದರೆ ಮೋಕ್ಷವನ್ನು (ಆಗತಾಃ) ಪಡೆದವರಾಗಿರುತ್ತಾರೆ

ನನಗೆ ಶರಣು ಬಂದವರಿಗೆ ನಾನು ಮೋಕ್ಷವನ್ನು ಕೊಡುತ್ತೇನೆಂಬುದರ ಮೇಲೆ ನನ್ನನ್ನು ಪಕ್ಷಪಾತಿಯನ್ನಾಗಿ ತಿಳಿಯಬೇಡ ಏಕೆಂದರೆ —

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

(ಪಾರ್ಥ) ಅರ್ಜುನನೆ, ಕೇಳು. ನಾನು ಮೋಕ್ಷವನ್ನು ಕೊಡುವ ಸಮರ್ಥನಾದರೂ (ಯೇ) ಯಾರು (ಯಥಾ) ಯಾವ ಪ್ರಯೋಜನಕ್ಕಾಗಿ (ಮಾಂ) ನನ್ನನ್ನು (ಪ್ರಪದ್ಯಂತೇ) ಶರಣೆನ್ನುತ್ತಾರೋ (ತಾನ್) ಅವರನ್ನು (ತಥೈವ) ಹಾಗೆಯೇ ಎಂದರೆ ಅವರು ಕೇಳಿದ ಫಲವನ್ನು ಕೊಡುವುದರ

ಮೂಲಕವಾಗಿಯೇ (ಅಹಂ) ನಾನು (ಭಜಾಮಿ) ಅನುಗ್ರಹಿಸುತ್ತೇನೆ. ಜನರು ತಮ್ಮ ಪೀಡೆಯನ್ನು ಕಳೆದುಕೊಳ್ಳಬೇಕೆಂದೋ ಅಥವಾ ಬೇಕಾದಷ್ಟು ಹಣಕಾಸುಗಳನ್ನು ದೊರಕಿಸಿಕೊಳ್ಳಬೇಕೆಂದೋ ಬೇರೆ ಬೇರೆ ಪ್ರಯೋಜನಗಳನ್ನಪೇಕ್ಷಿಸುವದೇ ಹೆಚ್ಚು. ಆದ್ದರಿಂದ ನಾನು ಅವರಿಗೆ ಅದನ್ನೆ ಕೊಡುತ್ತೇನೆ. ಮೋಕ್ಷವನ್ನು ಬಯಸಿದವರಿಗೆ ಮಾತ್ರ ಮೋಕ್ಷವನ್ನು ಕೊಡುತ್ತೇನೆ. ಇಷ್ಟೇ ಹೊರತು ನಾನಾಗಿ ಒಬ್ಬರ ಕಣ್ಣಿಗೆ ಸುಣ್ಣವನ್ನೂ ಒಬ್ಬರ ಕಣ್ಣಿಗೆ ಬೆಣ್ಣೆಯನ್ನೂ ಹಚ್ಚುವದಿಲ್ಲ. ಇನ್ನು ನಾನು ನನಗೇ ಶರಣೆಂದವರಿಗೆ ಮಾತ್ರ ಫಲವನ್ನು ಕೊಡತಕ್ಕವನೆಂದೂ ತಿಳಿಯಬೇಡ ಜನರು ಇಂದ್ರಾದಿದೇವತೆಗಳಿಗೆ ಶರಣೆಂದರೂ ಆ ಇಂದ್ರಾದಿದೇವತೆಗಳ ಆತ್ಮವು ನಾನೇ ಆದ್ದರಿಂದ ಸುತ್ತಾದ ದಾರಿಯಿಂದ ಅವರು ನನಗೇ ಶರಣೆಂದಂತಾಯಿತು. ಆದ್ದರಿಂದ (ಮನುಷ್ಯಾಃ) ಮನುಷ್ಯರು (ಸರ್ವಶಃ) ಎಲ್ಲ ರೀತಿಯಿಂದಲೂ (ಮಮ) ನನ್ನ ಕಡೆಗೆ ಬರುವ (ವರ್ತ್ಮ) ದಾರಿಯನ್ನು (ಅನುವರ್ತಂತೇ) ಅನುಸರಿಸುತ್ತಾರೆ.

ಇಂದ್ರಾದಿದೇವತೆಗಳ ಮೂಲಕವಾದರೂ ಫಲವನ್ನು ಕೊಡತಕ್ಕವನು ನಾನೇ ಆದರೂ ಜನರು ನನ್ನನ್ನು ಬಿಟ್ಟು ಇಂದ್ರಾದಿದೇವತೆಗಳ ಮೂಲಕವಾದ ಸುತ್ತು ದಾರಿಯನ್ನು ಏಕೆ ಹಿಡಿಯುವರೆಂದರೆ .—

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥**

(ಕರ್ಮಣಾಂ) ತಾವು ಮಾಡುವ ವರ್ಣಾಶ್ರಮಾಚಾರಗಳ (ಸಿದ್ಧಿಂ) ಫಲಪ್ರಾಪ್ತಿಯನ್ನು (ಕಾಂಕ್ಷಂತಃ) ಬಯಸುವವರಾಗಿ (ಇಹ) ಈ ಲೋಕದಲ್ಲಿ ಜನರು (ದೇವತಾಃ) ಇಂದ್ರ, ಅಗ್ನಿ-ಮೊದಲಾದ ದೇವತೆಗಳನ್ನು (ಯಜಂತೇ) ಆರಾಧಿಸುತ್ತಾರೆ. (ಹಿ) ಏಕೆಂದರೆ (ಮಾನುಷೇ) ಮನುಷ್ಯರ (ಲೋಕೇ) ಲೋಕದಲ್ಲಿ (ಕರ್ಮಜಾ) ವರ್ಣಾಶ್ರಮಾಚಾರಗಳಿಂದ ಹುಟ್ಟಿದಂಥ (ಸಿದ್ಧಿಃ) ಫಲಪ್ರಾಪ್ತಿಯು (ಕ್ಷಿಪ್ರಂ) ಬಹು ಬೇಗ (ಭವತಿ) ಆಗುತ್ತದೆ. ಮೋಕ್ಷವು ನಿಷ್ಕಾಮಕರ್ಮವನ್ನು ಮಾಡಿ ಚಿತ್ತ

ಶುದ್ಧಿಯಾವ ವೇಲೆ ಮಾತ್ರ ದೊರೆಯತಕ್ಕದ್ದು. ಅದು ಬಹು ತಡವಾದ್ದ ರಿಂದ ಜನರು ಅಲ್ಲಿಯವರೆಗೆ ನಿರೀಕ್ಷಿಸಲಾರದೆ ಬೇಗ ಫಲವನ್ನು ಕಾಣುವ ಕುತೂಹಲದಿಂದ ದೇವತೆಗಳ ಮುಂದೆ ತಲೆಯನ್ನು ಬಗ್ಗಿಸುತ್ತಾರೆ

ಹೀಗಾದರೂ ಅವರು ವರ್ಣಾಶ್ರಮಾಚಾರಗಳಿಗೆ ಶರಣೆಂದವರಾಗುವ ದರಿಂದ ಅವರು ನನ್ನ ದಾರಿಯನ್ನೇ ಹಿಡಿದಂತಾಗುವರೆಂಬ ಮಾತು ಹೇಗೆ ಒಪ್ಪುವದೆಂದರೆ:—

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ |**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥ ೧೩**

(ಗುಣಕರ್ಮವಿಭಾಗಶಃ) ಗುಣಗಳ ವಿಭಾಗದಿಂದಲೂ ಕರ್ಮಗಳ ವಿಭಾಗದಿಂದಲೂ (ಚಾತುರ್ವರ್ಣ್ಯಂ) ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ-ಎಂಬ ನಾಲ್ಕು ವರ್ಣಗಳು (ಮಯಾ) ನನ್ನಿಂದ (ಸೃಷ್ಟಂ) ಹುಟ್ಟಿಸಲ್ಪಟ್ಟವೆ. ಸತ್ತ್ವ, ರಜ, ತಮ-ಎಂಬ ಮೂರು ಗುಣಗಳಲ್ಲಿ ಸತ್ತ್ವಗುಣವು ಹೆಚ್ಚಾಗಿದ್ದು ಮನೋನಿಗ್ರಹ ಮತ್ತು ಇಂದ್ರಿಯ ನಿಗ್ರಹ-ಮೊದಲಾದ ಕರ್ಮಗಳನ್ನು ಮಾಡುವದು ಬ್ರಾಹ್ಮಣವರ್ಣ. ಸತ್ತ್ವಗುಣವು ಕಡಿಮೆಯಾಗಿಯೂ ರಜೋಗುಣವು ಹೆಚ್ಚಾಗಿಯೂ ಇದ್ದು ಶೌರ್ಯ, ದರ್ಪ-ಮೊದಲಾದ ಕರ್ಮಗಳನ್ನು ಮಾಡುವದು ಕ್ಷತ್ರಿಯವರ್ಣ. ತಮೋಗುಣವು ಕಡಿಮೆಯಾಗಿಯೂ ರಜೋಗುಣವು ಹೆಚ್ಚಾಗಿಯೂ ಇದ್ದು ವ್ಯವಸಾಯ ಮೊದಲಾದ ಕರ್ಮಗಳನ್ನು ಮಾಡುವದು ವೈಶ್ಯವರ್ಣ. ರಜೋಗುಣವು ಕಡಿಮೆಯಾಗಿಯೂ ತಮೋಗುಣವು ಹೆಚ್ಚಾಗಿಯೂ ಇದ್ದು ಸೇವೆ ಮೊದಲಾದ ಕರ್ಮಗಳನ್ನು ಮಾಡುವದು ಶೂದ್ರವರ್ಣ. ಹೀಗೆ ಇದು ನನ್ನ ನಿಯಮವಾದ್ದರಿಂದ ವರ್ಣಾಶ್ರಮಾಚಾರಗಳ ದಾರಿಯನ್ನು ಹಿಡಿಯುವದು ನನ್ನ ದಾರಿಯನ್ನೆ ಹಿಡಿದಂತೆ. ಹೀಗಾಗಿ ನಾನು ವರ್ಣಗಳನ್ನು ಸೃಷ್ಟಿಸಿದ ಕರ್ತನಾಗುವದರಿಂದ ನಾನು ಅದರ ಫಲವನ್ನು ಅನುಭವಿಸಬೇಕಾಗಿ ಬಂದು ನಾನೂ ಎಲ್ಲರಂತೆ ಒಬ್ಬ ನಾಶವಂತ ಜೀವನಾಗುವೆನೆಂದು ತಿಳಿಯ ಬೇಡ.

ನಾನು (ತಸ್ಯ) ಆ ನಾಲ್ಕು ವರ್ಣಗಳ (ಕರ್ತಾರಮಪಿ) ಸೃಷ್ಟಿಯನ್ನು ಮಾಡಿದವನಾದರೂ (ಮಾಂ) ನನ್ನನ್ನು (ಅಕರ್ತಾರಂ) ಮಾಯೆಯಿಂದ ಮಾಡುವವನಾದ್ದರಿಂದ ಮಾಡಿದವನಲ್ಲವೆಂದೂ ಆದ್ದರಿಂದಲೇ (ಅವ್ಯಯಂ) ನಾಶರಹಿತನೆಂದೂ (ವಿದ್ಧಿ) ತಿಳಿ.

ಮಾಡಿದವನನ್ನು ಮಾಡಿದವನಲ್ಲವೆನ್ನುವದು ಹೇಗೆಂದರೆ:—

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬದ್ಧ್ಯತೇ ॥**

ಆತ್ಮನು ಏನನ್ನೂ ಮಾಡುವವನಲ್ಲವೆಂದು ತಿಳಿದಿರುವ (ಮಾಂ) ನನ್ನನ್ನು (ಕರ್ಮಾಣಿ) ವರ್ಣಗಳ ಸೃಷ್ಟಿ ಮೊದಲಾದ ಕರ್ಮಗಳು (ನ ಲಿಂಪಂತಿ) ಮತ್ತೆ ನನಗೆ ಹುಟ್ಟುಸಾವುಗಳನ್ನು ತಂದು ಕೊಡುವದಕ್ಕೆ ಅಂಟಿಕೊಳ್ಳುವದಿಲ್ಲ ನಾನು ಮಾಡುವವನೆಂಬಭಿಮಾನವುಳ್ಳವನು ಆ ಕರ್ಮದ ಫಲವನ್ನು ಬಯಸುವದುಂಟು ನಾನು ಆ ಅಭಿಮಾನವಿಲ್ಲದವನಾದುದರಿಂದ (ಮೇ) ನನಗೆ (ಕರ್ಮಫಲೇ) ವರ್ಣಗಳಸೃಷ್ಟಿ ಮೊದಲಾದ ಕರ್ಮಗಳ ಫಲಗಳಲ್ಲಿ (ನ ಸ್ಪೃಹಾ) ಬಯಕೆ ಇಲ್ಲ ಬಯಕೆಯೂ ಸೋಂಕೂ ಇಲ್ಲದ ಮೇಲೆ ಫಲವು ಬಂದು ನನಗೆ ಅಂಟಿಕೊಳ್ಳುವದೆಂಬುದಂತು ಬಹುದೂರದ ಮಾತು ಹೀಗೆ ಕರ್ಮದ ಕಟ್ಟಿಗೆ ಒಳಗಾಗದಿರುವಿಕೆಯು ನನಗೆ ಮಾತ್ರವೇ ಮೀಸಲಿಲ್ಲ. (ಇತಿ) ಕರ್ಮವನ್ನು ಮಾಡಿದಂತೆ ಕಂಡರೂ ಅದರ ಸೋಂಕೂ ಕರ್ಮಫಲದ ಬಯಕೆಯೂ ಇಲ್ಲದವನೆಂದು (ಮಾಂ) ತನ್ನ ಆತ್ಮನಾದ ನನ್ನನ್ನು (ಯಃ) ಯಾರು (ಅಭಿಜಾನಾತಿ) ತಿಳಿಯುವನೊ (ಸಃ) ಅವನು (ಕರ್ಮಭಿಃ) ಕರ್ಮಗಳಿಂದ (ನ ಬದ್ಧ್ಯತೇ) ಕಟ್ಟುಹಾಕಿಸಿಕೊಳ್ಳುವದಿಲ್ಲ. ಎಂದರೆ ಅವನೂ ಕರ್ಮಗಳನ್ನು ಮಾಡಿದರೂ ಅವನಿಗೆ ಆತ್ಮನು ಮಾಡುವವನೂ ಅದರ ಫಲವನ್ನು ಉಣ್ಣುವವನೂ ಅಲ್ಲವೆಂಬ ತಿಳಿವಳಿಕೆಯು ಇರುವದರಿಂದ ಅವನ ಕರ್ಮಗಳು ಅವನಿಗೆ ಮತ್ತೆ ಹುಟ್ಟುಸಾವುಗಳನ್ನು ತಂದುಕೊಡತಕ್ಕವುಗಳಾಗುವದಿಲ್ಲ.

ನಿನಗೆ ನಾನು ಇಷ್ಟು ಹೇಳುವದೇಕೆಂದರೆ :—

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥**

(ಮುಮುಕ್ಷುಭಿಃ) ಮೋಕ್ಷವಬಯಕೆಯುಳ್ಳಂಥ (ಪೂರ್ವೈರಪಿ) ಯಯಾತಿರಾಜ, ಯದುರಾಜ — ಮೊದಲಾದ ಹಿಂದಿನವರಿಂದ ಕೂಡ (ಏವಂ) ಹೀಗೆ ಆತ್ಮನು ಮಾಡುವವನೂ ಉಣ್ಣುವವನೂ ಅಲ್ಲವೆಂದು (ಜ್ಞಾತ್ವಾ) ತಿಳಿದು (ಕರ್ಮ) ವರ್ಣಾಶ್ರಮಾಚಾರವು (ಕೃತಂ) ನಡೆಸಲ್ಪಟ್ಟಿತು. (ತಸ್ಮಾತ್) ಆದ್ದರಿಂದ, ಯುದ್ಧವನ್ನು ಮಾಡುವದಿಲ್ಲವೆಂದು ಹಠವನ್ನು ಹಿಡಿಯದೆ, (ಪೂರ್ವೈಃ) ಹಿಂದಿನವರಾದ ಜನಕ ಮೊದಲಾದವರಿಂದ (ಪೂರ್ವತರಂ) ಇದಕ್ಕಿಂತ ಪೂರ್ವದಲ್ಲಿಯೇ (ಕೃತಂ) ಮಾಡಲ್ಪಟ್ಟ (ಕರ್ಮೈವ) ಕರ್ಮವನ್ನೆ, (ತ್ವಂ) ನೀನು, ಅಜ್ಞಾನಿಯಾಗಿದ್ದರೆ ಚಿತ್ತಶುದ್ಧಿಗಾಗಿಯೂ ಜ್ಞಾನಿಯಾಗಿದ್ದರೆ ಜನರಿಗೆ ಮೇಲುಪಙ್ಕ್ತಿಯಾಗಿಯೂ (ಕುರು) ಮಾಡು ಇಂದು ನಿನ್ನೆ ಕಂಡುಹಿಡಿದ ಉಪಾಯದ ಮಾತಾದರೆ ಅದರ ಪರಿಣಾಮದ ವಿಷಯದಲ್ಲಿ ಸಂಶಯವುಂಟಾಗಬಹುದು. ಇದು ಬಹು ಹಿಂದಿನಿಂದ ನಡೆದು ಬಂದಿರುವ ಮಾತಾದ್ದರಿಂದ ಇದನ್ನು ನಡೆಸುವದಕ್ಕೆ ಹಿಂದು ಮುಂದು ನೋಡಬೇಕಾದ್ದಿಲ್ಲ.

ನನ್ನ ಮಾತೇ ಸಾಕಾಗಿರುವಾಗ ಹಿಂದಿನವರ ಉದಾಹರಣೆಯನ್ನೇಕೆ ಕೊಡುತ್ತೇನೆಂದರೆ .—

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽ**
**ಶುಭಾತ್ ॥ ೧೬ ॥**

(ಕರ್ಮ) ಕರ್ಮವು (ಕಿಂ) ಯಾವದು ? (ಅಕರ್ಮ) ಅಕರ್ಮವು (ಕಿಂ) ಯಾವದು ? (ಇತಿ) ಎಂದು (ಅತ್ರ) ಈ ವಿಷಯದಲ್ಲಿ (ಕವಯೋಽಪಿ) ದೊಡ್ಡ ದೊಡ್ಡ ಪಂಡಿತರು ಕೂಡ (ಮೋಹಿತಾಃ) ತಪ್ಪು ತಿಳಿದುಕೊಂಡವರಾಗಿರುತ್ತಾರೆ (ತತ್) ಆದ್ದರಿಂದ. (ಯತ್) ಯಾವ ಅರ್ಥವನ್ನು (ಜ್ಞಾತ್ವಾ) ತಿಳಿದು (ಅಶುಭಾತ್) ಅಮಂಗಲವಾದ ಹುಟ್ಟು ಸಾವುಗಳ ದೋಷದಿಂದ (ಮೋಕ್ಷ್ಯಸೇ) ಬಿಡುಗಡೆಯನ್ನು ಹೊಂದು

ತ್ತೀಯೋ (ಕರ್ಮ) ಆ ಕರ್ಮವನ್ನೂ ಅಕರ್ಮವನ್ನೂ (ತೇ) ನಿನಗೆ (ಪ್ರವಕ್ಷ್ಯಾಮಿ) ಹೇಳುತ್ತೇನೆ

ದೇಹ ಮೊದಲಾದವುಗಳು ಕೆಲಸವನ್ನು ಮಾಡುವದೇ ಕರ್ಮವೆಂದೂ ಸುಮ್ಮನಿರುವದೇ ಅಕರ್ಮವೆಂದೂ ಎಲ್ಲರಿಗೂ ತಿಳಿದಿರುವಾಗ ಇವುಗಳ ಅರ್ಥವನ್ನು ಹೇಳುವದಿನ್ನೇನೆಂಧರೆ —

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕಮ ಣಸ್ಯ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**

(ಹಿ) ಏಕೆಂದರೆ (ಕರ್ಮಣೋಽಪಿ) ಮಾಡಬೇಕಾದ್ದೆಂದು ಶಾಸ್ತ್ರದಲ್ಲಿ ಹೇಳಿರುವ ಪುಣ್ಯಕರ್ಮಗಳ ವಿಷಯವೂ (ಬೋದ್ದವ್ಯಂ) ತಿಳಿದುಕೂಳ್ಳಬೇಕಾದ್ದಾಗಿರುವದು (ವಿಕರ್ಮಣಃ ಚ) ಮಾಡಬಾರದೆಂದು ಶಾಸ್ತ್ರದಲ್ಲಿ ಹೇಳಿರುವ ಪಾಪಕರ್ಮಗಳ ವಿಷಯವೂ (ಬೋದ್ಧವ್ಯಂ) ತಿಳಿದುಕೂಳ್ಳಬೇಕಾದ್ದಾಗಿರುವದು. (ಅಕರ್ಮಣಶ್ಚ.) ಸುಮ್ಮನಿರುವದರ ವಿಷಯವೂ (ಬೋದ್ಧವ್ಯಂ) ತಿಳಿದುಕೊಳ್ಳಬೇಕಾದದ್ದಾಗಿರುವದು. ಏಕೆಂದರೆ (ಕರ್ಮಣಃ) ಕರ್ಮ, ವಿಕರ್ಮ, ಅಕರ್ಮ–ಇವುಗಳ (ಗತಿಃ) ನಿಜಸ್ಥಿತಿಯು [ಗಹನಾ] ತಿಳಿಯುವದಕ್ಕೆ ಬಹಳ ಕಷ್ಟವಾಗಿರುವದು

ಆ ತಿಳಿದುಕೊಳ್ಳಬೇಕಾದದ್ದೆನೆಂದರೆ —

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸಯುಕ್ತಃ ಕೃತ್ಸ್ನಕರ್ಮಕೃತ್ ॥**

[ ಯಃ ] ಯಾವನು [ ಕರ್ಮಣಿ ] ದೇಹ ಮೊದಲಾದವುಗಳು ಮಾಡುವ ಪುಣ್ಯಕರ್ಮಗಳಲ್ಲಿ ಅಥವಾ ಪಾಪಕರ್ಮಗಳಲ್ಲಿ [ಅಕರ್ಮ] ಅದು ಕರ್ಮವಲ್ಲವೆಂದೂ ಮತ್ತು [ಯಃ] ಯಾವನು [ಅಕರ್ಮಣಿ] ದೇಹ ಮೊದಲಾದವುಗಳು ಸುಮ್ಮನಿದ್ದಂತೆ ಕಂಡಾಗ [ ಕರ್ಮ ಚ ] ಅದು ಕರ್ಮವೆಂದೂ [ಪಶ್ಯೇತ್] ನೋಡುತ್ತಾನೊ ಅಥವಾ ತಿಳಿಯುತ್ತಾನೊ [ ಸಃ ] ಅವನು [ ಮನುಷ್ಯೇಷು ] ಮನುಷ್ಯರಲ್ಲೆಲ್ಲ [ ಬುದ್ಧಿಮಾನ್ ] ಜಾಣನು. [ಸಃ] ಅವನು [ಯುಕ್ತಃ] ಯೋಗಿಯು ಎಂದರೆ ಯೋಗಸಿದ್ಧನು

ಮತ್ತು [ಕೃತ್ಸ್ನಕರ್ಮಕೃತ್] ಸಮಸ್ತಕರ್ಮಗಳನ್ನೂ ಮಾಡಿದವನಾಗಿರುವನು. ಕರ್ಮಗಳಿಗೆಲ್ಲ ಚಿತ್ತಶುದ್ಧಿಯನ್ನುಂಟುಮಾಡಿ ಕೊನೆಗೆ ಜ್ಞಾನವನ್ನು ತಂದುಕೊಡುವದೇ ಫಲ ಆದ್ದರಿಂದ ಜ್ಞಾನವಾದಮೇಲೆ ಎಲ್ಲ ಕರ್ಮಗಳ ಫಲವೂ ಬಂದಂತಾಯಿತೆಂದು ತಾತ್ಪರ್ಯ ಜಗತ್ತಿನಲ್ಲಿ ಕರ್ಮ, ಅಕರ್ಮ – ಇವುಗಳನ್ನು ದಡ್ಡರು ತಪ್ಪು ತಪ್ಪಾಗಿ ತಿಳಿದುಕೊಳ್ಳುತ್ತಿರುವದುಂಟು ಹೊಗೇಬಂಡಿಯಲ್ಲಿ ಕುಳಿತು ವೇಗವಾಗಿ ಹೋಗುವಾಗ ಹೋಗುವಿಕೆಯೆಂಬ ಕ್ರಿಯೆಯು ಹೊಗೇಬಂಡಿಯಲ್ಲಿರುವವರಲ್ಲಿದ್ದರೂ ಅದರೊಳಗೆ ಕುಳಿತಿರುವವರಲ್ಲಿ ದಡ್ಡರು ಹೊರಗೆ ಮರಗಳು ಓಡುತ್ತಿರುವವೆಂದು ತಿಳಿಯುವರು ದೂರದಲ್ಲಿ ಹೋಗುತ್ತಿರುವ ದಾರಿಹೋಕನ ಮುಂದೆ ಮುಂದೆ ಹೆಜ್ಜೆಯನ್ನು ಹಾಕುತ್ತಲೆ ಇದ್ದರೂ ಅವನು ಒಂದೇ ಕಡೆ ನಿಂತಿರುವನೆಂದು ಮೂಢರು ಭಾವಿಸುವರು ಮರಗಳು ಓಡುವಂತೆ ಕಂಡರೂ ಓಡುವಿಕೆಯು ಮರಗಳಲ್ಲಿಲ್ಲವೆಂದೂ ದೂರದಲ್ಲಿರುವ ದಾರಿಹೋಕನು ನಿಂತಿರುವಂತೆ ಕಂಡರೂ ಮುಂದೆ ಹೆಜ್ಜೆಯನ್ನು ಹಾಕುತ್ತಿರುವನೆಂದೂ ಜಾಣರಿಗೆ ಮಾತ್ರ ಗೊತ್ತು. ಆತ್ಮವಿಚಾರದಲ್ಲಿಯೂ ಇದೇ ಗತಿಯಾಗಿದೆ. ಕರ್ಮವೆಲ್ಲ ದೇಹ ಮೊದಲಾದವುಗಳಿಂದ ನಡೆಯುತ್ತಿರುವದು ಎಲ್ಲರಿಗೂ ಗೊತ್ತಿದ. ಆ ದೇಹ ಮೊದಲಾದವನ್ನೆ ತಮ್ಮ ಆತ್ಮವೆಂದು ತಿಳಿಯುವ ದಡ್ಡರು ದೇಹಾದಿಗಳು ಮಾಡಿದ್ದನ್ನು ತಾವು ಮಾಡಿದೆವೆಂದುಕೊಂಡು ಭ್ರಾಂತಿಯಿಂದ ಆ ದೇಹಾದಿಗಳ ಕರ್ಮವನ್ನು ತಮ್ಮ ಆತ್ಮನ ಮೇಲೆ ಹಾಕಿಕೊಳ್ಳುತ್ತಾರೆ. ನಿಜವಾಗಿ ಅವರ ಆತ್ಮವು ದೇಹಾದಿಗಳೆಲ್ಲಕ್ಕಿಂತ ಒಳಗಿರುವ ಚೈತನ್ಯವೇ ಹೊರತು ದೇಹಾದಿಗಳೇ ಅಲ್ಲ. ದೇಹಾದಿಗಳೆಲ್ಲಕ್ಕಿಂತ ಒಳಗಿರುವ ಆತ್ಮವು ಏನನ್ನೂ ಮಾಡುವದಲ್ಲ. ಆದ್ದರಿಂದ ಪುಣ್ಯಕರ್ಮವಾಗಲಿ ಪಾಪಕರ್ಮವಾಗಲಿ ನಡೆದಾಗ ಅದು ದೇಹಾದಿಗಳಿಗೆ ಸಂಬಂಧಪಟ್ಟದ್ದೆನ್ನಬೇಕೇ ಹೊರತು ಚೈತನ್ಯಸ್ವರೂಪನಾದ ತನಗೆ ಸಂಬಂಧಪಟ್ಟದ್ದಲ್ಲವೆಂದು ತಿಳಿದುಕೊಂಡರೆ ಕರ್ಮವನ್ನು ಅಕರ್ಮವೆಂದು ನೋಡಿದಂತೆ ಅಥವಾ ತಿಳಿದುಕೊಂಡಂತೆ ಆಯಿತು. ಇನ್ನು ದೇಹೇಂದ್ರಿಯಾದಿಗಳೆಲ್ಲ ಬಿಗಿಗೊಂಡು ಸುಮ್ಮನೆ ಕುಳಿತ ಸಮಯದಲ್ಲಿ ದೇಹೇಂದ್ರಿ

ಯಾದಿಗಳು ಯಾವ ಕೆಲಸವನ್ನೂ ಮಾಡುತ್ತಿಲ್ಲವೆಂದು ನೋಡುವದೂ ದಡ್ಡತನ ಚೈತನ್ಯಸ್ವರೂಪವಾದ ಆತ್ಮದ ಹೊರತು ಯಾವದೂ ಯಾವ ಕೆಲಸವನ್ನೂ ಮಾಡದೆ ಇರುವದು ಶಕ್ಯವೇ ಇಲ್ಲ. ದೇಹೇಂದ್ರಿಯಾದಿಗಳು ಸತ್ತ್ವರಜಸ್ತಮೋಗುಣಗಳಿಂದಾಗಿರುವದರಿಂದ ಅವು ತಮ್ಮಲ್ಲಿ ಕರ್ಮವಿಲ್ಲದೆ ಇರಲೇ ಆರವು ಅವು ಬಿಗಿಗೊಂಡಿರುವಾಗ ಆ ಬಿಗಿಗಾಗಿ ಅವುಗಳ ಯತ್ನವಿಶೇಷವು ನಡೆಯುತ್ತಲೇ ಇರುವದು ಆದ್ದರಿಂದ ಅದು ಕರ್ಮ. ಆದರೆ ಅವುಗಳಲ್ಲಿ ಕರ್ಮವಿಲ್ಲವೆಂದು ತಿಳಿಯುವಾಗ ದಡ್ಡರು ಚೈತನ್ಯ ಸ್ವರೂಪವಾದ ತಮ್ಮ ಆತ್ಮವು ನಿಜವಾಗಿ ಯಾವ ಕೆಲಸವನ್ನೂ ಮಾಡದಿರುವ ದನ್ನು ಭ್ರಾಂತಿಯಿಂದ ಆ ದೇಹಾದಿಗಳ ಮೇಲೆ ಹಾಕುತ್ತಾರೆ ಈ ಗುಟ್ಟನ್ನು ತಿಳಿದರೆ ಅಕರ್ಮವನ್ನು ಕರ್ಮವೆಂದು ನೋಡಿದಂತೆ ಅಥವಾ ತಿಳಿದುಕೊಂಡಂತೆ ಆಯಿತು ಆದ್ದರಿಂದ ನೀನು ಯುದ್ಧವನ್ನು ಮಾಡು ಪದಿಲ್ಲವೆನ್ನುತ್ತೀಯಲ್ಲ ! ಆ ಅಕರ್ಮವನ್ನೂ ಒಂದು ಕರ್ಮವೆಂದು ನೋಡಿದರೆ ನೀನು ಜಾಣ

ಹೀಗೆ ಕರ್ಮದಲ್ಲಿ ಅಕರ್ಮವನ್ನು ನೋಡುವದೇ ಮೊದಲಾದುದೇನೂ ಸಾಮಾನ್ಯವಲ್ಲ —

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ||**
**ಜ್ಞಾನಾಗ್ನಿದಗ್ಧಕರ್ಮಾಣಂ * ತಮಾಹುಃ ಪಂಡಿತಂ ಬುಧಾಃ ||**

(ಯಸ್ಯ) ಮೇಲೆ ಹೇಳಿದಂತೆ ವಿವೇಕದಿಂದ ನೋಡುವ ಯಾರಿಗೆ (ಸರ್ವೇ) ಎಲ್ಲ (ಸಮಾರಂಭಾಃ) ಕರ್ಮಗಳೂ (ಕಾಮಸಂಕಲ್ಪವರ್ಜಿತಾಃ) ಫಲಗಳ ಅಪೇಕ್ಷೆಯನ್ನೂ ನಾನು ಕರ್ಮವನ್ನು ಮಾಡುವವನೆಂಬ ಅಭಿಮಾನವನ್ನೂ ತೊರೆದಿರುವವುಗಳಾಗಿ ಜನರಿಗೆ ಮೇಲುಪಙ್ಕ್ತಿಯಾಗಿ ವೆಯೋ ಅಥವಾ ದೇಹಯಾತ್ರೆಗಾಗಿಯೇ ಇರುವವೊ ಅಂಥ (ಜ್ಞಾನಾಗ್ನಿ

* " ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹಾಸ್ಯ ಸರ್ವೇ ಪಾಪ್ಮನಃ ಪ್ರದೂಯಂತೇ " ಅಗ್ನಿಯಲ್ಲಿ ನೊಸೆಹುಲ್ಲಿನ ಕಡ್ಡಿಯು ಹೇಗೆ ಸುಟ್ಟು ಹೋಗುವದೊ ಹಾಗೆ ಜ್ಞಾನಿಯ ಎಲ್ಲ ಪುಣ್ಯ ಪಾಪಗಳೂ ಸುಟ್ಟುಹೋಗುತ್ತವೆ — ಶ್ರು.

ದಗ್ಧಕರ್ಮಾಣಂ) ಕರ್ಮವನ್ನು ಅಕರ್ಮವಾಗಿ ತಿಳಿಯುವದೇ ಮೊದಲಾದ ಜ್ಞಾನವೆಂಬ ಅಗ್ನಿಯಿಂದ ಎಲ್ಲ ಪುಣ್ಯಪಾಪಕರ್ಮಗಳೂ ಸುಟ್ಟುಹೋಗಿರುವ [ತಂ] ಅವನನ್ನು [ಬುಧಾಃ] ಬ್ರಹ್ಮಜ್ಞಾನಿಗಳು ( ಪಂಡಿತಂ ) ನಿಜವಾದ ಆತ್ಮನನ್ನು ತಿಳಿದವನೆಂದು (ಆಹುಃ) ಹೇಳುವರು

ಆ ಜ್ಞಾನದ ಪ್ರಭಾವವೇನೆಂದರೆ —

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦ ॥**

( ಕರ್ಮಫಲಾಸಂಗಂ ) ಕರ್ಮವನ್ನು ನಾನು ಮಾಡುತ್ತೇನೆಂಬ ಮತ್ತು ಕರ್ಮಕ್ಕೆ ತಕ್ಕ ಫಲವು ಬೇಕೆಂಬ ಅಭಿಮಾನವಿಶೇಷವನ್ನು ( ತ್ಯಕ್ತ್ವಾ ) ಬಿಟ್ಟು ( ನಿತ್ಯತೃಪ್ತಃ ) ಯಾವದೊಂದು ವಿಷಯವನ್ನೂ ಬಯಸದೆ ( ನಿರಾಶ್ರಯಃ ) ಸಂನ್ಯಾಸಿಯಂತೆ ಕರ್ಮದ ಸಾಧನಗಳಿಗೆ ಶರಣೆನ್ನದವನಾಗಿ ( ಕರ್ಮಣಿ) ಜನರಿಗೆ ಮೇಲುಪಙ್ಕ್ತಿಯಾಗಿಯೋ ಅಥವಾ ದೇಹಯಾತ್ರೆಗಾಗಿಯೋ ಕರ್ಮಗಳಲ್ಲಿ (ಅಭಿಪ್ರವೃತ್ತೋಽಪಿ) ತೊಡಗಿದರೂ (ಸಃ) ಆತ್ಮನು ಅಕರ್ತನೆಂದು ತಿಳಿದಿರುವ ಅವನು (ಕಿಂಚಿತ್] ಏನನ್ನೂ (ನೈವ ಕರೋತಿ) ಮಾಡುವದೇ ಇಲ್ಲ.

ಆದ್ದರಿಂದಲೆ :—

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥**

( ನಿರಾಶೀಃ ) ಸ್ವರ್ಗ ಮೊದಲಾದ ಯಾವ ಬಯಕೆಯೂ ಇಲ್ಲದಂಥ (ಯತಚಿತ್ತಾತ್ಮಾ) ಮನಸ್ಸನ್ನೂ ದೇಹವನ್ನೂ ಹಿಡಿತದಲ್ಲಿಟ್ಟುಕೊಂಡಿರುವಂಥ ಮತ್ತು (ತ್ಯಕ್ತಸರ್ವಪರಿಗ್ರಹಃ) ಸಂನ್ಯಾಸಿಯಂತೆ ಕರ್ಮದ ಉಪಕರಣಗಳಾದ ಹೆಂಡತಿ, ಮಕ್ಕಳು, ಧನ, ಮನೆ – ಮೊದಲಾದವುಗಳನು ಬಿಟ್ಟು (ಕೇವಲಂ) ಬರೀ (ಶಾರೀರಂ) ಶರೀರಯಾತ್ರೆ ನಡೆಯುವವಕ್ಕೆಷ್ಟು ಬೇಕೋ ಅಷ್ಟರ ( ಕರ್ಮ ) ಕರ್ಮವನ್ನು ( ಕುರ್ವನ್ ) ತಾನು ಮಾಡುವವನೆಂದು ತಿಳಿಯದೆ ಇತರರ ದೃಷ್ಟಿಯಿಂದ ಮಾಡುವವನಾದರೂ

(ಕಿಲ್ಬಿಷಂ) ಪಾಪರೂಪವಾದ ಅಥವಾ ಪುಣ್ಯರೂಪವಾದ ದೋಷವನ್ನು (ನ ಆಪ್ನೋತಿ) ಪಡೆಯುವದಿಲ್ಲ ಪಾಪವು ದುಃಖವನ್ನ ಅನುಭವಿಸುವದಕ್ಕೆ ಜನ್ಮವನ್ನು ಕೊಟ್ಟರೆ ಪುಣ್ಯವು ಸುಖವನ್ನು ಅನುಭವಿಸುವದಕ್ಕೆ ಜನ್ಮವನ್ನು ಕೊಡುವದು. ಜನ್ಮವನ್ನು ಕೊಡುವದರಲ್ಲಿ ಎರಡೂ ಸಮ ಸ್ವಭಾವವಾಗಿ ಜನ್ಮವೇ ದುಃಖಕರ. ಆದ್ದರಿಂದ ಪಾಪವೂ ಪಾಪವೆ. ಪುಣ್ಯವೂ ಪಾಪವೆ.

ಮತ್ತು .—

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥ ೨೨ ॥**

( ಯದೃಚ್ಛಾಲಾಭಸಂತುಷ್ಟಃ ) ದೇಹೇಂದ್ರಿಯಾದಿಗಳನ್ನು ಹೆಚ್ಚು ಸುಖಗೊಳಿಸುವದಕ್ಕಾಗಿ ವ್ಯವಸಾಯ, ವ್ಯಾಪಾರ, ಸೇವೆ, ಯಾಚನೆ — ಮೊದಲಾದವುಗಳ ಗೊಡವೆಗೆ ಹೋಗದೆ ಸಂನ್ಯಾಸಿಯಂತೆ ತಾನಾಗಿ ದೊರೆತದ್ದು ಸಾಕೆಂದು (ದ್ವಂದ್ವಾತೀತಃ) ಹಸಿವು, ಬಾಯಾರಿಕೆ, ಶೀತೋಷ್ಣ, ಮಳೆಗಾಳಿಗಳು – ಮೊದಲಾದ ಜೋಡಿಗಳಿಗೆ ಉಪ್ಪುಹಾಕದೆ (ವಿಮತ್ಸರಃ) ಮತ್ತೊಬ್ಬರ ಏಳಿಗೆಯನ್ನು ನೋಡಿ ತಳಮಳಗೊಳ್ಳದವನಾಗಿ (ಸಿದ್ಧಾವಸಿದ್ಧೌ ಚ) ದೇಹಯಾತ್ರೆಗೆ ತಕ್ಕಷ್ಟಾದರೂ ದೊರಕಿದರೂ ದೊರಕದಿದ್ದರೂ ಕೂಡ (ಸಮಃ) ಒಂದೇ ರೀತಿಯಲ್ಲಿರುವವನಾಗಿ ಇರುವವನು (ಕೃತ್ವಾಪಿ) ಆತ್ಮನು ಏನನ್ನೂ ಮಾಡುವವನಲ್ಲವೆಂದು ನೋಡುತ್ತ ಮತ್ತೊಬ್ಬರ ದೃಷ್ಟಿಯಿಂದ ದೇಹಯಾತ್ರೆಗಾಗಿ ಮಾಡುವವನಾಗಿ ಕಂಡರೂ (ನ ನಿಬಧ್ಯತೇ) ಅವನ ಕರ್ಮವೆಲ್ಲ ಕರ್ಮವನ್ನು ಅಕರ್ಮವೆಂದು ಮುಂತಾಗಿ ನೋಡುವ ಜ್ಞಾನದಿಂದ ಸುಟ್ಟುಹೋಗಿರುವ ಕಾರಣ ಅವನನ್ನೆಷ್ಟು ಮಾತ್ರವೂ ಕಟ್ಟಿಗೊಳಪಡಿಸುವದಿಲ್ಲ.

ಮತ್ತು .—

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩ ॥**

[ಗತಸಂಗಸ್ಯ] ನಾನು ಮಾಡುವವನೆಂಬ ಮತ್ತು ಫಲವನ್ನು ಅನುಭವಿಸುವವನೆಂಬ ಅಭಿಮಾನವನ್ನು ತೊರೆದಿರುವಂಥ ಮತ್ತು [ಮುಕ್ತಸ್ಯ] ಆತ್ಮನು ಅಕರ್ತನೆಂಬ ಬುದ್ಧಿಯಿಂದ ಪುಣ್ಯಪಾಪಗಳ ಕಟ್ಟನ್ನೆಲ್ಲ ಕಳಚಿಕೊಂಡಿರುವಂಥ ಮತ್ತು [ಜ್ಞಾನಾವಸ್ಥಿತಚೇತಸಃ] ಕರ್ಮವನ್ನು ಅಕರ್ಮವಾಗಿ ನೋಡುವದೇ ಮೊದಲಾದ ಜ್ಞಾನದಲ್ಲಿ ನಲೆಗೊಂಡಿರುವ ಮನಸುಳ್ಳ ಮತ್ತು [ಯಜ್ಞಾಯ] ಈಶ್ವರಪ್ರೀತ್ಯರ್ಥವಾಗಿ [ಆಚರತಃ] ಮಾಡುತ್ತಿರುವವನ [ಕರ್ಮ] ಕರ್ಮವು [ಸಮಗ್ರಂ] ಫಲಸಹಿತವಾಗಿ [ಪ್ರವಿಲೀಯತೇ] ನಾಶವಾಗುತ್ತದೆ.

ಫಲವನ್ನು ಕೂಡ ಕೊಡದೆ ಕರ್ಮವು ಹೇಗೆ ನಾಶವಾಗುವದೆಂದರೆ .—

**ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥**

ಕರ್ಮವನ್ನು ಅಕರ್ಮವೆಂದು ಮುಂತಾಗಿ ನೋಡುವಂಥ ಜ್ಞಾನಿಗೆ ಕನಸಿನ ಜಗತ್ತಿನಂತೆ ಎಚ್ಚರದ ಜಗತ್ತು ಕೂಡ ಬರೀ ತೋರಿಕೆಯದೆಂದೂ ಈ ತೋರಿಕೆಗಳಿಗೆಲ್ಲ ಆಧಾರವಾಗಿರುವ ಆತ್ಮತತ್ತ್ವ ಒಂದೇ ನಿಜವಾದುದೆಂದೂ ದೃಢವಾದ ತಿಳುವಳಿಕೆ ಇರುವದು. ಆದ್ದರಿಂದ ಅವನು ಯಾವ ಪದಾರ್ಥವನ್ನು ನೋಡಿದರೂ ಆ ವಸ್ತುವಿನ ತೋರಿಕೆಗೆ ಆಧಾರವಾಗಿರುವ ಆತ್ಮದ ಕಡೆಗೆ ಲಕ್ಷ್ಯವನ್ನಿಡುವನು ಆ ಜ್ಞಾನಿಯು ಯಜ್ಞದಂಥ ದೊಡ್ಡ ಕರ್ಮವನ್ನು ಮಾಡಿದರೂ ಕೂಡ ಅವನ ಭಾಗಕ್ಕೆ (ಅರ್ಪಣಂ) ದೇವತೆಗಳಿಗಾಗಿ ಹೋಮಮಾಡಬೇಕೆಂದು ಯಾವ ಪದಾರ್ಥವನ್ನು ಹಿಡಿದುಕೊಳ್ಳುತ್ತಾನೊ ಆ ಪಾತ್ರೆಯೂ ಅದನ್ನು ಅರ್ಪಿಸುವದೆಂಬುದೂ (ಬ್ರಹ್ಮ) ಬ್ರಹ್ಮವೆ ( ಹವಿಃ ) ಹೋಮಮಾಡುವದಕ್ಕೆಂದು ತೆಗೆದುಕೊಂಡಿರುವ ವಸ್ತುವೂ (ಬ್ರಹ್ಮ) ಬ್ರಹ್ಮವೆ (ಬ್ರಹ್ಮಾಗ್ನೌ) ಬ್ರಹ್ಮವೆಂಬ ಅಗ್ನಿಯಲ್ಲಿ (ಹುತಂ) ಹೋಮಮಾಡಲ್ಪಟ್ಟದ್ದು [ಬ್ರಹ್ಮಣಾ] ಯಜಮಾನ ರೂಪನಾದ ಬ್ರಹ್ಮನಿಂದಲೆ. [ಬ್ರಹ್ಮಕರ್ಮಸಮಾಧಿನಾ] ಹೀಗೆ ಬ್ರಹ್ಮವೆ ಕರ್ಮವೆಂಬ ಮನಸ್ಸುಳ್ಳ [ತೇನ] ಆ ಯಜಮಾನನಿಂದ [ಗಂತವ್ಯಂ] ಪಡೆಯಲ್ಪಡುವಂಥ

ಸ್ವರ್ಗಾದಿಗಳು ಕೂಡ [ಬ್ರಹ್ಮೈವ] ಬ್ರಹ್ಮವೆ

ಜ್ಞಾನವನ್ನು ಒಂದು ಯಜ್ಞದ ರೂಪವಾಗಿ ತೋರಿಸಿದ್ದಾಯಿತಷ್ಟೆ

ಯಜ್ಞದಲ್ಲಿ ಬೇರೆ ಎರಡು ದೊಡ್ಡ ಬಗೆಗಳಿವೆ.—

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫ ॥**

[ಅಪರೇ] ಕೆಲವರು [ಯೋಗಿನಃ] ಕರ್ಮಯೋಗಿಗಳು [ದೈವಮೇವ] ಇಂದ್ರ, ಅಗ್ನಿ — ಮೊದಲಾದ ದೇವತೆಗಳನ್ನು ಉದ್ದೇಶಮಾಡಿಯೇ ಅವರ ಪ್ರೀತಿಯನ್ನು ಪಡೆಯಬೇಕೆಂದೇ ಅವರ ಸಂಬಂಧವಾದ [ಯಜ್ಞಂ] ಯಜ್ಞ ಕರ್ಮವನ್ನು [ಪರ್ಯುಪಾಸತೇ] ಚೆನ್ನಾಗಿ ಎಡೆಬಿಡದೆ ಆಚರಿಸುತ್ತಾರೆ. ಇದು ಗೌಣಯಜ್ಞ. ಮುಖ್ಯಯಜ್ಞವು ಯಾವದೆಂದರೆ [ಅಪರೇ] ಇನ್ನು ಕೆಲವರು ಜ್ಞಾನಿಗಳು [ಬ್ರಹ್ಮಾಗ್ನೌ] ಬ್ರಹ್ಮವೆಂಬ ಅಗ್ನಿಯಲ್ಲಿ [ಯಜ್ಞಂ] ನಿಜವಾಗಿ ಬ್ರಹ್ಮವೇ ಆಗಿದ್ದು ದೇಹೇಂದ್ರಿಯಗಳೊಳಗೆ ಕಟ್ಟು ಬಿದ್ದು ಜೀವನೆನಿಸಿ ಕೊಂಡಿರುವ ಆತ್ಮವನ್ನು [ಯಜ್ಞೇನೈವ] ಯಜ್ಞದಲ್ಲಿ ಹೋಮವನ್ನು ಮಾಡುವ ರೀತಿಯಿಂದಲೆ [ಉಪಜುಹ್ವತಿ] ಹೋಮಮಾಡುತ್ತಾರೆ ಎಂದರೆ ದೇಹೇಂದ್ರಿಯಾದಿಗಳೆಂಬ ಉಪಾಧಿಗಳೆಲ್ಲ ಬರೀ ತೋರಿಕೆಯವು ಗಳೆಂದು ಕಂಡು ಯಾವ ಉಪಾಧಿಯ ತೊಡಕೂ ಇಲ್ಲದ ಪರಬ್ರಹ್ಮಸ್ವರೂಪವೇ ತಾವೆಂದು ತಿಳಿಯುತ್ತಾರೆ.

ಇಷ್ಟೇ ಅಲ್ಲ, ಪರಮಾತ್ಮಜ್ಞಾನಕ್ಕೆ ಸಾಧನಗಳೆಂದೇನೇನಿವೆಯೋ ಅವೆಲ್ಲ ಯಜ್ಞಗಳೆನಿಸುವವು. ಅದು ಹೇಗೆಂದರೆ :—

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ॥ ೨೬ ॥**

[ಅನ್ಯೇ] ಇನ್ನುಕೆಲವರು ಸಾಧಕರು [ಸಂಯಮಾಗ್ನಿಷು] ಮನಸ್ಸನ್ನು ದೇಹದ ಒಂದು ಸ್ಥಾನದಲ್ಲಿ ನಿಲ್ಲಿಸಿಕೊಂಡು ಅಲ್ಲಿ ಪರಮಾತ್ಮ

ಸ್ವರೂಪವನ್ನೇ ಚಿಂತಿಸುತ್ತ ಎರಡನೆಯ ಯಾವ ವಿಷಯವನ್ನೂ ಒಳಕ್ಕೆ ಬಿಟ್ಟುಕೊಳ್ಳದೆ ತನ್ಮಯವಾಗುತ್ತ ಬೇರೆ ಬೇರೆ ಇಂದ್ರಿಯಗಳನ್ನು ಬಿಗಿಹಿಡಿ ಯುವದೆಂಬ ಅಗ್ನಿಗಳಲ್ಲಿ (ಶ್ರೋತ್ರಾದೀನಿ) ಕಿವಿ-ಮೊದಲಾದ (ಇಂದ್ರಿ ಯಾಣಿ) ಇಂದ್ರಿಯಗಳನ್ನು (ಜುಹ್ವತಿ) ಹೋಮಮಾಡುತ್ತಾರೆ. (ಅನ್ಯೇ) ಮತ್ತೆ ಕೆಲವರು ಸಾಧಕರು (ಇಂದ್ರಿಯಾಗ್ನಿಷು) ಬೇರೆ ಬೇರೆ ಇಂದ್ರಿಯಗ ಳೆಂಬ ಅಗ್ನಿಗಳಲ್ಲಿ (ಶಬ್ದಾದೀನ್) ಶಬ್ದವೇ ಮೊದಲಾದ (ವಿಷಯಾನ್) ವಿಷಯಗಳನ್ನು (ಜುಹ್ವತಿ) ಹೋಮಮಾಡುತ್ತಾರೆ. ಎಂದರೆ ಇಂದ್ರಿಯ ಗಳಿಗೆ ಶಾಸ್ತ್ರವಿರುದ್ಧವಲ್ಲದ ವಿಷಯಗಳನ್ನು ಕೊಟ್ಟರೆ ಅದೊಂದು ಬಗೆಯ ಹೋಮವಾಯಿತೆಂದು ಭಾವಿಸುತ್ತಾರೆ

ಮತ್ತೊಂದೇನೆಂದರೆ :—

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ |**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥**

(ಅಪರೇ) ಇನ್ನು ಕೆಲವರು ಸಾಧಕರು (ಸರ್ವಾಣಿ) ಎಲ್ಲ (ಇಂದ್ರಿಯ ಕರ್ಮಾಣಿ) ಇಂದ್ರಿಯಗಳ ನೋಡುವದು, ಕೇಳುವದು–ಮೊದಲಾದ ಕೆಲಸಗ ಳನ್ನೂ (ಪ್ರಾಣಕರ್ಮಾಣಿ ಚ) ಪ್ರಾಣ, ಅಪಾನ–ಮೊದಲಾದ ವಾಯುಗಳ ನೀಡುವದು, ಮುದುರುವದು–ಮೊದಲಾದ ಕರ್ಮಗಳನ್ನೂ (ಜ್ಞಾನದೀಪಿತೇ) ಎಣ್ಣೆಯಿಂದ ಹೇಗೋ ಹಾಗೆ ಆತ್ಮಾನಾತ್ಮವಿವೇಕದ ತಿಳಿವಳಿಕೆಯಿಂದ ಹುರು ಪುಗೊಂಡದ್ದಾಗಿ [ಆತ್ಮಸಂಯಮಯೋಗಾಗ್ನೌ] ಆತ್ಮಸ್ವರೂಪದಲ್ಲಿಯೇ ಮನ ಸ್ಸನ್ನಿಟ್ಟು ಅದನ್ನೇ ಹಂಬಲಿಸುತ್ತ ಅದೇ ಆಗಿರುವಿಕೆಯೆಂಬ ಏಕಾಗ್ರತೆಯ ರೂಪವಾಗಿರುವ ಅಗ್ನಿಯಲ್ಲಿ [ಜುಹ್ವತಿ] ಹೋಮಮಾಡುತ್ತಾರೆ. ಎಂದರೆ ಮನಸ್ಸನ್ನು ಇಂದ್ರಿಯಗಳು ಮಾಡುವ ಕೆಲಸಗಳು ಮಾಡುವ ಕಡೆಗೂ ಪ್ರಾಣ ಗಳ ಕೆಲಸಗಳ ಕಡೆಗೂ ಬಿಡದೆ ತಡೆದುಕೊಂಡು ಅವೆಲ್ಲ ಬರೀ ತೋರಿಕೆಯ ವೆಂದು ತಿಳಿದು ಆತ್ಮ ರೂಪವನ್ನೇ ಎಡೆಬಿಡದೆ ಚಿಂತಿಸುತ್ತಾರೆ.

ಇದನ್ನು ಮಾಡುವದಕ್ಕೆ ಸಮರ್ಥರಾದ ಸಾಧಕರ ಬೇರೆ ಬೇರೆ ಬಗೆಗ ಳೇನೆಂದರೆ :—

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮ ॥**

[ಸಂಶಿತವ್ರತಾಃ]* ಹಿಡಿದ ನಿಯಮವನ್ನು ಬಹು ಕಡಿದಾದ ರೀತಿಯಿಂದ ನಡೆಸುವಂಥ [ಯತಯಃ] ಯತ್ನಶೀಲರಾದ ಸಾಧಕರು [ದ್ರವ್ಯಯಜ್ಞಾಃ] ಈಶ್ವರಪ್ರೀತಿಗಾಗಿ ತಮ್ಮ ಹಣವನ್ನು ತೀರ್ಥಕ್ಷೇತ್ರಗಳಲ್ಲಿ ದಾನ ಮಾಡುವದು, ದೇವಾಲಯಗಳನ್ನು ಕಟ್ಟಿಸುವದು, ಧರ್ಮಶಾಲೆಗಳನ್ನು ಮಾಡಿಸುವದು-ಮೊದಲಾದವುಗಳಿಗ ವಿನಿಯೋಗಿಸುವವರು [ತಪೋಯಜ್ಞಾಃ] ಈಶ್ವರಪ್ರೀತಿಗಾಗಿ ಉಪವಾಸ ಮೊದಲಾದ್ದನ್ನು ಮಾಡುವವರು[ತಥಾ] ಅದೇ ರೀತಿಯಲ್ಲಿ [ಅಪರೇ] ಇನ್ನು ಕೆಲವರು [ಯೋಗಯಜ್ಞಾಃ] ಈಶ್ವರ ಪ್ರಾಪ್ತಿಗಾಗಿ ಮನಸ್ಸನ್ನು ಬಿಗಿಹಿಡಿಯುವವರು [ಸ್ವಾಧ್ಯಾಯಜ್ಞಾನಯಜ್ಞಾಶ್ಚ] ಸಂಪ್ರದಾಯದಂತೆ ವೇದಾಭ್ಯಾಸರೂಪವಾದ ಯಜ್ಞವನ್ನು ಮಾಡುವವರು ಮತ್ತು ಶಾಸ್ತ್ರಾರ್ಥಗಳನ್ನೆಲ್ಲ ತಿಳಿದುಕೊಳ್ಳುವದನ್ನೇ ಯಜ್ಞವೆಂದು ತಿಳಿದುಮಾಡುವವರು-ಹೀಗೆ ಬಗೆಬಗೆಯಾಗಿರುವರು.

ಮತ್ತೇನೆಂದರೆ :—

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥**

[ಅಪಾನೇ] ನಾವು ಹೊರಕ್ಕೆ ಬಿಡುವ ಅಪಾನವಾಯುವಿನಲ್ಲಿ [ಪ್ರಾಣಂ] ನಾವು ಒಳಕ್ಕೆ ತೆಗೆದುಕೊಳ್ಳುವ ಪ್ರಾಣವಾಯುವನ್ನು [ಜುಹ್ವತಿ] ಹೋಮ ಮಾಡುತ್ತಾರೆ, ಎಂದರೆ ಹೊರಗಣ ವಾಯುವನ್ನು ಒಳಕ್ಕೆ ತುಂಬಿಕೊಂಡು ಅದನ್ನು ಅಲ್ಲಿಯೇ ತಡೆದಿಟ್ಟುಕೊಳ್ಳುತ್ತಾರೆ ಇದಕ್ಕೆ ಪೂರಕಪ್ರಾಣಾಯಾಮವೆಂದು ಹೆಸರು. ಪೂರಕಪ್ರಾಣಾಯಾಮವೆಂದರೆ ಒಳಕ್ಕೆ ತುಂಬಿಕೊಂಡ

---

* ದ್ರವ್ಯಯಜ್ಞವನ್ನು ಮಾಡುವವರು ಮೊದಲಾದವರಂತೆ ಒಂದೊಂದು ವ್ರತವನ್ನು ಹಿಡಿದು ಅದನ್ನು ಕಡಿದಾದ ರೀತಿಯಿಂದ ನಡೆಸುವ ಒಂದು ಗುಂಪಿನವರೆಂದೂ ಈ ಶಬ್ದಕ್ಕೆ ಕೆಲವರು ಅರ್ಥವನ್ನು ಮಾಡಿರುವರು.

ವಾಯುವನ್ನು ಒಳಗೇ ತಡೆದಿಟ್ಟುಕೊಳ್ಳುವದು. [ಅಪರೇ] ಇನ್ನು ಕೆಲವರು [ಪ್ರಾಣೇ] ನಾವು ಒಳಕ್ಕೆ ತೆಗೆದುಕೊಳ್ಳುವ ಪ್ರಾಣವಾಯುವಿನಲ್ಲಿ [ಅಪಾನಂ] ನಾವು ಹೊರಕ್ಕೆ ಬಿಡುವ ಅಪಾನವಾಯುವನ್ನು [ತಥಾ] ಹಾಗೆಯೇ ಹೋಮ ಮಾಡುತ್ತಾರೆ; ಎಂದರೆ ಒಳಗಿದ್ದ ವಾಯುವನ್ನು ಹೊರಕ್ಕೆ ಬಿಟ್ಟು ಅದನ್ನು ಅಲ್ಲಿಯೇ ತಡೆಯುತ್ತಾರೆ ಇದಕ್ಕೆ ರೇಚಕಪ್ರಾಣಾಯಾಮವೆಂದು ಹೆಸರು. ರೇಚಕಪ್ರಾಣಾಯಾಮವೆಂದರೆ ಹೊರಕ್ಕೆ ಬಿಟ್ಟ ವಾಯುವನ್ನು ಹೊರಗೇ ತಡೆಯುವದು. ಮತ್ತೆ ಕೆಲವರು (ಪ್ರಾಣಾಪಾನಗತೀ) ಪ್ರಾಣವಾಯುವಿನ ಬರುವಿಕೆಯನ್ನೂ ಅಪಾನವಾಯುವಿನ ಹೋಗುವಿಕೆಯನ್ನೂ (ರುದ್ಧ್ವಾ) ತಡೆದು [ಪ್ರಾಣಾಯಮಪರಾಯಣಾಃ] ಕುಂಭಕವೆಂಬ ಪ್ರಾಣಾಯಾಮದಲ್ಲಿ ನಿರತರಾಗುತ್ತಾರೆ.

ಮತ್ತೇನೆಂದರೆ :—

**ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥ ೩೦ ॥**

[ಅಪರೇ] ಬೇರೆ ಕೆಲವರು [ನಿಯತಾಹಾರಾಃ] ಆಹಾರದಲ್ಲೊಂದು ಮಿತಿಯನ್ನು ಮಾಡಿಕೊಂಡು [ಪ್ರಾಣಾನ್] ಕೆಲವು ವಾಯುಗಳನ್ನು [ಪ್ರಾಣೇಷು] ಕೆಲವು ವಾಯುಭೇದಗಳಲ್ಲಿ [ಜುಹ್ವತಿ] ಹೋಮ ಮಾಡುತ್ತಾರೆ. ಎಂದರೆ ಶರೀರದಲ್ಲಿ ಐದು ಬಗೆಯ ಮುಖ್ಯವಾಯುಗಳೂ ಐದು ಬಗೆಯ ಉಪವಾಯುಗಳೂ ಇರುವವು. ಇವುಗಳ ಕೆಲಕೆಲವು ವಾಯುಗಳನ್ನು ತಮ್ಮ ಹಿಡಿತಕ್ಕೆ ತಂದುಕೊಂಡವರು ಆ ವಾಯುಗಳನ್ನು ಉಳಿದ ವಾಯುಗಳಲ್ಲಿ ಹೋಮ ಮಾಡಿದಂತೆ ಭಾವಿಸುವರು. [ಏತೇ] ಈ [ಸರ್ವೇಽಪಿ] ಎಲ್ಲರೂ [ಯಜ್ಞವಿದಃ] ಯಜ್ಞವನ್ನು ತಿಳಿದವರು ಅಥವಾ ಯಜ್ಞವನ್ನು ಮಾಡಿದವರು. ಬರೀ ಮಾಡಿದವರೆಂಬುದಿಷ್ಟೇ ಏಕೆ? [ಯಜ್ಞಕ್ಷಪಿತಕಲ್ಮಷಾಃ] ಯಜ್ಞದಿಂದ ತಮ್ಮ ಪಾಪವನ್ನು ಕಳೆದುಕೊಂಡಂಥವರೂ ಆಗಿರುವರು.

ಈ ಯಜ್ಞಗಳ ಫಲವೇನೆಂದರೆ.—

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥**

[ಕುರುಸತ್ತಮ] ಅರ್ಜುನನೆ, ಕೇಳು [ಯಜ್ಞಶಿಷ್ಟಾಮೃತಭುಜಃ] ಮೇಲೆ ಹೇಳಿದ ಯಜ್ಞಗಳನ್ನು ಮಾಡಿ ಉಳಿದ ಕಾಲದಲ್ಲಿ ವಿಹಿತವಾದ ಆಹಾರವೆಂಬ ಅಮೃತವನ್ನು ಉಣ್ಣುವವರು, ಕಾಲಕ್ರಮದಿಂದ ಚಿತ್ತಶುದ್ಧಿಯನ್ನೂ ಜ್ಞಾನವನ್ನೂ ಪಡೆದು [ಸನಾತನಂ] ಅನಾದಿಯಾಗಿರುವಂಥ [ಬ್ರಹ್ಮ] ಪರಬ್ರಹ್ಮಸ್ವರೂಪವನ್ನು [ಯಾಂತಿ] ಪಡೆಯುತ್ತಾರೆ. ಶಾಸ್ತ್ರದಲ್ಲಿ ವಿಹಿತವಾದ ಆಹಾರವು ಸಾಮಾನ್ಯವಾಗಿ ಆಹಾರವಾದರೂ ಯಜ್ಞಗಳನ್ನು ಮಾಡಿದರಿಂದಾದ ಹಸಿವೆಗೆ ಹಾಕಿದಾಗ ಅದು ಅಮೃತಪ್ರಾಯವಾಗುತ್ತದೆ [ಅಯಜ್ಞಸ್ಯ] ಯಾವ ಯಜ್ಞವನ್ನೂ ಮಾಡದಿದ್ದರೆ, ಮಳೆಬೆಳೆಗಳು ಕೂಡ ನಿಂತು ಹೋಗುವದರಿಂದ (ಅಯಂ ಲೋಕಃ) ಸಾಮಾನ್ಯಸುಖವುಳ್ಳ ಈ ಲೋಕವೇ (ನ ಅಸ್ತಿ) ಇಲ್ಲ. (ಅನ್ಯಃ) ಇನ್ನು ಹೆಚ್ಚಿನ ಸುಖವಿರುವ ಸ್ವರ್ಗ ವೊದಲಾದ ಲೋಕಗಳು (ಕುತಃ) ಹೇಗೆ ದೊರೆತಾವು ?

ಮುಖ್ಯ ತಾತ್ಪರ್ಯವೇನೆಂದರೆ —

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥**

(ಏವಂ) ಈ ರೀತಿಯಲ್ಲಿ (ಬಹುವಿಧಾಃ) ಅನೇಕ ಬಗೆಯಾದ (ಯಜ್ಞಾಃ) ಯಜ್ಞಗಳು (ಬ್ರಹ್ಮಣಃ) ವೇದದ (ಮುಖೇ) ಮೊದಲನೆಯ ಭಾಗವಾದ ಕರ್ಮಕಾಂಡದಲ್ಲಿ (ವಿತತಾಃ) ವಿವರವಾಗಿವೆ (ತಾನ್) ಆ (ಸರ್ವಾನ್) ಎಲ್ಲವನ್ನೂ (ಕರ್ಮಜಾನ್) ದೇಹೇಂದ್ರಿಯಗಳ ಕರ್ಮಗಳಿಂದಾದವುಗಳೆಂದು (ವಿದ್ಧಿ) ತಿಳಿ. (ಏವಂ) ಹೀಗೆ ಆತ್ಮನಿಗೂ ಕರ್ಮಗಳಿಗೂ ಸಂಬಂಧವಿಲ್ಲವೆಂದು (ಜ್ಞಾತ್ವಾ) ತಿಳಿದೆಯಾದರೆ (ವಿಮೋಕ್ಷ್ಯಸೇ) ಕರ್ಮದ ಕಟ್ಟುಗಳಿಂದ ಬಿಡಿಸಿಕೊಂಡವನಾಗುತ್ತಿ.

ಕರ್ಮಗಳಿಂದಾಗುವ ಈ ಯಜ್ಞಗಳಿಗಿಂತ ಜ್ಞಾನಯಜ್ಞವು ಬಹಳ ಮೇಲು. ಏಕೆಂದರೆ :—

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥**

(ಪರಂತಪ) ಅರ್ಜುನನೆ, ಕೇಳು (ದ್ರವ್ಯಮಯಾತ್) ದ್ರವ್ಯವನ್ನು ಒಳ್ಳೇ ರೀತಿಯಲ್ಲಿ ವಿನಿಯೋಗಿಸುವದು ಮೊದಲಾದ ಜ್ಞಾನರಹಿತವಾದ (ಯಜ್ಞಾತ್) ಎಲ್ಲ ಯಜ್ಞಗಳಿಗಿಂತಲೂ (ಜ್ಞಾನಯಜ್ಞಃ) ಜ್ಞಾನರೂಪವಾದ ಯಜ್ಞವು (ಶ್ರೇಯಾನ್) ಬಹಳ ಹೆಚ್ಚಿನದು ಏಕೆಂದರೆ ದ್ರವ್ಯಯಜ್ಞ ಮೊದಲಾದವು ಏನಾದರೊಂದೊಂದು ಫಲವನ್ನು ಕೊಡತಕ್ಕವುಗಳು ; ಜ್ಞಾನ ಯಜ್ಞವು ಅಂಥದ್ದಲ್ಲ (ಪಾರ್ಥ) ಅರ್ಜುನನೆ, (ಅಖಿಲಂ) ಪೂರ್ಣವಾಗಿ (ಕರ್ಮ) ಕರ್ಮವು (ಸರ್ವಂ) ಎಲ್ಲವೂ, ಚಿತ್ತಶುದ್ಧಿಯ ಮೂಲಕವಾಗಿ ಆಗುವ ಜ್ಞಾನಕ್ಕೆ ಸಾಧನಗಳಾದ್ದರಿಂದ (ಜ್ಞಾನೇ)* ಮೋಕ್ಷಸಾಧನವಾದ ಜ್ಞಾನದಲ್ಲಿ (ಪರಿಸಮಾಪ್ಯತೇ) ಮುಗಿದುಹೋಗುತ್ತವೆ.

ಆ ಜ್ಞಾನವನ್ನು ಪಡೆಯುವದಕ್ಕೇನು ಮಾಡಬೇಕೆಂದರೆ .—

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ । ***
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪ ॥**

(ತತ್) ಜ್ಞಾನವು ದೊರೆಯುವ ಉಪಾಯವನ್ನು (ವಿದ್ಧಿ) ತಿಳಿದುಕೊ, ಅದೇನೆಂದರೆ (ಜ್ಞಾನಿನಃ) ಪರಮಾತ್ಮಸ್ವರೂಪವನ್ನು ತಿಳಿದವರಾಗಿ (ತತ್ತ್ವದರ್ಶಿನಃ) ಅದರ ನಿಜವನ್ನು ಕಣ್ಣಾರೆ ಕಂಡವರೂ ಆಗಿರುವವರು (ಪ್ರಣಿಪಾತೇನ) ನೀನು ಹೋಗಿ ಅವರ ಪಾದದ ಮೇಲೆ ಸಾಷ್ಟಾಂಗ ನಮಸ್ಕಾರ

---

* "ಜ್ಞಾನಾದೇವ ತು ಕೈವಲ್ಯಂ"—ಜ್ಞಾನದಿಂದಲೇ ಮೋಕ್ಷ-ಶ್ರು

* (೧) 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ'- ಅದನ್ನು ತಿಳಿಯುವದಕ್ಕಾಗಿ ಅವನು ಕೈಯಲ್ಲಿ ಸಮಿತ್ತನ್ನು ಹಿಡಿದುಕೊಂಡು ವೇದಾರ್ಥವನ್ನು ತಿಳಿದಂಥ ಬ್ರಹ್ಮನಿಷ್ಠನಾದ ಗುರುವಿನ ಬಳಿಗೇ ಹೋಗಬೇಕು-ಶ್ರು. (೨) 'ಆಚಾರ್ಯವಾನ್ಪುರುಷೋ ವೇದ'—ಗುರುವಿಗೆ ಶರಣುಹೋದವನೇ ತಿಳಿಯುವನು—ಶ್ರು

ವನ್ನು ಮಾಡುವದರಿಂದಲೂ (ಪರಿಪ್ರಶ್ನೇನ) ಬಂಧಮೋಕ್ಷಗಳೆಂದರೇನೆಂದು ಮುಂತಾಗಿ ಪ್ರಶ್ನೆಯನ್ನು ಮಾಡುವದರಿಂದಲೂ (ಸೇವಯಾ) ಅವನು ಮನ ಸ್ಸೊಲಿಯುವಂತೆ ಅವರ ಸೇವೆ ಮಾಡುವದರಿಂದಲೂ, (ತೇ) ನಿನಗೆ (ಜ್ಞಾನಂ) ಜ್ಞಾನವನ್ನು (ಉಪದೇಕ್ಷ್ಯಂತಿ) ತಿಳಿಸಿಕೊಡುತ್ತಾರೆ

ಅಂಥ ಗುರೂಪದೇಶವಾದ ಮೇಲೆ :—

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥**

(ಪಾಂಡವ) ಅರ್ಜುನನೆ, ಕೇಳು. (ಯತ್) ಯಾವ ಆ ಪರಮಾತ್ಮ ಸ್ವರೂಪವನ್ನು (ಜ್ಞಾತ್ವಾ) ತಿಳಿದಮೇಲೆ (ಪುನಃ) ಮತ್ತೆ (ಏವಂ) ಈಗ ನೀನು ಬ್ರಾಹ್ಮಣಧರ್ಮವಾದ ಭಿಕ್ಷಾಚರಣೆಯು ಮೇಲೆಂದೂ ನಿನ್ನ ಧರ್ಮ ವಾದ ಯುದ್ಧವು ಮಾಡಬಾರದ್ದೆಂದೂ ಮುಂತಾಗಿ ತಪ್ಪು ತಿಳಿದಿರುವಂತೆ (ಮೋಹಂ) ಭ್ರಮೆಯನ್ನು (ನ ಯಾಸ್ಯಸಿ) ನೀನು ಹೊಂದುವದಿಲ್ಲ. ಹೀಗೆ ತಪ್ಪು ತಿಳಿವಳಿಕೆಯನ್ನು ಹೊಂದದಿರುವದೊಂದೇ ಅಲ್ಲ, ಸ್ಪಷ್ಟವಾದ ಲಾಭವೇ ಆಗುವದು ನೋಡು (ಯೇನ) ಆ ಜ್ಞಾನದಿಂದ (ಅಶೇಷೇಣ) ಬ್ರಹ್ಮ ಮೊದಲುಗೊಂಡು ಮೋಟುಮರದವರೆಗಿನ (ಭೂತಾನಿ) ವಸ್ತುಗಳ ನ್ನೆಲ್ಲ (ಆತ್ಮನಿ) ನಿನ್ನೊಳಗೇ (ದ್ರಕ್ಷ್ಯಸಿ) ನೋಡುತ್ತೀ. ಸಮಸ್ತ ಬ್ರಹ್ಮಾಂಡವು ನಿನ್ನೊಳಗೇ ಇರುವದೆಂದೂ ನಿನಗಿಂತ ಬೇರೆಯಾದ ಬ್ರಹ್ಮಾಂಡ ವೆಂಬುದೇ ಇಲ್ಲವೆಂದೂ ನೀನು ತಿಳಿಯುತ್ತೀ. (ಅಥ) ಹೀಗೆ ನಿನ್ನಲ್ಲಿ ಮಾತ್ರವೇ ಅಲ್ಲದೆ (ಮಯಿ) ಪರಮೇಶ್ವರನಾದ ನನ್ನಲ್ಲಿ ಕೂಡ ಇರುವ ದೆಂದೂ ತಿಳಿಯುತ್ತೀ. ಎಂದರೆ ನಿನ್ನ ಆತ್ಮವೂ ಪರಮಾತ್ಮವೂ ಒಂದೇ ಎಂದೂ ಆ ಆತ್ಮದಲ್ಲಿಯೇ–ಹಗ್ಗದಲ್ಲಿ ಹಾವು ಮೊದಲಾದದ್ದು ಕಾಣುವಂತೆ ಅಥವಾ ತನ್ನ ಕನಸಿನಲ್ಲಿ ಅನೇಕ ನಾಮರೂಪಗಳು ಸುಳ್ಳಾಗಿ ಕಾಣುವಂತೆ— ಬೇರೆ ಬೇರೆ ನಾಮರೂಪಗಳು ಕಾಣುವವೆಂದೂ ಆ ಆತ್ಮದ ಹೊರತು ಆ

ನಾಮರೂಪಗಳಿಗೆ ಸ್ವತಂತ್ರವಾದ ಇರುವಿಕೆಯೇ ಇಲ್ಲವೆಂದೂ ನೀನು ಮನಗಾಣುತ್ತಿ.

ಆ ಜ್ಞಾನದ ಹೆಚ್ಚುಗಾರಿಕೆಯನ್ನೇನು ಹೇಳಲಿ !—

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬ ॥**

ನೀನು (ಪಾಪೇಭ್ಯಃ) ಪಾಪಿಗಳಾದ (ಸರ್ವೇಭ್ಯಃ) ಎಲ್ಲರಿಗಿಂತಲೂ (ಪಾಪಕೃತ್ತಮಃ) ಬಹು ಹೆಚ್ಚಿನ ಪಾಪವನ್ನು ಮಾಡಿದವನು (ಅಪಿ ಚೇದಸಿ) ಆಗಿರುವೆಯೆಂದಿಟ್ಟುಕೊಂಡರೂ (ಸರ್ವಂ) ಎಲ್ಲ (ವೃಜಿನಂ) ಪುಣ್ಯಪಾಪಗಳೆಂಬ ಸಮುದ್ರವನ್ನೂ (ಜ್ಞಾನಪ್ಲವೇನೈವ) ಆತ್ಮನಿಗೆ ಕರ್ಮಗಳ ಸಂಬಂಧವಿಲ್ಲವೆಂಬ ಜ್ಞಾನರೂಪವಾದ ಹಡಗಿನಿಂದಲೆ (ಸಂತರಿಷ್ಯಸಿ) ದಾಟುತ್ತಿ.

ಜ್ಞಾನವು ಪಾಪವನ್ನು ಸುಡುವದಕ್ಕೆ ದೃಷ್ಟಾಂತವೇನೆಂದರೆ .—

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ ೩೭ ॥**

(ಅರ್ಜುನ) ಅರ್ಜುನನೆ, ಕೇಳು. (ಸಮಿದ್ಧಃ) ಚೆನ್ನಾಗಿ ಉರಿಗೊಳಿಸಿದ (ಅಗ್ನಿಃ) ಅಗ್ನಿಯು (ಏಧಾಂಸಿ) ಕಟ್ಟಿಗೆಗಳನ್ನು (ಯಥಾ) ಹೇಗೆ (ಭಸ್ಮಸಾತ್ಕುರುತೇ) ಸುಟ್ಟು ಬೂದಿಯಾಗಿ ಮಾಡಿಬಿಡುವದೊ (ತಥಾ) ಹಾಗೆ (ಜ್ಞಾನಾಗ್ನಿಃ) ಆತ್ಮನು ಬೇರೆ ಬೇರೆ ಇದ್ದಹಾಗೆ ಕಾಣುತ್ತ ಕರ್ಮದಲ್ಲಿ ತೊಡಗಿರುವಂತೆ ಕಂಡರೂ ಅಖಂಡನಾಗಿ ಏಕನಾಗಿ ಯಾವ ಕರ್ಮದ ಸಂಬಂಧವೂ ಇಲ್ಲದವನೆಂಬ ಜ್ಞಾನರೂಪವಾದ ಅಗ್ನಿಯು (ಸರ್ವಕರ್ಮಾಣಿ) ಎಲ್ಲ ಪುಣ್ಯಪಾಪಕರ್ಮಗಳ ರಾಶಿಯನ್ನೂ (ಭಸ್ಮ ಸಾತ್ಕುರುತೇ) ಸುಟ್ಟು ಬೂದಿ ಮಾಡುತ್ತದೆ. ಎಂದರೆ ಆ ಪುಣ್ಯ ಪಾಪಗಳು ಅವನ ಮೇಲೆ ತನ್ನ ಕಾರ್ಯವನ್ನು ನಡೆಸದಂತೆ ಅವುಗಳ ಶಕ್ತಿಯನ್ನು ಕಳೆದುಬಿಡುತ್ತದೆ ಮುಂದೆ ಸುಖ ದುಃಖಗಳನ್ನು ಕೊಡುವವಕ್ಕಾಗಿ ಕಾದಿರುವ ಎಲ್ಲ ಕರ್ಮಗಳನ್ನೂ ಸುಟ್ಟುಹಾಕಿದರೂ

ಈ ಜನ್ಮದಲ್ಲಿ ಫಲವನ್ನು ಕೊಡುವದಕ್ಕೆ ಪ್ರಾರಂಭವಾಗಿರುವ ಕರ್ಮದ ಮೇಲೆ ಆ ಜ್ಞಾನದ ಕೈ ನಡೆಯಲಾರದೆಂದು ಯಾರಾದರೂ ಯೋಚಿಸಬಹುದು. ಏಕೆಂದರೆ ಹುಲಿಯೆಂದು ತಿಳಿದು ಬಾಣವನ್ನು ಹೊಡಿ ಬಿಟ್ಟಮೇಲೆ ಅದು ಹಸುವೆಂದು ತಿಳಿದರೆ ಆಗ ನಡುವೆ ಅದನ್ನು ತಡೆಯುವದು ಹೇಗೆ ಸಾಧ್ಯ ವಲ್ಲವೋ ಹಾಗೆ ಪ್ರಾರಬ್ಧವು ಸಾಗುವವನ್ನು ಜ್ಞಾನವು ತಡೆಯಲಾರದೆಂದು ಯುಕ್ತಿಯು ಹೊಳೆಯಬಹುದು. ಇದಕ್ಕೆ ಸರಿಯಾಗಿ ಜ್ಞಾನಿಗಳೆನಿಸಿಕೊಂಡಿ ರುವವರಿಗೂ ಉಳಿದವರಂತೆ ಸುಖದುಃಖಗಳು ಬರುವದೂ ಕಣ್ಣಿಗೆ ಕಾಣುತ್ತಿ ರಬಹುದು. ಆದ ಮಾತ್ರಕ್ಕೇ ಜ್ಞಾನಕ್ಕಿಂತ ಕರ್ಮಕ್ಕೆ ಹೆಚ್ಚು ಬೆಲೆಯನ್ನು ಕಟ್ಟುವದು ವಿವೇಕವಲ್ಲ. ಜ್ಞಾನದ ಮುಂದೆ ಕರ್ಮವು ಎಂದಿಗೂ ತಲೆಯೆತ್ತಿ ಕೊಂಡು ನಿಲ್ಲಲಾರದು. ಜ್ಞಾನಿಗಳಿಗೆ ಸುಖದುಃಖಗಳು ಬರುವಂತೆ ಕಂಡರೂ ಅದು ಅಜ್ಞರ ದೃಷ್ಟಿಯಿಂದ ಹೇಳುವ ಮಾತೇ ಹೊರತು ಬೇರೆ ಅಲ್ಲ. ಅಜ್ಞರ ದೃಷ್ಟಿಯಿಂದ ಜ್ಞಾನಿಗಳೂ ಪ್ರಾರಬ್ಧಕ್ಕೊಳಗಾಗಿರುವದು ನಿಜ. ಜ್ಞಾನಿಗಳ ದೃಷ್ಟಿಯಿಂದ ಅವರಿಗೆ ಪ್ರಾರಬ್ಧವಿಲ್ಲ. ಜ್ಞಾನಿಗಳು ಪ್ರಾರಬ್ಧ ದಿಂದ ಬರುವ ಸುಖದಿಂದ ಹಿಗ್ಗಿದರೆ ಮತ್ತು ದುಃಖದಿಂದ ತಗ್ಗಿದರೆ ಅವರಿಗೆ ಪ್ರಾರಬ್ಧವು ಉಂಟೆನ್ನಬಹುದು. ಜ್ಞಾನಿಗಳಿಗೆ ಹಾಗೆಂದಿಗೂ ಆಗುವದೇ ಇಲ್ಲವೆಂದು ಹಿಂದೆ ಸ್ಥಿತಪ್ರಜ್ಞನ ಲಕ್ಷಣದಲ್ಲಿ (೨-೫೬) ಹೇಳಿದ್ದಾಗಿದೆ. ಇವ ಲ್ಲದೆ ಕರ್ಮಗಳ ಚೆಲ್ಲಾಟವೆಲ್ಲ ದೇಹದ ಮೇಲೆ ಮತ್ತು ಮನಸ್ಸಿನ ಮೇಲೆ. ಜ್ಞಾನಿಗಳು ದೇಹವನ್ನೂ ಮನಸ್ಸನ್ನೂ ಬರೀ ತೋರಿಕೆಯುವೆಂದು ತಿಳಿದು ತಾವು ಎಲ್ಲಕ್ಕೂ ಒಳಗಣ ಆತ್ಮಸ್ವರೂಪರಾಗಿರುತ್ತಾರೆ. ಅದನ್ನು ಕರ್ಮವು ತಾಕಲಾರದು. ಆದ್ದರಿಂದ ಜ್ಞಾನವು ಸರ್ವಕರ್ಮಗಳನ್ನೂ ಸುಟ್ಟುಹಾಕುವ ದೆಂಬ ಮಾತಿನ ಅರ್ಥದಲ್ಲಿ ಸಂಕೋಚವನ್ನು ಮಾಡಬೇಕಾದ್ದಿಲ್ಲ.

ಆದ್ದರಿಂದ :—

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮ ॥**

( ಜ್ಞಾನೇನ ) ಜ್ಞಾನದೊಡನೆ ( ಸದೃಶಂ ) ಸಮನೆನಿಸಿಕೊಳ್ಳುವ ( ಪವಿತ್ರಂ ) ಶುದಿ ಕರವಾದ ವಸ್ತು ( ಇಹ ) ಈ ಲೋಕವಲ್ಲಿ ( ನ ಹಿ ವಿ ್ಯತೇ) ಇರುವದಿ ಕಮವೂ ಉಪಾಸನೆಯೂ ಕೆಲಕೆಲವು ಪಾಪಗಳನ್ನು ಹೆ ೀಗಲಾಡಿಸುವವು ಕರ್ಮವೂ ಉಪಾಸನೆಯೂ ನಡೆವರೂ ಇನ್ನೂ ಎಷ್ಟೋ ಪಾಪಗಳು ಉಳಿದುಕೊಂಡಿರುವನಲ್ಲದೆ ಪುಣ್ಯಗಳಂತ ಅಚ್ಚಳಿ ೦ಯದ ಇದ್ದೇ ಇರುವವು ಚಿನ್ನದ ಬೇಡಿಯೇ ಆದರೂ ಅದು ಅವನನ್ನು ಸೆರೆಯಾಳೇ ಎನಿಸುವಂತೆ ಪುಣ್ಯಗಳಾದರೂ ಹುಟ್ಟು ಸಾವುಗಳ ಕಣ್ಣಿಯನ್ನು ಕಳಚಿಕೊಳ್ಳಬೇಕೆನ್ನುವವನಿಗೆ ಬಂಧಕಗಳೇ ಆಗಿರುವವು ಇವೆಲ್ಲವನ್ನೂ ಕಳೆಯುವ ಸಾಮರ್ಥ್ಯವಿರುವದು ಜ್ಞಾನಕ್ಕೊಂದಕ್ಕೇ ಸರಿ ಆದ್ದರಿಂದ ಆದಕ್ಕೆ ಸಮಾನವಿಲ್ಲ ಈ ಜ್ಞಾನವು ಯಾವಾಗ ದೊರೆಯುವದೆಂದರೆ (ಸ್ವಯಂ) ತಾನೇ (ಯೋಗಸಂಸಿದ್ಧಃ) ಕರ್ಮಯೋಗದಿಂದ ಚಿತ್ತಶುದ್ಧಿಯನ್ನೂ ಧ್ಯಾನಯೋಗದಿಂದ ಚಿತ್ತಸ್ಥೈರ್ಯವನ್ನೂ ವೈಗೂಡಿಸಿಕೊಂಡವನು (ಕಾಲೇನ) ಬಹು ಕಾಲದಿಂದ ಅಭ್ಯಾಸ ಮಾಡಿದ ಮೇಲೆ ( ತತ್ ) ಆ ಜ್ಞಾನವನ್ನು (ಆತ್ಮನಿ) ತನ್ನ ಅಂತಃಕರಣದಲ್ಲಿ ( ವಿಂದತಿ ) ಕಣ್ಣಿಗೆ ಕಟ್ಟಿದಂತೆ ಕಾಣುತ್ತಾನೆ.

ಜ್ಞಾನಪ್ರಾಪ್ತಿಯ ಮುಖ್ಯವಾದ ಉಪಾಯವೇನೆಂದರೆ :—

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ |**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ || ೩೯ ||**

( ಶ್ರದ್ಧಾವಾನ್ ) ಗುರುವಿನ ಮಾತು ವೇದದ ಮಾತಿನ ಅರ್ಥವನ್ನು ಹೇಳತಕ್ಕದ್ದೆಂದು ವಿಶ್ವಾಸವುಳ್ಳವನಾಗಿಯೂ ( ತತ್ಪರಃ ) ಆ ವಿಶ್ವಾಸಕ್ಕೆ ಸಾರ್ಥಕವಾಗಿ ಆ ಉಪದೇಶವನ್ನು ವೈಗೂಡಿಸಿಕೊಳ್ಳುವದಕ್ಕಾಗಿ ಸೋಮಾರಿತನವನ್ನು ಬಿಟ್ಟು ಗುರುವಿನ ಸೇವೆ ಮೊದಲಾದದ್ದನ್ನು ಮಾಡುವವನಾಗಿಯೂ (ಸಂಯತೇಂದ್ರಿಯಃ) ಅಷ್ಟೆಲ್ಲ ಇದ್ದರೂ ಹೊರ ಹೊರಗೇ ಹರಿದಾಡುವ ಮನಸ್ಸಿನವರಿಗೆ ಜ್ಞಾನವು ದೊರೆಯುವದಿಲ್ಲವಾದ್ದರಿಂದ ಇಂದ್ರಿಯಗಳನ್ನೂ ಮನಸ್ಸನ್ನೂ ಬಿಗಿಹಿಡಿದವನಾಗಿಯೂ ಇರುವವನು (ಜ್ಞಾನಂ) ಆ ಜ್ಞಾನವನ್ನು (ಲಭತೇ) ಹೊಂದುತ್ತಾನೆ

ಆದರಿಂದಾಗುವ ಫಲವೇನೆಂದರೆ : (ಜ್ಞಾನಂ) ಜ್ಞಾನವನ್ನು (ಲಬ್ಧ್ವಾ) ಹೊಂದಿದ ಮೇಲೆ (ಅಚಿರೇಣ) ತಡವೆಷ್ಟು ಮಾತ್ರವೂ ಇಲ್ಲದೆ (ಪರಾಂ) ಬಹು • ಹೆಚ್ಚಿನ ( ಶಾಂತಿಂ ) ಮೋಕ್ಷರೂಪವಾದ ಸಮಾಧಾನವನ್ನು ( ಅಧಿಗಚ್ಛತಿ ) ಪಡೆಯುತ್ತಾನೆ. ಜ್ಞಾನವಾದರೂ ಸಾಯುವವರಗೂ ಸ್ವಲ್ಪ ಅಜ್ಞಾನದೊಡನೆ ಇದ್ದು ಸತ್ತಮೇಲೆಯೇ ಮೋಕ್ಷವನ್ನು ಪಡೆಯುವನೆಂದು ತಿಳಿಯಬಾರದು ಸತ್ತ ಮೇಲೆಯೇ ಮೋಕ್ಷವಾಗುವದೆಂದರೆ ಅದೂ ಒಂದು ಪರೋಕ್ಷದ ವಿಷಯವಾಗಿ ವಿಶ್ವಾಸವನ್ನಿಡಬೇಕಾದ ಸಂಗತಿಯಾದೀತೇ ಹೊರತು ಪ್ರತ್ಯಕ್ಷವಾಗಿ ಅನುಭವಕ್ಕೆ ಒರುವಂಥದ್ದಾಗುವದಿಲ್ಲ ಜ್ಞಾನದ ಮುಖಕ್ಕೆ ಈ ಮಸಿಯನ್ನು ಬಳಿಯಬಾರದು. ಹಾಗಾದರೆ ಜ್ಞಾನಿಯೂ ಬದುಕಿ ಎಲ್ಲರಂತೆಯೇ ದೇಹದಲ್ಲಿರುವದಾದರೆ ಅವನಿಗೂ ಅಜ್ಞಾನಿಗಳಿಗೆ ಭೇದವೇನೆಂದರೆ ಅಜ್ಞಾನಿಗಳು ದೇಹೇಂದ್ರಿಯಾದಿಗಳನ್ನೇ ಆತ್ಮವೆಂದು ತಿಳಿದು ಅವು ಹುಟ್ಟಿದರೆ ಹುಟ್ಟಿದೆವೆಂದೂ ಅವು ಸತ್ತರೆ ಸತ್ತೆವೆಂದೂ ತಿಳಿದಿರುವರು ಜ್ಞಾನಿಗಳು ದೇಹಾದಿಗಳೆಲ್ಲ ಸ್ವಪ್ನದ ದೇಹಾದಿಗಳಂತೆ ಬರೀ ತೋರಿಕೆಯುವೆಂದೂ ತಾನು ಇವಕ್ಕೆಲ್ಲ ಸಾಕ್ಷಿಯಾದ ಚೈತನ್ಯವೆಂದೂ ತಿಳಿದಿರುವರು. ಇಷ್ಟೇ. ಈ ಜ್ಞಾನದ ಪ್ರಾಪ್ತಿಗೆ ಗುರುವಿಗೆ ನಮಸ್ಕಾರ ಮೊದಲಾದವನ್ನು ಮಾಡುವದೇ ಸಾಧನವೆಂದು ಮೊದಲು ಹೇಳಿದ್ದಾಗಿದೆ. ಆದರೆ ನಿಜವಾದ ಜ್ಞಾನೇಚ್ಛೆಯಿಲ್ಲದೆ ಕುತೂಹಲದ ನಟನೆಯಿಂದಾದರೂ ಆಗಬಹುದೆಂದು ತಿಳಿಯದಿರುವದಕ್ಕಾಗಿ ಈಗ ಈ ಸಾಧನಗಳನ್ನು ಹೇಳಿದ್ದಾಗಿದೆ

ಈ ನನ್ನ ಮಾತಿನಲ್ಲಿ ಸಂಶಯವಿಡಬೇಡ ಏಕೆಂದರೆ —

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥**

( ಅಜ್ಞಶ್ಚ ) ಆತ್ಮಸ್ವರೂಪವನ್ನರಿಯದವನೂ [ ಅಶ್ರದ್ದಧಾನಃ ] ಗುರುವಿನ ಮತ್ತು ಶಾಸ್ತ್ರದ ಮಾತಿನಲ್ಲಿ ವಿಶ್ವಾಸವಿಲ್ಲದವನೂ [ಸಂಶಯಾತ್ಮಾ ಚ] ಇದರ ಅರ್ಥ ಹೀಗೊ ಹಾಗೊ ? ಎಂದು ಸಂಶಯ

ಗೊಳ್ಳುವವನೂ – ಈ ಮೂವರೂ [ವಿನಶ್ಯತಿ] ಹಾಳಾಗಿಹೋಗುತ್ತಾರೆ. ಹಾಳಾಗಿಹೋಗುವಿಕೆ ಈ ಮೂವರಿಗೂ ಸಮಾನವಾದರೂ [ಸಂಶಯಾತ್ಮನಃ] ಸಂಶಯುಗೊಳ್ಳುವವನಿಗೆ [ ಅಯಂ ಲೋಕಃ ] ಈ ಲೋಕವು ಕೂಡ (ನಾಸ್ತಿ) ಇಲ್ಲ ಏಕೆಂದರೆ ಇವನೇನು ಹಗೆಯೋ ಶತ್ರುವೊ? ಇದೇನು ಅಮೃತವೋ ವಿಷವೊ ? – ಎಂದು ಅವನು ಈ ಲೋಕದ ಸುಖಗಳನ್ನೂ ಕಳೆದುಕೊಳ್ಳುವನು (ನ ಪರಃ) ಅವನಿಗೆ ಪರಲೋಕವೂ ಇಲ್ಲ ಏಕೆಂದರೆ ಅವನಿಗೆ ಅದರಲ್ಲಿಯೂ ಸಂಶಯು ( ನ ಸುಖಂ ) ಅವನಿಗೆ ಸುಖವೂ ಇಲ್ಲ ಏಕೆಂದರೆ ಅವನಿಗೆ ಅದರಲ್ಲಿಯೂ ಸಂಶಯು.

ಇನ್ನೂ ಏಕೆಂದರೆ —

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯುಮ್ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧ ॥**

(ಧನಂಜಯ) ಅರ್ಜುನನೆ, ಕೇಳು (ಆತ್ಮವಂತಂ) ದೇಹಾದಿಗಳೇ ಆತ್ಮವೆಂದು ಅವುಗಳ ಕಟ್ಟಿಗೆ ಸಿಕ್ಕಿ ಪರವಶನಾಗದೆ ಒಳಗಿರುವ ಚೈತನ್ಯ ಸ್ವರೂಪವೇ ತಾನೆಂದು ಜಾಗರೂಕನಾಗಿರುವವನಾಗಿಯೂ ಆದ್ದರಿಂದಲೇ ( ಜ್ಞಾನಸಂಛಿನ್ನಸಂಶಯುಮ್ ) ಬೇರೆಬೇರೆಯಾಗಿ ಕಾಣುವ ಆತ್ಮರೂ ಪರಮಾತ್ಮನೂ ಒಂದೇ ಎಂಬ ಜ್ಞಾನದಿಂದ ಭೇದದೃಷ್ಟಿಯ ಸಂಶಯುವನ್ನು ಕತ್ತರಿಸಿಹಾಕಿಕೊಂಡಿರುವವನಾಗಿಯೂ ಆದ್ದರಿಂದಲೆ ( ಯೋಗಸಂನ್ಯಸ್ತ ಕರ್ಮಾಣಂ ) ಹೊರಗಣವರಿಗೆ ತಾನು ಕರ್ಮವನ್ನು ಮಾಡುತ್ತಿರುವಂತೆ ಕಂಡರೂ ಆತ್ಮನಿಗೂ ಕರ್ಮಗಳಿಗೂ ಸಂಬಂಧವಿಲ್ಲವೆಂಬ ಜ್ಞಾನದಿಂದ ತಾನು ಪುಣ್ಯಪಾಪಕರ್ಮಗಳ ಸಂಬಂಧವನ್ನು ತೊರೆದಿರುವವನಾಗಿಯೂ ಇರುವವನನ್ನು (ಕರ್ಮಾಣಿ) ಪುಣ್ಯಪಾಪಕರ್ಮಗಳು (ನ ನಿಬಧ್ನಂತಿ) ಕಟ್ಟಿಗೊಳಪಡಿಸುವದಿಲ್ಲ.

ಹೀಗಿರುವದರಿಂದ .—

**ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯುಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥**

[ಭಾರತ] ಅರ್ಜುನನೆ, ಕೇಳು [ತಸ್ಮಾತ್] ಆದ್ದರಿಂದ [ಅಜ್ಞಾನ ಸಂಭೂತಂ] ಅವಿವೇಕದಿಂದ ಹುಟ್ಟಿರುವದಾಗಿ [ಹೃತ್ಸ್ಥಂ] ಬುದ್ಧಿಯಲ್ಲಿ ಮನೆಮಾಡಿಕೊಂಡಿರುವಂಥ [ಏನಂ] ಈ [ಸಂಶಯಂ] ಯುದ್ಧವನ್ನು ಮಾಡುವದು ಮೇಲೊ ಬಿಡುವದು ಮೇಲೊ ಎಂಬ ಸಂಶಯವನ್ನು [ಆತ್ಮನಃ] ನಿನ್ನ [ಜ್ಞಾನಾಸಿನಾ] ಜ್ಞಾನವೆಂಬ ಕತ್ತಿಯಿಂದ [ಛಿತ್ವಾ] ಕತ್ತರಿಸಿಹಾಕಿ [ಯೋಗಂ] ಜ್ಞಾನಪ್ರಾಪ್ತಿಯ ಸಾಧನವಾದ ಕರ್ಮಾನು ಷ್ಠಾನವನ್ನು [ಆತಿಷ್ಠ] ನಡೆಸು [ಉತ್ತಿಷ್ಠ] ಈಗ ಯುದ್ಧಕ್ಕೆ ಏಳು

ಇಲ್ಲಿಗೆ **ಜ್ಞಾನಕರ್ಮಸಂನ್ಯಾಸಯೋಗವೆಂಬ**

ನಾಲ್ಕನೆ ಅಧ್ಯಾಯವು ಮುಗಿಯಿತು.



# ಐದನೆ ಅಧ್ಯಾಯ

ಅರ್ಜುನನಿಗೆ ಬಂದಿದ್ದ ಶೋಕಮೋಹಗಳು ಹೋಗುವದಕ್ಕೆ ತಕ್ಕ ಚಿಕಿತ್ಸೆಯಾಗಿ ಶ್ರೀಕೃಷ್ಣನು ಮೊದಲು ಜ್ಞಾನವನ್ನು ಉಪದೇಶಮಾಡಿದನು ಅದು ಅವನಿಗೆ ಹಿಡಿಯಲಿಲ್ಲ. ಅದನ್ನು ಕಂಡು ಒಡನೆ ಅವನು ಕರ್ಮಯೋಗವನ್ನು ಹೇಳಿದನು ಆಗ ಮೇಲಾದ ಜ್ಞಾನವನ್ನು ಬಿಟ್ಟು ಕೀಳಾದ ಕರ್ಮವನ್ನೇಕೆ ಮಾಡಬೇಕೆಂದು ಅರ್ಜುನನಿಗ ಸಂಶ ಯವು ಬಂತು ಅದಕ್ಕೆ ಸಮಾಧಾನವಾಗಿ ಅಜ್ಞನಾಗಿದ್ದರೆ ಚಿತ್ತಶುದ್ಧಿ ಗಾಗಿಯೂ ಜ್ಞಾನಿಯಾಗಿದ್ದರೆ ಲೋಕಸಂಗ್ರಹಕ್ಕಾಗಿಯೂ ಮತ್ತು ಜಗತ್ತು ಸಾಗುವದಕ್ಕಾಗಿಯೂ ಕರ್ಮವನ್ನು ಮಾಡಲೇಬೇಕೆಂಬ ಮಾತುಬಂತು. ಆಮೇಲೆ ಶ್ರೀಕೃಷ್ಣನು ಕರ್ಮದ ಬಂಧಕತ್ವವನ್ನು ಕಳೆಯುವ ಉಪಾ ಯವನ್ನು ವಿವರಿಸುವ ಸಂದರ್ಭದಲ್ಲಿ ಆತ್ಮನು ಅಕರ್ತನೆಂಬ ಜ್ಞಾನ ವನ್ನು ಎತ್ತಿಹಿಡಿಯುವದಕ್ಕೆ ಹೊರಟು ಆ ಜ್ಞಾನವುಳ್ಳವರನ್ನು ವರ್ಣಿಸುತ್ತ

" ಬರೀ ದೇಹಯಾತ್ರೆಗಾಗಿ ಕರ್ಮವನ್ನು ಮಾಡುವವರಿಗೆ ಪಾಪವಿಲ್ಲ (೪-೨೧) " ಮತ್ತು " ತಾನಾಗಿ ದೊರೆತದ್ದರಲ್ಲಿ ತೃಪ್ತನಾಗುವವನಿಗೆ ಬಂಧವಿಲ್ಲ (೪-೨೨) '' — ಮುಂತಾದ ವಾಕ್ಯಗಳಿಂದ ಶಾಸ್ತ್ರವಿಹಿತಕರ್ಮಗಳನ್ನೆಲ್ಲ ಬಿಟ್ಟಿರುವ ಸಂನ್ಯಾಸದ ನಡೆವಳಿಕೆಗೆ ಒಳ್ಳೆ ಬಣ್ಣವನ್ನು ಕೊಟ್ಟು ಹೇಳಿದನು ಯುದ್ಧಕ್ಕೆ ಕೈ ಏಳದಿದ್ದ ಅರ್ಜುನನಿಗೆ ಕರ್ಮಕ್ಕೆ ಅಧಿಕಾರಿಯಾಗಿ ಸಾಧಕನಾದ ತಾನು ಪರರಿಗೆ ಹಿಂಸೆಯನ್ನು ಮಾಡುವ ಘೋರವಾದ ಯುದ್ಧಕರ್ಮವನ್ನು ಬಿಟ್ಟು ಸಂನ್ಯಾಸದ ನಡೆವಳಿಕೆಯನ್ನು ಕೈಗೊಳ್ಳಬಹುದೆಂದು ತೋರಿತು ಅರ್ಜುನನು ಮನಸ್ಸಿನಲ್ಲಿ ಇದರ ಗುಣಾಕಾರವನ್ನು ಹಾಕುತ್ತಿರುವಾಗ ಶ್ರೀಕೃಷ್ಣನು ಯುದ್ಧಕ್ಕೇಳೆಂದು ಹೇಳಿ ತನ್ನ ಮಾತನ್ನು ಮುಗಿಸಿದನು. ಈಗ ಸಂನ್ಯಾಸ ಮತ್ತು ಕರ್ಮ – ಇವೆರಡರಲ್ಲಿ ಯಾವದು ಮೇಲೆಂಬುದನ್ನು ತಿಳಿಯಬೇಕೆಂದು,

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು —

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿಸುನಿಶ್ಚಿತಮ್ ॥**

(ಕೃಷ್ಣ) ಕೃಷ್ಣನೆ, ಬರೀ ದೇಹಯಾತ್ರೆಯನ್ನು ನಡೆಸಿಕೊಂಡಿರುವದರಿಂದ ಪುಣ್ಯಪಾಗಳ ಸೋಂಕಿರುವದಿಲ್ಲೆಂಬ ಮಾತಿನಿಂದ ( ಕರ್ಮಣಾಂ ) ಶಾಸ್ತ್ರದಲ್ಲಿ ವಿಹಿತವಾದ ಕರ್ಮಗಳ ( ಸಂನ್ಯಾಸಂ ) ಬಿಡುವಿಕೆಯನ್ನೂ (ಪುನಃ) ಮತ್ತೆ ಯುದ್ಧಕ್ಕೆ ಏಳೆಂಬ ಮಾತಿನಿಂದ (ಯೋಗಂ ಚ) ಅದರ ಆಚರಣೆಯನ್ನೂ (ಶಂಸಸಿ) ಹೇಳುತ್ತಿ ಇವೆರಡನ್ನು ಒಬ್ಬನೇ ನಡೆಸುವದಂತು ಆಗುವ ಮಾತಲ್ಲ. ಇವೆರಡರಲ್ಲಿ ಯಾವದು ಮೇಲೊ ನನಗೆ ಸಂಶಯವಾಗಿದೆ ಆದ್ದರಿಂದ ( ಏತಯೋಃ ) ಇವೆರಡರಲ್ಲಿ ( ಯತ್ ) ಯಾವದು ( ಶ್ರೇಯಃ ) ಮೇಲೊ ( ಸುನಿಶ್ಚಿತಂ ) ಇದು ಹೀಗೇ ಸರಿ ಎಂದು ಗೊತ್ತುಮಾಡಿದಂಥ (ತತ್) ಆ (ಏಕಂ) ಒಂದನ್ನು (ಮೇ) ನನಗೆ (ಬ್ರೂಹಿ) ಹೇಳು

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು .—

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥ ೨ ॥**

(ಸಂನ್ಯಾಸಃ) * ಎಲ್ಲ ಕರ್ಮಗಳನ್ನೂ ಬಿಟ್ಟು ಕುಳಿತುಕೊಳ್ಳುವದೂ (ಕರ್ಮಯೋಗಶ್ಚ) ತನ್ನ ತನ್ನ ಕರ್ಮವನ್ನು ತಾನು ಮಾಡುವದೂ (ಉಭೌ) ಎರಡೂ (ನಿಃಶ್ರೇಯಸಕರೌ) ಜ್ಞಾನವನ್ನು ಹುಟ್ಟಿಸುವದ ಮೂಲಕ ಮೋಕ್ಷಕ್ಕೆ ಸಾಧನಗಳೆ ಆದರೂ (ತಯೋಸ್ತು) ಅವೆರಡ ರಲ್ಲಿ (ಕರ್ಮಸಂನ್ಯಾಸಾತ್) ಕರ್ಮಗಳನ್ನೆಲ್ಲ ಬಿಟ್ಟು ಕುಳಿತುಕೊಳ್ಳುವ ಬರೀ ಸಂನ್ಯಾಸಕ್ಕಿಂತ (ಕರ್ಮಯೋಗಃ) ತನ್ನ ತನ್ನ ಕರ್ಮವನ್ನು ತಾನ ಮಾಡುವದು (ವಿಶಿಷ್ಯತೇ) ಹೆಚ್ಚು ಮೇಲು

ಏಕೆಂದರೆ —

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ**
**॥ ೩ ॥**

ಕರ್ಮಗಳನ್ನು ಬಿಡುವದು ಹೆಚ್ಚಿನದಾದರೂ (ಯಃ) ತನ್ನ ಕರ್ಮ ಗಳನ್ನು ತಾನು ಮಾಡುವ ಯಾವನು (ನ ದ್ವೇಷ್ಟಿ) ತನ್ನ ಆ ಕರ್ಮ ಗಳು ತನ್ನನ್ನು ಕಟ್ಟಿನೊಳಗೆ ಸಿಕ್ಕಿಸುವವೆಂದು ಅವುಗಳ ಮೇಲೆ ಹಗೆತನವನ್ನು ಮಾಡುವದಿಲ್ಲವೊ, ಮತ್ತು (ನ ಕಾಂಕ್ಷತಿ) ತನ್ನ ಆ ಕರ್ಮಗಳಿಗೆ ಫಲವಾಗಿ ಈ ಲೋಕದ ಮತ್ತು ಪರಲೋಕದ ಸುಖಗಳನ್ನು ಬಯಸುವದಿಲ್ಲವೊ (ಸಃ) ಅವನು (ನಿತ್ಯಸಂನ್ಯಾಸೀ) ಯಾವಾಗಲೂ ಸಂನ್ಯಾಸಿಯೆಂದೇ (ಜ್ಞೇಯಃ) ತಿಳಿಯಲ್ಪಡತಕ್ಕವನು (ಹಿ) ಏಕೆಂದರೆ (ಮಹಾಬಾಹೋ) ಅರ್ಜುನನೆ, ಕೇಳು. (ನಿರ್ದ್ವಂದ್ವಃ) ವರ್ಣಧರ್ಮಗಳು ಕಟ್ಟಿನೊಳಕ್ಕೆ ಸಿಕ್ಕಿಸುವವೆಂಬ ಹಗೆತನವಾಗಲಿ ಫಲವನ್ನು ಕೊಡುವವೆಂಬ ಪ್ರೇಮವಾಗಲಿ ಇಲ್ಲದವನ (ಸುಖಂ) ಕಷ್ಟವಿಲ್ಲದೆ ಕರ್ಮಗಳನ್ನು ಬಿಟ್ಟಿರುವ ಸಂನ್ಯಾಸಿಯಂತೆಯೇ

---

* " ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ " ಈ ಬ್ರಹ್ಮಪ್ರಾಪ್ತಿಯನ್ನು ಬಯಸುವವರೇ ಸಂನ್ಯಾಸಿಗಳಾಗುತ್ತಾರೆ. -ಶ್ರು.

(ಬಂಧಾತ್) ಕರ್ಮಗಳ ಕಟ್ಟಿನಿಂದ (ಪ್ರಮುಚ್ಯತೇ) ಬಿಡುಗಡೆಯನ್ನು ಹೊಂದುತ್ತಾನೆ

ಕರ್ಮಗಳನ್ನು ಮಾಡುವದು, ಬಿಡುವದು – ಇವೆರಡೂ ಒಂದಕ್ಕೊಂದು ವಿರೋಧವಾದ್ದರಿಂದ ಫಲವೂ ವಿರೋಧವಾಗಬೇಕೇ ಹೊರತು ಎರಡೂ ಒಳ್ಳೆಯವಾಗಿಯೇ ಹೇಗೆ ಪರಿಣಮಿಸುವವೆಂದರೆ —

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥ ೪ ॥**

ನೀನು ಬರೀ ಸಂನ್ಯಾಸದ ಮತ್ತು ಕರ್ಮದ ವಿಷಯವನ್ನು ಕೇಳಿದೆ ಬರೀ ಸಂನ್ಯಾಸದಿಂದ ಪ್ರಯೋಜನವಿಲ್ಲವೆಂದು ಮೊದಲೇ (೩–೪) ಹೇಳಿದ್ದೇನೆ ಆದ್ದರಿಂದಲೇ ಸಂನ್ಯಾಸಕ್ಕಿಂತ ಕರ್ಮವು ಮೇಲೆಂದು ಈಗ ಹೇಳಿದೆನು. ಇನ್ನು ಎರಡಕ್ಕೂ ಫಲವು ಒಂದೇ ಎಂದು ಹೇಳಿದೆನಷ್ಟೆ. ಅದು ಬರೀ ಸಂನ್ಯಾಸಕ್ಕೂ ಕರ್ಮಕ್ಕೂ ಸೇರಿದ ಮಾತಲ್ಲ ಸಂನ್ಯಾಸವು ತನ್ನ ಫಲವನ್ನು ಕೊಡಬೇಕಾದರೆ ಬರೀ ಸಂನ್ಯಾಸವಾಗಿರದೆ ಧ್ಯಾನ ಮೊದಲಾದ ಯೋಗಸಾಧನಗಳಿಂದ ಕೂಡಿರಬೇಕು. ಕರ್ಮವು ಬರೀ ಕರ್ಮವಾಗಿರದೆ ಈಶ್ವರಪ್ರೀತ್ಯರ್ಥವಾಗಿ ಮಾಡುವ ಕರ್ಮಯೋಗವಾಗಿರಬೇಕು ಹೀಗಾದರೆ ಇವೆರಡೂ ಒಂದಕ್ಕೊಂದು ಸಂಬಂಧಪಟ್ಟು ಒಂದೇ ಫಲವನ್ನು ಕೊಡುವವು ಜ್ಞಾನವೇ ಆ ಫಲ ಆ ಜ್ಞಾನಕ್ಕೆ ಧ್ಯಾನ ಮೊದಲಾದವು ಸಮೀಪದ ಸಾಧನ. ಆದ್ದರಿಂದ ಉಪಚಾರದಿಂದ ಅವುಗಳನ್ನು ಜ್ಞಾನವೆಂದು ಕರೆಯುವದೂ ಉಂಟು ಆ ಜ್ಞಾನವನ್ನು ಸಾಂಖ್ಯವೆಂದು, ಕರೆಯುತ್ತಾರೆ. ಕರ್ಮಯೋಗವು ಅದರದೇ ಬಹಿರಂಗಸಾಧನ (ಸಾಂಖ್ಯಯೋಗೌ) ಕರ್ಮಗಳನ್ನು ಬಿಟ್ಟು ಸಂನ್ಯಾಸಿಯಾಗಿ ಅಂತರಂಗಸಾಧನಗಳನ್ನು ಮಾಡುವ ಸಾಂಖ್ಯವೆಂಬ ಸ್ಥಿತಿಯೂ ಕರ್ಮಗಳನ್ನು ಮಾಡುತ್ತ ಬಹಿರಂಗ ಸಾಧನವಾಗಿ ಸಮತ್ವಬುದ್ಧಿ ಮೊದಲಾದವುಗಳನ್ನು ಹೊಂದಿರುವ ಯೋಗವೆಂಬ ಸ್ಥಿತಿಯೂ ಎರಡೂ (ಪೃಥಕ್) ಬೇರೆಬೇರೆಯೆಂದು

(ಬಾಲಾಃ) ತಿಳಿಯದವರು (ಪ್ರವದಂತಿ) ಹೇಳುತ್ತಾರೆ (ನ ಪಂಡಿತಾಃ) ಆತ್ಮಜ್ಞಾನವನ್ನು ತಿಳಿದವರೆಂದಿಗೂ ಹೇಳುವದಿಲ್ಲ ಅವೆರಡೂ ಒಕ್ಕೆಯವೆ ಎಂದು ನಾನೇಕೆ ಹೇಳಿದೆನೆಂದರೆ (ಏಕಮಪಿ) ಅವೆರಡರಲ್ಲೊಂದನ್ನಾದರೂ (ಸಮ್ಯಕ್) ಚೆನ್ನಾಗಿ (ಆಸ್ಥಿತಃ) ಆಚರಿಸುವವನು (ಉಭಯೋಃ) ಎರಡರ (ಫಲಂ) ಫಲವಾದ ಮೋಕ್ಷವನ್ನು (ವಿಂದತೇ) ಪಡೆಯುತ್ತಾನೆ.

ಒಂದನ್ನಾಚರಿಸಿದರೆ ಎರಡರ ಫಲವು ಹೇಗೆ ದೊರತೀತೆಂದರೆ :—

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥**

( ಸಾಂಖ್ಯೈಃ ) ಅಂತರಂಗಸಾಧನಗಳನ್ನು ಮಾತ್ರ ಮಾಡುವ ಸಂನ್ಯಾಸಿಗಳಿಂದ ( ಯತ್ ) ಯಾವ ( ಸ್ಥಾನಂ ) ಮೋಕ್ಷವೆಂಬ ಫಲವು (ಪ್ರಾಪ್ಯತೇ) ಪಡೆಯುವದಾಗುತ್ತದೊ (ತತ್) ಆ ಮೋಕ್ಷವೆಂಬ ಫಲವು ( ಯೋಗೈರಪಿ ) ಬಹಿರಂಗಸಾಧನವಾದ ಕರ್ಮಯೋಗವನ್ನು ಮಾಡುವವರಿಂದಲೂ ( ಗಮ್ಯತೇ ) ಪಡೆಯುವದಾಗುತ್ತದೆ ( ಸಾಂಖ್ಯಂ ಚ ) ಅಂತರಂಗಸಾಧನವನ್ನು ಮಾತ್ರ ಮಾಡುವ ಸಂನ್ಯಾಸವನ್ನೂ [ಯೋಗಂ ಚ ] ಬಹಿರಂಗಸಾಧನವಾದ ಕರ್ಮಯೋಗವನ್ನು ಮಾಡುವದನ್ನೂ [ ಏಕಂ ] ಒಂದೇ ಆಗಿ [ ಯಃ ] ಯಾವನು [ ಪಶ್ಯತಿ ] ನೋಡುತ್ತಾನೊ [ಸಃ] ಅವನು [ಪಶ್ಯತಿ] ನಿಜವನ್ನು ನೋಡುತ್ತಾನೆ ಇವೆರಡೂ ಒಂದಕ್ಕೊಂದು ಸಂಬಂಧವಿಲ್ಲದ ಬಿಡಿಬಿಡಿಯಾದವುಗಳಲ್ಲ ಅಂತರಂಗ ಸಾಧನಗಳನ್ನು ಮಾತ್ರ ಇಟ್ಟುಕೊಂಡಿರುವ ಸಂನ್ಯಾಸಿಗಳು ಈ ಜನ್ಮದಲ್ಲಿ ಅಲ್ಲದಿದ್ದರೆ ಹಿಂದಿನ ಜನ್ಮದಲ್ಲಿಯಾದರೂ ಬಹಿರಂಗಸಾಧನಗಳನ್ನು ನಡೆಸಿ ಚಿತ್ತಶುದ್ಧಿಯನ್ನು ಪಡೆದವರಾಗಿರುವರು ಈಗ ನೀರಿನ ಸಮೃದ್ಧಿ ಇರುವ ಕಡೆ ಹಿಂದೆ ಮಳೆಯಾಗಿರುವದನ್ನು ಊಹಿಸಬಹುದಾಗಿರುವಂತೆ ಈಗ ಚಿತ್ತಶುದ್ಧಿಯಾಗಿರುವವರನ್ನು ಕಂಡರೆ ಅವರು ಹಿಂದೆ ಕರ್ಮಯೋಗವನ್ನು ಮಾಡಿದವರೆಂದೂಹಿಸಬಹುದು ಇನ್ನು ಈಗ ಬಹಿ

ರಂಗಸಾಧನವಾದ ಕರ್ಮಯೋಗವನ್ನು ಮಾಡುವವರು ಈ ಜನ್ಮದಲ್ಲಿ ಅಲ್ಲದಿದ್ದರೆ ಮುಂದಿನ ಜನ್ಮದಲ್ಲಿ ಆದರೂ ಚಿತ್ತಶುದ್ಧಿಯನ್ನು ಹೊಂದಿ ಅಂತರಂಗಸಾಧನವನ್ನು ನಡೆಸಿ ಮೋಕ್ಷವನ್ನು ಪಡೆಯುವರು. ಆಕಾಶ ದಲ್ಲಿ ಮೋಡಗಟ್ಟಿರುವದನ್ನು ನೋಡಿ ಮುಂದಿನ ಮಳೆಯನ್ನೂಹಿಸು ವಂತೆ ಈ ಕರ್ಮಯೋಗವು ಪರಿಪಕ್ವವಾಗಿ ಸಾಂಖ್ಯಕ್ಕೆ ತಿರುಗುವದ ನ್ನೂಹಿಸಬಹುದು ಹೀಗೆ ಯೋಗವೂ ಸಾಂಖ್ಯವೂ ಪರಮಾರ್ಥ ಸಾಧನೆಯ ಪೂರ್ವಭಾಗವೂ ಉತ್ತರಭಾಗವೂ ಇದ್ದಂತೆ

ಬರೀ ಸಂನ್ಯಾಸಕ್ಕಿಂತ ಕರ್ಮಯೋಗವೇ ಮೇಲೆಂದೇಕೆ ಹೇಳಿ ದೆನೆಂದರೆ —

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥ ೬ ॥**

(ಮಹಾಬಾಹೋ) ಅರ್ಜುನನೆ, ಕೇಳು (ಸಂನ್ಯಾಸಸ್ತು) ನಿಜ ವಾದ ಸಂನ್ಯಾಸವಾದರೊ (ಅಯೋಗತಃ) ಕರ್ಮಯೋಗದ ಸಹಾಯ ವಿಲ್ಲದೆ ( ಆಪ್ತುಂ ) ಪಡೆಯುವದಕ್ಕೆ ( ದುಃಖಂ ) ಕಷ್ಟವು. ಕರ್ಮ ಗಳನ್ನು ಮಾಡುವದರಿಂದ ಚಿತ್ತಶುದ್ಧಿಯಾಗಿ ವೈರಾಗ್ಯವು ತೋರಿಕೊಂ ಡಾಗ ಕರ್ಮಗಳು ತಮ್ಮಷ್ಟಕ್ಕೆ ತಾವೇ ಹಿಂದೆ ನಿಲ್ಲುವದೇ ಗಟ್ಟಿಯಾದ ಸಂನ್ಯಾಸವಾಗುವದೇ ಹೊರತು ಹಾಗಾಗದೆ ಬರೀ ಸಂನ್ಯಾಸಿಯಾದ ವನಿಗೆ – ಈಗ ವರ್ಣಧರ್ಮಗಳನ್ನು ಮಾಡುವ ಅಧಿಕಾರವಿಲ್ಲ. ಹಿಂದೆ ಅವುಗಳನ್ನು ಮಾಡಿ ಚಿತ್ತಶುದ್ಧಿಯನ್ನು ಪಡೆದಿಲ್ಲವಾದ್ದರಿಂದ ಈಗ ಸಂನ್ಯಾಸಧರ್ಮವಾದ ಧ್ಯಾನ ಮೊದಲಾದ ಅಂತರಂಗಸಾಧನಗಳನ್ನು ಮಾಡುವದು ಸಾಧ್ಯವಾಗುವದಿಲ್ಲ. — ಹೀಗೆ ಅವನು ಎರಡೂ ಕೆಟ್ಟ ಕುರುಡದಾಸನಾಗುತ್ತಾನೆ. ನಿಷ್ಕಾಮಕರ್ಮದಲ್ಲಿಯೂ ವಿರಕ್ತಿಯು ಕಂಡರೂ ಅದು ಎಳೆಯದಾಗಿರುವದು ಸಂನ್ಯಾಸವಾಗುವದಕ್ಕೆ ವಿರ ಕ್ತಿಯು ಬಲಿತಿರಬೇಕು. ಆದ್ದರಿಂದ ವೈರಾಗ್ಯವನ್ನು ಬಲಿಸುವ ಕರ್ಮ ಯೋಗವಿಲ್ಲದೆ ಸಂನ್ಯಾಸವು ದಕ್ಕುವದಿಲ್ಲ. ಇನ್ನು ( ಯೋಗಯುಕ್ತಃ ) ಯಾವ ಬಯಕೆಯೂ ಇಲ್ಲದೆ ಕರ್ಮಗಳನ್ನು ಮಾಡುವವನು, ತನ್ನ

ಕರ್ಮವನ್ನು ಈಶ್ವರನಿಗೊಪ್ಪಿಸಿ [ ಮುನಿಃ ] ಅಂತರಂಗಸಾಧನಗಳಾದ ಧ್ಯಾನ ಮೊದಲಾದವುಗಳನ್ನೂ ಮಾಡಿಕೊಂಡು [ ಬ್ರಹ್ಮ ] ಆತ್ಮಜ್ಞಾನ ನಿಷ್ಠೆಯ ರೂಪವಾದ ಸಂನ್ಯಾಸವನ್ನು [ ನ ಚಿರೇಣ ] ತಡವಿಲ್ಲದೆ [ ಅಧಿ ಗಚ್ಛತಿ ] ಹೊಂದುತ್ತಾನೆ

ಕರ್ಮಯೋಗದ ಕರ್ಮವು ಅಂಟದಿರುವದಕ್ಕೆ ಕಾರಣವೇನೆಂದರೆ.—

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥**

( ಯೋಗಯುಕ್ತಃ ) ಸಮತ್ವಬುದ್ಧಿಯಿಂದ ಕೂಡಿದವನಾಗಿಯೂ ( ವಿಶುದ್ಧಾತ್ಮಾ ) ಆದ್ದರಿಂದಲೇ ರಜೋಗುಣವನ್ನೂ ತಮೋಗುಣ ವನ್ನೂ ಗೆದ್ದು ಶುದ್ಧವಾದ ಮನಸ್ಸುಳ್ಳವನಾಗಿಯೂ ( ವಿಜಿತಾತ್ಮಾ ) ದೇಹವನ್ನು ತನ್ನ ಹಿಡಿತವಲ್ಲಿಟ್ಟುಕೊಂಡಿರುವವನಾಗಿಯೂ ( ಜಿತೇಂ ದ್ರಿಯಃ) ಇಂದ್ರಿಯಗಳನ್ನೆಲ್ಲ ತಾನು ಹೇಳಿದಂತೆ ಕೇಳುವ ಹಾಗೆ ಮಾಡಿ ಕೊಂಡಿರುವವನಾಗಿಯೂ ( ಸರ್ವಭೂತಾತ್ಮಭೂತಾತ್ಮಾ ) ಚತುರ್ಮುಖ ಬ್ರಹ್ಮನನ್ನು ಮೊದಲು ಮಾಡಿಕೊಂಡು ಒಂದು ಮೋಟುಮರದವರೆಗೆ ಇರುವಂಥ ಎಲ್ಲ ವಸ್ತುಗಳಿಗೂ ಆತ್ಮಭೂತವಾದಂಥ ಅಂತರಾತ್ಮವುಳ್ಳ ವನಾಗಿಯೂ ಇರುವವನು ( ಕುರ್ವನ್ನಪಿ ) ಜನರಿಗೆ ಮೇಲಪಜ್ಕ್ತಿ ಗಾಗಿ ಮಾಡುತ್ತಿದ್ದರೂ (ನ ಲಿಪ್ಯತೇ) ಅದರ ಕಟ್ಟಿಗೊಳಗಾಗುವದಿಲ್ಲ

ನಿಜವಾಗಿ ಅವನು ಮಾಡುವದೂ ಇಲ್ಲ. ಅದು ಹೇಗೆಂದರೆ —

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥ ೮॥**

**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥**

(ತತ್ತ್ವವಿತ್) ಆತ್ಮಸ್ವರೂಪವನ್ನು ಬಲ್ಲ ಮತ್ತು ( ಯುಕ್ತಃ ) ಮನಸಿನ ಸಮತ್ವವನ್ನು ಮೈಗೂಡಿಸಿಕೊಂಡಿರುವ ಮನುಷ್ಯನು (ಪಶ್ಯನ್)

ನೋಡಿದರೂ [ ಶೃಣ್ವನ್ ] ಕೇಳಿದರೂ [ ಸ್ಪೃಶನ್ ] ಮುಟ್ಟಿದರೂ [ ಜಿಘ್ರನ್ ] ಮೂಸಿದರೂ [ ಅಶ್ನನ್ ] ತಿಂದರೂ [ ಗಚ್ಛನ್ ] ಹೋದರೂ [ಸ್ವಪನ್] ನಿದ್ರೆಮಾಡಿದರೂ [ಶ್ವಸನ್] ಉಸಿರು ಬಿಟ್ಟರೂ [ ಪ್ರಲಪನ್ ] ಮಾತಾಡಿದರೂ [ ವಿಸೃಜನ್ ] ಮಲಮೂತ್ರತ್ಯಾಗಮಾಡಿದರೂ [ ಗೃಹ್ಣನ್ ] ಪದಾರ್ಥವನ್ನು ಕೈಗೆ ತೆಗೆದುಕೊಂಡರೂ [ ಉನ್ಮಿಷನ್ ] ಕಣ್ಣು ಬಿಟ್ಟರೂ [ ನಿಮಿಷನ್ನಪಿ] ಕಣ್ಣು ಮುಚ್ಚಿದರೂ ಕೂಡ [ ಇಂದ್ರಿಯಾಣಿ ] ಕಣ್ಣು, ಕಿವಿ–ಮೊದಲಾದ ಇಂದ್ರಿಯಗಳು [ಇಂದ್ರಿಯಾರ್ಥೇಷು] ಕಣ್ಣು ನೋಡುವದರಲ್ಲಿಯೂ, ಕಿವಿ ಕೇಳುವದರಲ್ಲಿಯೂ ಚರ್ಮವು ಮುಟ್ಟುವದರಲ್ಲಿಯೂ, ಮೂಗು ಮೂಸುವದರಲ್ಲಿಯೂ, ನಾಲಿಗೆ ರುಚಿನೋಡವದರಲ್ಲಿಯೂ, ಕಾಲು ಹೋಗುವದರಲ್ಲಿಯೂ ವಾಕ್ಕು ಮಾತಾಡುವದರಲ್ಲಿಯೂ ಪಾಯು ಮಲವಿಸರ್ಜನೆಮಾಡುವದರಲ್ಲಿಯೂ ಕೈ ತೆಗೆದುಕೊಳ್ಳುವದರಲ್ಲಿಯೂ ಪ್ರಾಣ ಮೊದಲಾದ ಐದುವಾಯುಗಳು ಉಸಿರಾಡುವದರಲ್ಲಿಯೂ ನಾಗ ಮೊದಲಾದ ಐದು ಉಪವಾಯುಗಳು ಕಣ್ಣುಮುಚ್ಚುವದು, ಬಿಡುವದು–ಮೊದಲಾದ್ದರಲ್ಲಿಯೂ ಅಂತಃಕರಣವು ನಿದ್ರೆಮಾಡುವದರಲ್ಲಿಯೂ [ ವರ್ತಂತೇ ] ತೊಡಗಿವೆ [ ಇತಿ ] ಎಂದು [ ಧಾರಯನ್ ] ಮನಸ್ಸಿನಲ್ಲಿ ಎಣಿಸುತ್ತ [ ನೈವ ಕಿಂಚತ್ಕರೋಮಿ ] ಒಳಗಿರುವ ಚೈತನ್ಯಸ್ವರೂಪನಾದ ನಾನು ಏನನ್ನೂ ಮಾಡುವವನಲ್ಲ [ ಇತಿ ] ಎಂದು [ಮನ್ಯೇತ] ತಿಳಿದಿರುವನು.

ಅದು ಆತ್ಮನನ್ನು ಅಕರ್ತನೆಂದು ತಿಳಿದವರ ಮಾತಾಯಿತು. ಆ ಜ್ಞಾನವಿಲ್ಲದ ಕರ್ಮಯೋಗಿಗಳಾದರೂ,

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ |**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦ ॥**

[ಯಃ] ಯಾವನು [ಕರ್ಮಾಣಿ] ತಾನು ಮಾಡುವ ಎಲ್ಲ ಕರ್ಮಗಳನ್ನೂ [ ಬ್ರಹ್ಮಣಿ ] ಈಶ್ವರನಲ್ಲಿ [ ಆಧಾಯ ] ಸಮರ್ಪಣೆ ಮಾಡಿ [ಸಂಗಂ] ಫಲದ ಆಸಕ್ತಿಯನ್ನು [ತ್ಯಕ್ತ್ವಾ] ಬಿಟ್ಟು [ಕರೋತಿ] ಅರಸನಿಗೆ ಆಳು ಹೇಗೋ ಹಾಗೆ ಈಶ್ವರನಿಗೆ ದಾಸನಾಗಿ ದುಡಿಯುವೆನೆಂದು

ತಿಳಿದು ಮಾಡುತ್ತಾನೋ [ಸಃ] ಅವನು [ಅಂಭಸಾ] ನೀರಿನಿಂದ [ಪದ್ಮಪತ್ರಮಿವ] ಕಮಲದ ಎಲೆಯು ಹೇಗೆ ಅಂಟದೆ ಇರುವದೋ ಹಾಗೆ [ಪಾಪೇನ] ಪುಣ್ಯಪಾಪಕರ್ಮಗಳಿಂದ [ ನ ಲಿಪ್ಯತೇ ] ಸೋಂಕನ್ನು ಪಡೆಯುವದಿಲ್ಲ.

ಏಕೆಂದರೆ —

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥**

[ ಯೋಗಿನಃ ] ಜ್ಞಾನದ ಸಾಧನವಾಗಿ ನಿಷ್ಕಾಮ ಕರ್ಮವನ್ನು ಮಾಡುವವರು [ ಕೇವಲೈಃ ] ಇದು ನನ್ನದೆಂಬಭಿಮಾನವಿಲ್ಲದಿರುವಂಥ [ಕಾಯೇನ] ಶರೀರದಿಂದಲೂ [ಮನಸಾ] ಮನಸ್ಸಿನಿಂದಲೂ [ಬುದ್ಧ್ಯಾ] ಬುದ್ಧಿಯಿಂದಲೂ [ಇಂದ್ರಿಯೈರಪಿ] ಇಂದ್ರಿಯುಗಳಿಂದಲೂ ಕೂಡ [ಸಂಗಂ] ತಮಗೇನಾದರೂ ಫಲವಾಗಬೇಕೆಂಬ ಆಶೆಯನ್ನು [ತ್ಯಕ್ತ್ವಾ] ಬಿಟ್ಟು [ಆತ್ಮಶುದ್ಧಯೇ] ಈ ಕರ್ಮದಿಂದ ಈಶ್ವರನು ಸಂತೋಷಪಟ್ಟು ತಮ್ಮ ಮನಸ್ಸನ್ನು ಶುದ್ಧಗೊಳಿಸಲೆಂದು [ ಕರ್ಮ ] ಪುಣ್ಯಕರ್ಮಗಳನ್ನು [ಕುರ್ವಂತಿ] ಮಾಡುತ್ತಾರೆ. ಆದ್ದರಿಂದ ನೀನು ಅದಕ್ಕೇ ತಕ್ಕವನು. ನೀನು ಅದನ್ನು ಮಾಡು.

ಇನ್ನೂ ಏಕೆಂದರೆ —

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಂ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥**

[ ಯುಕ್ತಃ ] ನಾನು ಈಶ್ವರನ ಪ್ರೀತಿಗಾಗಿ ಮಾಡುವವನೆಂಬ ಸಮಾಧಾನದಿಂದ ಕೂಡಿದವನು [ ಕರ್ಮಫಲಂ ] ಕರ್ಮದ ಫಲವನ್ನು [ತ್ಯಕ್ತ್ವಾ] ತೊರೆದು [ನೈಷ್ಠಿಕೀಂ] ಕರ್ಮದಿಂದ ಚಿತ್ತಶುದ್ಧಿ, ಅದರಿಂದ ಜ್ಞಾನ, ಅದರಿಂದ ಸರ್ವಕರ್ಮಸಂನ್ಯಾಸಪೂರ್ವಕಜ್ಞಾನನಿಷ್ಠೆ – ಇವುಗಳನ್ನು ಪಡೆದು ಆ ನಿಷ್ಠೆಯಿಂದ ದೊರೆಯುವಂಥ [ ಶಾಂತಿಂ ] ಮೋಕ್ಷವನ್ನು [ ಆಪ್ನೋತಿ ] ಪಡೆಯುತ್ತಾನೆ. [ ಅಯುಕ್ತಃ ] ನಾನು ಈಶ್ವರಪ್ರೀತಿ

ಗಾಗಿ ಮಾಡುವವನೆಂಬ ಸಮಾಧಾನವಿಲ್ಲದವನು [ ಕಾಮಕಾರೇಣ ] ಬಯಕೆಯ ಪ್ರೇರಣೆಯಿಂದ [ ಫಲೇ ] ಆ ಕರ್ಮದ ಫಲದಲ್ಲಿ [ಸಕ್ತಃ] ಆಸಕ್ತನಾಗಿ [ ನಿಬಧ್ಯತೇ ] ಚೆನ್ನಾಗಿ ಕಟ್ಟಿಗೊಳಗಾಗುತ್ತಾನೆ. ಆದ್ದರಿಂದ ನೀನು ಈಶ್ವರಪ್ರೀತಿಗಾಗಿ ಮಾಡುವವನಾಗು.

ಶುದ್ಧಚಿತ್ತನಾಗಿ ಯಥಾರ್ಥವನ್ನು ನೋಡುವವನಿಗೆ ಯಾವ ಕರ್ಮವೂ ಇಲ್ಲದಿರುವದು ಹೇಗೆಂದರೆ —

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥**

(ದೇಹೀ) ದೇಹವುಳ್ಳವನಂತೆ ಕಾಣಬರುತ್ತಿರುವ ಜ್ಞಾನಿಯು (ವಶೀ) ದೇಹೇಂದ್ರಿಯಗಳನ್ನೆಲ್ಲ ಹಿಡಿತದಲ್ಲಿಟ್ಟುಕೊಂಡಿರುವವನಾಗಿ( ಸರ್ವಕರ್ಮಾಣಿ) ಎಲ್ಲ ಕರ್ಮಗಳನ್ನೂ ( ಮನಸಾ ) ಅವೆಲ್ಲ ದೇಹೇಂದ್ರಿಯಗಳಿಂದ ನಡೆಯತಕ್ಕವುಗಳೇ ಹೊರತು ತನಗೆ ಸಂಬಂಧಪಟ್ಟವುಗಳಲ್ಲವೆಂಬ ವಿವೇಕಬುದ್ಧಿಯಿಂದ ( ಸಂನ್ಯಸ್ಯ ) ಆ ಕರ್ಮಗಳನ್ನೆಲ್ಲ ಅಕರ್ಮಗಳನ್ನಾಗಿ ನೋಡುವ ದೃಷ್ಟಿಯಿಂದ ತೊರೆದು ( ನೈವ ಕುರ್ವನ್ ) ತಾನು ಏನೂ ಮಾಡದೆ ಮತ್ತು ( ನ ಕಾರಯನ್ ) ದೇಹೇಂದ್ರಿಯಾದಿಗಳಿಂದ ಮಾಡಿಸದೆ ( ನವದ್ವಾರೇ ) ಕಿವಿಗಳೆರಡು, ಕಣ್ಣುಗಳೆರಡು, ಮೂಗಿನ ಸೊಳ್ಳೆಗಳೆರಡು, ಬಾಯಿ ಒಂದು – ಹೀಗೆ ಮೇಲಿರುವ ಏಳೂ ಮತ್ತು ಮೂತ್ರದ್ವಾರ ಒಂದು, ಮಲದ್ವಾರ ಒಂದು – ಹೀಗೆ ಕೆಳಗಿರುವ ಎರಡೂ ಸೇರಿ ಒಂಭತ್ತು ಬಾಗಿಲುಗಳಿರುವ (ಪುರೇ * ) ಆತ್ಮನೆಂಬ ಸ್ವಾಮಿಯ ರಾಜಧಾನಿಯಾದ ಶರೀರವೆಂಬ ಪಟ್ಟಣದಲ್ಲಿ [ಸುಖಂ] ಶರೀರದ, ವಾಕ್ಕಿನ ಮತ್ತು ಮನಸ್ಸಿನ ವ್ಯಾಪಾರವಿಲ್ಲದೆ ಪ್ರಸನ್ನವಾದ ಮನಸ್ಸಿನಿಂದ ಹಾಯಾಗಿ [ಆಸ್ತೇ] ಇರುವನು , " ಜ್ಞಾನಿಯಂತೆ ಅಜ್ಞಾನಿಯೂ ದೇಹದಲ್ಲಿಯೇ ಇರುವನಲ್ಲ ? " ಎಂದರೆ ನೋಡುವವರ ಕಣ್ಣಿಗ ಇಬ್ಬರೂ ದೇಹದಲ್ಲಿರುವವರೇ ಸರಿ ಅಜ್ಞಾನಿಯು ತನ್ನನ್ನು ದ ಹ ವೊ ವ

---

* " ಯದಿದಮಸ್ಮಿನ್ ಬ್ರಹ್ಮಪುರೇ " ಈ ಬ್ರಹ್ಮನ ಪಟ್ಟಣವಾದ ಶರೀರದಲ್ಲಿ – ಶ್ರು.

ಲಾದವುಗಳಿಂದ ಕೂಡಿದವನೆಂದು ತಿಳಿದುಕೊಂಡು ತಾನು ಮನೆಯ ಲ್ಲಿಯೋ ? ಮಠದಲ್ಲಿಯೋ ಇರುವವನೆಂದು ತಿಳಿಯುವನು ಜ್ಞಾನಿಯು ದೇಹಾದಿಗಳೆಲ್ಲ ಬರೀ ತೋರಿಕೆಯುವುಗಳೆಂದೂ ದೇಹದೊಳಗಿರುವ ಚೈತನ್ಯವು ತಾನೆಂದೂ ತನ್ನನ್ನು ದೇಹಾದಿಗಳಿಂದ ಬಿಡಿಸಿಕೊಂಡು ತಿಳಿಯುವನು

ಆತ್ಮನು ಏನನ್ನೂ ಮಾಡದೆ ಮತ್ತು ಮಾಡಿಸದೆ ಇದ್ದರೆ ಮಾಡು ವವು ಮತ್ತಾವುದೆಂದರೆ —

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪ ॥**

(ಪ್ರಭುಃ) ಸರ್ವಸ್ವಾಮಿಯಾದ ಆತ್ಮನು (ಲೋಕಸ್ಯ) ಲೋಕದ ಲ್ಲಿರುವ ಪ್ರಾಣಿಗಳಿಗೆ (ಕರ್ತೃತ್ವಂ) ನೀನು ಈ ಕಾರ್ಯವನ್ನು ಮಾಡೆಂದು ಹೇಳುವವರಮೂಲಕ ನಾನು ಮಾಡುವವನೆಂಬುದನ್ನು (ನ ಸೃಜತಿ) ಹುಟ್ಟಿ ಸುವದಿಲ್ಲ- ಇದರಿಂದ ಆತ್ಮನು ಏನನ್ನೂ ಮಾಡಿಸುವವನಲ್ಲವೆಂದಾ ಯಿತು. ಇನ್ನು ಅವನು (ಕರ್ಮಾಣಿ) ಉಪ್ಪರಿಗೆಯ ಮನೆ, ಗಾಡಿ-ಮೊದ ಲಾದ ಸುಖಸಾಧನಗಳನ್ನೂ (ನ) ಹುಟ್ಟಿಸುವದಿಲ್ಲ ಇದರಿಂದ ಆತ್ಮನು ಏನನ್ನೂ ಮಾಡುವವನಲ್ಲವೆಂದಾಯಿತು ಇದಲ್ಲದೆ (ಕರ್ಮಫಲ ಸಂಯೋಗಂ) ಉಪ್ಪರಿಗೆಯ ಮನೆ ಮೊದಲಾದವುಗಳನ್ನು ಮಾಡಿದವ ರಿಗೂ ಅದರ ಫಲಕ್ಕೂ ಗಂಟುಬೀಳುವದನ್ನೂ (ನ) ಹುಟ್ಟಿಸುವದಿಲ್ಲ ಇವುಗಳಿಗೆಲ್ಲ ಕಾರಣವೇನೆಂದರೆ (ಸ್ವಭಾವಸ್ತು) ಪರಮೇಶ್ವರನ ಮಾಯಾ ಶಕ್ತಿಯು (ಪ್ರವರ್ತತೇ) ಮಾಡುತ್ತದೆ.

ಹಾಗಾದರೆ ಕರ್ಮಗಳನ್ನು ಈಶ್ವರನಿಗೆ ' ಅರ್ಪಣಮಾಡಿದೆವೆಂದು ಹೇಳಿ ಫಲಗಳನ್ನು ಪಡೆಯುವ ವ್ಯವಹಾರವಿದೆಯಲ್ಲ ! ಎಂದರೆ .—

**ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥ ೧೫ ॥**

" ಈಶ್ವರನು ಜೀವನಿಂದ ಒಳ್ಳೆ ಕರ್ಮವನ್ನು ಮಾಡಿಸಿ ಏಳಿಗೆಯನ್ನು ಕೊಡುವನು " ಎಂದು ಮುಂತಾಗಿ ಹೇಳುವದು ವ್ಯವಹಾರದೃಷ್ಟಿಯ ಮಾತು ಪರಮಾರ್ಥದೃಷ್ಟಿಯಿಂದ ನೋಡಿದರೆ ( ವಿಭುಃ ) ವ್ಯಾಪಕನಾಗಿ ಅಖಂಡನಾಗಿರುವ ಆತ್ಮನು (ಕಸ್ಯಚಿತ್) ಯಾವನೊಬ್ಬ ಭಕ್ತನ ( ಪಾಪಂ ) ಕೆಟ್ಟ ಕರ್ಮವನ್ನೂ ( ನ ಚೈವ ) ತೆಗೆದುಕೊಳ್ಳುವದಿಲ್ಲ ( ಸುಕೃತಂ ) ಒಳ್ಳೆ ಕರ್ಮವನ್ನೂ ( ನ ಚೈವ ) ತೆಗೆದುಕೊಳ್ಳುವದಿಲ್ಲ (ಜ್ಞಾನಂ) ಜನರ ವಿವೇಕದ ಬುದ್ಧಿಯು (ಅಜ್ಞಾನೇನ) ಪರಮಾತ್ಮಸ್ವರೂಪವನ್ನು ತಿಳಿಯದೆ ಇರುವಿಕೆಯೆಂಬ ತಮೋಗುಣದ ಮುಸುಕಿನಿಂದ (ಆವೃತಂ) ಸುತ್ತಿಕೊಂಡಿರುವದು. (ತೇನ) ಅದರಿಂದ (ಜಂತವಃ) ಎಲ್ಲ ಪ್ರಾಣಿಗಳೂ (ಮುಹ್ಯಂತಿ) ನಾವು ನಮ್ಮ ಕರ್ಮಗಳನ್ನು ಈಶ್ವರನಿಗೊಪ್ಪಿಸಿದೆವೆಂದೂ ಅವನಿಂದ ಫಲಗಳನ್ನು ಪಡೆದೆವೆಂದೂ ತಪ್ಪುತಿಳಿದು ಕೊಳ್ಳುತ್ತಾರೆ

ಈ ತಮೋಗುಣದ ಮುಸುಕು ಹೋಗುವ ಬಗೆ ಹೇಗೆಂದರೆ .—

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಞಾನಂ ಪ್ರಕಾಶಯತಿ ತತ್ಪರಮ್ ॥ ೧೬ ॥**

(ಯೇಷಾಂ) ಯಾವ ಸಾಧಕರ (ತತ್) ಆ (ಆತ್ಮನಃ) ತಮ್ಮ ( ಅಜ್ಞಾನಂ ) ಜ್ಞಾನವನ್ನು ಆವರಿಸಿಕೊಂಡಿರುವ ತಮೋಗುಣದ ಮುಸುಕು ( ಜ್ಞಾನೇನ ತು ) ದೇಹಾದಿಗಳಿಂದ ಆತ್ಮನನ್ನು ಬಿಡಿಸಿ ತಿಳಿಯುವಂಥ ವಿವೇಕಜ್ಞಾನದಿಂದ [ ನಾಶಿತಂ ] ಹೋಗಲಾಡಿಸಲ್ಪಟ್ಟಿದೆಯೋ ಎಂದರೆ ಯಾರು ತಮ್ಮ ಅಜ್ಞಾನವನ್ನು ಜ್ಞಾನದಿಂದ ಹೋಗಲಾಡಿಸಿಕೊಂಡಿದ್ದಾರೋ (ತೇಷಾಂ) ಅವರ (ತತ್) ಆ (ಜ್ಞಾನಂ) ಆತ್ಮಜ್ಞಾನವು (ಆದಿತ್ಯವತ್) ಸೂರ್ಯನು ಎಲ್ಲಾ ವಸ್ತುಗಳನ್ನೂ ಚೆನ್ನಾಗಿ ಕಾಣುವ ಹಾಗೆ ಮಾಡುವಂತೆ ( ಪರಂ ) ಪರಬ್ರಹ್ಮಸ್ವರೂಪವನ್ನು (ಪ್ರಕಾಶಯತಿ) ಬೆಳಗುವದು

ಆ ಜ್ಞಾನದ ಫಲವೇನೆಂದರೆ .—

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ |**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ || ೧೭ ||**

( ತದ್ಬುದ್ಧಯಃ ) ತಮ್ಮ ಬುದ್ಧಿಯನ್ನು ಅಜ್ಞಾನಿಗಳಂತೆ ಹೊರಗಣ ವಿಷಯಗಳಲ್ಲಿಡಹೋಗದೆ ಬ್ರಹ್ಮದಲ್ಲಿಯೇ ಮೀಸಲಾಗಿಟ್ಟವರಾಗಿಯೂ (ತದಾತ್ಮಾನಃ) ಅಜ್ಞಾನಿಗಳಂತ ದೇಹ ಮೊದಲಾದುವುಗಳನ್ನು ತಮ್ಮ ಆತ್ಮವೆಂದು ತಿಳಿಯದೆ ಬ್ರಹ್ಮವನ್ನೆ ತಮ್ಮ ಆತ್ಮವೆಂದು ತಿಳಿದವರಾಗಿಯೂ ( ತನಿಷ್ಠಾಃ ) ಅಜ್ಞಾನಿಗಳಂತೆ ಬೇರೆ ಬೇರೆ ಕರ್ಮಗಳಲ್ಲಿ ತೊಡಗುವವರಾಗದೆ ಬ್ರಹ್ಮದಲ್ಲಿಯೆ ಮುಳಗುವವರಾಗಿಯೂ ( ತತ್ಪರಾಯಣಾಃ ) ಅಜ್ಞಾನಿಗಳಂತೆ ಸ್ವರ್ಗ ಮೊದಲಾದ ಗತಿಗಳಿಗೆ ಬಾಯಿನೀರು ಸುರಿಸದೆ ಬ್ರಹ್ಮವನ್ನೆ ಹೆಚ್ಚಿನ ಗತಿಯೆಂದು ತಿಳಿದವರಾಗಿಯೂ, ಇರುವ ಆ ಜ್ಞಾನಿಗಳು ( ಜ್ಞಾನನಿರ್ಧೂತಕಲ್ಮಷಾಃ ) ಮತ್ತೆ ಹುಟ್ಟುಸಾವುಗಳನ್ನು ಕೊಡುವಂಥ ಪುಣ್ಯಪಾಪಗಳನ್ನೆಲ್ಲ ಕರ್ಮವನ್ನು ಅಕರ್ಮವಾಗಿ ನೋಡುವ ಜ್ಞಾನದಿಂದ ಸುಟ್ಟುಹಾಕಿರುವದರಿಂದ ( ಅಪುನರಾವೃತ್ತಿಂ ) ಮತ್ತೆ ಹುಟ್ಟದೆ ಇರುವಂಥ ಸ್ಥಿತಿಯನ್ನು ( ಗಚ್ಛಂತಿ ) ಪಡೆಯುತ್ತಾರೆ

ಅವರು ಪರಮಾತ್ಮಸ್ವರೂಪವನ್ನು ನೋಡುವ ಬಗೆ ಹೇಗೆಂದರೆ :—

**ವಿಧ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ |**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ || ೧೮ ||**

[ ವಿದ್ಯಾವಿನಯಸಂಪನ್ನೇ ] ಒಳ್ಳೆ ವಿದ್ಯಾವಂತನೂ ಅಹಂಕಾರವಿಲ್ಲದವನೂ ಆದ [ಬ್ರಾಹ್ಮಣೇ] ಸಾತ್ತ್ವಿಕನಾದ ಬ್ರಾಹ್ಮಣನಲ್ಲಿಯೂ [ ಗವಿ ] ಬ್ರಾಹ್ಮಣನಂತೆ ಸಂಸ್ಕಾರವಿಲ್ಲದೆ ರಜೋಗುಣದಿಂದಿರುವ ಆಕಳಿನಲ್ಲಿಯೂ [ಹಸ್ತಿನಿ] ಕೇವಲ ತಮೋಗುಣದಿಂದ ಕೂಡಿದ ಆನೆಯಲ್ಲಿಯೂ ಮತ್ತು ಅದಕ್ಕಿಂತ ಕೀಳಾದ [ ಶುನಿ ಚೈವ ] ನಾಯಿಯಲ್ಲಿಯೂ [ಶ್ವಪಾಕೇ ಚ] ಆ ನಾಯಿಯನ್ನೂ ಬೇಯಿಸಿಕೊಂಡು ತಿನ್ನುವ ಹೊಲೆಯನಲ್ಲಿಯೂ [ಪಂಡಿತಾಃ] ಜ್ಞಾನಿಗಳು [ಸಮದರ್ಶಿನಃ] ಯಾವ ವಿಕಾರ

ವನ್ನೂ ಹೊಂದದೆ ಏಕರೀತಿಯಾಗಿರುವ ಸಮಸ್ವರೂಪವಾದ ಬ್ರಹ್ಮವನ್ನು ನೋಡುವರು ಎಂದರೆ ಪವಿತ್ರವಾದ ಗಂಗೆಯ ನೀರಿನಲ್ಲಾಗಲಿ ನಿಷಿದ್ಧವಾದ ಹೆಂಡದಲ್ಲಾಗಲಿ ಇನ್ನೂ ಕೀಳಾದ ಮೂತ್ರದಲ್ಲಾಗಲಿ ಪ್ರತಿಬಿಂಬಿಸಿರುವ ಸೂರ್ಯನಿಗ ಆ ಬೇರ ಬೇರೆ ನೀರುಗಳ ಸಂಬಂಧವು ಹೇಗಿಲ್ಲವೊ ಹಾಗೆ ಆ ಬ್ರಾಹ್ಮಣ ಮೊದಲಾದವರ ಗುಣದೋಷಗಳ ಸೋಂಕನ್ನು ಹೊಂದದೆ ಬ್ರಹ್ಮವು ಎಲ್ಲರಲ್ಲಿಯೂ ಸಮನಾಗಿರುವದೆಂದು ತಿಳಿಯುವರು.

ಒಳ್ಳೆಯದನ್ನೂ ಕೆಟ್ಟದನ್ನೂ ಸಮವಾಗಿ ಗೌರವಿಸುವದು ಪಾಪವಾದ್ದರಿಂದ ಅವರು ಸತ್ತಮೇಲೆ ಮತ್ತೆ ಹುಟ್ಟಬೇಕಾಗುವದಿಲ್ಲವೆ? ಎಂದರೆ:—

**ಇಹೈವ ತೈರ್ಜಿತಸ್ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥**

ಒಳ್ಳೆಯದನ್ನೂ ಕೆಟ್ಟದನ್ನೂ ಸಮವಾಗಿ ಗೌರವಿಸುವದು ದೇಹಾದಿಗಳ ವಿಷಯದಲ್ಲಿ ನಡೆದಾಗ ಅದು ಪಾಪ ಜ್ಞಾನಿಯು ಸಮವಾಗಿ ಗೌರವಿಸುವದು ದೇಹಾದಿಗಳನ್ನಲ್ಲ; ಒಳಗಿರುವ ಚೈತನ್ಯವನ್ನು. (ಯೇಷಾಂ) ಯಾರ (ಮನಃ) ಮನಸ್ಸು (ಸಾಮ್ಯೇ) ಸಮಸ್ವರೂಪವಾದ ಬ್ರಹ್ಮದಲ್ಲಿ (ಸ್ಥಿತಂ) ಇರುವದೊ (ತೈಃ) ಅವರಿಂದ (ಸರ್ಗಃ) ಹುಟ್ಟುವಿಕೆಯು (ಇಹೈವ) ಇಲ್ಲಿ ಬದುಕಿರುವಾಗಲೆ (ಜಿತಃ) ಗೆಲ್ಲಲ್ಪಟ್ಟಿರುವದು. (ಸಮಂ) ಎಲ್ಲರಲ್ಲಿಯೂ ಏಕರೂಪವಾಗಿರುವಂಥ (ಬ್ರಹ್ಮ) ಬ್ರಹ್ಮಚೈತನ್ಯವು (ನಿರ್ದೋಷಂ ಹಿ)* ಯಾವ ದೋಷವೂ ಇಲ್ಲದ್ದಲ್ಲವೆ? ಹೊಲೆಯರು ಮೊದಲಾದವರ ದೇಹ ಮೊದಲಾದವುಗಳನ್ನು ನೋಡಿ ಮೂಢರು ಆ ಬೇರೆ ಬೇರೆ ದೇಹ ಮೊದಲಾದವುಗಳಲ್ಲಿರುವ ದೋಷವನ್ನು ಕಂಡೂ ಅವನ್ನೇ ಆತ್ಮವೆಂದು ತಿಳಿಯುವರು. ಆದ್ದರಿಂದ ಅವರ ಆತ್ಮಕ್ಕೆ ದೋಷವುಂಟು ಜ್ಞಾನಿಗಳು ಆ ಬೇರೆಬೇರೆ ದೇಹಾದಿಗಳೆಲ್ಲಕ್ಕೂ ಒಳಗೆ ಯಾವ ಗುಣದೋಷಗಳನ್ನೂ ಅಂಟಿಸಿ

* "ಅಸಂಗೋಽಹ್ಯಯಂ ಪುರುಷಃ" ಬ್ರಹ್ಮವಸ್ತು ಗುಣದೋಷಗಳಿಲ್ಲದ್ದು—ಶ್ರು.

ಚೈತನ್ಯವನ್ನು ಆತ್ಮವೆಂದು ನೋಡುವದರಿಂದ ಅಲ್ಲಿ ಯಾವ ದೋಷಕ್ಕೂ ಅವಕಾಶವಿಲ್ಲ. (ತಸ್ಮಾತ್) ಆದ್ದರಿಂದ (ತೇ) ಅವರು, ಬ್ರಾಹ್ಮಣ ಮೊದಲಾದವರನ್ನು ನೋಡಿದರೂ (ಬ್ರಹ್ಮಣಿ) ಬ್ರಹ್ಮಸ್ವರೂಪದಲ್ಲಿಯೇ (ಸ್ಥಿತಾಃ) ಇರುವವರಾಗಿದ್ದಾರೆ

ಹೀಗೆ ಸಮಸ್ವರೂಪವಾದ ಬ್ರಹ್ಮವು ನಿರ್ದೋಷವಾದ್ದರಿಂದ —

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾ ಪ್ರಿಯಮ್ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦ ॥**

(ಸ್ಥಿರಬುದ್ಧಿಃ) ಸಮಸ್ತಪ್ರಾಣಿಗಳಲ್ಲಿಯೂ ಒಬ್ಬನೇ ಆತ್ಮನು ಸಮನಾಗಿ ಏಕನಾಗಿ ನಿರ್ದೋಷನಾಗಿರುವನೆಂದು ದೃಢನಿಶ್ಚಯವುಳ್ಳವನೂ (ಅಸಂಮೂಢಃ) ಇನ್ನೆಷ್ಟುಮಾತ್ರವೂ ದೇಹಾದಿಗಳನ್ನೆ ಆತ್ಮವೆಂದು ಮೋಹಗೊಳ್ಳದವನೂ (ಬ್ರಹ್ಮವಿತ್) ಬ್ರಹ್ಮವೇ ತನ್ನ ಆತ್ಮವೆಂದು ತಿಳಿದವನೂ (ಬ್ರಹ್ಮಣಿ ಸ್ಥಿತಃ) ಕರ್ಮ ಮೊದಲಾದವುಗಳ ಕಡೆಗೆ ಹೋಗದೆ ಬ್ರಹ್ಮದಲ್ಲಿಯೇ ಇರುವವನೂ ಆದ ಆ ಜ್ಞಾನಿಯು (ಪ್ರಿಯಂ) ಹಿತವೆಂದು ಎಲ್ಲರಿಗೂ ತಿಳಿದಿರುವ ವಸ್ತುವನ್ನು (ಪ್ರಾಪ್ಯ) ಪಡೆದಾಗ (ನ ಪ್ರಹೃಷ್ಯೇತ್) ಹಿಗ್ಗುವದೂ ಇಲ್ಲ. (ಅಪ್ರಿಯಂ) ಹಿತವಲ್ಲದ್ದೆಂದು ಎಲ್ಲರೂ ತಿಳಿದಿರುವ ವಸ್ತುವನ್ನು (ಪ್ರಾಪ್ಯ) ಪಡೆದಾಗ (ನ ಉದ್ವಿಜೇತ್ ಚ) ತಗ್ಗುವದೂ ಇಲ್ಲ ಹಿತವೆಂಬುವದೂ ಅಹಿತವೆಂಬುವದೂ ದೇಹಾದಿಗಳಿಗೆ ಸಂಬಂಧಿಸಿದ್ದೇ ಹೊರತು ಆತ್ಮನಿಗೆ ಸಂಬಂಧಿಸಿದ್ದಲ್ಲ. ಆ ದೇಹಾದಿಗಳಲ್ಲಿಲ್ಲದೆ ಆತ್ಮನಲ್ಲಿರುವ ಜ್ಞಾನಿಗೆ ಹಿಗ್ಗು ತಗ್ಗುಗಳಿಗೆ ಅವಕಾಶವಿಲ್ಲ

ಹೊರಗಣ ವಿಷಯಗಳಿಗೆ ಕಣ್ಣು ಹಾಕದೆ ಇರುವದರಿಂದ ಅಷ್ಟವ ಭಾಗಕ್ಕೆ ಸುಖವೇ ಇಲ್ಲವಾದೀತೆಂದರೆ .—

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥ ೨೧ ॥**

( ಬಾಹ್ಯಸ್ಪರ್ಶೇಷು ) ಹೊರಗಣ ವಿಷಯಗಳಲ್ಲಿ ( ಅಸಕ್ತಾತ್ಮಾ ) ಆಸಕ್ತಿಯಿಲ್ಲದ ಮನಸ್ಸುಳ್ಳ ಜ್ಞಾನಿಯು ( ಆತ್ಮನಿ ) ತನ್ನ ಆತ್ಮವಾದ

ಬ್ರಹ್ಮದಲ್ಲಿ (ಯತ್ಸುಖಂ) ಯಾವ ಸುಖವನ್ನು (ವಿಂದತಿ) ಪಡೆಯುತ್ತಾನೋ (ಬ್ರಹ್ಮಯೋಗಯುಕ್ತಾತ್ಮಾ) ವಿಷಯಗಳ ಸಂಬಂಧವಿಲ್ಲದೆ ಬ್ರಹ್ಮದ ಸಂಬಂಧದಿಂದ ಕೂಡಿದ ಮನಸ್ಸುಳ್ಳ (ಸಃ) ಆ ಜ್ಞಾನಿಯು (ಅಕ್ಷಯ್ಯಂ) ನಾಶರಹಿತವಾದಂಥ (ಸುಖಂ) ಆನಂದವನ್ನು (ಅಶ್ನುತೇ) ಪಡೆದುಕೊಳ್ಳುತ್ತಾನೆ. ಆದ್ದರಿಂದ ಎಂದಿಗೂ ಮುಕ್ತಾಗದಿರುವ ಈ ಬ್ರಹ್ಮಾನಂದವನ್ನು ಬಯಸುವವನು ಕ್ಷಣಿಕ ಸುಖವನ್ನು ಕೊಡುವ ವಿಷಯಗಳಿಂದ ಮನಸ್ಸನ್ನು ಹಿಮ್ಮೆಟ್ಟಿಸಬೇಕು.

ವಿಷಯಗಳಿಂದ ಮನಸ್ಸನ್ನು ಹಿಮ್ಮೆಟ್ಟಿಸಬೇಕಾದ್ದಕ್ಕೆ ಇನ್ನೂ ಒಂದು ಕಾರಣವೇನೆಂದರೆ —

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨ ॥**

(ಸಂಸ್ಪರ್ಶಜಾಃ) ವಿಷಯಗಳಿಗೂ ಇಂದ್ರಿಯಗಳಿಗೂ ಸಂಬಂಧವಾಗುವದರಿಂದ ಉಂಟಾಗುವ (ಭೋಗಾಃ) ಸುಖಗಳು (ಯೇ ಹಿ) ಏನೇನಿವೆಯೋ (ತೇ) ಅವೆಲ್ಲ (ದುಃಖಯೋನಯ ಏವ) ದುಃಖಕ್ಕೆ ಮೂಲವಾದವುಗಳೆ ಸವಿಯಾದ ಊಟ ದೊರೆತಾಗ ಹೊಟ್ಟೆಯಲ್ಲಿ ಹೆಚ್ಚು ಸ್ಥಳವಿಲ್ಲವಲ್ಲ ಎಂಬ ದುಃಖ. ಹೆಚ್ಚು ತಿಂದರೆ ಅಜೀರ್ಣವಾಗುವ ದುಃಖ ರುಚಿಗೆಟ್ಟ ಊಟ ದೊರೆತಾಗ ತಿನ್ನೋಣವೆಂದರೆ ನಾಲಿಗೆಯು ಒಳಕ್ಕೆ ತೆಗೆದುಕೊಳ್ಳದೆ ಇರುವ ದುಃಖ, ಬಿಡೋಣವೆಂದರೆ ಹಸಿವೆಯ ದುಃಖ—ಹೀಗೆ ವಿಷಯಸುಖದಲ್ಲಿ ಸಾರವಿಲ್ಲವೆಂದು ತಿಳಿದು ವಿಷಯಗಳಿಂದ ಇಂದ್ರಿಯಗಳನ್ನು ಹಿಮ್ಮೆಟ್ಟಿಸಬೇಕು (ಕೌಂತೇಯ) ಅರ್ಜುನನೆ, ಕೇಳು ಆ ಸುಖಗಳು (ಆದ್ಯಂತವಂತಃ) ಮೊದಲೂ ಕೊನೆಯೂ ಉಳ್ಳವುಗಳು ಎಂದರೆ ಕನಸಿನ ಸುಖಗಳಂತೆ ನಡುವೆ ಸ್ವಲ್ಪ ಹೊತ್ತು ಕಾಣುವವುಗಳು. ಇವುಗಳನ್ನು ತೀರ ದಡ್ಡರು ಬಯಸುವರೆ ಹೊರತು (ಬುಧಃ) ಆತ್ಮಸ್ವರೂಪವನ್ನರಿತ ವಿವೇಕಿಯು (ತೇಷು) ಇವುಗಳಲ್ಲಿ (ನ ರಮತೇ) ಪ್ರೀತಿಯನ್ನು ಮಾಡುವದಿಲ್ಲ.

ಆ ವಿಷಯಸುಖವು ಮನುಷ್ಯನ ಆತ್ಮೋನ್ನತಿಗೆ ತಡೆಯಾದ್ದರಿಂದ —

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥**

ಶರೀರವಿರುವಾಗಲೆ ಅಶರೀರತ್ವವಾದ ಮೋಕ್ಷವನ್ನು ಸಾಧಿಸಬೇಕಾದ್ದರಿಂದ (ಯಃ) ಯಾವನು (ಪ್ರಾಕ್ಶರೀರವಿಮೋಕ್ಷಣಾತ್) ಸಾಯುವದಕ್ಕೆ ಮುಂಚೆಯೇ (ಕಾಮಕ್ರೋಧೋದ್ಭವಂ) ಬಯಕೆ ಮತ್ತು ಬಯಸಿದ ವಸ್ತು ದೊರೆಯದಂತೆ ಮಾಡಿದ ಅಡಚಣೆಗಳ ಮೇಲಿನ ಸಿಟ್ಟು—ಇವುಗಳಿಂದ ಹುಟ್ಟಿದ (ವೇಗಂ) ಹಾಳು ಕೊರಕಲಿನ ಕಡೆಗೆ ಕೊಚ್ಚಿಕೊಂಡು ಹೋಗುವ ಕಾಡು ಹೆಳ್ಳದ ಸೆಳೆತವನ್ನು (ಇಹೈವ) ಈ ಲೋಕದಲ್ಲಿಯೇ—ಅದು ಕೊರಕಲಿಗೆ ಕೆಡಹುವದಕ್ಕೆ ಮೊದಲೇ (ಸೋಢುಂ) ತಿಮಿಂಗಿಲವೆಂಬ ಮೀನು ತನ್ನ ಬಲದಿಂದ ನದಿಯ ವೇಗವನ್ನು ತಡೆಯುವಂತೆ ತಡೆಯುವದಕ್ಕೆ (ಶಕ್ನೋತಿ) ಸಮರ್ಥನಾಗುತ್ತಾನೊ (ಸಃ) ಆ (ನರಃ) ಮನುಷ್ಯನು (ಯುಕ್ತಃ) ಯೋಗಿಯು ಮತ್ತು (ಸಃ) ಅವನು (ಸುಖೀ)ಸುಖಿಯು. ಬಯಕೆಯು ಉಬ್ಬಿ ಬಂದಾಗ ಮೈಮೇಲಿನ ಕೂದಲು ನೆಟ್ಟಗಾಗುವದು, ಮುಖವು ಪ್ರಸನ್ನವಾಗುವದು ಮತ್ತು ಕಣ್ಣುಗಳು ಹೊಳೆಯುವವು ಸಿಟ್ಟು ಉಬ್ಬಿಬಂದಾಗ ಮೈ ನಡಗುವದು, ಬೆವರುವದು, ತುಟಿಗಳನ್ನು ಹಲ್ಲು ಅಮುಕುವದು ಮತ್ತು ಕಣ್ಣು ಕೆಂಪಾಗುವದು. ಈ ಲಕ್ಷಣಗಳು ತನ್ನಲ್ಲಿ ತೋರದಂತೆ ಆದಾಗ ಬಯಕೆಯೂ ಸಿಟ್ಟೂ ಹಿಮ್ಮೆಟ್ಟಿದವೆಂದು ತಿಳಿಯಬೇಕು

ಹೇಗಿದ್ದವನು ಬ್ರಹ್ಮವನ್ನು ಸೇರುತ್ತಾನೆಂದರೆ :—

**ಯೋಂತಃಸುಖೋಂತರಾರಾಮಸ್ತಥಾಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥**

( ಯಃ ) ಯಾವನು ( ಅಂತಃಸುಖಃ ) ಹೊರಗಣ ವಿಷಯಗಳಿಲ್ಲದೆ ಒಳಗೆ ಆತ್ಮಸ್ವರೂಪದ ಆನಂದವನ್ನೆ ಅನುಭವಿಸುವನೋ ಮತ್ತು (ಅಂತರಾ

ರಾಮಃ) ಹೆಂಡತಿ ಮಕ್ಕಳೊಡನೆ ಅಲ್ಲದೆ ತನ್ನ ಆತ್ಮಸ್ವರೂಪದಲ್ಲಿಯೇ ಒಳಗೇ ವಿನೋದಕಾಲಕ್ಷೇಪದಿಂದಿರುವನೊ (ತಥಾ) ಹಾಗೆಯೆ (ಯಃ) ಯಾವನು (ಅಂತರ್ಜ್ಯೋತಿರೇವ) ಹೊರಗಣ ಬೆಳಕನ್ನು ಉಪೇಕ್ಷಿಸಿ ಒಳಗೆ ಇರುವ ಆತ್ಮ ಸ್ವರೂಪವೇ ಬೆಳಕೆಂದು ತಿಳಿದಿರುವನೊ (ಸಃ) ಆ (ಯೋಗೀ) ಯೋಗಿಯು (ಬ್ರಹ್ಮ ಭೂತಃ*) ತಾನು ಬ್ರಹ್ಮಸ್ವರೂಪನೇ ಆಗಿದ್ದು (ಬ್ರಹ್ಮನಿರ್ವಾಣಂ) ಬ್ರಹ್ಮಸ್ವರೂಪವಾದ ಮೋಕ್ಷವನ್ನು (ಅಧಿಗಚ್ಛತಿ) ಹೊಂದುತ್ತಾನೆ. ಎಲ್ಲ ಆತ್ಮರೂ ಬ್ರಹ್ಮರೇ ಆಗಿರುವರು. ಅವರೆ ಹೊರಗೆ ದೃಷ್ಟಿಯನ್ನು ಹರಿಸಿದಾಗ ತಮ್ಮ ಬ್ರಹ್ಮತ್ವವನ್ನು ಮರೆತು ದೇಹಾದಿಗಳನ್ನು ಆತ್ಮವೆಂದು ತಿಳಿದುಕೊಂಡು ವಿಷಯಗಳನ್ನು ಸುಖಸಾಧನಗಳೆಂದು ಮೋಹಿಸಿ ಆ ತಪ್ಪು ತಿಳಿವಳಿಕೆಯಿಂದ ಬಗೆಬಗೆಯಾದ ಕೋಟಲೆಗೆ ಒಳಗಾಗಿರುವರು ಅವರೆ ಆ ದೃಷ್ಟಿಯನ್ನು ಒಳಗಡೆ ಇರುವ ಆತ್ಮನ ಕಡೆಗೆ ತಿರುಗಿಸಿದರೆ ಆಗ ವಿಷಯಗಳೆಲ್ಲ ಕನಸಿನ ವಿಷಯಗಳಂತೆ ಬರೀ ತೋರಿಕೆಯವೆಂದೂ ತಾನು ಬ್ರಹ್ಮಸ್ವರೂಪನೆಂದೂ ಇದ್ದದ್ದನ್ನು ಇದ್ದ ಹಾಗೆ ತಿಳಿಯುವರು.

ಮತ್ತೇನೆಂದರೆ —

**ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫ ॥**

(ಕ್ಷೀಣಕಲ್ಮಷಾಃ) ನಿಷ್ಕಾಮಕರ್ಮಗಳನ್ನು ಮಾಡಿ ತಮ್ಮ ಪಾಪಗಳನ್ನು ಕಳೆದುಕೊಂಡವರೂ (ಋಷಯಃ) ಆದರಿಂದ ಶುದ್ಧವಾದ ಮನಸ್ಸಿನಲ್ಲಿ ತಾವು ಬ್ರಹ್ಮಸ್ವರೂಪರೆಂಬ ರಹಸ್ಯವನ್ನರಿತವರೂ (ಛಿನ್ನದ್ವೈಧಾಃ) ಆ ಜ್ಞಾನದ ಪ್ರಭಾವದಿಂದ ಜಗತ್ತಿನ ನಿತ್ಯತ್ವ ಮೊದಲಾದ ಸಂಶಯಗಳನ್ನೆಲ್ಲ ಕಳೆದುಕೊಂಡವರೂ (ಯತಾತ್ಮಾನಃ) ಹೊರಗೆ ಸುಖವಿಲ್ಲವೆಂದು ತಿಳಿದು ದೇಹೇಂದ್ರಿಯಗಳನ್ನು ಹೊರಗಡೆಗೆ ಹರಿಯಗೊಡದಿರುವವರೂ (ಸರ್ವಭೂತ ಹಿತೇ) ಎಲ್ಲ ಕಡೆಯಲ್ಲಿಯೂ ತಮ್ಮಲ್ಲಿರುವ ಆತ್ಮನೇ ಇರುವನೆಂಬ ತಿಳಿವಳಿಕೆ

---

* "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" ಬ್ರಹ್ಮವೇ ಆಗಿದ್ದು ಬ್ರಹ್ಮವನ್ನು ಪಡೆಯುತ್ತಾನೆ. —ಶ್ರು.

ಯಿಂದ ಇತರರಿಗೆ ಹಿಂಸೆಮಾಡುವದೆಂದರೆ ತನಗೆ ತಾನೇ ಹಿಂಸೆ ಮಾಡಿ ಕೊಳ್ಳುವದೆಂದರಿತು ಎಲ್ಲ ಪ್ರಾಣಗಳಿಗೂ ಅನುಕೂಲವನ್ನೇ ಮಾಡುವದು ರಲ್ಲಿ (ರತಾಃ) ಆಸಕ್ತರೂ ಆದ ಸಂನ್ಯಾಸಿಗಳು (ಬ್ರಹ್ಮನಿರ್ವಾಣಂ) ಬ್ರಹ್ಮ ಸ್ವರೂಪವಾದ ಮೋಕ್ಷವನ್ನು (ಲಭಂತೇ) ಪಡೆಯುತ್ತಾರೆ.

ಮತ್ತೇನೆಂದರೆ —

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥**

(ಕಾಮಕ್ರೋಧವಿಯುಕ್ತಾನಾಂ) ಬಯಕೆಯನ್ನೂ ಸಿಟ್ಟನ್ನೂ ಬಿಟ್ಟಿ ರುವವರಾಗಿಯೂ (ಯತಚೇತಸಾಂ) ಮನಸ್ಸನ್ನು ಬಿಗಿಹಿಡಿದಿರುವವರಾ ಗಿಯೂ (ವಿದಿತಾತ್ಮನಾಂ) ಆತ್ಮಸ್ವರೂಪವನ್ನರಿತವರಾಗಿಯೂ ಇರುವ (ಯತೀನಾಂ) ಸಂನ್ಯಾಸಿಗಳಿಗೆ (ಬ್ರಹ್ಮನಿರ್ವಾಣಂ) ಬ್ರಹ್ಮಸ್ವರೂಪವಾದ ಮೋಕ್ಷವು (ಅಭಿತಃ) ಬದುಕಿರುವಾಗಲೂ ಸತ್ತ ಮೇಲೆಯೂಯಾವಾಗಲೂ (ವರ್ತತೇ) ಇರುವದು.

ಇಂಥ ಸ್ಥಿತಿಯು ಪ್ರಾಪ್ತವಾಗುವದಕ್ಕೆ ಬಹಿರಂಗಸಾಧನವಾದ ನಿಷ್ಕಾ ಮಕರ್ಮದಿಂದ ಚಿತ್ತಶುದ್ಧಿಯನ್ನು ಮಾಡಿಕೊಂಡ ಸಾಧಕನಿಗೆ ವೈರಾಗ್ಯದಿಂದ ಕರ್ಮಗಳಲ್ಲಿ ಉಪೇಕ್ಷೆಯುಂಟಾದಾಗ ವರ್ಣಧರ್ಮಗಳ ಸಂನ್ಯಾಸವನ್ನು ಮಾಡಿದವನು ನಡೆಸಬೇಕಾದ ಅಂತರಂಗ ಸಾಧನವೇನೆಂದರೆ —

**ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭ ॥**
**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥**

(ಬಾಹ್ಯಾನ್) ಹೊರಗೆ ಇರುವಂಥ (ಸ್ಪರ್ಶಾನ್) ವಿಷಯಗಳನ್ನು (ಬಹಿಃ ಕೃತ್ವಾ) ಹೊರಗೇ ಇರುವಂತೆ ಮಾಡಿ ಎಂದರೆ ಮನಸ್ಸಿನೊಳಕ್ಕೆ

ತೆಗೆದುಕೊಳ್ಳದೆ (ಚಕ್ಷುಶ್ಚೈವ) ಕಣ್ಣನ್ನೂ (ಭ್ರುವೋಃ) ಎರಡು ಹುಬ್ಬುಗಳ (ಅಂತರೇ) ನಡುವೆ ಇಟ್ಟು [ನಾಸಾಭ್ಯಂತರಚಾರಿಣೌ] ಮೂಗಿನೊಳಗೆ ಓಡಾಡುತ್ತಿರುವಂಥ [ಪ್ರಾಣಾಪಾನೌ] ಒಳಕ್ಕೆ ಹೋಗುವ ಮತ್ತು ಹೊರಕ್ಕೆ ಬರುವ ಗಾಳಿಗಳನ್ನು [ಸಮೌ] ಓಡಾಟವಿಲ್ಲದೆ ಸುಮ್ಮನಿರುವವುಗಳನ್ನಾಗಿ [ಕೃತ್ವಾ] ಮಾಡಿ [ಯತೇಂದ್ರಿಯಮನೋಬುದ್ಧಿಃ] ಇಂದ್ರಿಯಗಳನ್ನೂ ಮನಸನ್ನೂ ಬುದ್ಧಿಯನ್ನೂ ಹಿಡಿತವಲ್ಲಿಟ್ಟುಕೊಂಡು [ಮುನಿಃ] ಪರಮಾತ್ಮ ತತ್ತ್ವವನ್ನೆ ಮನಸ್ಸಿನಲ್ಲಿ ಚಿಂತಿಸುತ್ತ [ಮೋಕ್ಷಪರಾಯಣಃ] ದೇಹಾದಿಗಳಿಗೆ ಕಟ್ಟುಬಿದ್ದಿರುವ ತನಗೆ ಬ್ರಹ್ಮಸ್ವರೂಪವಾದ ಮೋಕ್ಷವೇ ಹೆಚ್ಚಿನ ಗತಿಯೆಂದು ತಿಳಿದು [ವಿಗತೇಚ್ಛಾಭಯಕ್ರೋಧಃ] ಆಸೆಯನ್ನೂ ಹೆದರಿಕೆಯನ್ನೂ ಸಿಟ್ಟನ್ನೂ ಬರಗೊಡದಿರುವ ಸಂನ್ಯಾಸಿಯು [ಯಃ] ಯಾವನೊ [ಸಃ] ಅವನು [ಸದಾ] ಯಾವಾಗಲೂ* [ಮುಕ್ತ ಏವ] ಮುಕ್ತನೆ. ಅವನು ಮೋಕ್ಷಕ್ಕಾಗಿ ಮತ್ತಿನ್ನೇನನ್ನೂ ಮಾಡಬೇಕಾಗಿಲ್ಲ.

ಈ ಸಾಧನೆಯಿಂದಾಗುವ ಸಾಧ್ಯವೇನೆಂದರೆ —

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥**

ಯಜ್ಞವನ್ನೂ ತಪಸ್ಸನ್ನೂ ಮಾಡುವವರ ಆತ್ಮರೂಪದಿಂದಿರುವದರಿಂದಲೂ ಮತ್ತು ಉದ್ದಿಷ್ಟವಾದ ಇಂದ್ರ ಮೊದಲಾದ ದೇವತೆಯ ರೂಪದಿಂದಿರುವದರಿಂದಲೂ ಎರಡು ರೂಪದಿಂದಲೂ[ಯಜ್ಞತಪಸಾಂ] ಯಜ್ಞ ಮೊದಲಾದ ಕರ್ಮಗಳ ಮತ್ತು ಕೃಛ್ರಚಾಂದ್ರಾಯಣಾದಿ ತಪಸ್ಸುಗಳ [ಭೋಕ್ತಾರಂ] ಫಲವನ್ನುಣ್ಣುವವನಾಗಿಯೂ [ಸರ್ವಲೋಕಮಹೇಶ್ವರಂ] ಎಲ್ಲ ಲೋಕಗಳಿಗೂ ದೊಡ್ಡ ಒಡೆಯನನ್ನಾಗಿಯೂ (ಸರ್ವಭೂತನಾಂ)ಎಲ್ಲ ಪ್ರಾಣಿಗಳಿಗೂ [ಸುಹೃದಂ] ಪ್ರತ್ಯುಪಕಾರವನ್ನು ನಿರೀಕ್ಷಿಸದೆ ಉಪಕಾರವನ್ನು ಮಾಡುವ

---

* ಈ ಶಬ್ದವನ್ನು ಯತೇಂದ್ರಿಯಮನೋಬುದ್ಧಿಃ ಮೊದಲಾದವುಗಳಿಗೆಲ್ಲ ವಿಶೇಷವಾಗಿಯೂ ಅನ್ವಯಿಸಿಕೊಳ್ಳಬಹುದು.

ವನನ್ನಾಗಿಯೂ [ಮಾಂ] ನನ್ನನ್ನು [ಜ್ಞಾತ್ವಾ] ತಿಳಿದು [ಶಾಂತಿಂ] ಮೋಕ್ಷ ವನ್ನು [ಋಚ್ಛತಿ] ಪಡೆಯುತ್ತಾನೆ ಆದ್ದರಿಂದ ನೀನು ನನ್ನನ್ನು ವಸುದೇವ ಪುತ್ರತ್ವ ಮೊದಲಾದವು..ಂದಕೂಡಿರುವ ಈ ಸಗುಣಸ್ವರೂಪಮಾತ್ರವೆಂದು ತಿಳಿಯದೆ ನನ್ನ ನಿರ್ಗುಣ ಸ್ವರೂಪವನ್ನು ಧ್ಯಾನ ಮೊದಲಾದವುಗಳಿಂದ ವೈಗೂಡಿಸಿಕೊ.

ಇಲ್ಲಿಗೆ **ಸಂನ್ಯಾಸಯೋಗ**ವೆಂಬ
ಐದನೆ ಅಧ್ಯಾಯವು ಮುಗಿಯಿತು.



# ಆರನೆ ಅಧ್ಯಾಯ

ವಿರಕ್ತನಾಗಿ ವಿಷಯಗಳನ್ನು ಉಪೇಕ್ಷೆಮಾಡಿ ಧ್ಯಾನಯೋಗದ ಮೆಟ್ಟಿ ಲನ್ನು ಹತ್ತುವದಕ್ಕೆ ಮುಂಚಿ ಅದಕ್ಕೆ ಬಹಿರಂಗಸಾಧನವಾದ ನಿಷ್ಕಾಮಕರ ವನ್ನು ಅವಶ್ಯಕವಾಗಿ ಮಾಡಲೇಬೇಕೆಂಬ ತಿಳಿವಳಿಕೆಯನ್ನು ಗಟ್ಟಿಗೊಳಿಸ ವದಕ್ಕಾಗಿ,

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು :—

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ** ॥ ೧ ॥

(ಯಃ) ಯಾವನು [ಕರ್ಮಫಲಂ] ಸ್ವರ್ಗ ಮೊದಲಾದ ಕರ್ಮದ ಫಲಗಳನ್ನು ಕೂಡ [ಅನಾಶ್ರಿತಃ] ಮನಸ್ಸಿಗೆ ತಂದುಕೊಳ್ಳದೆ (ಕಾರ್ಯಂ) ತಾನು ಅವಶ್ಯಕವಾಗಿ ಮಾಡಬೇಕಾದ [ಕರ್ಮ] ಅಗ್ನಿಹೋತ್ರ ಮೊದ ಲಾದ ನಿತ್ಯಕರ್ಮವನ್ನು [ ಕರೋತಿ ] ಮಾಡುತ್ತಾನೊ [ಸಃ] ಅವನು ಉಳಿದ ಕರ್ಮಿಗಳಿಂದ ಬೇರೆ ಬಗೆಯವನು. ಏಕೆಂದರೆ ಅವನು [ಸಂ

ನ್ಯಾಸೀ ಚ) ಫಲದ ಬಯಕೆಯನ್ನು ಬಿಟ್ಟಿರುವ ದೃಷ್ಟಿಯಿಂದ ಸಂನ್ಯಾಸಿಯೂ ಆಗಿರುವನು, (ಯೋಗೀ ಚ) ಮನಸ್ಸನ್ನು ತಡೆದಿಟ್ಟುಕೊಂಡಿರುವ ದೃಷ್ಟಿಯಿಂದ ಯೋಗಿಯೂ ಆಗಿರುವನು ಯೋಗಿಯೆಂದರೆ ಮನಸ್ಸನ್ನು ಬಿಗಿಹಿಡಿದುಕೊಂಡವನೆಂದರ್ಥ (ನಿರಗ್ನಿಃ) ಸುಮ್ಮನೆ ಅಗ್ನಿಹೋತ್ರ ಮೊದಲಾದ ನಿತ್ಯಕರ್ಮಗಳನ್ನು ಕೈ ಬಿಟ್ಟವನು (ನ) ಸಂನ್ಯಾಸಿಯಲ್ಲ (ಅಕ್ರಿಯಃ ಚ) ಏನನ್ನೂ ಮಾಡದೆ ಇರುವೆನೆನ್ನುವನೂ (ನ) ಸಂನ್ಯಾಸಿಯಲ್ಲ

ಸಂನ್ಯಾಸಿತ್ವವೂ ಯೋಗಿತ್ವವೂ ಒಬ್ಬನಿಗೆ ಹೇಗೆ ಕೂಡುವದೆಂದರೆ :—

**೦ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥**

(ಪಾಂಡವ) ಅರ್ಜುನನೆ, ಕೇಳು (ಯಂ) ಎಲ್ಲ ಕರ್ಮಗಳನ್ನೂ ಅವುಗಳ ಫಲಗಳನ್ನೂ ಬಿಟ್ಟಿರುವ ಯಾವ ಸ್ಥಿತಿಯನ್ನು (ಸಂನ್ಯಾಸಂ) ಸಂನ್ಯಾಸವು (ಇತಿ) ಎಂದು (ಪ್ರಾಹುಃ) ಶಾಸ್ತ್ರಜ್ಞರು ಹೇಳುವರೊ (ಯೋಗಂ) ಫಲಾಪೇಕ್ಷೆ ಇಲ್ಲದೆ ಕರ್ಮವನ್ನು ಮಾಡುವದನ್ನು (ತಂ) ಆ ಸಂನ್ಯಾಸವನ್ನಾಗಿಯೇ (ವಿದ್ಧಿ) ತಿಳಿ ಹೀಗೆ ಹೇಳುವದಕ್ಕೆ ಇವೆರಡರಲ್ಲಿಯೂ ಇರುವ ಒಂದು ಸಾಮಾನ್ಯ ಲಕ್ಷಣವೇನೆಂದರೆ ಸಂನ್ಯಾಸಿಯು ಕರ್ಮಗಳನ್ನೂ ಅವುಗಳ ಫಲಗಳನ್ನೂ ಬಿಟ್ಟಿರುತ್ತಾನೆ ಯೋಗಿಯು ಕರ್ಮಗಳನ್ನು ಮಾಡುತ್ತಾ ಫಲಗಳನ್ನು ಬಿಟ್ಟಿರುತ್ತಾನೆ ಫಲಗಳ ಬಯಕೆಯನ್ನು ಬಿಟ್ಟಿರುವದೇ ಇವೆರಡರಲ್ಲಿರುವ ಒಂದು ಸಮಾನ ಲಕ್ಷಣ (ಅಸಂನ್ಯಸ್ತಸಂಕಲ್ಪಃ) ಫಲದ ಬಯಕೆಯನ್ನು ಬಿಡದೆ ಇರುವ (ಕಶ್ಚನ) ಯಾವ ಕರ್ಮಿಯೂ (ನ ಹಿ ಯೋಗೀ ಭವತಿ) ಮನಸ್ಸನ್ನು ಹಿಡಿದು ನಿಲ್ಲಿಸಿಕೊಂಡವನಾಗುವದಿಲ್ಲ ಫಲದ ಬಯಕೆಯು ಮನಸ್ಸನ್ನು ಹೊರಗೆ ಹರಿದಾಡಿಸುವದರಿಂದ ಫಲದ ಬಯಕೆಯನ್ನು ಬಿಟ್ಟವನು ಮನಸ್ಸನ್ನು ಹಿಡಿದು ನಿಲ್ಲಿಸಿಕೊಳ್ಳುವನಾಗುವನು

ಕರ್ಮಯೋಗವನ್ನು ಎಲ್ಲಿಯವರೆಗೆ ಮಾಡಬೇಕೆಂದರೆ.—

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩ ॥**

(ಯೋಗಂ) ಮನಸ್ಸನ್ನು ಪರಮಾತ್ಮನಲ್ಲಿಯೇ ಎಡೆಬಿಡದಂತೆ ಇರಿಸುವ ಧ್ಯಾನಯೋಗವೆಂಬ ಮೆಟ್ಟಿಲನ್ನು (ಆರುರುಕ್ಷೋಃ) ಹತ್ತ ಬೇಕೆಂದಿರುವಂಥ (ಮುನೇಃ) ಕರ್ಮಫಲಸಂನ್ಯಾಸಿಗೆ ಎಂದರೆ ಫಲದ ಬಯಕೆಯನ್ನು ಬಿಟ್ಟವನಿಗೆ (ಕರ್ಮ) ಕರ್ಮವು (ಕಾರಣಂ) ಸಾಧನವು (ಉಚ್ಯತೇ) ಎನಿಸುವದು (ಯೋಗಾರೂಢಸ್ಯ) ಧ್ಯಾನಯೋಗವೆಂಬ ಮೆಟ್ಟಿಲನ್ನು ಹತ್ತಿದಂಥ (ತಸ್ಯೈವ) ಅವನಿಗೇ ಎಂದರೆ ಫಲದ ಬಯಕೆಯನ್ನು ಬಿಟ್ಟು ಕರ್ಮವನ್ನು ಮಾಡುತ್ತಿದ್ದವನಿಗೇ (ಶಮಃ) ಎಲ್ಲ ಕರ್ಮಗಳನ್ನೂ ಬಿಟ್ಟಿರುವಿಕೆಯು (ಕಾರಣಂ) ಸಾಧನವು (ಉಚ್ಯತೇ) ಎನಿಸುವದು ಕರ್ಮವನ್ನು ಬಿಡುತ್ತ ಬಿಡುತ್ತ ಬಂದ ಹಾಗೆಲ್ಲ ಇಂದ್ರಿಯಗಳು ಹಿಡಿತದಲ್ಲಿರುತ್ತ ಬಂದು ಮನಸ್ಸು ಸಮಾಧಾನವನ್ನು ಪಡೆಯುತ್ತದೆ

ಧ್ಯಾನಯೋಗದ ಮೆಟ್ಟಿಲನ್ನು ಯಾವಾಗ ಹತ್ತಿದಂತಾಯಿತೆಂದರೆ —

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಯತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥**

( ಯದಾ ಹಿ ) ಯಾವಾಗ ( ಇಂದ್ರಿಯಾರ್ಥೇಷು ) ಇಂದ್ರಿಯಗಳು ತಮ್ಮ ಶಬ್ದ ಮೊದಲಾದ ವಿಷಯಗಳಲ್ಲಿ ( ನ ಅನುಷಜ್ಯತೇ ) ಪ್ರೇಮದ ಗಂಟನ್ನು ಹಾಕುವದಿಲ್ಲವೊ ಎಂದರೆ ಇಂದ್ರಿಯಗಳು ವಿಷಯಗಳ ಮುಂದೆ ಬಾಯಿನೀರು ಕರೆಯುವದಿಲ್ಲವೊ ಮತ್ತು (ಕರ್ಮಸು) ಚೈತನ್ಯರೂಪನಾದ ತನಗೆ ಜಡವಾದ ಯಾವ ಕರ್ಮಗಳಿಂದಲೂ ಫಲವಿಲ್ಲವೆಂದು ಅವುಗಳಲ್ಲಿ (ನ) ಮಾಡತಕ್ಕವುಗಳೆಂಬ ಬುದ್ಧಿಯುಂಟಾಗುವದಿಲ್ಲವೊ ಮತ್ತು (ಸರ್ವಸಂಕಲ್ಪಸಂನ್ಯಾಸೀ) ಈ ಲೋಕದ ಮತ್ತು ಪರಲೋಕದ ಬಯಕೆಗಳನ್ನೂ ಅವುಗಳ ಸಂಬಂಧವಾದ ಕರ್ಮ

ಗಳನ್ನೂ ಬಿಟ್ಟವನಾಗುತ್ತಾನೊ (ತದಾ) ಆಗ (ಯೋಗಾರೂಢಃ) ಧ್ಯಾನ ಯೋಗದ ಮೆಟ್ಟಿಲನ್ನು ಹತ್ತಿದವನು (ಉಚ್ಯತೇ) ಎನಿಸುವನು

ಹೀಗೆ ಯೋಗಾರೂಢನಾದವನು ಸಂಸಾರದ ಅನರ್ಥಗಳನ್ನೆಲ್ಲ ಕಳೆದುಕೊಳ್ಳುವದರಿಂದ —

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫ ॥**

(ಆತ್ಮಾನಾಂ) ಸಂಸಾರವೆಂಬ ಸಮುದ್ರದಲ್ಲಿ ಜಾರಿಬಿದ್ದು ಗುಟುಕು ನೀರು ಕುಡಿಯುತ್ತ ಸಾಯಲಾಗಿರುವ ತನ್ನನ್ನು (ಆತ್ಮನಾ) ತನ್ನಿಂದಲೇ - ತಾನು ಯೋಗಾರೂಢನಾಗುವದರಿಂದಲೆ (ಉದ್ಧರೇತ್) ಮೇಲಕ್ಕೆತ್ತ ಬೇಕು (ಆತ್ಮಾನಂ) ತನ್ನನ್ನು (ನ ಅವಸಾದಯೇತ್) ಇನ್ನೂ ಕೆಳಕ್ಕೆ ಹೋಗಿ ನೆಲಾ ಹಿಡಿಯುವಂತೆ ಮಾಡಬಾರದು ವಿಚಾರಮಾಡಿ ದರೆ ತನಗೆ ತನ್ನನ್ನು ಬಿಟ್ಟು ಯಾರೂ ದಿಕ್ಕಿಲ್ಲ (ಹಿ) ಏಕೆಂದರೆ (ಆತ್ಮೈವ) ತಾನೆ (ಆತ್ಮನಃ) ತನ್ನ (ಬಂಧುಃ) ನಂಟನು ಉಳಿದ ಬಂಧುಗಳೆಲ್ಲ ಪ್ರೇಮವೆಂಬ ಹಗ್ಗದಿಂದ ಮತ್ತಷ್ಟು ಕಟ್ಟಿಹಾಕುವರೇ ಹೊರತು ಕಟ್ಟನ್ನು ಕಳಲಿಸುವವರಾಗುವದಿಲ್ಲ ಮತ್ತು (ಆತ್ಮೈವ) ತಾನೆ (ಆತ್ಮನಃ) ತನ್ನ (ರಿಪುಃ) ಹಗೆ ಹೊರಗಣ ಹಗೆಗಳೆಲ್ಲ ತನ್ನಿಂದಲೇ ತನಗೆ ಹಗೆಗಳಾ ದವರಾದ್ದರಿಂದ ತಾನೆ ತನಗೆ ಹಗೆ

ತಾನೇ ತನಗೆ ಯಾವ ರೀತಿ ನಂಟನು, ಮತ್ತು ಯಾವ ರೀತಿ ಹಗೆ ಎಂದರೆ —

**ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥**

(ಯೇನ) ಯಾರಿಂದ (ಆತ್ಮೈವ) ದೇಹೇಂದ್ರಿಯಾದಿಗಳೆ (ಆತ್ಮನಾ) ತನ್ನ ಸ್ವಪ್ರಯತ್ನದಿಂದ (ಜಿತಃ) ಹೇಳಿದಂತೆ ಕೇಳುವ ಹಾಗಾಗಿರುವವೊ (ತಸ್ಯ) ಅವನಿಗೆ (ಆತ್ಮಾ) ತಾನು (ಆತ್ಮನಃ) ತನ್ನ (ಬಂಧುಃ) ನಂಟನು (ಅನಾತ್ಮನಸ್ತು) ದೇಹೇಂದ್ರಿಯಾದಿಗಳನ್ನು

ಗೆಲ್ಲಲಾರದವನಿಗಾದರೊ (ಆತ್ಮೈವ) ತಾನೇ (ಶತ್ರುವತ್) ಹಗೆಯಂತೆ (ಶತ್ರುತ್ವೇ) ದ್ವೇಷಮಾಡುವದರಲ್ಲಿ (ವರ್ತೇತ) ಇರುವನು ತನಗಿಂತ ಬೇರೆಯಾದವನು ಹೇಗೆ ತನಗೆ ಅಪಕಾರವನ್ನು ಮಾಡುವನೊ ಹಾಗೆ ತಾನೇ ತನ್ನ ಅಪಕಾರವನ್ನು ಮಾಡಿಕೊಳ್ಳುವನು

ದೇಹೇಂದ್ರಿಯಾದಿಗಳನ್ನು ಗೆದ್ದು ತಾನೆ ತನಗೆ ನಂಟನಾಗಿರುವದರ ಫಲವೇನೆಂದರೆ —

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥**

(ಶೀತೋಷ್ಣಸುಖದುಃಖೇಷು) ಶೀತವೂ ಉಷ್ಣವೂ ಹೇಗೆ ಒಮ್ಮೆ ಹಿತವೂ ಒಮ್ಮೆ ಅಹಿತವೂ ಎನಿಸುವವೊ ಹಾಗೆ ಇರುವ ಸುಖದುಃಖ ಗಳಲ್ಲಿಯೂ (ತಥಾ) ಅದೇ ರೀತಿಯಲ್ಲಿ (ಮಾನಾಪಮಾನಯೋಃ) ಪೂಜೆ ದೊರೆತಾಗಲೂ ಹೀಯಾಳಿಸಿಕೊಂಡಾಗಲೂ (ಜೀತಾತ್ಮನಃ) ದೇಹೇಂದ್ರಿಯ ಮೊದಲಾದವುಗಳು ಉಬ್ಬದ ತಗ್ಗದೆ ಇರುವಂತೆ ಅವು ಗಳನ್ನು ವಶದಲ್ಲಿಟ್ಟುಕೊಂಡಿರುವಂಥಾ (ಪ್ರಶಾಂತಸ್ಯ) ತಿಳಿಮನಸ್ಸಿನವನಿಗೆ (ಪರಮಾತ್ಮಾ) ಪರಮಾತ್ಮನು (ಸಮಾಹಿತಃ) ಅವನ ಹೃದಯದಲ್ಲಿ ಆತ್ಮ ರೂಪದಲ್ಲಿ ಆನಂದದಿಂದಿರುವವನಾಗುವನು ಎಂದರೆ ಅವನು ಯೋಗಾ ರೂಢನಾಗುವನು

ಆ ಯೋಗಾರೂಢನ ಸ್ಥಿತಿ ಹೇಗಿರುವದೆಂದರೆ —

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮ ॥**

(ಜ್ಞಾನವಿಜ್ಞಾನತೃಪ್ತಾತ್ಮಾ) ಶಾಸ್ತ್ರದಲ್ಲಿ ಹೇಳಿರುವ ಸಂಗತಿಗಳ ತಿಳಿವಳಿಕೆಯಿಂದಲೂ ಅವುಗಳ ಅನುಭವದಿಂದಲೂ ಮನಸ್ಸಿಗೆ ತೃಪ್ತಿ ಯನ್ನು ತಂದುಕೊಂಡಿರುವವನಾಗಿಯೂ (ಕೂಟಸ್ಥಃ) ಸುಖವು ಬಂದಾಗ ಹಿಗ್ಗದೆ ದುಃಖವು ಬಂದಾಗ ತಗ್ಗದೆ ಒಂದೇ ರೀತಿ ಇರುವವನಾಗಿಯೂ (ವಿಜಿತೇಂದ್ರಿಯಃ) ಇಂದ್ರಿಯಗಳು ವಿಷಯಗಳ ಜಾಲವನ್ನು ಹಿಡಿದು

ಒಡೆದಂತೆ ಚೆನ್ನಾಗಿ ಅವುಗಳನ್ನು ಹಿಡಿತದಲ್ಲಿಟ್ಟುಕೊಂಡಿರುವವನಾಗಿಯೂ (ಸಮಲೋಷ್ಟಾಶ್ಮಕಾಂಚನಃ) ಮಣ್ಣು ಹೆಂಟೆಯು ಕೆಲಸಕ್ಕೆ ಬಾರದ್ದೆಂತಲೂ ಬಂಗಾರವು ಬಹಳ ಬೆಲೆಯುಳ್ಳದ್ದೆಂತಲೂ ಭೇದದೃಷ್ಟಿಯಿಂದ ನೋಡದೆ ಎಲ್ಲವೂ ಹಗ್ಗದಲ್ಲಿ ಕಾಣುವ ಹಾವು, ಹೂಮಾಲೆ – ಮೊದಲಾದವುಗಳಂತೆ ಅಥವಾ ಕನಸಿನಲ್ಲಿ ಕಾಣುವವುಗಳಂತೆ ಬರೀ ತೋರಿಕೆಯವೆಂದರಿತು ಎರಡನ್ನೂ ಒಂದೇ ಬೆಲೆಯಾಗಿ ಉಪೇಕ್ಷೆಯಿಂದ ಕಾಣುವವನಾಗಿಯೂ ಇರುವ (ಯೋಗೀ) ಯೋಗಿಯು (ಯುಕ್ತಃ) ಯೋಗಾರೂಢನು (ಇತಿ) ಎಂದು (ಉಚ್ಯತೇ) ಎನಿಸುವನು

ಮತ್ತೇನೆಂದರೆ ---

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥**

(ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು) ಪ್ರತ್ಯುಪಕಾರವನ್ನು ಬಯಸದೆ ಮತ್ತು ಹಿಂದಿನ ಸ್ನೇಹವಿಲ್ಲದಿದ್ದರೂ ಉಪಕಾರವನ್ನು ಮಾಡುವವರಲ್ಲಿಯೂ ಯಾವಾಗಲೂ ಸ್ನೇಹದಿಂದ ಉಪಕಾರವನ್ನು ಮಾಡುವವರಲ್ಲಿಯೂ ಅಪಕಾರವನ್ನು ಮಾಡದೆ ಇರುವವರಿಗೂ ಅಪಕಾರವನ್ನು ಮಾಡುವ ಹಗೆಗಳಲ್ಲಿಯೂ ಇಬ್ಬರ ಜಗಳದಲ್ಲಿ ಯಾವ ಪಕ್ಷವನ್ನೂ ಹಿಡಿಯದಿರುವ ಉದಾಸೀನರಲ್ಲಿಯೂ ಇಬ್ಬರ ಹಿತವನ್ನೂ ಬಯಸುವಂಥ ಮಧ್ಯಸ್ಥರಲ್ಲಿಯೂ ಅಪಕಾರದ ಮುಯ್ಯನ್ನು ತೀರಿಸಿಕೊಳ್ಳುವಂಥ ದ್ವೇಷಿಗಳಲ್ಲಿಯೂ ಯಾವದಾದರೊಂದು ಬಗೆಯ ರಕ್ತ ಸಂಬಂಧವಿರುವಂಥ ನಂಟರಲ್ಲಿಯೂ (ಸಾಧುಷ್ವಪಿ) ಶುಭಕರ್ಮಗಳನ್ನೆ ಮಾಡುತ್ತಿರುವಂಥ ಸಾಧುಗಳಲ್ಲಿಯೂ (ಪಾಪೇಷು ಚ) ಪಾಪಕರ್ಮಗಳನ್ನೆ ಮಾಡುವಂಥವರಲ್ಲಿಯೂ ಕೂಡ (ಸಮಬುದ್ಧಿಃ) ಗುಣದೋಷಗಳನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಎಲ್ಲರನ್ನೂ ಸಮನಾಗಿ ನೋಡುವವನು (ವಿಶಿಷ್ಯತೇ) *ಹೆಚ್ಚಿನವನು

*** "ವಿಮುಚ್ಯತೇ" ಎಂದು ಪಾಠಾಂತರ ಸಂಸಾರಬಂಧವನ್ನು ಕಳೆದುಕೊಳ್ಳುತ್ತಾನೆಂದರ್ಥ**

ಇಂಥ ಫಲವು ಸಿಕ್ಕಬೇಕಾದರೆ –

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥**

(ಯೋಗೀ) ಧ್ಯಾನವನ್ನು ಮಾಡಬೇಕನ್ನುವವನು (ರಹಸಿ) ಪ್ರಾಪಂಚಿಕರು ನುಗ್ಗಿ ಬರದ ಇರುವ ಬಟ್ಟೆದ ಗವಿ ಮೊದಲಾದ ಗುಪ್ತಾದ ಕಡೆ (ಸ್ಥಿತಃ) ಇದ್ದುಕೊಂಡವನಾಗಿಯೂ (ಏಕಾಕೀ) ಅಲ್ಲಿಯಾದರೂ ಇನ್ನೊಬ್ಬರಿದ್ದರಂದರೆ ಯೋಗಕ್ಷೇಮದ ಮಾತು ಜರುಗುವದಕ್ಕೆ ದಾರಿಯಾಗುವುದರಿಂದ ಯಾರೊಬ್ಬರನ್ನೂ ಜೊತೆಗಿಟ್ಟುಕೊಳ್ಳದೆ ಒಂಟಿಯಾಗಿರುವವನಾಗಿಯೂ (ಯತಚಿತ್ತಾತ್ಮಾ) ತಾನು ಒಬ್ಬನೆ ಇದ್ದರೂ ಮನಸ್ಸೂ ದೇಹವೂ ಹರಿದಾಡುತ್ತ ಹೋದರ ತನ್ನ ಬಾಳು ವ್ಯರ್ಥವಾಗುವದರಿಂದ ಅವುಗಳನ್ನು ಬಿಗಿಹಿಡಿದುಕೊಂಡವನಾಗಿಯೂ (ನಿರಾಶೀಃ) ಪ್ರಾಪಂಚಿಕ ಸುಖದ ಬಯಕೆಯೇನೂ ಇಲ್ಲದವನಾಗಿಯೂ (ಅಪರಿಗ್ರಹಃ) ತಾನು ಕಾಪಾಡಬೇಕಾದ ಉಪಕರಣಗಳೇನೂ ಇಲ್ಲದವನಾಗಿಯೂ ಇದ್ದು (ಸತತಂ) ಯಾವಾಗಲೂ (ಆತ್ಮಾನಂ) ತನ್ನ ಮನಸ್ಸನ್ನು (ಯುಂಜೀತ) ಪರಮಾತ್ಮನಲ್ಲಿಯೇ ಕೂಡಿಸಿಡಬೇಕು

ಹಾಗೆ ಧ್ಯಾನವನ್ನು ಮಾಡುವಾಗ ಕೂತುಕೊಳ್ಳುವದು, ಆಹಾರ-ಮೊದಲಾದ ಅನೇಕ ನಿಯಮಗಳನ್ನು ಅನುಸರಿಸಬೇಕಾಗುತ್ತದೆ ಅವುಗಳಲ್ಲಿ ಕುಳಿತುಕೊಳ್ಳುವ ಬಗ ಹೇಗೆಂದರೆ —

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥ ೧೧ ॥**
**ತತ್ರೈಕಾಗ್ರಂ ಮನಃ ಕೃತ್ವಾ ಯತ್ತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮ ವಿಶುದ್ಧಯೇ ॥ ೧೨ ॥**

(ಶುಚೌ) ಸ್ವಭಾವವಾಗಿಯೇ ಶುದ್ಧವಾಗಿರುವಂಥ ಅಥವಾ ಗುಡಿಸಿ ಸಾರಿಸಿ ಶುದ್ಧ ಮಾಡಿದಂಥ (ದೇಶೇ) ಸ್ಥಲದಲ್ಲಿ (ನಾತ್ಯುಚ್ಛ್ರಿತಂ) ಧ್ಯಾನವು ಬಲಿತು ದೇಹದ ಮೇಲಿನ ಲಕ್ಷ್ಯವು ಹೋಗಿರುವಾಗ

ಏನಾದರೊಂದು ಕಾರಣದಿಂದ ಬೀಳುವ ಭಯವಿಲ್ಲದಂತೆ ಹೆಚ್ಚು ಎತ್ತರ ವಿಲ್ಲದೆಯೂ (ನಾತಿನೀಚಂ) ನೆಲದ ಶೀತವು ತಗಲದಂತೆ ಮತ್ತು ಕಲ್ಲು ಮಣ್ಣುಗಳು ಒತ್ತದಂತ ಬಹಳ ತಗ್ಗುಗಿಲ್ಲದಯೂ (ಚೈಲಾಜಿನಕುಶೋ ತ್ತರಂ) ಒಂದರ ಮೇಲೊಂದಾಗಿ ಬಟ್ಟೆ, ಜಿಂಕೆಯ ಅಥವಾ ಹುಲಿಯ ಚರ್ಮ, ದರ್ಭೆ–ಇವುಗಳಿರುವಂತೆ ಎಂದರ ನೆಲದಮೇಲೆ ದರ್ಭೆ, ಅದರ ಮೇಲೆ ಚರ್ಮ, ಅದರ ಮೇಲ ವಸ್ತ್ರ–ಈ ರೀತಿಯಲ್ಲಿ (ಆತ್ಮನಃ) ಮತ್ತೊಬ್ಬರು ಉಪಯೋಗಿಸದ ಯಾವಾಗಲೂ ತಾನೇ ಉಪಯೋಗಿಸುವಂಥ ತನ್ನ (ಆಸನಂ) ಪೀಠವನ್ನು (ಸ್ಥಿರಂ) ಅಲ್ಲಾಡದಂತೆ (ಪ್ರತಿಷ್ಠಾಪ್ಯ) ಚೆನ್ನಾಗಿ ಹಾಸಿ (ತತ್ರ) ಅಲ್ಲಿ (ಆಸನೇ) ಪೀಠದ ಮೇಲೆ (ಉಪವಿಶ್ಯ) ಕುಳಿತುಕೊಂಡು (ಯತ್ತಚಿತ್ತೇಂದ್ರಿಯಕ್ರಿಯಃ) ವಿಷಯಗಳನ್ನು ಸ್ಮರಿಸುವದೆಂಬ ಮನಸ್ಸಿನ ಕ್ರಿಯೆಯನ್ನೂ ವಿಷಯಗಳನ್ನು ಉಪಭೋಗಿಸುವದೆಂಬ ಇಂದ್ರಿಯಗಳ ಕ್ರಿಯೆಯನ್ನೂ ಬಿಗಿಹಿಡಿದುಕೊಂಡು (ಮನಃ) ಮನಸ್ಸನ್ನು (ಏಕಾಗ್ರಂ) ಅತ್ತಿತ್ತ ತಿರುಗದೆ ಆತ್ಮಸ್ವರೂಪದ ಕಡೆಗೆ ಒಂದೇ ಮುಖವಾಗಿರುವಂತೆ (ಕೃತ್ವಾ) ಮಾಡಿ (ಆತ್ಮವಿಶುದ್ಧಯೇ) ಮನಸ್ಸಿನ ಹರಿದಾಟವಡಗಿ ಅದರಲ್ಲಿರುವ ದೋಷಗಳೆಲ್ಲ ಇಂಗಿ ಪುಟಕ್ಕಿಟ್ಟ ಚಿನ್ನದಂತೆ ಅದು ಶುದ್ಧವಾಗುವದಕ್ಕಾಗಿ (ಯೋಗಂ) ಮನೋನಿಗ್ರಹವನ್ನು (ಯುಂಜ್ಯಾತ್) ಅಭ್ಯಾಸ ಮಾಡಬೇಕು

ಆಗ ಶರೀರವಿರಬೇಕಾದ ರೀತಿ —

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥**
**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥**

(ಕಾಯಶಿರೋಗ್ರೀವಂ) ಶರೀರದ ಮಧ್ಯಭಾಗ, ತಲೆ, ಕೊರಳು–ಇವುಗಳನ್ನು (ಸಮಂ) ಸೊಟ್ಟಾಗದಂತ ನೆಟ್ಟಗ ಇರುವಂತೆಯೂ (ಅಚಲಂ) ಅಲ್ಲಾಡದಂತಯೂ (ಧಾರಯನ್) ಇಟ್ಟುಕೊಂಡವನಾಗಿ

(ಸ್ಥಿರಃ) ದೃಢವಾಗಿರುವವನಾಗಿ. ಕಣ್ಣುಗುಡ್ಡೆಯನ್ನು ಕೂಡ ಅತ್ತಿತ್ತ ಹೊಯ್ದಾಡಿಸದೆ (ಸ್ವಂ) ತನ್ನ (ನಾಸಿಕಾಗ್ರಂ) ಮೂಗಿನ ತುದಿಯನ್ನು (ಸಂಪ್ರೇಕ್ಷ್ಯ) ನೋಡುತ್ತ–ಎಂದರೆ ಮೂಗಿಗೆ ಹುಬ್ಬುಗಳ ನಡುವಿನದು ಒಂದು ತುದಿ, ಅಲ್ಲಿಂದ ಮುಂದುವರಿದು ಕೂನೆಯಾಗುವದು ಒಂದು ತುದಿ–ಹೀಗೆ ಎರಡು ತುದಿಗಳಲ್ಲಿ ಯಾವದನ್ನಾದರೂ ನೋಡಬಹುದು ಹುಬ್ಬುಗಳ ನಡುವಿನ ತುದಿಯನ್ನು ನೋಡಬೇಕಾದರ–ಕಣ್ಣನ್ನು ಚನ್ನಾಗಿ ಅರಳಿಸಿಟ್ಟುಕೂಳ್ಳಬೇಕಾಗುತ್ತದೆ ಅಲ್ಲಿಂದ ಮುಂದುವರಿದು ಕೂನೆಯಾಗಿರುವುದನ್ನು ನೋಡಬೇಕಾದರ ಕಣ್ಣನ್ನು ಅರ್ಧ ಮುಚ್ಚಿಕೂಳ್ಳಬೇಕಾಗುತ್ತದೆ ಹೇಗೆ ಮಾಡಿದರೂ ಇಲ್ಲಿ ದೃಷ್ಟಿಯ ಕಿರಣಗಳು ಚದರದೆ ಒಮ್ಮುಖವಾಗಿರಬೇಕಂಬುದೇ ತಾತ್ಪರ್ಯವೇ ಹೊರತು ಮೂಗಿನ ತುದಿಯನ್ನು ನೋಡುವದೇನೂ ಮುಖ್ಯವಲ್ಲ–ಹೀಗೆ (ದಿಶಶ್ಚ) ದಿಕ್ಕುಗಳನ್ನು ಕೂಡ (ಅನವಲೋಕಯನ್) ನೋಡದೆ (ಪ್ರಶಾಂತಾತ್ಮಾ) ಪ್ರೀತಿ, ಹಗೆತನ–ಮೊದಲಾದವುಗಳಿಲ್ಲದಂಥ ತಿಳಿಮನಸ್ಸಿನವನಾಗಿ (ವಿಗತಭೀಃ) ತಾನು ವರ್ಣಧರ್ಮಗಳನ್ನು ಬಿಟ್ಟಿರುವದರಿಂದ ಹಾನಿಯಾದೀತೆಂಬ ಭಯವೇನೂ ಇಲ್ಲದವನಾಗಿ (ಬ್ರಹ್ಮಚಾರಿವ್ರತೇಸ್ಥಿತಃ) ಬ್ರಹ್ಮಚಾರಿಗಳಂತೆ ಗುರುಸೇವೆ ಮೊದಲಾದ ವ್ರತವನ್ನು ನಡೆಸುವವನಾಗಿ (ಮನಃ) ಮನಸ್ಸನ್ನು (ಸಂಯಮ್ಯ) ವಿಷಯಾಕಾರವಾಗದಂತೆ ಬಿಗಿಹಿಡಿದು (ಮಚ್ಚಿತ್ತಃ) ಆ ಬಿಗಿಹಿಡಿದ ಚಿತ್ತವನ್ನು ನನ್ನಲ್ಲಿಟ್ಟು (ಮತ್ಪರಃ) ನನ್ನಲ್ಲಿ ಮನಸ್ಸನ್ನಿಟ್ಟದ್ದರ ಫಲವಾಗಿ ಬೇರೆ ಕ್ಷುದ್ರವಾದ ಪ್ರಯೋಜನಗಳನ್ನು ಬಯಸದೆ ನನ್ನನ್ನೇ ಹೆಚ್ಚಿನ ಗತಿಯೆಂದು ತಿಳಿದವನಾಗಿ (ಯುಕ್ತಃ) ಧ್ಯಾನಾರೂಢನಾಗಿ (ಆಸೀತ) ಇರಬೇಕು

ಈ ಯೋಗದ ಫಲವೇನೆಂದರೆ —

**ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

(ಏವಂ) ಹೀಗೆ (ಸದಾ) ಯಾವಾಗಲೂ (ನಿಯತಮಾನಸಃ) ಮನಸ್ಸನ್ನು ಬಿಗಿಹಿಡಿದು (ಆತ್ಮಾನಂ) ತನ್ನನ್ನು (ಯುಂಜನ್) ಧ್ಯಾನದಲ್ಲಿ

ತೊಡಗಿಸಿ (ಯೋಗೀ) ಆ ಯೋಗಿಯು (ನಿರ್ವಾಣಪರಮಾಂ) ಹೆಚ್ಚಿನ ಮೋಕ್ಷರೂಪವಾದಂಥ (ಮತ್ಸಂಸ್ಥಾಂ) ನನ್ನಲ್ಲಿಯೇ ನಲೆಗೊಂಡಿರುವದೆಂಬ (ಶಾಂತಿಂ) ಸುಖವನ್ನು (ಅಧಿಗಚ್ಛತಿ) ಪಡೆಯುತ್ತಾನೆ

ಯಾವಾಗ ಯೋಗವು ಕಷ್ಟಸಾಧ್ಯವಾಗುವದಂದರ —

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

(ಅರ್ಜುನ) ಅರ್ಜುನನೆ, ಕೇಳು (ಯೋಗಃ) ಧ್ಯಾನನಿಷ್ಠೆಯು (ಅತ್ಯಶ್ನತಸ್ತು) ತನಗೆ ಸಾಮಾನ್ಯವಾಗಿ ಅರಗುವದಕ್ಕಿಂತ ಹೆಚ್ಚಾಗಿ ಅಳತೆ ಗೆಟ್ಟು ತಿನ್ನುವವನಿಗಾದರೊ (ನ ಅಸ್ತಿ) ಇರುವದಿಲ್ಲ ಹೆಚ್ಚು ಉಂಡರೆ ಹೆಚ್ಚು ನಿದ್ರೆ ಬರುವದು (ಏಕಾಂತಂ) ಎಷ್ಟು ಮಾತ್ರವೂ (ಅನಶ್ನತಃ ಚ) ಆಹಾರವನ್ನೇ ತಗೆದುಕೊಳ್ಳದವನಿಗೂ (ನ) ಇರುವದಿಲ್ಲ ಆಹಾರವೇ ಇಲ್ಲದ ಹೋದರ ನಿದ್ರೆಯೇ ಕಡಿಮೆಯಾಗುವದು ಹೆಚ್ಚು ನಿದ್ರೆಯಿಂದ ಬಾಧಕವೇನೆಂದರ ಮನಸ್ಸು ತಮೋಗುಣದ ಕಡೆಗ ಹೆಚ್ಚು ಒಲಿಯುವದು ಆದ್ದರಿಂದ ಸತ್ತ್ವಗುಣಪ್ರಧಾನವಾದ ಆ ಧ್ಯಾನನಿಷ್ಠೆಯು (ಅತಿಸ್ವಪ್ನ ಶೀಲಸ್ಯ ಚ) ಬಹಳ ನಿದ್ರೆ ಮಾಡುವವನಿಗೂ (ನ) ಇಲ್ಲ ನಿದ್ರ ಕಡಿಮೆ ಯಾಗುವದರಿಂದ ಬಾಧಕವೇನೆಂದರೆ, ಮನಸ್ಸು ರಜೋಗುಣದ ಕಡೆಗೆ ಹೆಚ್ಚು ಒಲಿಯುವದು ಆದ್ದರಿಂದ ಸತ್ವಗುಣ ಪ್ರಧಾನವಾದ ಆ ಧ್ಯಾನವು (ಜಾಗ್ರತಃ ಚ) ಬಹಳ ಎಚ್ಚತ್ತಿರುವವನಿಗೂ (ನೈವ) ಇಲ್ಲವೇ ಇಲ್ಲ ಇದರ ಮೇಲೆ ಹೆಚ್ಚು ಉಣ್ಣುವದರಿಂದ ರೋಗವೂ ಊಟವನ್ನೇ ಬಿಡುವವರಿಂದ ಅಶಕ್ತಿಯೂ ಆಗಿ ಯೋಗಾಭ್ಯಾಸವು ವೈಗೂಡದೆ ಹೋಗುವದು

ಯಾವಾಗ ಯೋಗವು ವೈಗೂಡುವದಂದರ —

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥**

( ಯುಕ್ತಾಹಾರವಿಹಾರಸ್ಯ ) ಅರ್ಧಹೊಟ್ಟೆಗೆ ಅನ್ನ , ಉಳಿದ ಅರ್ಧದಲ್ಲಿ ಅರ್ಧ ಹೊಟ್ಟೆಗೆ ನೀರು, ಉಳಿದ ಸ್ಥಲವು ಗಾಳಿಯಾಡುವದಕ್ಕೆ-ಹೀಗೆ ಆಹಾರದ ಮತ್ತು ದಣುವಾಗದಷ್ಟು ಓಡಾಟದ ನಿಯಮವುಳ್ಳ ವರಿಗೂ (ಕರ್ಮಸು) ಕಲಸಗಳಲ್ಲಿ (ಯುಕ್ತಚೇಷ್ಟಸ್ಯ) ಬೇಸರವಾಗದಷ್ಟು ಮಾತ್ರ ಮಾಡುತ್ತಿರುವ ನಿಯಮವುಳ್ಳವರಿಗೂ (ಯುಕ್ತಸ್ವಪ್ನಾವ ಬೋಧಸ್ಯ) ನಿದ್ದೆಗೂ ಎಚ್ಚರಕ್ಕೂ ಇಷ್ಟಿಷ್ಟೇ ಕಾಲವೆಂದು ನಿಯಮ ವುಳ್ಳವರಿಗೂ (ಯೋಗಃ) ಧ್ಯಾನನಿಷ್ಠೆಯು (ದುಃಖಹಾ) ಯೋಗದ ಅಡಚಣೆಗಳ ರೂಪವಾದ ದುಃಖಗಳನ್ನೆಲ್ಲ ಕಳೆಯಬಲ್ಲದ್ದು (ಭವತಿ) ಆಗುತ್ತದೆ

ಅವನು ಯಾವಾಗ ಧ್ಯಾನಾರೂಢನಾಗುವನೆಂದರೆ —

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥**

(ಯದಾ) ಯಾವಾಗ (ವಿನಿಯತಂ) ಒಮ್ಮುಖವಾಗಿ ಮಾಡಿದಂಥ (ಚಿತ್ತಂ) ಮನಸ್ಸು (ಆತ್ಮನ್ಯೇವ) ಹೊರಗಣ ವಿಷಯಗಳನ್ನೆಲ್ಲ ಬಿಟ್ಟು ಅಂತರಾತ್ಮನಲ್ಲಿಯೇ (ಅವತಿಷ್ಠತೇ) ಇರುವಂಥದ್ದಾಗುತ್ತದೂ (ತದಾ) ಆಗ, ಅವನು (ಸರ್ವಕಾಮೇಭ್ಯಃ) ಯಾವ ಬಯಕೆಯಲ್ಲಿಯೂ (ನಿಃಸ್ಪೃಹಃ) ಆಶೆಯಿಲ್ಲದವನಾಗಿ (ಯುಕ್ತಃ) ಧ್ಯಾನನಿಷ್ಠನು (ಇತಿ) ಎಂದು (ಉಚ್ಯತೇ) ಎನಿಸುವನು

ಹಾಗೆ ನೆಲೆಗೆ ನಿಂತ ಮನಸ್ಸಿಗೆ ಹೋಲಿಕೆಯೇನೆಂದರೆ —

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥ ೧೯ ॥**

(ನಿವಾತಸ್ಥಃ) ಗಾಳಿ ಇಲ್ಲದ ಕಡೆ ಇಟ್ಟಿರುವ (ದೀಪಃ) ದೀಪವು (ಯಥಾ) ಹೇಗೆ (ನೇಂಗತೇ) ಚಲಿಸುವದಿಲ್ಲವೊ (ಸಾ) ಆ ಸ್ಥಿತಿಯು (ಯೋಗಂ) ಧ್ಯಾನವನ್ನು (ಯುಂಜತಃ) ಅಭ್ಯಾಸಮಾಡುತ್ತಿರುವಂಥ (ಯತಚಿತ್ತಸ್ಯ) ಮನೋನಿಗ್ರಹವುಳ್ಳ (ಯೋಗಿನಃ) ಯೋಗಿಯಾದ

(ಆತ್ಮನಃ) ಸಮಾಧಿಯ ಸಾಧಕನಿಗ (ಉಪಮಾ) ಹೋಲಿಕೆಯಾಗಿ (ಸ್ಮೃತಾ) ಮನಸ್ಸಿನ ಹರಿದಾಟವನ್ನು ಬಲ್ಲವರು ಹೇಳಿರುವರು

ಯಾವ ಸ್ಥಿತಿಯನ್ನು ಯೋಗವನ್ನಬೇಕಂದರ —

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮ ನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥**

(ಯೋಗಸೇವಯಾ) ಧ್ಯಾನದ ಅಭ್ಯಾಸದಿಂದ (ನಿರುದ್ಧಂ) ಬಿಗಿ ಹಿಡಿದಂಥ (ಚಿತ್ತಂ) ಮನಸ್ಸು (ಯತ್ರ) ಯಾವ ಸ್ಥಿತಿಯಲ್ಲಿ (ಉಪ ರಮತೇ) ಕಟ್ಟಿಗೆಯಿಲ್ಲದ ಅಗ್ನಿಯಂತೆ ಶಾಂತವಾಗುವದೊ (ಯತ್ರ ಚೈವ) ಯಾವ ಸ್ಥಿತಿಯಲ್ಲಿಯೇ (ಆತ್ಮಾನಂ) ಆತ್ಮಸ್ವರೂಪವನ್ನು (ಆತ್ಮನಾ) ಮನಸ್ಸಿನಿಂದ (ಪಶ್ಯನ್) ಕಂಡು (ಆತ್ಮನಿ) ಆ ಆತ್ಮದರ್ಶನದಲ್ಲಿಯೇ (ತುಷ್ಯತಿ) ಸಂತೋಷವನ್ನು ಹೊಂದುತ್ತಾನೊ.

ಮತ್ತು —

**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧ ॥**

(ಅತೀಂದ್ರಿಯಂ) ಇಂದ್ರಿಯಗಳಿಗೆ ನಿಲುಕದಿರುವಂಥ (ಬುದ್ಧಿ ಗ್ರಾಹ್ಯಂ)* ಶುದ್ಧವಾದ ಮತ್ತು ಸೂಕ್ಷ್ಮವಾದ ಬುದ್ಧಿಗೆ ನಿಲುಕುವಂಥ (ಆತ್ಯಂತಿಕಂ) ಎಂದಿಗೂ ಹೋಗದಂಥ (ಸುಖಂ) ಸುಖವೆಂಬುವದು (ಯತ್) ಯಾವದುಂಟೋ (ತತ್) ಅದನ್ನು (ವೇತ್ತಿ) ತಿಳಿಯುತ್ತಾನೋ ಮತ್ತು (ಯತ್ರ) ಯಾವ ಸ್ಥಿತಿಯಲ್ಲ (ಅಯಂ) ಈ ಯೋಗಿಯು (ಸ್ಥಿತಃ) ಆತ್ಮಸ್ವರೂಪದಲ್ಲಿ ಒಂದುಗೂಡಿದವನಾಗಿದ್ದು (ತತ್ತ್ವತಃ) ಆ ಪರಮಾರ್ಥಸ್ಥಿತಿಯಿಂದ (ನ ಚೈವ ಚಲತಿ) ಕದಲುವದು ಕೂಡ ಇಲ್ಲವೊ,

---

* "ದೃಶ್ಯತೇತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ" — ಸೂಕ್ಷ್ಮವನ್ನು ಕಾಣಬಲ್ಲವರ ಸೂಕ್ಷ್ಮವಾದ ಶುದ್ಧ ಬುದ್ಧಿಗೆ ಕಾಣುತ್ತದೆ. — ಶ್ರು

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥ ೨೨ ॥**

(ಯಂ) ಯಾವ ಸ್ಥಿತಿಯನ್ನು (ಲಬ್ಧ್ವಾ) ಪಡೆದುಕೊಂಡ ಮೇಲೆ (ಅಪರಂ) ಬೇರೆಯಾದ (ಲಾಭಂ ಚ) ಆದಾಯವನ್ನು ಕೂಡ (ತತಃ) ಆ ಆತ್ಮಲಾಭಕ್ಕಿಂತ (ಅಧಿಕಂ) ಹೆಚ್ಚಿನದೆಂದು (ನ ಮನ್ಯತೇ) ತಿಳಿಯುವ ದಿಲ್ಲವೊ (ಯಸ್ಮಿನ್) ಯಾವ ಸ್ಥಿತಿಯಲ್ಲಿ (ಸ್ಥಿತಃ) ಇರುವವನಾಗಿ (ಗುರು ಣಾಪಿ) ಬಹಳ ದೊಡ್ಡ (ದುಃಖೇನ) ವಿಪತ್ತಿನಿಂದಲೂ (ನ ವಿಚಾಲ್ಯತೇ) ಅಲ್ಲಾಡಿಸುವದಕ್ಕಾಗದಂತೆ ಇರುತ್ತಾನೊ,

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥ ೨೩ ॥**

(ದುಃಖಸಂಯೋಗವಿಯೋಗಂ) ಎಷ್ಟು ಹೆಚ್ಚಿನ ದುಃಖವು ಬಂದರೂ ಕೂಡ ಅವು ತಾಕದಂತೆ ಅವುಗಳನ್ನು ದೂರಕ್ಕ ಅಟ್ಟುವಂಥ (ತಂ) ಆ ಸ್ಥಿತಿಯನ್ನು (ಯೋಗಸಂಜ್ಞಿತಮ್) ಯೋಗವೆಂಬ ಹಸರುಳ್ಳದ್ದನ್ನಾಗಿ (ವಿದ್ಯಾತ್) ತಿಳಿಯಬೇಕು (ಸಃ) ಆ (ಯೋಗಃ) ಯೋಗವು (ನಿಶ್ಚಯೇನ) ಇದರಿಂದ ಹೆಚ್ಚಿನ ಫಲವುಂಟೆಂದು ಹೇಳುವ ಗುರುಗಳ ಮತ್ತು ಶಾಸ್ತ್ರಗಳ ಮಾತಿನ ಮೇಲಿನ ವಿಶ್ವಾಸದಿಂದ (ಅನಿರ್ವಿಣ್ಣಚೇತಸಾ) ನಿರಾಶೆಯಾಗದೆ ಇರುವ ಮನಸ್ಸುಳ್ಳವನಿಂದ (ಯೋಕ್ತವ್ಯಃ) ಅಭ್ಯಾಸಮಾಡತಕ್ಕದ್ದಾ ಗಿರುವದು

ಆ ಯೋಗವನ್ನು ಮಾಡುವ ಬಗೆ ಹೇಗೆಂದರೆ —

**ಸಂಕಲ್ಪಪ್ರಭವಾನ್ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪ ॥**

**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ ೨೫ ॥**

ಮನಸ್ಸು ಹೊರಗೆ ನುಗ್ಗುವದಕ್ಕೆ ಬಯಕೆಯೇ ಕಾರಣವಾದ್ದ ರಿಂದ (ಸಂಕಲ್ಪಪ್ರಭವಾನ್) ‘ಇದು ಚೆನ್ನಾಗಿದೆ’ ಎಂದು ನಾವು ಮನ

ಸ್ಸಿನಲ್ಲಿ ಗುಣಿಸಿಟ್ಟುಕೊಳ್ಳುವದರಿಂದ ಹುಟ್ಟುವಂಥ (ಕಾಮಾನ್) ಹೊ, ಗಂಥ, ಸ್ತ್ರೀ–ಮೊದಲಾದ ಬಯಕೆಗಳನ್ನು (ಸರ್ವಾನ್) ಎಲ್ಲವನ್ನೂ (ಅಶೇಷತಃ) ಅದರ ವಾಸನೆ ಕೂಡ ಮನಸ್ಸಿನಲ್ಲಿ ಉಳಿಯದಂತೆ (ತ್ಯಕ್ತ್ವಾ) ನಾಯಿ ಕಾರಿದ ಪಾಯಸದಂತೆ ಅಸಹ್ಯವಾಗಿರುವದೆಂದು ಬಿಟ್ಟು (ಮನಸೈವ) ಮನಸ್ಸಿನಿಂದಲೆ (ಇಂದ್ರಿಯಗ್ರಾಮಂ) ಇಂದ್ರಿಯಗಳ ಗುಂಪನ್ನು (ಸಮಂತತಃ) ಎಲ್ಲ ಕಡೆಯಿಂದಲೂ (ವಿನಿಯಮ್ಯ) ಹಿಮ್ಮುಖವಾಗಿ ಮಾಡಿ (ಧೃತಿಗೃಹೀತಯಾ) ಎಷ್ಟು ಕಷ್ಟವಾದರೂ ಎದೆಗೊಟ್ಟು ಮಾಡಿಯೇ ತೀರುವೆನೆಂಬ ಧೈರ್ಯದಿಂದ ಕೂಡಿದಂಥ (ಬುದ್ಧ್ಯಾ) ಬುದ್ಧಿಯಿಂದ (ಶನೈಃ ಶನೈಃ) ಮೆಲ್ಲಮೆಲ್ಲಗೆ (ಉಪರಮೇತ್) ವಿಷಯಗಳ ತೊಡಕನ್ನು ಕಳಚಿ ಕೊಂಡು ವಿರಾಮವನ್ನು ಪಡೆಯಬೇಕು ಹೀಗೆ ವಿಷಯಗಳನ್ನು ಹಿಮ್ಮೆಟ್ಟಿಸಿದಮೇಲೆ (ಮನಃ) ಹಿಮ್ಮೆಟ್ಟಿಸಿ ತಂದ ಆ ಮನಸ್ಸನ್ನು (ಆತ್ಮಸಂಸ್ಥಂ) ಆತ್ಮಸ್ವರೂಪದಲ್ಲಿಯೇ ನೆಲೆಯಾಗಿ ನಿಂತದ್ದನ್ನಾಗಿ (ಕೃತ್ವಾ) ಮಾಡಿ (ಕಿಂಚಿದಪಿ) ಆತ್ಮನಿಗಿಂತ ಬೇರೆಯಾದ ಏನೇನನ್ನೂ (ನ ಚಿಂತಯೇತ್) ಮನಸ್ಸಿನೊಳಕ್ಕೆ ಬಿಟ್ಟುಕೊಳ್ಳಕೂಡದು ಮೋಡಗಳು ಸೂರ್ಯನನ್ನು ಮರೆಮಾಡುವಂತೆ ವಿಷಯಾಕಾರವಾದ ವೃತ್ತಿಗಳು ಆತ್ಮನನ್ನು ಮರೆ ಮಾಡುವವು ಆದ್ದರಿಂದ ಮನಸ್ಸನ್ನು ವಿಷಯಾಕಾರವಾಗುವದಕ್ಕೆ ಬಿಡಬಾರದು

ಮನಸ್ಸು ಹೊರಕ್ಕೆ ನುಗ್ಗುವದಕ್ಕೆ ಹೋದರೇನು ಮಾಡಬೇಕೆಂ ಬರೆ —

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥**

(ಚಂಚಲಂ) ಒಹಳ ಹರಿದಾಡುವ ಸ್ವಭಾವದ್ದಾದ ಮತ್ತು ಆ ಕಾರಣದಿಂದಲೆ (ಅಸ್ಥಿರಂ) ಒಂದು ಕಡೆ ನಿಲ್ಲುವ ಸ್ವಭಾವ ದ್ದಲ್ಲದ (ಮನಃ) ಮನಸ್ಸು (ಯತಃ ಯತಃ) ಶಬ್ದ ಮೊದಲಾದ ಯಾವ ಯಾವ ವಿಷಯಗಳ ಬೆನ್ನು ಹಿಡಿಯುವದಕ್ಕೆ (ನಿಶ್ಚರತಿ) ಹೊರಕ್ಕೆ

ನುಗ್ಗುತ್ತಿದ್ದೊ (ತತಸ್ತತಃ) ಆ ವಿಷಯಗಳು ಬರೀ ತೋರಿಕೆಯವೇ ಹೊರತು ನಿಜವಾದ ಸುಖವನ್ನು ಕೊಡತಕ್ಕವುಗಳಲ್ಲವೆಂದು ತಿಳಿಸುವದರ ಮೂಲಕ ಆಯಾ ವಿಷಯಗಳಿಂದ (ಏತತ್) ಈ ಮನಸ್ಸನ್ನು (ನಿಯಮ್ಯ) ಹಿಮ್ಮೆಟ್ಟಿಸಿ ತಂದು (ಆತ್ಮನ್ಯೇವ) ಆತ್ಮಸ್ವರೂಪದಲ್ಲಿಯೇ (ವಶಂ) ವಶವಾಗಿರುವಂತೆ (ನಯೇತ್) ತಿದ್ದಬೇಕು

ಹೀಗೆ ತಿದ್ದಿದ ಮನಸ್ಸಿಗೆ ಆಗುವ ಲಾಭವೇನೆಂದರೆ —

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭ ॥**

(ಏನಂ) ಈ (ಪ್ರಶಾಂತಮನಸಂ ಹಿ) ಹೊರಗೆ ಹರಿದಾಡಬೇಕೆಂಬ ರಜೋಗುಣವೂ ಅಜಗರನ ಹಾಗೆ ಬೀಳಬೇಕೆಂಬ ತಮೋಗುಣವೂ ಇಲ್ಲದೆ ಆತ್ಮಾಕಾರವಾಗಿಯೇ ನಿಂತದ್ದರಿಂದ ಒಳ್ಳೆ ಶಾಂತವಾಗಿರುವ ಮನಸ್ಸುಳ್ಳವನೂ (ಶಾಂತರಜಸಂ) ತಮೋಗುಣವನ್ನು ಕಳೆದುಕೊಂಡಿರುವದಿಷ್ಟೇ ಅಲ್ಲದೆ ರಜೋಗುಣವನ್ನೂ ಇಲ್ಲದಂತೆ ಮಾಡಿಕೊಂಡಿರುವಂಥವನೂ (ಬ್ರಹ್ಮಭೂತಂ) ತಾನು ಹುಟ್ಟುನಾವುಗಳಿಲ್ಲದ ಬ್ರಹ್ಮನಾಗಿದ್ದರೂ ಅಜ್ಞಾನದಿಂದ ತಾನೊಬ್ಬ ಬೇರೆ ಹುಟ್ಟುನಾವುಗಳುಳ್ಳ ಜೀವನೆಂದು ಬಂದಿದ್ದ ತಿಳಿವಳಿಕೆಯನ್ನು ಕಳೆದುಕೊಂಡು ತನ್ನ ನಿಜವಾದ ಸ್ವರೂಪವನ್ನರಿತು ಬ್ರಹ್ಮವಾಗಿರುವನೂ (ಅಕಲ್ಮಷಂ) ಹಾಗೆ ಬ್ರಹ್ಮವಾದ ಕಾರಣದಿಂದಲೇ ಜೀವತ್ವದ ಪುಣ್ಯಪಾಪಗಳ ದೋಷಗಳನ್ನೆಲ್ಲ ದೂರಮಾಡಿಕೊಂಡವನೂ ಆದ (ಯೋಗಿನಂ) ಯೋಗಿಯನ್ನು (ಉತ್ತಮಮ್) ವಿಷಯಸುಖಗಳೆಲ್ಲಕ್ಕಿಂತಲೂ ಹೆಚ್ಚಿನದಾದ (ಸುಖಂ) ಸುಖವು (ಉಪೈತಿ) ಬಂದು ಸೇರುವದು

ಆ ಸುಖದ ವಿಷಯವನ್ನು ಇನ್ನೂ ಹೇಳಬೇಕೆಂದರೆ —

**ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮ ॥**

(ವಿಗತಕಲ್ಮಷಃ) ಕರ್ಮವನ್ನು ಅಕರ್ಮವಾಗಿ ನೋಡುವ ಜ್ಞಾನದ ಬಲದಿಂದ ಪುಣ್ಯಾಪಾಪಗಳನ್ನೆಲ್ಲ ಕಳೆದುಕೊಂಡಂಥ (ಯೋಗೀ) ಯೋಗಿಯು (ಏವಂ) ಹೀಗೆಯೇ (ಸದಾ) ಯಾವಾಗಲೂ (ಆತ್ಮಾನಂ) ತನ್ನನ್ನು (ಯುಂಜನ್) ಯೋಗಾಭ್ಯಾಸದಲ್ಲಿ ತೊಡಗಿಸಿ (ಸುಖೇನ) ರೋಗ, ಆಲಸ್ಯ-ಮೊದಲಾದ ಅಡಚಣೆಗಳ ಕೈಯನ್ನು ಸಾಗಗೊಡದೆ (ಬ್ರಹ್ಮ ಸಂಸ್ಪರ್ಶಂ) ತಾನು ಬ್ರಹ್ಮನೆಂಬ ತಿಳಿವಳಿಕೆಯುಂಟಾದ್ದರಿಂದಾದಂಥ (ಅತ್ಯಂತಂ) ನಾಶರಹಿತವಾದಂಥ (ಸುಖಂ) ಸುಖವನ್ನು (ಅಶ್ನುತೇ) ಅನುಭವಿಸುವನು

ಈ ಯೋಗದ ಫಲವಾಗಿ ಅನುಭವಕ್ಕೆ ಬರುವದೇನೆಂದರೆ —

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**

(ಯೋಗಯುಕ್ತಾತ್ಮಾ) ಈ ಬಗೆಯ ಯೋಗದಿಂದ ಕೂಡಿದ ಮನಸ್ಸುಳ್ಳವನಾದ ಎಂದರೆ ಯೋಗಿಯಾದ ಮತ್ತು (ಸರ್ವತ್ರ) ಚತುರ್ಮುಖ ಬ್ರಹ್ಮನನ್ನು ಮೊದಲುಗೊಂಡು ಮೋಟುಮರದವರೆಗೂ ಇರುವ ಎಲ್ಲ ವಿಷಯಗಳಲ್ಲಿಯೂ (ಸಮದರ್ಶನಃ) ಹೆಚ್ಚು ಕಡಿಮೆ ಇಲ್ಲದಿರುವ ಬ್ರಹ್ಮಸ್ವರೂಪವೇ ಹಾಸುಹೊಕ್ಕಾಗಿರುವದೆಂದು ನೋಡುವವನಾದ ಸಾಧಕನು (ಆತ್ಮಾನಂ) ತನ್ನನ್ನು (ಸರ್ವಭೂತಸ್ಥಂ) ಎಲ್ಲ ಪ್ರಾಣಿಗಳಲ್ಲಿಯೂ ಇರುವವನನ್ನಾಗಿಯೂ, ಎಂದರೆ ಚೈತನ್ಯರೂಪನಾದ ತಾನು ಎಲ್ಲ ಪ್ರಾಣಿಗಳಿಗೂ ಆತ್ಮವಾದ ಚೈತನ್ಯವಾಗಿರುವೆನೆಂದೂ ಮತ್ತು (ಆತ್ಮನಿ) ತನ್ನಲ್ಲಿ (ಸರ್ವಭೂತಾನಿ ಚ) ಎಲ್ಲ ಚರಾಚರವಸ್ತುಗಳೂ ಗರ್ಭಿತವಾಗಿರುವವೆಂದೂ, ಎಂದರೆ ಗರ್ಭಿಣಿಯ ಹೊಟ್ಟೆಯಲ್ಲಿ ಮಕ್ಕಳಿರುವಂತೆ ಅಲ್ಲ, ಹಾಗಿದ್ದರೆ ಅದು ಒಂದರಿಂದ ಹೊರತಾದ ಇನ್ನೊಂದರಲ್ಲಿ ಒಂದರಿಂದ ಹೊರತಾದ ಇನ್ನೊಂದು ಇರುವದೆಂದಾಗುತ್ತದೆ ಪರಮಾತ್ಮನೆಂಬ ವಸ್ತು ಒಂದರಿಂದ ಹೊರತಾದ ಇನ್ನೊಂದಲ್ಲ ಅದರಿಂದ ಹೊರತಾದ ವಸ್ತುವೇ ಇಲ್ಲ. ಅದು ಎಲ್ಲೆಲ್ಲಿಯೂ ತುಂಬಿರುವಂಥದ್ದು ಅದನ್ನು ಮತ್ತೊಂದರಿಂದ

ಹೊರತಾಪದ್ದೆಂದಿಟ್ಟುಕೊಂಡರ ಜಗತ್ತಿನಲ್ಲಿ ಅಂಥ ವಸ್ತುಗಳೆಲ್ಲ ನಾಶವಾಗಿಯೇ ಆಗುವಂತೆ ಪರಮಾತ್ಮನೂ ನಾಶನಾಗಬೇಕಾಗುತ್ತದೆ ಜಗತ್ತೆಲ್ಲ ನಾಶವಾದರೂ ಪರಮಾತ್ಮನು ನಾಶವಾಗತಕ್ಕವನಲ್ಲ ಆದ್ದರಿಂದ ಅವನೊಳಗೆ ಜಗತ್ತಿರುವದೆಂಬುದು ಕನಸುಗಾಣುವವನಲ್ಲಿ ಕನಸಿನ ಜಗತ್ತಿರುವಂತೆ ಹೇಗೆಂದರ ಜಗತ್ತೆಲ್ಲ ಜ್ಞಾನಕ್ಕೆ ವಿಷಯವಾದ್ದರಿಂದ ಅದು ಜ್ಞಾನದ ಇರುವಿಕೆಯ ಬಲದ ಮೇಲೆಯೇ ತೋರುತ್ತ ಇರಬೇಕೇ ಹೊರತು ಜ್ಞಾನದ ಸಂಬಂಧವಿಲ್ಲದೆ ಸ್ವತಂತ್ರವಾದ ಇರುವಿಕೆಯು ಅದಕ್ಕಲ್ಲಿಯೂ ಕಂಡುಬಂದಿಲ್ಲವಾದ ಕಾರಣ ಜ್ಞಾನಸ್ವರೂಪನಾದ ತನ್ನಲ್ಲಿ ಅದು-ಹಗ್ಗದಲ್ಲಿ ಹಾವು ಹೇಗೋ ಹಾಗೆ-ಬರೀ ತೋರಿಕೆಯದಾಗಿರುವದೆಂದೂ (ಈಕ್ಷತೇ) ನೋಡುತ್ತಾನೆ

ಆತ್ಮವೆಂಬುದೆಲ್ಲ ಒಂದೇ ಎಂಬ ತಿಳಿವಳಿಕೆಯ ಫಲವೇನೆಂದರೆ —

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦ ॥**

ತನ್ನನ್ನು ಎಲ್ಲದರಲ್ಲಿಯೂ ಎಲ್ಲವನ್ನೂ ತನ್ನಲ್ಲಿಯೂ ನೋಡುತ್ತ ಆತ್ಮವೆಂಬುದೆಲ್ಲ ಒಂದೇ ಎಂಬ ತಿಳಿವಳಿಕೆಯುಳ್ಳವನು ನನ್ನನ್ನು ಎಲ್ಲದರಲ್ಲಿಯೂ ಎಲ್ಲವನ್ನೂ ನನ್ನಲ್ಲಿಯೂ ನೋಡುತ್ತಾನೆ ಇದರಿಂದ ಆಗುವ ಫಲವೇನೆಂದರೆ (ಯಃ) ಯಾವನು (ಮಾಂ) ನನ್ನನ್ನು (ಸರ್ವತ್ರ) ಎಲ್ಲದರಲ್ಲಿಯೂ (ಪಶ್ಯತಿ) ನೋಡುತ್ತಾನೋ, ಮತ್ತು (ಸರ್ವಂ ಚ) ಆ ಎಲ್ಲವನ್ನೂ (ಮಯಿ) ನನ್ನಲ್ಲಿ (ಪಶ್ಯತಿ) ನೋಡುತ್ತಾನೊ, ಎಂದರೆ ನಾನೆ ಎಲ್ಲರ ಆತ್ಮನೆಂದೂ ನನ್ನಲ್ಲಿಯೇ ಹಗ್ಗದಲ್ಲಿ ಹಾವಿನ ಹಾಗೆ ಎಲ್ಲವೂ ಕಲ್ಪಿತವೆಂದೂ ತಿಳಿಯುತ್ತಾನೊ (ತಸ್ಯ) ಅವನ ಭಾಗಕ್ಕೆ (ಅಹಂ) ನಾನು (ನ ಪ್ರಣಾಶ್ಯಾಮಿ) ನಾಶವಾಗುವದಿಲ್ಲ ಯಾರಿಗೆ ನಾನು ದೂರನಾಗುವೆನೊ ಅವರ ಭಾಗಕ್ಕೆ ನಾನು ನಾಶವಾದ ಹಾಗೆ, ಜ್ಞಾನಿಗೆ ಅವನ ಆತ್ಮವೇ ನಾನಾದ್ದರಿಂದ ನಾನು ಅವನ ಭಾಗಕ್ಕೆ ಇಲ್ಲದವನಾಗುವದಿಲ್ಲ (ಸ ಚ) ಅವನು

ಕೂಡ (ಮೇ) ನನ್ನ ಭಾಗಕ್ಕೆ (ನ ಪ್ರಣಶ್ಯತಿ) ನಾಶವಾಗುವದಿಲ್ಲ ಯಾವನು ನನಗೆ ದೂರವೊ ಅವನು ನನ್ನ ಭಾಗಕ್ಕೆ ಇಲ್ಲದಂತೆ. ಜ್ಞಾನಿಯ ಆತ್ಮವೂ ನನ್ನ ಆತ್ಮವೂ ಒಂದೇ ಆದ್ದರಿಂದ ಅವನು ನನ್ನ ಭಾಗಕ್ಕೆ ಇಲ್ಲದವನಾಗುವದಿಲ್ಲ

ಹೀಗೆ ನನ್ನನ್ನು ತಿಳಿಯುವದರ ಫಲವೇನೆಂದರೆ —

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ ೩೧ ॥**

(ಏಕತ್ವಂ) ಗಡಿಗೆಯ ಬಯಲು ದೊಡ್ಡ ಬಯಲಿನಲ್ಲಿ ಒಂದಾಗಿರುವಂತೆ ತನ್ನ ಆತ್ಮವೂ ನನ್ನ ಆತ್ಮವೂ ಒಂದೆಂಬುದನ್ನು (ಆಸ್ಥಿತಃ) ಅನುಭವಿಸುವವನಾಗಿ (ಯಃ) ಯಾವನು (ಸರ್ವಭೂತಸ್ಥಿತಂ) ಎಲ್ಲ ಪ್ರಾಣಿಗಳಲ್ಲಿಯೂ ಅಂತರಾತ್ಮನಾಗಿರುವ (ಮಾಂ) ನನ್ನನ್ನು (ಭಜತಿ) ಭಜಿಸುವನೊ (ಸಃ) ಆ (ಯೋಗೀ) ಜ್ಞಾನಿಯು (ಸರ್ವಥಾ ವರ್ತಮಾನೋಽಪಿ) ಯಾಜ್ಞವಲ್ಕ್ಯ ಮೊದಲಾದವರಂತೆ ಸರ್ವಕರ್ಮಸಂನ್ಯಾಸವನ್ನು ಮಾಡಿದ್ದರೂ ವಸಿಷ್ಠರು, ಜನಕ ಮೊದಲಾದವರಂತೆ ವರ್ಣಧರ್ಮಗಳನ್ನು ಮಾಡುತ್ತಲೇ ಇದ್ದರೂ ದತ್ತಾತ್ರೇಯರ* ಮೊದಲಾದವರಂತೆ ಅಯೋಗ್ಯವೆಂದು ಕಾಣಿಸುವ ಆಚರಣೆಯಲ್ಲಿದ್ದರೂ (ಮಯಿ) ನನ್ನಲ್ಲಿ (ವರ್ತತೇ) ಇರುತ್ತಾನೆ ಎಂದರೆ ಅವನು ಈಗಲೇ ನನ್ನನ್ನು ಪಡೆದೇ ಇರುತ್ತಾನೆ, ಸತ್ತಮೇಲೆ ಪಡೆಯಬೇಕಾದ್ದೇನೂ ಉಳಿದಿಲ್ಲ ಆದ್ದರಿಂದ ಸತ್ತಮೇಲಿನ ಮೋಕ್ಷವೆನಿಸಿಕೊಳ್ಳುವ ವಿದೇಹಮುಕ್ತಿಗೆ ಯಾವ ದೇವತೆಗಳೂ ವಿಘ್ನವನ್ನು ಮಾಡುವದಕ್ಕೆ ಬರುವ ಹಾಗಿಲ್ಲ

ಮತ್ತೇನೆಂದರೆ —

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥೩೨॥**

* ದತ್ತಾತ್ರೇಯರು ಪ್ರಾಪಂಚಿಕರನ್ನು ದೂರಮಾಡುವದಕ್ಕಾಗಿ ನಿಷಿದ್ಧಾಚರಣೆಯಲ್ಲಿ ಕಾಣಬರುತ್ತಿದ್ದರೇ ಹೊರತು ಆದರ ಮೇಲಿನ ಪ್ರೇಮದ ಸೆಳೆತಕ್ಕೆ ಸಿಕ್ಕಿ ಮಾಡುತ್ತಿರಲಿಲ್ಲ.

(ಅರ್ಜುನ) ಅರ್ಜುನನೆ, ಕೇಳು (ಯಃ) ಯಾವನು (ಸರ್ವತ್ರ) ಎಲ್ಲ ಪ್ರಾಣಿಗಳಲ್ಲಿಯೂ (ಆತ್ಮೌಪಮ್ಯೇನ) ತನ್ನಂತೆ (ಸುಖಂ ವಾ) ಸುಖವನ್ನೂ, ಎಂದರೆ ಸುಖವು ತಮಗೆ ಹೇಗೆ ಬೇಕಾದದ್ದೊ ಹಾಗೆ ಎಲ್ಲರಿಗೂ ಬೇಕಾದದ್ದೆಂದೂ (ಯದಿ ವಾ ದುಃಖಂ) ಅಥವಾ ದುಃಖವನ್ನೂ, ಎಂದರೆ ದುಃಖವು ತನಗೆ ಹೇಗೆ ಬೇಡವಾದದ್ದೊ ಹಾಗೆ ಎಲ್ಲರಿಗೂ ಬೇಡವಾದದ್ದೆಂದೂ (ಸಮಂ) ಒಂದೇ ರೀತಿಯಾಗಿ (ಪಶ್ಯತಿ) ನೋಡುತ್ತಾನೊ ಎಂದರೆ ಯಾರಿಗೂ ನೋವನ್ನುಂಟುಮಾಡುವದಿಲ್ಲವೊ (ಸಃ) ಆ (ಯೋಗೀ) ಜ್ಞಾನಿಯು (ಪರಮಃ) ಎಲ್ಲರಿಗಿಂತ ಮೇಲಾದವನೆಂದು (ಮತಃ) ಹೇಳಿಸಿಕೊಳ್ಳುವನು

ಈ ಯೋಗವನ್ನು ಸಾಧಿಸುವದು ಕಷ್ಟವೆಂದರಿತು,

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು :—

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥ ೩೩ ॥**

(ಮಧುಸೂದನ) ಶ್ರೀಕೃಷ್ಣನೆ, ಹೇಳು (ಸಾಮ್ಯೇನ) ಸಮತ್ವವೆಂಬ ರೂಪದಿಂದ (ತ್ವಯಾ) ನಿನ್ನಿಂದ (ಪ್ರೋಕ್ತಂ) ಹೇಳಲ್ಪಟ್ಟ (ಅಯಂ) ಈ (ಯೋಗಃ) ಮನಸ್ಸನ್ನು ಬಿಗಿಹಿಡಿಯುವ ಸಾಧನವು (ಯಃ) ಯಾವದೋ ಅದು ನನ್ನನ್ನು ಎದೆಗೆಡಿಸುತ್ತಿದೆ ಏಕೆಂದರೆ (ಚಂಚಲತ್ವಾತ್) ಮನಸ್ಸು ಹರಿದಾಡುವ ಸ್ವಭಾವದ್ದಾದ್ದರಿಂದ (ಏತಸ್ಯ) ಈ ಮನಸ್ಸಿನ (ಸ್ಥಿರಾಂ) ಒಂದೇ ಕಡೆ ನೆಲೆಯಾಗಿರುವಂಥ (ಸ್ಥಿತಿಂ) ಸ್ಥಿತಿಯನ್ನು (ಅಹಂ) ನಾನು (ನ ಪಶ್ಯಾಮಿ) ಕಾಣೆನು

ಏಕೆಂದರೆ :—

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪ ॥**

(ಕೃಷ್ಣ) ಭಕ್ತಜನರ ಪಾಪಗಳನ್ನು ಸೆಳೆಯುವ ಕೃಷ್ಣನೆ, ಕೇಳು (ಮನಃ) ಮನಸ್ಸು (ಚಂಚಲಂ ಹಿ) ಹರಿದಾಡುವ ಸ್ವಭಾವದ್ದಲ್ಲವೆ?

ಮತ್ತು ಅದು (ಪ್ರಮಾಥಿ) ಶರೀರವನ್ನೂ ಇಂದ್ರಿಯಗಳನ್ನೂ ಕಡೆದು ಪರವಶವಾಗಿ ಮಾಡುವದು ಅಲ್ಲದ (ಬಲವತ್) ಬೇರೆ ಯಾರೂ ಅದನ್ನು ತಡೆಯುವದಕ್ಕೆ ಆಗದಷ್ಟು ಬಲವುಳ್ಳದ್ದು ಇದರ ಮೇಲೆ (ದೃಢಂ) ನಾಗಪಾಶದಂತೆ ಕತ್ತರಿಸುವದಕ್ಕೆ ಬರದಂಥದ್ದು ಅಥವಾ ಜಿಗಣೆಯಂತೆ ಹಿಡಿದ ಪಟ್ಟನ್ನು ಬಿಡದೆ ಇರುವಂಥದ್ದು (ವಾಯೋರಿವ) ಗಾಳಿಯನ್ನು ಹಿಡಿಯಲ್ಲಿಟ್ಟುಕೊಳ್ಳುವದು ಹೇಗೆ ಅಸಾಧ್ಯವೋ ಹಾಗೆ (ತಸ್ಯ) ಆ ಮನಸ್ಸಿನ (ನಿಗ್ರಹಂ) ಅಡ್ಡಗಟ್ಟೆಯನ್ನು ಹಾಕುವದು (ಸುದುಷ್ಕರಮ್) ಬಹಳ ಕಷ್ಟವೆಂದು (ಅಹಂ) ನಾನು (ಮನ್ಯೇ) ತಿಳಿಯುತ್ತೇನೆ

**ಶ್ರೀ ಭಗವಾನುವಾಚ** ಶ್ರೀ ಕೃಷ್ಣನು ಹೇಳಿದ್ದು —

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥**

(ಮಹಾಬಾಹೋ) ಅರ್ಜುನನೆ, ಕೇಳು (ಮನಃ) ಮನಸ್ಸು (ದುರ್ನಿಗ್ರಹಂ) ತಡೆಯುವದಕ್ಕೆ ಆಗದ್ದೆಂದೂ (ಚಲಮ್) ಹರಿದಾಡುವ ಸ್ವಭಾವದ್ದೆಂದೂ ನೀನು ಹೇಳಿದ್ದರಲ್ಲಿ (ಅಸಂಶಯಂ) ಸಂಶಯವಿಲ್ಲ ಅದು ಹಾಗೆಯೇ ಸರಿ (ಕೌಂತೇಯ) ಅರ್ಜುನನೆ, ಕೇಳು (ಅಭ್ಯಾಸೇನ ತು) ಮನಸ್ಸನ್ನು ಒಂದೇ ಆಕಾರವಾಗಿರಿಸಿಕೊಳ್ಳುವದಕ್ಕೆ ಪ್ರಯತ್ನ ಮಾಡುವದರಿಂದಲೂ (ವೈರಾಗ್ಯೇಣ ಚ) ಅದೆಲ್ಲಿಗಾದರೂ ಹೊರಗಣ ವಿಷಯಗಳನ್ನು ಹುಡುಕಿಕೊಂಡು ಹೋಗುವದಕ್ಕೆ ಕಾಲೆಳೆದರೆ ಆ ವಿಷಯಗಳೆಲ್ಲ ಬರೀ ತೋರಿಕೆಯವೆಂದೂ ದುಃಖವನ್ನು ಮಾತ್ರ ಕೊಡತಕ್ಕವುಗಳೆಂದೂ ತಿಳಿಸುವದರ ಮೂಲಕ ಅದಕ್ಕುಂಟುಮಾಡಿದ ವೈರಾಗ್ಯದಿಂದಲೂ (ಗೃಹ್ಯತೇ) ಬಿಗಿಹಿಡಿಯುವದಕ್ಕಾಗುತ್ತದೆ ಬಹು ವೇಗವಾಗಿ ಹೋಗುತ್ತಿರುವ ನದಿಯ ಪ್ರವಾಹಕ್ಕೆ ಅಡ್ಡಗಟ್ಟೆಯನ್ನು ಕಟ್ಟಿ ತಡೆದುಕೊಂಡು ಕಾಲುವೆಗಳ ಮೂಲಕ ತಂದು ಹೊಲದಲ್ಲಿ ನಿಲ್ಲಿಸಿಕೊಳ್ಳುವ ಹಾಗೆ ಮನಸ್ಸೆಂಬ ನದಿಯ ವಿಷಯಚಿಂತನೆಯೆಂಬ ಪ್ರವಾಹವನ್ನು ವೈರಾಗ್ಯದಿಂದ ತಡೆದು ಧ್ಯಾನದ ಅಭ್ಯಾಸದ ಮೂಲಕ

ಆತ್ಮಸ್ವರೂಪದಲ್ಲಿ ನಿಲ್ಲಿಸಿಕೊಳ್ಳುವದು ಸುಲಭವಾಗುವದು

ಎಂಥವರಿಗೆ ಇದು ಸಾಧ್ಯವೆಂದರೆ·—

**ಅಸಂಯುತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬ ॥**

(ಯೋಗಃ) ಧ್ಯಾನವು (ಅಸಂಯುತಾತ್ಮನಾ) ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಮನಸ್ಸನ್ನು ಹಿಡಿತಕ್ಕೆ ಸಿಕ್ಕಿಸಿಕೊಳ್ಳಲಾರದಂಥವರಿಗೆ (ದುಷ್ಪ್ರಾಪಃ) ದಕ್ಕುವ ಮಾತಲ್ಲ (ಇತಿ) ಎಂದು (ಮೇ) ನನ್ನ (ಮತಿಃ) ಅಭಿಪ್ರಾಯವು ಮನಸ್ಸು ಹಿಡಿತಕ್ಕೆ ಸಿಕ್ಕಿದರಷ್ಟೆ ಅದನ್ನು ಆತ್ಮನ ಮೇಲಿಡುವದು? ಅದೇ ಸಾಧ್ಯವಲ್ಲದಿದ್ದರ ಧ್ಯಾನವು ಹೇಗಾದೀತು? (ಯತತಾ) ಎಡೆಬಿಡದೆ ಪ್ರಯತ್ನಿಸುತ್ತಿರುವಂಥ (ವಶ್ಯಾತ್ಮನಾತು) ಅಭ್ಯಾಸ ದಿಂದಲೂ ವೈರಾಗ್ಯದಿಂದಲೂ ಮನಸ್ಸನ್ನು ಹಿಡಿತಕ್ಕೆ ತಂದುಕೊಂಡವರಿ ಗಾದರೊ (ಉಪಾಯತಃ) ಪುರುಷಪ್ರಯತ್ನವೆಂಬ ಉಪಾಯದಿಂದ (ಅವಾಪ್ತುಂ) ಆ ಯೋಗವನ್ನು ಪಡೆದುಕೊಳ್ಳುವದಕ್ಕೆ (ಶಕ್ಯಃ) ಸಾಧ್ಯವು

ಈ ಪ್ರಯತ್ನವನ್ನು ಮಾಡುವ ಸಡಗರದಲ್ಲಿ ವರ್ಣಧರ್ಮಗಳ ಉಪೇಕ್ಷೆಯಾಗುವದರಿಂದ ಈ ಸಂದರ್ಭದಲ್ಲಿ ಯೋಗವು ಮೈಗೂಡಿದ ರಂತು ಸಾರ್ಥಕವಾಗುವದು ಈ ಕಷ್ಟತರವಾದ ಮನೋನಿಗ್ರಹವು ಮೈಗೂಡುವದರೊಳಗೇ ಸಾವು ಒದಗಿದರೆ ಅವನಿಗೆ ಕರ್ಮಗಳನ್ನು ಬಿಟ್ಟ ದ್ದರಿಂದ ಸ್ವರ್ಗವೂ ತಪ್ಪಿಹೋಗಿ ಯೋಗವು ಮೈಗೂಡದ್ದರಿಂದ ಮೋಕ್ಷವೂ ಕೈಸೇರದಂತಾಗುವದೆಂದು ಗಾಬರಿಗೊಂಡು,

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು —

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭ ॥**

(ಕೃಷ್ಣ) ಕೃಷ್ಣನೆ, ಕೇಳು (ಶ್ರದ್ಧಯೋಪೇತಃ) ಗುರುವಿನ ಮಾತಿ ನಲ್ಲಿಯೂ ಶಾಸ್ತ್ರದ ಮಾತಿನಲ್ಲಿಯೂ ಶ್ರದ್ಧೆಯುಳ್ಳವನು. ಸಾಯುವ

ಕಾಲದಲ್ಲಿ (ಅಯತಿಃ) ಪ್ರಯತ್ನಮಾಡಲಾರದೆ (ಯೋಗಾತ್) ಧ್ಯಾನದಿಂದ (ಚಲಿತಮಾನಸಃ) ಕದಲಿದ ಮನಸ್ಸುಳ್ಳವನು ಎಂದರೆ ಧ್ಯೇಯ ವಸ್ತುವಿನ ಸ್ಮರಣೆಯನ್ನು ಕಳೆದುಕೊಂಡವನು (ಯೋಗಸಂಸಿದ್ಧಿಂ) ಯೋಗದ ಫಲವಾದ ಜ್ಞಾನವನ್ನು (ಅಪ್ರಾಪ್ಯ) ಪಡೆಯದೆ (ಕಾಂ) ಯಾವ (ಗತಿಂ) ಗತಿಯನ್ನು (ಗಚ್ಛತಿ) ಹೊಂದುತ್ತಾನೆ ?

ನಾನು ಕೇಳುವದೇನೆಂದರೆ —

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥ ೩೮ ॥**

(ಮಹಾಬಾಹೋ) ಶ್ರೀಕೃಷ್ಣನೆ, ಹೇಳು (ಬ್ರಹ್ಮಣಃ) ಬ್ರಹ್ಮವನ್ನು ಪಡೆಯುವ (ಪಥಿ) ಮಾರ್ಗದಲ್ಲಿ (ವಿಮೂಢಃ) ಗುರಿಯನ್ನು ಕಾಣದೆ ಇರುವವನಾಗಿ (ಅಪ್ರತಿಷ್ಠಃ) ಪಡೆಯದೆ ಇರುವದರಿಂದ ಜ್ಞಾನದ ಆಶ್ರಯವಿಲ್ಲದೆಯೂ ಬಿಟ್ಟಿರುವದರಿಂದ ಕರ್ಮದ ಆಶ್ರಯವಿಲ್ಲದೆಯೂ ಇರುವವನು (ಉಭಯವಿಭ್ರಷ್ಟಃ) ಜ್ಞಾನಮಾರ್ಗದಿಂದಲೂ ಕರ್ಮಮಾರ್ಗದಿಂದಲೂ ಜಾರಿದವನಾಗಿ (ಛಿನ್ನಾಭ್ರಮಿವ) ಹಿಂದಿನ ಮೋಡದಿಂದ ಒಡೆದ ಚೂರು ಗಾಳಿಯಿಂದ ಮುಂದಿನ ಮೋಡಕ್ಕೆ ಸೇರಿಕೊಳ್ಳದೆ ನಡುವೆ ತುಂತುರಾಗಿ ತ್ರಿಶಂಕುಸ್ವರ್ಗಕ್ಕೆ ಬಿದ್ದು ಇಂಗಿ ಹೋಗುವಂತ (ಕಚ್ಚಿನ್ನನಶ್ಯತಿ) ಹಾಳಾಗಿ ಹೋಗುವದಿಲ್ಲವೆ ?

**ಏತನ್ಮೇ ಸಂಶಯಂ ಕೃಷ್ಣ ಚ್ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಚ್ಛೇತ್ತಾ ನಹ್ಯುಪಪದ್ಯತೇ ॥ ೩೯ ॥**

(ಕೃಷ್ಣ) ಕೃಷ್ಣನೆ, ಕೇಳು (ಮೇ) ನನ್ನ (ಏತತ್) ಈ (ಸಂಶಯಂ) ಸಂದೇಹವನ್ನು (ಅಶೇಷತಃ) ಸಂಪೂರ್ಣವಾಗಿ (ಚ್ಛೇತ್ತುಮರ್ಹಸಿ) ನೀನು ಕತ್ತರಿಸಿಹಾಕಬೇಕು ಏಕೆಂದರೆ (ತ್ವದನ್ಯಃ) ನಿನ್ನ ಹೊರತು ಯಾರೂ (ಅಸ್ಯ) ಈ (ಸಂಶಯಸ್ಯ) ಸಂದೇಹದ (ಛೇತ್ತಾ) ಪರಿಹಾರಕನು (ನಹ್ಯುಪಪದ್ಯತೇ) ದೊರೆಯುವದಿಲ್ಲ

**ಶ್ರೀಭಗವಾನುವಾಚ** ಶ್ರೀ ಕೃಷ್ಣನು ಹೇಳಿದ್ದು —
**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೪೦ ॥**

(ಪಾರ್ಥ) ಅರ್ಜುನನೆ, ಕೇಳು (ತಸ್ಯ) ಕರ್ಮವನ್ನು ಬಿಟ್ಟ ಮೇಲೆ ಜ್ಞಾನವಾಗುವದಕ್ಕೆ ಮುಂಚೆ ಸಾಧನೆಯ ಕಾಲದಲ್ಲಿಯೇ ಸತ್ತವನಿಗೆ (ವಿನಾಶಃ) ನಾಶವೆಂಬುದು (ಇಹ) ಈ ಲೋಕದಲ್ಲಿ (ನೈವವಿದ್ಯತೇ) ಇಲ್ಲವೇ ಇಲ್ಲ (ಅಮುತ್ರ) ಸತ್ತ ಮೇಲೆ ಪರಲೋಕದಲ್ಲಿಯೂ (ನ) ಇಲ್ಲವೇ ಇಲ್ಲ ಎಂದರೆ ಅವನು ಈ ಲೋಕದವರಿಂದ ಕೆಟ್ಟವನೆನಿಸಿ ಕೊಳ್ಳುವದೂ ಇಲ್ಲ, ಸತ್ತ ಮೇಲೆ ಹುಳ, ಸೊಣ–ಮೊದಲಾದ ಹೀನ ಜನ್ಮಗಳನ್ನು ಪಡೆಯುವದೂ ಇಲ್ಲ (ಹಿ) ಏಕೆಂದರೆ (ತಾತ) ಮಗುವೆ, ಕೇಳು (ಕಲ್ಯಾಣಕೃತ್) ಒಳ್ಳೆಯದನ್ನು ಮಾಡಿದವನು (ಕಶ್ಚಿತ್) ಯಾರೂ (ದುರ್ಗತಿಂ) ಕೆಟ್ಟ ಗತಿಯನ್ನು (ನ ಗಚ್ಛತಿ) ಹೊಂದುವದಿಲ್ಲ

ಅವನಿಗೆ ಆಗುವ ಗತಿಯೇನೆಂದರೆ —

**ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ॥೪೧॥**

(ಯೋಗಭ್ರಷ್ಟಃ) ಕರ್ಮಗಳನ್ನೆಲ್ಲ ಬಿಟ್ಟು ಜ್ಞಾನದ ಅಭ್ಯಾಸಕಾಲ ದಲ್ಲಿಯೇ ಸತ್ತವನು ವಿಷಯಸುಖಗಳನ್ನನುಭವಿಸಬೇಕೆಂಬ ವಾಸನೆ ಇನ್ನೂ ಉಳಿದುಕೊಂಡಿದ್ದರೆ ಮುಂದೆ ತನ್ನ ವಿಷಯವಾಸನೆಯ ಬಾಯಾರಿಕೆ ಯನ್ನೂ ಇಂಗಿಸಿಕೊಂಡು ಜ್ಞಾನಮಾರ್ಗದಲ್ಲಿಯೂ ಕೊನೆಮುಟ್ಟುವದಕ್ಕೆ ಅನುಕೂಲವಾಗುವಂತೆ (ಪುಣ್ಯಕೃತಾಂ) ದೊಡ್ಡ ದೊಡ್ಡ ಯಜ್ಞಕರ್ಮ ಗಳನ್ನು ಮಾಡಿದವರಿಗೆ ದೊರಕುವಂಥ (ಲೋಕಾನ್) ಬ್ರಹ್ಮಲೋಕ ಮೊದಲಾದವುಗಳನ್ನು (ಪ್ರಾಪ್ಯ) ಪಡೆದು (ಶಾಶ್ವತೀಃ) ಲೆಕ್ಕವಿಲ್ಲದಷ್ಟು (ಸಮಾಃ) ವರ್ಷಗಳವರೆಗೆ (ಉಷಿತ್ವಾ) ಅಲ್ಲಿ ಬೇಕಾದಷ್ಟು ಸುಖವನ್ನು ಅನುಭವಿಸುತ್ತ ಇದ್ದು, ಅದು ಮುಗಿದ ಮೇಲೆ ಅಧರ್ಮದ ಸೆಳೆತಕ್ಕೆ ತಾನು ಸಿಕ್ಕದಂತೆ (ಶುಚೀನಾಂ) ಧರ್ಮಶ್ರದ್ಧೆಯುಳ್ಳಂಥ (ಶ್ರೀಮತಾಂ) ಭಾಗ್ಯವಂತರ (ಗೇಹೇ) ಮನೆಯಲ್ಲಿ (ಅಭಿಜಾಯತೇ) ಹುಟ್ಟುತ್ತಾನೆ.

ಅವನಿಗೇನೂ ವಿಷಯವಾಸನೆ ಉಳಿದಿರದಿದ್ದರೆ —

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨ ॥**

(ಅಥವಾ) ಅವನಿಗೆ ವಿಷಯವಾಸನೆ ಇಲ್ಲದಿದ್ದರೆ ಅವನು (ಧೀಮತಾಂ) ಆತ್ಮವಿಚಾರದಲ್ಲಿ ಬುದ್ಧಿಶಾಲಿಗಳಾದಂಥ (ಯೋಗಿನಾಂ) ಬಡವರಾಗಿ ತೃಪ್ತರಾಗಿ ಧ್ಯಾನಾದಿಗಳನ್ನು ಮಾಡಿಕೊಂಡಿರುವವರ (ಕುಲೇಏವ) ಕುಲದಲ್ಲಿಯೇ (ಭವತಿ) ಹುಟ್ಟುತ್ತಾನೆ ಭಾಗ್ಯವಂತರ ಕುಲದಲ್ಲಿ ಹುಟ್ಟಿದರೆ ವಿಷಯಗಳ ಜಗ್ಗಾಟಕ್ಕ ಸಿಕ್ಕುವದೊಂದು ಕಡೆ, ಅವರು ಹಣದ ಸೊಕ್ಕಿನಿಂದ ಎದೆಯನ್ನುಬ್ಬಿಸಿಕೊಂಡು ನಡೆಯುವವರಾದರೆ ಅಧರ್ಮದ ಕಡೆಗೆ ಜಾರುವ ಭಯವೊಂದು ಕಡೆ ಇವೆಲ್ಲವನ್ನೂ ಗೆದ್ದು ಮುಂದೆ ಸಾಗುವದು ಕಷ್ಟವಾಗುವದು ಬಡವರೂ ಬುದ್ಧಿಶಾಲಿಗಳೂ ಆದ ಯೋಗಿಗಳ ಕುಲದಲ್ಲಿ ಹುಟ್ಟಿದರೆ ಹುಟ್ಟಿದಂದಿನಿಂದಲೂ ಪರಮಾರ್ಥ ವಿಚಾರದ ವಾಸನೆಯೇ ಬಲಿಯುವದಕ್ಕೆ ಬೆಂಬಲವು ದೊರೆಯುವದು. (ಹಿ) ಆದ್ದರಿಂದ (ಈದೃಶಮ್) ಈ ಬಗೆಯಾದ (ಏತತ್) ಈ (ಜನ್ಮ) ಹುಟ್ಟು (ಯತ್) ಯಾವದೋ ಅದು (ಲೋಕೇ) ಜಗತ್ತಿನಲ್ಲಿ (ದುರ್ಲಭತರಂ) ದೊರೆಯುವದು ಬಹು ಕಡಿಮೆ

ಏಕೆಂದರೆ —

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩ ॥**

(ತತ್ರ) ಆತ್ಮವಿಚಾರದಲ್ಲಿ ಬುದ್ಧಿಶಾಲಿಗಳಾದಂಥ ಆ ಯೋಗಿಗಳ ಕುಲದಲ್ಲಿ (ಪೌರ್ವದೇಹಿಕಮ್) ಹಿಂದಿನ ಜನ್ಮದಲ್ಲಿ ತಾನು ಎಷ್ಟರಮಟ್ಟಿಗೆ ಸಾಧನೆಗಳನ್ನು ಮಾಡಿದ್ದನೊ ಅವೆಲ್ಲವುಗಳ ಸಂಸ್ಕಾರರೂಪವಾದ (ತಂ) ಆ (ಬುದ್ಧಿಸಂಯೋಗಂ) ಬುದ್ಧಿಯಿಂದ ಕೂಡಿರುವಿಕೆಯನ್ನು (ಲಭತೇ) ನಿದ್ರೆಯಿಂದ ಎದ್ದವನು ಹಿಂದಿನ ಬುದ್ಧಿಯನ್ನು ಪಡೆಯುವಂತೆ ಪಡೆ ಯುತ್ತಾನೆ (ಕುರುನಂದನ) ಅರ್ಜುನನೆ, ಕೇಳು ಒಂದೂರಿಗೆ

ಹೋಗಬೇಕೆಂದು ಹೊರಟವನು ಆ ರಾತ್ರಿಯೊಳಗೆ ಆ ಊರನ್ನು ಸೇರುವದಕ್ಕಾಗದೆ ನಡುವ ಒಂದು ಹಳ್ಳಿಯಲ್ಲಿ ಉಳಿದುಕೊಂಡರೆ ಬೆಳಗಾಗುತ್ತಲೆ ಅಲ್ಲಿಂದ ಮುಂದ ಸಾಗುನಂತ (ತತಃ) ಅಲ್ಲಿಂದ ಮುಂದಕ್ಕ (ಸಂಸಿದ್ಧೌ) ಯೋಗದ ಫಲವಾದ ಜ್ಞಾನವು ಉಂಟಾಗುವದಕ್ಕೆ (ಭೂಯಃ) ಎಹಳವಾಗಿ (ಯತತೇ ಚ) ಪ್ರಯತ್ನವನ್ನೂ ಮಾಡುತ್ತಾನ

ಹಿಂದಿನ ಬುದ್ಧಿ ಹೇಗ ಬರುವದೆಂದರ,—

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪ ॥**

(ಹಿ) ಏಕೆಂದರೆ (ಸಃ) ಅವನು (ಅವಶೋಽಪಿ) ಧ್ಯಾನ ಮೊದಲಾದವುಗಳನ್ನು ಮಾಡುವವರ ಸಹವಾಸ ಮೊದಲಾದ ಯಾವ ಸಹಾಯವೂ ಇಲ್ಲದ್ದರಿಂದ ತಾನೇನೂ ಅದಕ್ಕಾಗಿ ಯತ್ನವನ್ನು ಮಾಡದಿದ್ದರೂ (ತೇನೈವ ಪೂರ್ವಾಭ್ಯಾಸೇನ) ಆ ಹಿಂದಿನ ಜನ್ಮದ ಅಭ್ಯಾಸದ ಬಲದಿಂದಲೆ (ಹ್ರಿಯತೇ) ಹೇಗೊ ಜ್ಞಾನಸಿದ್ಧಿಯ ಕಡಗೆ ಕೊಚ್ಚಿಕೊಂಡು ಹೋಗುತ್ತಾನೆ ಹಿಂದಿನ ಜನ್ಮದಲ್ಲಿ ಯೋಗದ ಸಂಸ್ಕಾರವು ಕಡಿಮೆಯಾಗಿದ್ದು ಭೋಗ ಸಂಸ್ಕಾರವು ಹೆಚ್ಚಾಗಿದ್ದರೆ ಆ ಯೋಗಸಂಸ್ಕಾರವು ಭೋಗಸಂಸ್ಕಾರದ ತುಳಿತಕ್ಕೆ ಸಿಕ್ಕಿ ಕೆಲವು ಕಾಲ ತಲೆಯನ್ನು ಮರೆಸಿಕೊಂಡಿದ್ದರೂ ಅದು ತನಗೆ ಸ್ವಲ್ಪ ಸಮಯವು ದೊರೆಯುತ್ತಲೆ ತನ್ನ ಪ್ರಭಾವವನ್ನು ಬೀರುವದಕ್ಕೆ ಮೊದಲು ಮಾಡುತ್ತದೆ (ಯೋಗಸ್ಯ) ಯೋಗದ (ಜಿಜ್ಞಾಸುರಪಿ) ಸ್ವರೂಪವನ್ನು ತಿಳಿಯಲಪೇಕ್ಷಿಸುವವನು ಕೂಡ (ಶಬ್ದಬ್ರಹ್ಮ) ವೇದದಲ್ಲಿ ಹೇಳಿರುವ ಕರ್ಮಫಲಗಳನ್ನೆಲ್ಲ (ಅತಿವರ್ತತೇ) ಮೀರಿರುತ್ತಾನೆ ಎಂದರೆ ಧ್ಯಾನಾದಿಗಳ ಅಭ್ಯಾಸದ ವಿಚಾರವನ್ನು ಮಾಡುವ ಕಾಲದಲ್ಲಿ ಅವನು ಕರ್ಮವನ್ನು ಬಿಟ್ಟಿದ್ದರೂ ಆ ವಿಚಾರದ ಪ್ರಭಾವದಿಂದ ಎಲ್ಲ ಕರ್ಮಗಳ ಫಲಗಳಿಗಿಂತಲೂ ಹೆಚ್ಚಿನ ಫಲವನ್ನು ಪಡೆಯುತ್ತಾನೆ ಬರೀ ಅದರ ವಿಚಾರವನ್ನು ಮಾಡಿದವನಿಗೇ

ಇಷ್ಟಾದರೆ ಅದನ್ನು ತಿಳಿದುಕೊಂಡು ಅದರಂತೆ ನಡೆಸಿದವನ ವಿಷಯದಲ್ಲಿ ಹೇಳಬೇಕಾದ್ದೇನು!

ಯೋಗಾಭ್ಯಾಸವು ಹೆಚ್ಚಿನದೆಂದೇಕೆ ಹೇಳುವೆನೆಂದರೆ —

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂ ಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ೪೫ ॥**

(ಪ್ರಯತ್ನಾತ್) ಹಿಂದಿನ ಪ್ರಯತ್ನಕ್ಕಿಂತಲೂ (ಯತಮಾನಃ) ಹೆಚ್ಚಿನ ಪ್ರಯತ್ನವನ್ನು ಮಾಡುವ (ಯೋಗೀ ತು) ಯೋಗಿಯ ವಿಷಯವಾದರೂ, ಅವನು (ಸಂಶುದ್ಧಕಿಲ್ಬಿಷಃ) ಕೆಟ್ಟ ಸಂಸ್ಕಾರದ ಕಲೆಗಳನ್ನೆಲ್ಲ ತೊಳೆದುಕೊಂಡು ಮನಸ್ಸನ್ನು ಶುದ್ಧವಾಗಿ ಹೊಳೆಯುವಂತೆ ಮಾಡಿಕೊಂಡವನಾಗಿ (ಅನೇಕಜನ್ಮಸಂಸಿದ್ಧಃ) ಅನೇಕ ಜನ್ಮಗಳಿಂದ ಕೂಡಿಹಾಕಿಕೊಳ್ಳುತ್ತ ಬಂದ ಒಳ್ಳೆ ಸಂಸ್ಕಾರಗಳ ಬಲವನ್ನು ಹೊಂದಿ (ತತಃ) ಆಮೇಲೆ, ಜ್ಞಾನವನ್ನು ಪಡೆದು (ಪರಾಂ) ಹೆಚ್ಚಿನ (ಗತಿಂ) ಗತಿಯನ್ನು ಎಂದರೆ ಮೋಕ್ಷವನ್ನು (ಯಾತಿ) ಹೊಂದುತ್ತಾನೆ

ಹೀಗಿರುವದರಿಂದ,

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥ ೪೬ ॥**

(ಯೋಗೀ) ಧ್ಯಾನಾಭ್ಯಾಸವನ್ನು ಮಾಡುವವನು (ತಪಸ್ವಿಭ್ಯಃ) ಕೃಛ್ರ, ಚಾಂದ್ರಾಯಣ–ಮೊದಲಾದ ತಪಸ್ಸುಗಳನ್ನು ಮಾಡುವವರಿಗಿಂತಲೂ (ಅಧಿಕಃ) ಹೆಚ್ಚಿನವನು ಏಕೆಂದರೆ ಬರೀ ಶರೀರವನ್ನು ಸೊರಗಿಸುವಂಥ ಆ ತಪಸ್ಸುಗಳಿಗಿಂತಲೂ ಮನಸ್ಸನ್ನೂ ಇಂದ್ರಿಯಗಳನ್ನೂ ಒಮ್ಮುಖವಾಗಿ ಮಾಡುವಂಥ ಧ್ಯಾನವು ದೊಡ್ಡ ತಪಸ್ಸು ಅವನು (ಜ್ಞಾನಿಭ್ಯೋಽಪಿ) ಬರೀ ಶಾಸ್ತ್ರಾರ್ಥವನ್ನು ತಿಳಿದುಕೊಂಡು ಮಾತ್ರ ಇರುವವರಿಗಿಂತಲೂ (ಅಧಿಕಃ) ಹೆಚ್ಚಿನವನು (ಮತಃ) ಎಲ್ಲರೂ ತಿಳಿದಿರುವರು ಏಕೆಂದರೆ ಅವನು ಆ ಶಾಸ್ತ್ರಾರ್ಥಗಳನ್ನೆಲ್ಲ ತನ್ನ ಅನುಭವದಲ್ಲಿ ಕಾಣುವದಕ್ಕೆ ಯತ್ನಿಸುತ್ತಿರುವನು (ಯೋಗೀ) ಧ್ಯಾನ

ಯೋಗಿಯು (ಕರ್ಮಿಭ್ಯಶ್ಚ) ಜ್ಯೋತಿಷ್ಟೋಮ ಮೊದಲಾದ ಕರ್ಮವನ್ನು ಮಾಡುವವರಿಗಿಂತಲೂ (ಅಧಿಕಃ) ಹೆಚ್ಚಿನವನು ಏಕೆಂದರೆ ಧ್ಯಾನವು ಕರ್ಮದಿಂದ ಚಿತ್ತಶುದ್ಧಿಯಾದವರ ಚಿತ್ತಸ್ಥೈರ್ಯಕ್ಕಾಗಿ ಸಾಧಿಸುವ ಮುಂದಿನ ಮೆಟ್ಟಿಲಾಗಿರುವದು ಜ್ಞಾನಕ್ಕೆ ಕರ್ಮವು ಹೊರಗಣ ಸಾಧನ ಧ್ಯಾನವು ಒಳಗಣ ಸಾಧನ, ಆದ್ದರಿಂದ ಧ್ಯಾನಕ್ಕೆ ಕರ್ಮಕ್ಕಿಂತ ಬೆಲೆ ಹೆಚ್ಚು (ತಸ್ಮಾತ್) ಆದ್ದರಿಂದ (ಅರ್ಜುನ) ಅರ್ಜುನನೆ, ಕೇಳು (ಯೋಗೀ ಭವ) ನೀನು ಧ್ಯಾನಯೋಗವನ್ನು ಹಿಡಿ.

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋಮತಃ ॥**
**॥ ೪೭ ॥**

(ಸರ್ವೇಷಾಂ) ವಸು, ರುದ್ರ, ಆದಿತ್ಯ-ಇವರನ್ನು ಧ್ಯಾನಮಾಡುವವರೆ ಮೊದಲಾದ ಎಲ್ಲ (ಯೋಗಿನಾಮಪಿ) ಯೋಗಿಗಳಲ್ಲಿಯೂ (ಮದ್ಗತೇನ) ನನ್ನಲ್ಲಿ ಸೇರಿಕೊಂಡಿರುವಂಥ (ಅಂತರಾತ್ಮನಾ) ಮನಸ್ಸಿನಿಂದ ಎಂದರೆ ನನ್ನಲ್ಲಿ ಮನಸ್ಸಿಟ್ಟು (ಶ್ರದ್ಧಾವಾನ್) ನನ್ನನ್ನು ಪರಮೇಶ್ವರನೆಂದು ನಂಬುವವನಾಗಿ (ಯಃ) ಯಾವನು (ಮಾಂ) ನನ್ನನ್ನು (ಭಜತೇ) ಧ್ಯಾನಮಾಡುತ್ತಾನೋ (ಸಃ) ಅವನು (ಯುಕ್ತತಮಃ) ಬಹಳ ಮೇಲುಗೈಯಾದ ಯೋಗಿಯೆಂದು (ಮೇ) ನನ್ನ (ಮತಃ) ಅಭಿಪ್ರಾಯವು

ಇಲ್ಲಿಗೆ **ಧ್ಯಾನಯೋಗ**ವೆಂಬ ಆರನೆ ಅಧ್ಯಾಯವು ಮುಗಿಯಿತು



# ಏಳನೆ ಅಧ್ಯಾಯ.

"ನನ್ನಲ್ಲಿ ಮನಸ್ಸಿಟ್ಟು ಧ್ಯಾನಮಾಡುವವನು ಯೋಗಿಗಳಲ್ಲೆಲ್ಲ ಮೇಲುಗೈಯಾದವನು" ಎಂದು ಹಿಂದಿನ ಅಧ್ಯಾಯದ ಕೊನೆಯಲ್ಲಿ

ಹೇಳಿದ ಅರ್ಥವನ್ನು ಅರ್ಜುನನು ನಡೆವಳಿಕೆಗೆ ತಂದುಕೊಳ್ಳುವದಕ್ಕೆ ಅನುಕೂಲವಾಗಿ ತನ್ನ ಸ್ವರೂಪವನ್ನು ತಿಳಿಸಬೇಕೆಂದು,

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥**

(ಪಾರ್ಥ) ಅರ್ಜುನನೆ, ಕೇಳು ನೀನು (ಮಯ್ಯಾಸಕ್ತಮನಾಃ) ಹಣ ಕಾಸುಗಳ ಮೇಲಿನ ಆಸಕ್ತಿಯುಳ್ಳ ರಾಜಸೇವಕರಂತಿರದೆ ನನ್ನನ್ನೇ ಪಡೆದುಕೊಳ್ಳಬೇಕೆಂಬ ಆಸಕ್ತಿಯುಳ್ಳ ಮನಸ್ಸಿನವನಾಗಿಯೂ (ಮದಾ ಶ್ರಯಃ) ಬೇರೆ ಬೇರೆ ಫಲಗಳಿಗಾಗಿ ಕರ್ಮ, ತಪಸ್ಸು, ದಾನ–ಮೊದಲಾದ ಸಾಧನಗಳನ್ನು ಹಿಡಿಯುವಂತ ಅವುಗಳನ್ನು ಹಿಡಿಯದ ನನ್ನ ಪ್ರಾಪ್ತಿ ಗಾಗಿ ನನ್ನನ್ನೇ ಶರಣೆಂದಿರುವವನಾಗಿಯೂ (ಯೋಗಂ) ಮನಸ್ಸನ್ನು ಬಿಗಿಹಿಡಿಯುವ ಸಾಧನವನ್ನು (ಯುಂಜನ್) ನಡೆಸುತ್ತ (ಅಸಂಶಯಂ) ಸಂದೇಹವೇನೂ ಇಲ್ಲದಂತೆ (ಮಾಂ) ನನ್ನನ್ನು (ಸಮಗ್ರಂ) ವಿಭೂತಿ, ಬಲ, ಶಕ್ತಿ, ಐಶ್ವರ್ಯ–ಮೊದಲಾದ ಗುಣಗಳೊಡನೆ ಪೂರ್ಣವಾಗಿ (ಯಥಾ) ಯಾವ ರೀತಿಯಲ್ಲಿ (ಜ್ಞಾಸ್ಯಸಿ) ತಿಳಿಯುತ್ತೀಯೊ (ತತ್) ಅದನ್ನೂ (ಶೃಣು) ಕೇಳು

ಅದನ್ನು ತಿಳಿಯುವದು ಎಷ್ಟು ಹೆಚ್ಚಿನದೆಂದರೆ —

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥ ೨ ॥***

(ಯತ್) ಯಾವ ಜ್ಞಾನವನ್ನು (ಜ್ಞಾತ್ವಾ) ತಿಳಿದುಕೊಂಡ ಮೇಲೆ (ಇಹ) ಈ ಜಗತ್ತಿನಲ್ಲಿ (ಜ್ಞಾತವ್ಯಂ) ತಿಳಿಯತಕ್ಕದ್ದೆನ್ನುವದು (ಭೂಯಃ)

---

* "ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ" ಆ ಪರಮಾತ್ಮನ ಜ್ಞಾನವಾಗುವದರಿಂದ ಕೇಳದೆ ಇದ್ದದ್ದೆಲ್ಲ ಕೇಳಿದಂತಾಗುತ್ತದೆ, ತಿಳಿ ಯದೆ ಇದ್ದದ್ದೆಲ್ಲ ತಿಳಿದಂತಾಗುತ್ತದೆ, ಅನುಭವಕ್ಕೆ ಬರದೆ ಇದ್ದದ್ದೆಲ್ಲ ಬಂದಂತಾಗು ತ್ತದೆ.—ಶ್ರು

ಮತ್ತೆ (ಅನ್ಯತ್) ಬೇರೆಯಾಗಿ (ನ ಅವಶಿಷ್ಯತೇ) ಉಳಿಯುವದಿಲ್ಲವೋ ಅಂಥ (ಸವಿಜ್ಞಾನಂ) ಅನುಭವದಿಂದ ಕೂಡಿದಂಥ (ಇದಂ) ಈ (ಜ್ಞಾನಂ) ಜ್ಞಾನವನ್ನು (ಅಶೇಷತಃ) ಒಂದಿಷ್ಟೂ ಉಳಿಯದಂತೆ (ತೇ) ನಿನಗ (ಅಹಂ) ನಾನು (ವಕ್ಷ್ಯಾಮಿ) ಹೇಳುತ್ತೇನೆ ಹೀಗೆ ನನ್ನ ಸ್ವರೂಪವನ್ನರಿತವನು ಸರ್ವಜ್ಞನಾಗುವದರಿಂದ ಈ ಜ್ಞಾನವಾಗುವದು ಬಲು ಕಷ್ಟ

ಆದ್ದರಿಂದಲೇ —

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥**

ಪರಮಾತ್ಮಸ್ವರೂಪವನ್ನರಿಯುವದೆಂಬುದು ಬುದ್ಧಿಶಕ್ತಿಯಿಲ್ಲದ ಪಶು ಪಕ್ಷಿಗಳಿಗಂತು ಸಾಧ್ಯವೇ ಅಲ್ಲವಷ್ಟೆ ಇನ್ನು ಮನುಷ್ಯರಲ್ಲಿಯೂ (ಮನುಷ್ಯಾಣಾಂ) ಶಾಸ್ತ್ರಜ್ಞಾನ ಮತ್ತು ಶಾಸ್ತ್ರೋಕ್ತಕರ್ಮಾನುಷ್ಠಾನ- ಇವುಗಳುಳ್ಳ ಮನುಷ್ಯರ (ಸಹಸ್ರೇಷು) ಸಹಸ್ರ ಜನರಲ್ಲಿ (ಕಶ್ಚಿತ್) ಯಾವನೋ ಒಬ್ಬನು. ಅನೇಕ ಜನ್ಮಗಳ ಪುಣ್ಯಪರಿಪಾಕದ ಬಲದಿಂದ (ಸಿದ್ಧಯೇ) ಜ್ಞಾನವನ್ನು ಪಡೆಯುವದಕ್ಕಾಗಿ (ಯತತಿ) ಪ್ರಯತ್ನ ಮಾಡು ತ್ತಾನೆ (ಯತತಾಮಪಿ) ಹಾಗೆ ಹಣಗಾಡುವವರಲ್ಲಿಯೂ (ಸಿದ್ಧಾನಾಂ) ಪರೋಕ್ಷಜ್ಞಾನವನ್ನು ಪಡೆದುಕೊಂಡವರಲ್ಲಿ (ಕಶ್ಚಿತ್) ಯಾವನೋ ಒಬ್ಬನು ಮಾತ್ರ (ಮಾಂ) ನನ್ನನ್ನು (ತತ್ತ್ವತಃ) ಇದ್ದದ್ದಿದ್ದಂತೆ (ವೇತ್ತಿ) ತಿಳಿಯುತ್ತಾನೆ ನನ್ನ ಈ ಮೇಘಶ್ಯಾಮಲಮೂರ್ತಿಯನ್ನು ಎಲ್ಲರೂ ನೋಡುತ್ತಿದ್ದಾರಾದರೂ ಇದರಿಂದ ಅವರು ನನ್ನ ಸ್ವರೂಪವನ್ನು ಇದ್ದದ್ದಿ ದ್ದಂತೆ ಅರಿತವರಾಗುವದಿಲ್ಲ ಏಕೆಂದರೆ ಈ ಆಕಾರವು ನನ್ನ ಸ್ವರೂಪವಲ್ಲ ನನ್ನನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವ ನನ್ನ ಸ್ವರೂಪವು ಬೇರೆ

ಅದು ಯಾವದೆಂದರೆ,—

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥**

(ಭೂಮಿಃ) ಈ ಭೂಮಿ, (ಆಪಃ) ಭೂಮಿಗೆ ಕಾರಣವಾದ ನೀರು, (ಅನಲಃ) ನೀರಿಗೆ ಕಾರಣವಾದ ಬೆಂಕಿ, (ವಾಯುಃ) ಬೆಂಕಿಗೆ ಕಾರಣವಾದ ಗಾಳಿ, (ಖಂ) ಗಾಳಿಗೆ ಕಾರಣವಾದ ಆಕಾಶ–ಈ ಪಂಚಭೂತಗಳ ಸೂಕ್ಷ್ಮಾವಸ್ಥೆಗಳೂ (ಮನಃ) ಇದೇನೋ ಒಂದೆಂದು ಸಾಮಾನ್ಯವಾಗಿ ತಿಳಿಯುವ ಮನಸ್ಸಿಗೆ ಕಾರಣವಾದ ಅಹಂಕಾರವೂ, (ಬುದ್ಧಿರೇವ ಚ) ಅಹಂಕಾರಕ್ಕೆ ಕಾರಣವಾದ ಮಹತ್ತತ್ತ್ವವೂ (ಅಹಂಕಾರಃ) ಎಲ್ಲಕ್ಕೂ ಮೂಲಕಾರಣವಾದ ಅವ್ಯಕ್ತವೂ, (ಇತಿ) ಹೀಗೆ (ಇಯಂ) ಈ (ಮೇ) ನನ್ನ (ಪ್ರಕೃತಿಃ) ಸತ್ತ್ವ, ರಜ, ತಮ–ಈ ಮೂರು ಗುಣಗಳೂ ಸಮಪ್ರಮಾಣ ದಿಂದಿರುವ ಮಾಯಾಶಕ್ತಿಯು (ಅಷ್ಟಧಾ) ಎಂಟು ಬಗೆಯಾಗಿ (ಭಿನ್ನಾ) ಭೇದವನ್ನು ಪಡೆದಿರುವದು ಇದೇ ಜಗತ್ತು ಆದ್ದರಿಂದ ಈ ಜಗತ್ತೆಲ್ಲ ನನ್ನ ಮಾಯೆಯೆ

ಇದಲ್ಲದೆ —

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್॥ ೫ ॥**

(ಮಹಾಬಾಹೋ) ಅರ್ಜುನನೆ, ಕೇಳು (ಇಯಂ) ಈಗ ನಾನು ಹೇಳಿದ ಎಂಟುಬಗೆಯಾದ ಪ್ರಕೃತಿಯು (ಅಪರಾ) ನಿಕೃಷ್ಟವಾದದ್ದು. ಏಕೆಂದರೆ ಇದು ಜಡವಾದದ್ದು, ಆತ್ಮನ ಭೋಗಕ್ಕಾಗಿ ಇರುವಂಥದ್ದು ಮತ್ತು ಮನುಷ್ಯನಲ್ಲಿ ಬಾಯಿನೀರನ್ನು ಹುಟ್ಟಿಸಿ ಹುಟ್ಟು ಸಾವುಗಳ ಬಲೆಗೆ ಸಿಲುಕಿಸುವಂಥದ್ದು ಇನ್ನೊಂದನ್ನು ಕೇಳು, (ಯಯಾ) ಯಾವದರಿಂದ (ಇದಂ) ಈ (ಜಗತ್) ಜಗತ್ತು (ಧಾರ್ಯತೇ) ಮಣಿಗಳನ್ನು ಸೂತ್ರವು ಹೇಗೋ ಹಾಗೆ ಒಳಹೊಕ್ಕು ಹಿಡಿದು ನಿಲ್ಲಿಸಿಕೊಳ್ಳಲ್ಪಡುವದೊ ಅಂಥ (ಜೀವಭೂತಾಂ)* ಪ್ರಾಣಧಾರಣೆಯನ್ನು ಮಾಡುವ ಸಾಧನವಾಗಿರುವ ಜೀವರೂಪವಾದದ್ದನ್ನು (ಇತಸ್ತು) ಮೇಲೆ ಹೇಳಿದ ಭೂಮಿ ಮೊದಲಾದ

* "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ"— ಈ ಜೀವಾತ್ಮನ ರೂಪದಿಂದ ಒಳಹೊಕ್ಕು ಹೆಸರುಗಳನ್ನೂ ಆಕಾರಗಳನ್ನೂ ಮಾಡು ತ್ತೇನೆ —ಶ್ರು.

ಎಂಟು ಬಗೆಯ ಅಶುದ್ಧ ಪ್ರಕೃತಿಗಿಂತ (ಅನ್ಯಾಂ) ಬೇರೆ ಶುದ್ಧವಾದ (ಮೇ) ನನ್ನ (ಪ್ರಕೃತಿಂ) ಮಾಯಾಶಕ್ತಿಯನ್ನು (ಪರಾಂ) ಉತ್ಕೃಷ್ಟವಾದದ್ದನ್ನಾಗಿ (ವಿದ್ಧಿ) ತಿಳಿ ಹೀಗೆ ಆ ಎಂಟು ಬಗೆಯ ಪ್ರಕೃತಿಗೂ ಆಧಾರವಾಗಿರುವ ಜೀವರೂಪವಾದ ಪ್ರಕೃತಿಯೂ ಮಾಯಾಮಯವೆ ಜಗತ್ತು ನಿಕೃಷ್ಟಮಾಯೆ ಜೀವವು ಉತ್ಕೃಷ್ಟ ಮಾಯೆ ಇಷ್ಟೇ ಭೇದ.

ಇದರಿಂದೇನು ಸಿದ್ಧವಾಯಿತೆಂದರೆ —

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥**

(ಸರ್ವಾಣಿ) ಎಲ್ಲ (ಭೂತಾನಿ) ಚರಾಚರವಸ್ತುಗಳೂ (ಏತದ್ಯೋನೀನಿ) ಈ ಎರಡು ಬಗೆಯ ಮಾಯಾಶಕ್ತಿಯಿಂದಲೇ ಹೂರಹೊಮ್ಮಿದವುಗಳು (ಇತಿ) ಎಂದು (ಉಪಧಾರಯ) ನಿಶ್ಚಯವಾಗಿ ತಿಳಿದುಕೊ ಆದ್ದರಿಂದ (ಅಹಂ) ನಾನು (ಕೃತ್ಸ್ನಸ್ಯ) ಸಮಸ್ತವಾದ (ಜಗತಃ) ಜಗತ್ತಿಗೂ (ಪ್ರಭವಃ) ಹುಟ್ಟುವಿಕೆಯ ಕಾರಣನು, (ತಥಾ) ಅದೇ ರೀತಿಯಲ್ಲಿಯೆ (ಪ್ರಲಯಃ) ನಾಶದ ಕಾರಣನು ಎಂಪರೆ ನಿದ್ರೆಯ ಪ್ರಭಾವದಿಂದ ಮನುಷ್ಯನ ಕನಸಿನಲ್ಲಿ ಲೆಕ್ಕವಿಲ್ಲದಷ್ಟು ಚರಾಚರವಸ್ತುಗಳು ಹುಟ್ಟಿ ಅಲ್ಲಿಯೇ ಇಲ್ಲದಂತಾಗುವಂತೆ ಈ ಸಮಸ್ತಜಗತ್ತೂ ನನ್ನ ಕೈಯೊಳಗಿರುವ ಮಾಯಾಶಕ್ತಿಯಿಂದ ನನ್ನಿಂದಲೇ ಹೊರಗೆ ತೋರಿಕೊಂಡು ನನ್ನಲ್ಲಿಯೇ ಅಡಗುವವೆಂದಾಯಿತು

ಆದ್ದರಿಂದ —

**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥**

(ಧನಂಜಯ) ಅರ್ಜುನನೆ, ಕೇಳು (ಮತ್ತಃ) ನನ್ನ ಹೊರತು) (ಪರತರಂ) ಬೇರೆ ಕಾರಣವು (ಅನ್ಯತ್) ಬೇರೆಯಾಗಿ (ಕಿಂಚಿತ್) ಅಣು ಮೊದಲಾದದ್ದೆಂಬುದು ಎಷ್ಟು ಮಾತ್ರವೂ (ನ ಅಸ್ತಿ) ಇಲ್ಲ ಆದ್ದರಿಂದ (ಸೂತ್ರೇ) ದಾರದಲ್ಲಿ (ಮಣಿಗಣಾ ಇವ) ಅನೇಕ ರತ್ನಗಳು ಹೇಗೆ ಪೋಣಿಸ

ಲ್ಪಟ್ಟಿರುವವೊ ಹಾಗೆ (ಮಯಿ) ನನ್ನಲ್ಲಿ (ಸರ್ವಮಿದಂ) ಈ ಜಗತ್ತೆಲ್ಲ (ಪ್ರೋತಂ) ಪೋಣಿಸಲ್ಪಟ್ಟಿರುವದು ನನ್ನಲ್ಲಿ ಜಗತ್ತಿರುವದೆಂಬುದು ಕನಸು ಗಾಣುವವನಲ್ಲಿ ಜಗತ್ತಿರುವಂತೆಯಾದರೂ ವ್ಯವಹಾರದೃಷ್ಟಿಯಿಂದ ನಾನು ಬೇರೆ ಬೇರೆ ವಸ್ತುಗಳನ್ನು ಬೇರೆ ಬೇರೆ ಧರ್ಮದಿಂದ ಪೋಣಿಸಿಕೊಂಡಿರುವಂತೆ ತೋರುತ್ತಿರುವೆನು

ಯಾವ ಯಾವ ಧರ್ಮದಿಂದ ನೀನು ಎಲ್ಲವನ್ನೂ ಪೋಣಿಸಿಕೊಂಡಿರುವೆಯೆಂದರೆ.—

**ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ |**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು || ೮ ||**

ನಾನು ದಾರದಲ್ಲಿ ಮಣಿಗಳು ಹೇಗೋ ಹಾಗೆ ಜಗತ್ತಿನ ಯಾವದೋ ಒಂದು ಸಂದಿಯಲ್ಲಿ ತೂರಿಕೊಂಡಿಲ್ಲ, ಬಟ್ಟೆಯ ಹಾಸುಹೊಕ್ಕುಗಳೆಲ್ಲ ನೂಲೇ ಆಗಿರುವಂತೆ ನಾನು ಜಗತ್ತನ್ನು ಪೋಣಿಸಿಕೊಂಡಿರುವ ಬಗೆ ಹೇಗೆಂದರೆ —(ಕೌಂತೇಯ) ಅರ್ಜುನನೆ, ಕೇಳು. (ಅಹಂ) ನಾನು (ಅಪ್ಸು) ನೀರಿನಲ್ಲಿ (ರಸಃ) ಸಾರವಾದ ರಸದ ರೂಪದಿಂದ ನೀರನ್ನೆಲ್ಲ ಪೋಣಿಸಿಕೊಂಡಿದ್ದೇನೆ ಹಾಗೆಯೆ (ಶಶಿಸೂರ್ಯಯೋಃ) ಚಂದ್ರ ಸೂರ್ಯರಲ್ಲಿ (ಪ್ರಭಾ) ಪ್ರಭೆಯ ರೂಪದಲ್ಲಿ (ಅಸ್ಮಿ) ಇದ್ದೇನೆ (ಸರ್ವವೇದೇಷು) ವೇದಗಳಲ್ಲೆಲ್ಲ (ಪ್ರಣವಃ)* ಓಂಕಾರವು ನಾನು (ಖೇ) ಆಕಾಶದಲ್ಲಿ (ಶಬ್ದಃ) ಸದ್ದು ನಾನು (ನೃಷು) ಪುರುಷರಲ್ಲಿ (ಪೌರುಷಂ) ಉದ್ಯೋಗವೆಂಬ ಭಾವವು ನಾನು

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ |**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು || ೯ ||**

---

* “ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನಿ ಏವಮೋಂಕಾರೇಣ ಸರ್ವಾ ವಾಕ್ ಸಂತೃಣ್ಣಾ ಇತಿ” ಎಲ್ಲ ಎಲೆಗಳು ಸಣ್ಣಸಣ್ಣ ನಾರಿನಂತಿರುವ ರೇಖೆಯಿಂದ ಪೋಣಿಸಲ್ಪಟ್ಟಿರುವಂತೆ ವೇದವಚನಗಳೆಲ್ಲ ಓಂಕಾರದಿಂದ ಪೋಣಿಸಲ್ಪಟ್ಟಿರುವವು.

(ಪೃಥಿವ್ಯಾಂ) ಭೂಮಿಯಲ್ಲಿ (ಪುಣ್ಯಃ) ಇತರ ಭೂತಗಳ ಸಂಪರ್ಕವಿಲ್ಲದ್ದರಿಂದ ಶುದ್ಧವಾಗಿ ಒಳ್ಳೆಯದೆನಿಸುವ (ಗಂಧಃ ಚ) ಗಂಧವೂ ನಾನು. (ವಿಭಾವಸೌ) ಅಗ್ನಿಯಲ್ಲಿ (ತೇಜಶ್ಚ) ಪ್ರಕಾಶರೂಪದಿಂದಲೂ (ಅಸ್ಮಿ) ಇದ್ದೇನೆ. (ಸರ್ವಭೂತೇಷು) ಎಲ್ಲ ಪ್ರಾಣಿಗಳಲ್ಲಿಯೂ (ಜೀವನಂ) ಬದುಕಿರುವ ಶಕ್ತಿಯೂ ನಾನು (ತಪಸ್ವಿಷು) ತಪಸ್ಸು ಮಾಡುವವರಲ್ಲಿ (ತಪಶ್ಚ) ತಪಸ್ಸಿನ ರೂಪದಿಂದಲೂ (ಅಸ್ಮಿ) ಇದ್ದೇನೆ

ಇದರಂತೆಯೆ —

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ ೧೦ ॥**

(ಪಾರ್ಥ) ಅರ್ಜುನನೆ, ಕೇಳು (ಮಾಂ) ನನ್ನನ್ನು (ಸನಾತನಂ) ಬಹುಕಾಲದಿಂದ ಇರುವ (ಸರ್ವಭೂತಾನಾಂ) ಸಮಸ್ತಚರಾಚರವಸ್ತುಗಳ (ಬೀಜಂ) ಮೊಳಕೆಯೇಳುವದಕ್ಕೆ ಕಾರಣವಾಗಿರುವ ಬೀಜವನ್ನಾಗಿ. (ವಿದ್ಧಿ) ತಿಳಿ ನಾನು (ಬುದ್ಧಿಮತಾಂ) ಬುದ್ಧಿವಂತರಲ್ಲಿ (ಬುದ್ಧಿಃ) ವಿವೇಕಶಕ್ತಿಯ ರೂಪವಾಗಿ (ಅಸ್ಮಿ) ಇದ್ದೇನೆ (ಅಹಂ) ನಾನು (ತೇಜಸ್ವಿನಾಂ) ಆತ್ಮಶಕ್ತಿ ಸಂಪನ್ನರಲ್ಲಿ (ತೇಜಃ) ಆತ್ಮಶಕ್ತಿಯ ರೂಪವು

ಮತ್ತು .—

**ಬಲಂ ಬಲವತಾಂ ಚಾಹಂ ಕಾಮರಾಗ ವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥**

(ಭರತರ್ಷಭ) ಅರ್ಜುನನೆ, ಕೇಳು. (ಬಲವತಾಂ) ಸಾಮರ್ಥ್ಯವಂತರಲ್ಲಿ (ಕಾಮರಾಗವಿವರ್ಜಿತಮ್) ತನ್ನಲ್ಲಿಲ್ಲದಿರುವದರ ಬಯಕೆ, ದೊರೆತದ್ದರ ಮೇಲೆ ಪ್ರೀತಿ–ಇವುಗಳಿಲ್ಲದೆ ದೇಹಾದಿಗಳನ್ನು ಇಟ್ಟುಕೊಂಡಿರುವ (ಬಲಂ ಚ) ಶಕ್ತಿಯೂ (ಅಹಂ) ನಾನು ಇದಲ್ಲದೆ ತನ್ನಲ್ಲಿಲ್ಲದ್ದನ್ನು ಬಯಸುವ ಸಂದರ್ಭದಲ್ಲಿಯೂ (ಭೂತೇಷು) ಪ್ರಾಣಿಗಳಲ್ಲಿ (ಧರ್ಮಾವಿರುದ್ಧಃ) ಶಾಸ್ತ್ರದಲ್ಲಿ ಹೇಳಿರುವ ಧರ್ಮಕ್ಕೆ ವಿರೋಧವಲ್ಲದಂಥ (ಕಾಮಃ)

ದೇಹಧಾರಣೆಗೆ ಅಗತ್ಯವಾದಂಥ ಅನ್ನ ನೀರುಗಳ ಬಯಕೆಯು (ಅಸ್ಮಿ) ನಾನಾಗಿದ್ದೇನೆ

ಒಂದೇ ಮಾತಿನಲ್ಲಿ ಹೇಳಬೇಕೆಂದರೆ —

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥**

(ಯೇ ಚೈವ) ಯಾವವು (ಸಾತ್ತ್ವಿಕಾಃ) ಸತ್ತ್ವಗುಣದಿಂದ ಕೂಡಿದ (ಭಾವಾಃ) ದೇವತೆಗಳಂಥವರೊ ಮತ್ತು ಹಾಲು, ಸಕ್ಕರೆ–ಮೊದಲಾದ ಪದಾರ್ಥಗಳೊ ಅಥವಾ ಮನೋನಿಗ್ರಹ ಮೊದಲಾದ ಭಾವಗಳೊ ಅವೂ (ರಾಜಸಾಃ) ರಜೋಗುಣದಿಂದ ಕೂಡಿದ ಗಂಧರ್ವರಂಥವರೊ ಮತ್ತು ಮೆಣಸಿನಕಾಯಿ ಮೊದಲಾದ ಪದಾರ್ಥಗಳೊ ಅಥವಾ ಹರ್ಷ, ದರ್ಪ–ಮೊದಲಾದ ಭಾವಗಳೊ ಅವೂ (ಯೇ) ಯಾವವು (ತಾಮಸಾಶ್ಚ) ತಮೋ ಗುಣದಿಂದ ಕೂಡಿದ ರಾಕ್ಷಸರಂಥವರೋ ಮತ್ತು ಬೆಳ್ಳುಳ್ಳಿ ಮೊದಲಾದ ಪದಾರ್ಥಗಳೊ ಅಥವಾ ಶೋಕ, ಮೋಹ–ಮೊದಲಾದ ಭಾವಗಳೊ (ತಾನ್) ಅವುಗಳನ್ನೆಲ್ಲ (ಮತ್ತ ಏವ) ನನ್ನಿಂದಲೇ ಹುಟ್ಟಿದವುಗಳು (ಇತಿ) ಎಂದು (ವಿದ್ಧಿ) ತಿಳಿ. ಹೀಗಿದ್ದರೂ (ಅಹಂ) ನಾನು (ತೇಷು) ಅವುಗಳಲ್ಲಿ (ನತು) ಇಲ್ಲ ಎಂದರೆ ಸಂಸಾರಿಗಳು ಅವುಗಳಿಗೊಳಗಾಗಿರುವಂತೆ ನಾನು ಅವುಗಳಿಗೆ ಒಳಗಾಗಿಲ್ಲ ಅವುಗಳ ಕೈ ಸಂಸಾರಿಗಳ ಮೇಲೆ ನಡೆಯುವಂತೆ ನನ್ನ ಮೇಲೆ ನಡೆಯುವದಿಲ್ಲ ಅಥವಾ ನಾನು ಅವುಗಳೊಳಗೆ ಅಡಕ ವಾಗಿಲ್ಲ. (ತೇ) ಅವು (ಮಯಿ) ನನ್ನಲ್ಲಿವೆ ಎಂದರೆ ಅವು ನನ್ನ ಇರುವಿಕೆಗೆ ಒಳಗಾಗಿವೆ ಅಥವಾ ಹಗ್ಗದಲ್ಲಿ ಕಾಣುವ ಹಾವಿನಂತೆ ಅಥವಾ ಕನಸಿನ ಜಗತ್ತಿನಂತೆ ಅವು ನನ್ನಲ್ಲಿ ಹುಟ್ಟುಗಟ್ಟಿದವುಗಳಾಗಿವೆ

ಇಂಥ ಪರಮಾತ್ಮನಾದ ನನ್ನ ಸ್ವರೂಪವು ಜನರಿಗೇಕೆ ತಿಳಿಯುವ ದಿಲ್ಲವೆಂದರೆ —

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥ ೧೩ ॥**

(ಇದಂ) ಈ (ಸರ್ವಂ) ಎಲ್ಲ (ಜಗತ್) ಪ್ರಪಂಚವು (ಏಭಿಃ) ಈ ಮೇಲೆ ಹೇಳಿದಂಥ (ತ್ರಿಭಿಃ) ಮೂರು ಬಗೆಯ (ಗುಣಮಯೈಃ) ಗುಣಗಳ ವಿಕಾರಗಳಾದಂಥ (ಭಾವೈಃ) ಪದಾರ್ಥಗಳಿಂದ ಅಥವಾ ಹರ್ಷ, ದರ್ಪ– ಮೊದಲಾದ ಭಾವಗಳಿಂದ (ಮೋಹಿತಂ) ಮಂಕುಬೂದಿಯಿಂದ ಮರುಳಾದವ ರಂತೆ ಅವಿವೇಕವನ್ನು ಹೊಂದಿದ್ದಾಗಿ (ಏಭ್ಯಃ) ಈ ಎಲ್ಲ ಪದಾರ್ಥಗಳಿ ಗಿಂತಲೂ ಭಾವಗಳಿಗಿಂತಲೂ (ಪರಮ್) ಹೆಚ್ಚಿನವನಾಗಿಯೂ (ಅವ್ಯಯಮ್) ಈ ಪದಾರ್ಥಗಳಂತೆ ಮತ್ತು ಭಾವಗಳಂತೆ ನಾಶವನ್ನು ಪಡೆಯದೆ ಇರತಕ್ಕವ ನಾಗಿಯೂ ಇರುವ (ಮಾಂ) ನನ್ನನ್ನು (ನಾಭಿಜಾನತಿ) ಚೆನ್ನಾಗಿ ತಿಳಿಯುವ ದಿಲ್ಲ ಜನರು ಆ ಪದಾರ್ಥಗಳನ್ನೂ ಭಾವಗಳನ್ನೂ ನೋಡುವ ಸಡಗರದಲ್ಲಿ ಅವುಗಳಿಗೆಲ್ಲ ಕಾರಣನಾದ ನನ್ನ ಕಡೆಗೆ ತಮ್ಮ ದೃಷ್ಟಿಯನ್ನು ಕಳುಹಿಸಲಾರ ದವರಾಗುವದರಿಂದ ಅವರು ನನ್ನನ್ನು ಕಾಣುವದಿಲ್ಲ

ನಾನು ಕಾಣಬರದಂತೆ ಈ ಜಗತ್ತನ್ನು ಅಡ್ಡವಾಗಿ ಒಡ್ಡಿರುವ ಈ ಮಾಯೆಯನ್ನು ದಾಟುವ ಬಗೆ ಹೇಗೆಂದರೆ —

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ೧೪ ॥**

(ಏಷಾ ಹಿ) ಈ (ಮಮ) ಪರಮಾತ್ಮನಾದ ನನ್ನ (ದೈವೀ) ದಿವ್ಯ ವಾದ (ಗುಣಮಯೀ) ತ್ರಿಗುಣಾತ್ಮಕವಾದ (ಮಾಯಾ) ಮಾಯಾ ಶಕ್ತಿಯು (ದುರತ್ಯಯಾ) ಸಾಮಾನ್ಯವಾಗಿ ದಾಟುವದು ಬಲು ಕಷ್ಟ (ಯೇ) ಯಾರು (ಮಾಮೇವ) ಆ ಮಾಯಾವಿಯಾದ ನನ್ನನ್ನೇ (ಪ್ರಪದ್ಯಂತೇ) ಶರಣು ಹೋಗುತ್ತಾರೋ (ತೇ) ಅವರು (ಏತಾಂ) ಎಲ್ಲರನ್ನೂ ಮರುಳುಮಾಡಿರುವ ಈ (ಮಾಯಾಂ) ಮಾಯೆಯನ್ನು (ತರಂತಿ) ದಾಟುತ್ತಾರೆ ಭಗವಂತನಿಗೆ ಶರಣುಹೋದದ್ದನ್ನು ನೋಡುತ್ತಲೇ ಅವನ ಮುಂದೆ ತನ್ನ ಚೆಲ್ಲಾಟ ವೇನೂ ನಡೆಯದೆಂದು ತಿಳಿದು ತಪಸ್ವಿಯನ್ನು ಕಂಡ ವಾರಸ್ತ್ರೀ ಯಂತೆ ಮಾಯೆಯು ತಾನೆ ತನ್ನ ಮುಖವನ್ನು ಸಪ್ಪಗೆ ಮಾಡಿಕೊಂಡು ಹೋಗುತ್ತದೆ

ನನಗೇ ಎಲ್ಲರೂ ಏಕೆ ಶರಣುಬರುವದಿಲ್ಲವೆಂದರೆ.—

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥**

( ಮಾಯಯಾಪಹೃತಜ್ಞಾನಾಃ ) ದೇಹ ಮೊದಲಾದವುಗಳನ್ನೆ ತಾವೆಂದು ತಿಳಿಯುವ ಭ್ರಾಂತಿಯಿಂದ ವಿವೇಕಶಕ್ತಿಯನ್ನು ಕಳೆದು ಕೊಂಡವರಾಗಿಯೂ, ಆದ್ದರಿಂದಲೆ (ಆಸುರಂ) ಅಸುರರ ಸ್ವಭಾವವಾದಂಥ (ಭಾವಂ) ದಂಭ, ದರ್ಪ, ಅಭಿಮಾನ, ಕ್ರೋಧ ಮತ್ತು ಹಿಂಸಾ-ಮೊದಲಾದವುಗಳನ್ನು (ಆಶ್ರಿತಾಃ) ಅವಲಂಬಿಸಿದವರಾಗಿಯೂ, ಆದ್ದರಿಂದಲೆ (ಮೂಢಾಃ) ತಮಗೆ ಯಾವದು ಸಾಧಕವೆಂಬುದನ್ನೂ ಯಾವದು ಬಾಧಕವೆಂಬುದನ್ನೂ ಅರಿಯದಿರುವಂಥವರಾಗಿಯೂ ಅಥವಾ ಸಾಧಕವನ್ನು ಬಾಧಕವಾಗಿಯೂ ಬಾಧಕವನ್ನು ಸಾಧಕವಾಗಿಯೂ ತಿಳಿಯುವಂಥವರಾಗಿಯೂ, ಆದ್ದರಿಂದಲೇ (ದುಷ್ಕೃತಿನಃ) ಪಾಪಕರ್ಮಗಳನ್ನು ಮಾಡುವವರಾಗಿಯೂ, ಆದ್ದರಿಂದಲೇ (ನರಾಧಮಾಃ) ಮನುಷ್ಯರಲ್ಲೆಲ್ಲ ಕೀಳಾದವರಾಗಿಯೂ ಇರುವವರು (ಮಾಂ) ಪರಮೇಶ್ವರನಾದ ನನ್ನನ್ನು (ನ ಪ್ರಪದ್ಯಂತೇ) ಭಜಿಸುವದಿಲ್ಲ

ಮನುಷ್ಯರಲ್ಲೆಲ್ಲ ಮೇಲಾದವರು ಯಾರೆಂದರೆ —

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥**

(ಅರ್ಜುನ) ಅರ್ಜುನನೆ, ಕೇಳು (ಸುಕೃತಿನಃ) ಪುಣ್ಯಕರ್ಮಗಳನ್ನು ಮಾಡಿದಂಥ (ಜನಾಃ) ಜನರು (ಚತುರ್ವಿಧಾಃ) ನಾಲ್ಕು ಬಗೆಯವರು (ಮಾಂ) ನನ್ನನ್ನು (ಭಜಂತೇ) ಭಜಿಸುತ್ತಾರೆ ಅವರು ಯಾರೆಂದರೆ (ಭರತರ್ಷಭ) ಅರ್ಜುನನೆ, ಕೇಳು (ಆರ್ತ) ಹಗೆಗಳಿಂದ ಅಥವಾ ರೋಗಗಳಿಂದ ಪೀಡಿತನಾದವನೂ (ಜಿಜ್ಞಾಸುಃ) ಆತ್ಮಸ್ವರೂಪವನ್ನು ತಿಳಿಯಬೇಕೆಂದು ಬಯಸುವವನೂ (ಅರ್ಥಾರ್ಥೀ) ಹೆಂಡತಿ, ಮಕ್ಕಳು,

ಹಣ-ಮೊದಲಾದ ಸುಖಸಾಧನೆಗಳಿಗೆ ಬಾಯಿನೀರು ಕರೆಯುವವನೂ ಮತ್ತು (ಜ್ಞಾನೀ ಚ) ಆತ್ಮಸ್ವರೂಪವನ್ನು ತಿಳಿದವನೂ-

ಇವರೆಲ್ಲರೂ ಸಮಾನರೊ' ಎಂದರೆ,—

**ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ ೧೭ ॥**

ದ್ರೌಪದಿ, ಗಜೇಂದ್ರ-ಮೊದಲಾದವರು ಆರ್ತರು. ಜನಕ, ಉದ್ಧವ-ಮೊದಲಾದವರು ಜಿಜ್ಞಾಸುಗಳು ಸುಗ್ರೀವ ವಿಭೀಷಣ, ಧ್ರುವ, ಉಪಮನ್ಯು-ಮೊದಲಾದವರು ಅರ್ಥಾರ್ಥಿಗಳು ಸನಕ, ನಾರದ, ಪ್ರಹ್ಲಾದ, ಪೃಧು, ಶುಕ-ಮೊದಲಾದವರು ಜ್ಞಾನಿಗಳು ಇವರಲ್ಲಿ ಮೊದಲನೆ ಮೂವರಲ್ಲಿ ಜಿಜ್ಞಾಸುವಾದವನು ಜ್ಞಾನಕ್ಕೆ ಬಹು ಹತ್ತಿರದಲ್ಲಿರುವನು ಆರ್ತನೂ ಅರ್ಥಾರ್ಥಿಯೂ ಮೊದಲು ಜಿಜ್ಞಾಸುಗಳಾಗಿ ಆಮೇಲೆ ಜ್ಞಾನವನ್ನು ಪಡೆಯಬೇಕಾಗುವದು ಜ್ಞಾನಿಯ ವಿಷಯ ಈ ಮೂವರಿಗಿಂತ ಬೇರೆ (ತೇಷಾಂ) ಆ ನಾಲ್ವರಲ್ಲಿ (ನಿತ್ಯಯುಕ್ತಃ) ತಮ್ಮ ಪೀಡೆ ಕಳೆಯುವವರೆಗೆ ಅಧವಾ ತಾವು ಬೇಡಿದ್ದು ದೊರೆಯುವವರೆಗೆ ಅಧವಾ ತನಗೆ ತಿಳಿಯುವವರೆಗೆ ಮಾತ್ರ ನನ್ನಲ್ಲಿ ಮನಸ್ಸಿಡುವವನಾಗದೆ ಯಾವಾಗಲೂ ನನ್ನನ್ನೆ ಹೊಂದಿಕೊಂಡಿರುವವನಾಗಿಯೂ (ಏಕಭಕ್ತಿಃ) ಪೀಡೆ ಹೋಗಬೇಕೆಂಬುದರ ಮೇಲೆ, ಬೇಕಾದ ಹಣಕಾಸಿನ ಮೇಲೆ ಅಧವಾ ಜ್ಞಾನ ಸಂಪಾದನೆಯ ಮೇಲೆ ಇರುವ ಪ್ರೀತಿಗಾಗಿ ನನ್ನ ಮೇಲೆ ಪ್ರೀತಿಯನ್ನು ಮಾಡದೆ ನಾನು ತನ್ನ ಆತ್ಮವಾಗಿರುವದಕ್ಕಾಗಿ ನನ್ನ ಮೇಲೆ ಪ್ರೀತಿಯನ್ನು ಮಾಡುವವನಾಗಿಯೂ ಇರುವ (ಜ್ಞಾನೀ) ಜ್ಞಾನಿಯು (ವಿಶಿಷ್ಯತೇ) ಹೆಚ್ಚಿನವನಾಗಿರುತ್ತಾನೆ (ಹಿ) ಏಕೆಂದರೆ ಜ್ಞಾನಿಯು ನನ್ನನ್ನು ತನ್ನ ಆತ್ಮವಾಗಿ ತಿಳಿಯುವುದರಿಂದ (ಅಹಂ) ನಾನು (ಜ್ಞಾನಿನಃ) ಜ್ಞಾನಿಗೆ (ಅತ್ಯರ್ಥಂ) ಬಹಳ (ಪ್ರಿಯಃ) ಬೇಕಾದವನು. ಅವನು ನನ್ನ ಆತ್ಮವಾದ್ದರಿಂದ (ಸ ಚ) ಅವನೂ (ಮಮ) ನನಗೆ (ಪ್ರಿಯಃ) ಬೇಕಾದವನು.

ಆರ್ತ ಮೊದಲಾದ ಮೂವರು ಪ್ರಿಯರಲ್ಲವೊ? ಎಂದರೆ —

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥ ೧೮ ॥**

(ಏತೇ) ಈ (ಸರ್ವ ಏವ) ಎಲ್ಲರೂ (ಉದಾರಾಃ) ಮೇಲಾದವರೆ ಆದ್ದರಿಂದ ಮೂವರೂ ನನಗೆ ಪ್ರಿಯರೆ (ಜ್ಞಾನೀ ತು) ಜ್ಞಾನಿ ಯಾದರೊ (ಆತ್ಮೈವ) ನನ್ನ ಸ್ವರೂಪವೆ ಎಂದು (ಮೇ) ನನ್ನ (ಮತಂ) ಅಭಿಪ್ರಾಯವು ತನಗಿಂತ ಭಿನ್ನವಾದದ್ದನ್ನು ಪ್ರಿಯವೆಂದೂ ಅಪ್ರಿಯ ವೆಂದೂ ಹೇಳುವದು ರೂಢಿಯಷ್ಟೆ ಜ್ಞಾನಿಯು ನನಗಿಂತ ಭಿನ್ನನಲ್ಲ ವಾದ್ದರಿಂದ ಅವನನ್ನು ಆರ್ತ ಮೊದಲಾದವರ ಸಾಲಿನಲ್ಲಿ ಸೇರಿಸುವದು ನನಗೆ ಸಮ್ಮತವಿಲ್ಲ ಪರಮಾರ್ಥ ದೃಷ್ಟಿಯಿಂದ ಯಾರೂ ನನ್ನಿಂದ ಭಿನ್ನರಲ್ಲವಾದರೂ ಜ್ಞಾನಿಯು ಇದನ್ನು ಅರಿತಿರುವದರಿಂದ ಅವನು ನನ್ನ ಆತ್ಮನು ಉಳಿದವರಿಗೆ ಈ ಗುಟ್ಟು ಗೊತ್ತಿಲ್ಲವಾದ್ದರಿಂದ ಅವರ ತಿಳಿವಳಿಕೆಯಂತೆ ಅವರು ನನಗಿಂತ ಬೇರೆಯೆ ಆದರೂ ಅವರು ಕಾರ ಣಾಂತರದಿಂದಲಾದರೂ ಕ್ಷುದ್ರ ದೇವತೆಗಳ ಕಡೆಗೆ ಹೋಗದ ನನಗೇ ಶರಣು ಬಂದಿರುವದರಿಂದ ನನಗೆ ಪ್ರಿಯರಾದವರು. ಜ್ಞಾನಿಯ ಮಾತು ಹಾಗಲ್ಲ. (ಹಿ) ಏಕೆಂದರೆ (ಸಃ) ಅವನು (ಯುಕ್ತಾತ್ಮಾ) ಮನಸ್ಸನ್ನು ಸಮತ್ವದಲ್ಲಿಟ್ಟುಕೊಂಡವನಾಗಿ (ಅನುತ್ತಮಾಂ) ಸರ್ವೋತ್ಕೃಷ್ಟವಾದ (ಗತಿಂ) ಗತಿಯ ರೂಪವಾದ (ಮಾಮೇವ) ನನ್ನನ್ನೇ (ಆಸ್ಥಿತಃ) ಪಡೆದೇ ಇರುವನು

ಅಂಥ ಜ್ಞಾನಿಗಳ ಸಂಖ್ಯೆ ಕಡಿಮೆಯಾಗಿರುವದೇಕೆಂದರೆ.—

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**

(ಬಹೂನಾಂ) ಅನೇಕವಾದ (ಜನ್ಮನಾಂ) ಜನ್ಮಗಳ (ಅಂತೇ) ಕೊನೆಯಲ್ಲಿ ಎಂದರೆ ಬರೀ ಹುಟ್ಟಿ ಸಾಯುವ ಅನೇಕ ಜನ್ಮಗಳ ಕೊನೆ ಯಲ್ಲಲ್ಲ. ಜ್ಞಾನಕ್ಕೆ ಸಾಧನವಾದ ಸಂಸ್ಕಾರಗಳನ್ನು ಪಡೆದ ಅನೇಕ

ಜನ್ಮಗಳ ಕೊನೆಯಲ್ಲಿ (ಜ್ಞಾನವಾನ್) ತನ್ನ ಜ್ಞಾನವನ್ನು ಹಣ್ಣು ಮಾಡಿಕೊಂಡವನು "(ವಾಸುದೇವಃ) ಶ್ರೀಮನ್ನಾರಾಯಣನೇ (ಸರ್ವಂ) ಸಮಸ್ತ ಜಗದ್ರೂಪವಾಗಿರುವನು ಎಂದರೆ ಹಾಲು ಮೊಸರಾಗುವಂತೆ ಅಲ್ಲ ಹಾಗಾದ ಪಕ್ಷದಲ್ಲ ಹಾಲಿನ ಸ್ವರೂಪವು ಕೆಟ್ಟು ಹೋದಂತೆ ಶ್ರೀಮನ್ನಾರಾಯಣನ ಸ್ವರೂಪವೂ ಕೆಡಬೇಕಾಗಿ ಬಂದೀತು ಮತ್ತೆ ಹೇಗೆಂದರೆ— ಒಂದು ಕಡೆ ಹಗ್ಗವಿರುವಾಗ ಮಬ್ಬುಗತ್ತಲೆಯಲ್ಲಿ ಅದು ಚೆನ್ನಾಗಿ ಕಾಣದ ಹಾವಾಗಿಯೋ ಸೀರಿನ ಕೋಡಿಯಾಗಿಯೋ ಹೂವಿನ ಮಾಲೆಯಾಗಿಯೋ ಕೋಲಾಗಿಯೋ ನೆಲದ ಬಿರುಕಾಗಿಯೋ ಕಾಣು ವಾಗ ಈ ಹಾವು ಮೊದಲಾದವೆಲ್ಲವೂ ಹಗ್ಗವೆ ಎಂಬ ಜ್ಞಾನವಾಗು ವಂತ ಜಗದ್ರೂಪವಾಗಿ ಕಾಣುವದೆಲ್ಲ ಶ್ರೀಮನ್ನಾರಾಯಣನ ಸ್ವರೂಪವೆ" (ಇತಿ) ಎಂದು (ಮಾಂ) ನನ್ನನ್ನು (ಪ್ರಪದ್ಯತೇ) ಭಜಿಸುವನು (ಸಃ) ಆ (ಮಹಾತ್ಮಾ) ದೊಡ್ಡ ಮನಸ್ಸುಳ್ಳವನು (ಸುದುರ್ಲಭಃ) ಬಹು ಕಡಿಮೆ

ಆ ಬುದ್ಧಿ ಎಲ್ಲರಿಗೂ ಏಕಾಗುವದಿಲ್ಲವೆಂದರೆ —

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥**

(ತೈಸ್ತೈಃ) ಆಯಾ (ಕಾಮೈಃ) ಹೊನ್ನು, ಹೆಣ್ಣು, ಮಣ್ಣು- ಮೊದಲಾದ ಬಯಕಗಳಿಂದ (ಹೃತಜ್ಞಾನಾಃ) ಕಳೆದುಕೊಂಡ ವಿವೇಕ ವುಳ್ಳವರಾಗಿ ಎಂದರೆ ಹೊನ್ನು ಮೊದಲಾದವುಗಳು ಮೂರು ಗಳಿಗೆಯ ಬಾಳಿನವುಗಳೆಂಬುದನ್ನರಿಯದೆ ಅವುಗಳನ್ನು ಬಯಸಿ ತಮ್ಮ ವಿವೇಕ ವನ್ನು ಹಾಳುಮಾಡಿಕೊಂಡು (ಸ್ವಯಾ) ತಮ್ಮ (ಪ್ರಕೃತ್ಯಾ) ಸ್ವಭಾವ ದಿಂದ ಎಂದರೆ ಹಿಂದಿನ ಜನ್ಮಗಳ ಸಂಸ್ಕಾರಗಳ ಬಲದಿಂದ (ನಿಯತಾಃ) ಅಪ್ಪಣೆಯನ್ನು ಹೊಂದಿದವರಾಗಿ (ತಂ ತಂ) ಆಯಾ (ನಿಯಮಂ) ಕಟ್ಟುಪಾಡನ್ನು ಎಂದರೆ ಯಾವ ಯಾವ ದೇವತೆಯ ಆರಾಧನೆಯನ್ನು ಹೇಗೆ ಹೇಗೆ ಮಾಡಬೇಕಂದು ವಿಧಿ ಇದೆಯೊ ಆ ಜಪ, ಉಪವಾಸ,

ಪ್ರದಕ್ಷಿಣೆ, ನಮುಸ್ಕಾರ-ಮೊದಲಾದವುಗಳನ್ನು (ಆಸ್ಥಾಯ) ಅವಲಂಬಿಸಿ (ಅನ್ಯದೇವತಾಃ) ತಮ್ಮ ಬಯಕೆಗಳನ್ನು ತೀರಿಸುವಂಥ ಇಂದ್ರ, ಅಗ್ನಿ-ಮೊದಲಾದ ಬೇರೆ ಬೇರೆ ದೇವತೆಗಳನ್ನು (ಪ್ರಪದ್ಯಂತೇ) ಭಜಿಸುತ್ತಾರೆ.

ಆದರೂ ಅವರು ಪ್ರಕಾರಾಂತರದಿಂದ ಸರ್ವದೇವಸ್ವರೂಪನಾದ ನನಗೇ ಶರಣುಬಂದವರಾಗುವದರಿಂದ,—

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥ ೨೧ ॥**

(ಯೋ ಯೋ ಭಕ್ತಃ) ಏನಾದರೊಂದನ್ನು ಬಯಸುವ ಯಾವ ಯಾವ ಭಕ್ತನು (ಯಾಂ ಯಾಂ ತನುಂ) ಯಾವ ಯಾವ ಇತರ ದೇವತೆಯ ಮೂರ್ತಿಯನ್ನು (ಶ್ರದ್ಧಯಾ) ವಿಶ್ವಾಸದಿಂದ (ಅರ್ಚಿತುಂ) ಪೂಜಿಸುವದಕ್ಕೆ (ಇಚ್ಛತಿ) ಬಯಸುತ್ತಾನೋ (ತಸ್ಯ ತಸ್ಯ) ಆಯಾ ಭಕ್ತನಿಗೆ (ಅಹಂ) ನಾನು (ತಾಮೇವ) ಆ ದೇವತೆಯನ್ನು ಕುರಿತೇ (ಅಚಲಾಂ) ಕದಲದೆ ಇರುವಂಥ (ಶ್ರದ್ಧಾಂ) ವಿಶ್ವಾಸವನ್ನು (ವಿದಧಾಮಿ) ನೆಲೆಗೊಳಿಸುವೆನು

ಅದರಿಂದೇನಾಗುವದೆಂದರೆ —

**ಸಃ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿ* ತಾನ್ ॥ ೨೨ ॥**

(ಸಃ) ಆ ಭಕ್ತನು (ತಯಾ) ಆ (ಶ್ರದ್ಧಯಾ) ವಿಶ್ವಾಸದಿಂದ (ಯುಕ್ತಃ) ಕೂಡಿದವನಾಗಿ (ತಸ್ಯ) ಆ ಬೇರೆ ದೇವತೆಯ (ಆರಾಧನಂ) ಪೂಜೆಯನ್ನು (ಈಹತೇ) ಮಾಡುತ್ತಾನೆ ಎಲ್ಲ ದೇವತೆಗಳ ಆತ್ಮನೂ ನಾನೆ ಆದ್ದರಿಂದ ಆ ದೇವತಾರೂಪದ ಮೂಲಕವಾಗಿ ಆ ಪೂಜೆಯ

---

* "ಹಿತಾನ್" ಎಂದು ಒಂದೇ ಶಬ್ದವಾದರೂ ಆಗಬಹುದು ಆಗ "ಆ ಭಕ್ತರು ತಮಗೆ ಹಿತವೆಂದು ಬಯಸಿದಂಥ" ಎಂದರ್ಥ

ಫಲವನ್ನು ನಾನೆ ಕೊಡುತ್ತೇನೆ (ಹಿ) ಆದ್ದರಿಂದ (ಮಯೈವ) ಸರ್ವಜ್ಞ ನಾದ ನನ್ನಿಂದಲೇ (ವಿಹಿತಾನ್) ಕರ್ಮಕ್ಕೆ ತಕ್ಕ ಫಲವೆಂದು ಕೊಡಲ್ಪಟ್ಟಂಥ (ತಾನ್) ಆ (ಕಾಮಾನ್) ಬಯಸಿದ ಫಲಗಳನ್ನು (ತತಃ) ಆ ದೇವತಾರಾಧನೆಯಿಂದ (ಲಭತೇ ಚ) ಪಡೆದೂ ಪಡೆಯುತ್ತಾನೆ

ಆ ಅನ್ಯದೇವತಾರಾಧನೆಯಲ್ಲಿರುವ ಕೊರತೆಯೇನೆಂದರೆ —

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ॥೨೩**

ಅನ್ಯದೇವತಾ ಭಕ್ತರಿಗೂ ಆ ಅನ್ಯದೇವತಾರೂಪದಿಂದ ನಾನೇ ಫಲವನ್ನು ಕೊಟ್ಟರೂ (ಅಲ್ಪಮೇಧಸಾಂ) ನನ್ನನ್ನು ಸರ್ವಾತ್ಮಸ್ವರೂಪನೆಂದು ತಿಳಿಯಲಾರದ ದಡ್ಡರಾದಂಥ (ತೇಷಾಂ) ಆ ಅನ್ಯದೇವತಾ ಭಕ್ತರ (ತತ್) ಆ (ಫಲಂ) ಫಲವು (ಅಂತವತ್ತು) ನಾಶವಾಗತಕ್ಕದ್ದು (ಭವತಿ) ಆಗುತ್ತದೆ ಪರಮಾತ್ಮ ಸ್ವರೂಪವನ್ನು ಭಜಿಸುವ ಆರ್ತ ಮೊದಲಾದವರಿಗೆ ದೊರೆಯುವ ಫಲವೂ ನಾಶವುಳ್ಳದ್ದೇ ಆದರೂ ಪರಮೇಶ್ವರನ ಮೇಲಿನ ಭಕ್ತಿಯ ಫಲಕ್ಕೂ ಅನ್ಯದೇವತೆಗಳ ಮೇಲಿನ ಭಕ್ತಿಯ ಫಲಕ್ಕೂ ವ್ಯತ್ಯಾಸವಿದೆ ಅದೇನೆಂದರೆ ಸತ್ತಮೇಲೆ (ದೇವಯಜಃ) ಬೇರೆ ಬೇರೆ ದೇವತೆಗಳನ್ನು ಪೂಜೆ ಮಾಡುವವರು, ಕೊನೆಗೆ (ದೇವಾನ್) ಆ ದೇವತೆಗಳನ್ನು (ಯಾಂತಿ) ಪಡೆಯುತ್ತಾರೆ ಎಂದರೆ ಆಯಾ ದೇವತೆಗಳ ಲೋಕಕ್ಕೆ ಹೋಗುತ್ತಾರೆ (ಮದ್ಭಕ್ತಾಃ) ನನ್ನ ಭಕ್ತರು (ಮಾಮಪಿ) ನನ್ನ ಸ್ವರೂಪವನ್ನೆ (ಯಾಂತಿ) ಪಡೆಯುತ್ತಾರೆ

ಎಲ್ಲರೂ ಪರಮಾತ್ಮ ಸ್ವರೂಪಕ್ಕೇ ಏಕೆ ಶರಣು ಬರುವದಿಲ್ಲವೆಂದರೆ .—

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥ ೨೪ ॥**

(ಅವ್ಯಯಂ) ಎಂದೆಂದಿಗೂ ಹೋಗದಿರುವಂಥ (ಅನುತ್ತಮಮ್) ಇದಕ್ಕಿಂತ ಹೆಚ್ಚಿನದಿನ್ನಿಲ್ಲವೆನಿಸಿರುವಂಥ (ಮಮ) ನನ್ನ (ಪರಂಭಾವಂ)

ಪರಮಾತ್ಮ ಸ್ವರೂಪವನ್ನು (ಅಜಾನಂತಃ) ತಿಳಿಯದವರಾಗಿ (ಅವ್ಯಕ್ತಂ) ಇಂದ್ರಿಯಗಳಿಗಾಗಲಿ ಮನಸ್ಸಿಗಾಗಲಿ ಗೋಚರವಾಗುವ ಯಾವ ಆಕಾರವೂ ಇಲ್ಲದಂಥ (ಮಾಂ) ನನ್ನನ್ನು (ಅಬುದ್ಧಯಃ) ಅವಿವೇಕಿಗಳು (ವ್ಯಕ್ತಿಂ) ಇಂದ್ರಿಯಗಳಿಗೂ ಮನಸ್ಸಿಗೂ ಗೋಚರವಾಗುವಂಥ ಒಂದು ರೂಪವನ್ನು (ಆಪನ್ನಂ) ಈಗ ಪಡೆದಿರುವವನೆಂದು (ಮನ್ಯಂತೇ) ತಿಳಿಯುತ್ತಾರೆ ಇದರಿಂದಲೇ ಆ ಅವಿವೇಕಿಗಳು ಪರಮೇಶ್ವರನಾದ ನನ್ನ ಅವ್ಯಕ್ತಸ್ವರೂಪವನ್ನು ಬಿಟ್ಟು ಇಂದ್ರಾದಿ ದೇವತೆಗಳ ರೂಪವಾದ ವ್ಯಕ್ತಸ್ವರೂಪವನ್ನಾರಾಧಿಸುತ್ತಾರೆ ವ್ಯಕ್ತಸ್ವರೂಪವು ಬರೀ ತೋರಿಕೆಯದಾದ್ದರಿಂದ ಅದರ ಆರಾಧನೆಗೆ ವಿನಾಶಿಯಾದ ಫಲ ಅವ್ಯಕ್ತ ಸ್ವರೂಪವು ನಿಜವಾದದ್ದಾದ್ದರಿಂದ ಅದರ ಆರಾಧನೆಗೆ ಅವಿನಾಶಿಯಾದ ಫಲ

ಅವರು ನನ್ನನ್ನು ಏಕೆ ತಿಳಿಯಲಾರರೆಂದರೆ —

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್**
**॥ ೨೫ ॥**

(ಯೋಗಮಾಯಾಸಮಾವೃತಃ) ಸತ್ತ್ವ, ರಜ, ತಮ- ಈ ಮೂರು ಗುಣಗಳ ಸಮ್ಮೇಲನದ ರೂಪವಾದ ಮಾಯೆಯ ಮುಸುಕನ್ನು ಹಾಕಿಕೊಂಡಿರುವ (ಅಹಂ) ನಾನು (ಸರ್ವಸ್ಯ) ಆ ಮುಸುಕನ್ನು ಒಂದು ಪಕ್ಕಕ್ಕೆ ಸರಿಸಿ ದಿಟ್ಟಿಸಿ ನೋಡಲಾರದಿರುವ ಎಲ್ಲರಿಗೂ (ನ ಪ್ರಕಾಶಃ) ಕಾಣಬರುವವನಲ್ಲ ಜನರು ನನ್ನನ್ನು ಕಾಣದಿರಲೆಂದು ನಾನಾಗಿ ಮುಸುಕನ್ನು ಹಾಕಿಕೊಂಡಿಲ್ಲ. ಆ ಮುಸುಕೆಂಬುದು ಗುಣಗಳ ರೂಪವಾದ ನನ್ನ ಶಕ್ತಿ. ಗುಣಗಳ ವಿಷಯವನ್ನು ಬೇರೆ ಮಾಡಿ ದಿಟ್ಟಿಸಿ ನೋಡಿದರೆ ಆ ಮುಸುಕನ್ನು ಸರಿಸಿ ನೋಡಿದಂತಾಯಿತು. ಹಾಗೆ ನೋಡಿದವರಿಗೆ ನಾನು ಕಂಡೇ ಕಾಣುವೆನು. ನಾನು ಕಾಣದೆ ಇರುವದು ಶಕ್ಯವೇ ಇಲ್ಲ (ಮೂಢಃ) ಗುಣಗಳ ವಿಷಯವನ್ನೂ ನನ್ನನ್ನೂ ಬೇರೆ ಬೇರೆ ಮಾಡಿ ಗುಣಗಳ ವಿಷಯವನ್ನೊಂದು ಮೂಲೆಗೆ ತಳ್ಳಲಾರದ

ದಡ್ಡತನವುಳ್ಳ (ಅಯಂ) ಈ (ಲೋಕಃ) ಜಗತ್ತಿನ ಜನರು (ಅಜಂ) ಹುಟ್ಟುವಿಕೆ ಇಲ್ಲದಂಥ ಮತ್ತು (ಅವ್ಯಯಂ) ನಾಶವಿಲ್ಲದಂಥ (ಮಾಂ) ನನ್ನನ್ನು (ನಾಭಿಜಾನಾತಿ) ಚೆನ್ನಾಗಿ ತಿಳಿಯಲಾರರು ಗುಣಗಳ ಮೂಲಕವಾಗಿ ಕಾಣುವ ನನ್ನ ಛಾಯೆಯನ್ನು ನೋಡಿ ಜನರು ನನ್ನನ್ನು ವಸುದೇವನ ಮನೆಯಲ್ಲಿ ಹುಟ್ಟಿದ ಅಥವಾ ಬೇರೆ ಕಡೆ ವ್ಯೆದೋರಿದ ಒಂದು ಆಕಾರದವನೆಂದೂ ಕೊನೆಗೆ ಇಲ್ಲದಂತಾಗುವವ ನೆಂದೂ ತಿಳಿಯುವರು

ಆದ್ದರಿಂದ —

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥**

(ಅರ್ಜುನ) ಅರ್ಜುನನೆ, ಕೇಳು ಆ ಮಾಯೆಯ ಮುಸುಕು ನನ್ನ ಕಣ್ಣಿಗೇನೂ ಮರೆಯನ್ನು ಮಾಡಲಾರದು ಆದ್ದರಿಂದಲೆ (ಅಹಂ) ನಾನು (ಸಮತೀತಾನಿ) ಹಿಂದೆಲ್ಲ ಹುಟ್ಟಿಹೋದಂಥ (ವರ್ತಮಾನಾನಿ ಚ) ಈಗ ಇರುವಂಥ ಮತ್ತು (ಭವಿಷ್ಯಾಣಿ ಚ) ಮುಂದೆ ಹುಟ್ಟಿ ಹೋಗುವಂಥ (ಭೂತಾನಿ) ಸಮಸ್ತ ಪ್ರಾಣಿಗಳನ್ನೂ (ವೇದ) ತಿಳಿದಿದ್ದೇನೆ ಸರ್ವಕ್ಕೂ ಆಧಾರವು ನಾನೆ ಆದ್ದರಿಂದ ನನಗೆ ತಿಳಿಯದ್ದು ಯಾವದೂ ಇಲ್ಲ (ಮಾಂ ತು) ನನ್ನನ್ನಾದರೊ (ಕಶ್ಚನ) ನನ್ನ ಭಕ್ತನ ಹೊರತು ಮತ್ತೆ ಯಾರೂ (ನ ವೇದ) ತಿಳಿಯುವದಿಲ್ಲ ಮಾಯಾವಿಯ ನಿಜ ವನ್ನು ಅವನ ಶಿಷ್ಯರೂ ಪುತ್ರಾದಿಗಳೂ ತಿಳಿಯುವರೇ ಹೊರತು ಎಲ್ಲರೂ ತಿಳಿಯಲಾರರಷ್ಟೆ ಆದ್ದರಿಂದಲೆ ಎಲ್ಲರೂ ನನ್ನ ಪರಮಾತ್ಮ ಸ್ವರೂಪವನ್ನು ತಿಳಿಯುವದಿಲ್ಲ

ನಾನು ಕಾಣದಂತೆ ಅವರಿಗೆ ಅಡ್ಡಿಯಾಗಿರುವದೇನೆಂದರೆ .—

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥**

(ಭಾರತ, ಪರಂತಪ) ಅರ್ಜುನನೆ, ಕೇಳು (ಇಚ್ಛಾದ್ವೇಷ ಸಮುತ್ಥೇನ) ಬೇಕು, ಬೇಡ-ಎಂಬ ಭಾವನೆಗಳಿಂದ ಹುಟ್ಟಿದಂಥ (ದ್ವಂದ್ವ

ಮೋಹೇನ) ಸುಖ, ದುಃಖ-ಮೊದಲಾದ ಜೋಡಿಗಳ ಆವೇಶಕ್ಕೊಳಗಾಗುವದರಿಂದ (ಸರ್ವಭೂತಾನಿ) ಎಲ್ಲ ಪ್ರಾಣಿಗಳೂ (ಸರ್ಗೇ) ಸೃಷ್ಟಿ ಕಾಲದಲ್ಲಿಯೇ (ಸಂಮೋಹಂ) ಮುಂದುಗಾಣದಂಥ ಸ್ಥಿತಿಯನ್ನು (ಯಾಂತಿ) ಪಡೆಯುತ್ತಾರೆ ಹೀಗೆ ಬೇಕು, ಬೇಡ-ಎಂಬ ಭಾವನೆಗಳೇ ನನ್ನ ಪರಮಾತ್ಮ ಸ್ವರೂಪದ ಜ್ಞಾನಕ್ಕೆ ಅಡ್ಡನಿಂತಿರುವವು ಬೇಕು, ಬೇಡ-ಎಂಬ ಭಾವನೆಗಳ ಆವೇಶಕ್ಕೆ ಸಿಕ್ಕಿದವನಿಗೆ ಹೊರಗಣ ವಸ್ತುಗಳ ವಿವೇಕವೆ ಇರುವದಿಲ್ಲ ಇನ್ನು ಅಂತರಾತ್ಮನನ್ನು ಅದು ಹೇಗೆ ತಿಳಿಯಗೊಟ್ಟೀತು?

ಬೇಕು, ಬೇಡ-ಎಂಬ ಭಾವನೆಗಳ ರೂಪವಾದ ತಡೆಯನ್ನು ಕಳೆದುಕೊಂಡು ನನ್ನನ್ನು ಭಜಿಸುವದಕ್ಕೆ ದಾರಿಯೇನೆಂದರೆ —

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾಃ ಭಜಂತೇ ಮಾಂ ದೃಢವ್ರತಾಃ ॥ ೨೮ ॥**

(ಪುಣ್ಯಕರ್ಮಣಾಂ) ಅನೇಕ ಜನ್ಮಗಳಿಂದ ಚಿತ್ತಶುದ್ಧಿಗೆ ಕಾರಣವಾದ ನಿಷ್ಕಾಮಕರ್ಮಗಳನ್ನೆ ಮಾಡುತ್ತಿರುವ (ಯೇಷಾಂ ತು) ಯಾವ (ಜನಾನಾಂ) ಜನರಿಗೆ (ಪಾಪಂ) ಅವರ ಹಿಂದಿನ ಅನೇಕ ಜನ್ಮಗಳ ಪಾಪಗಳ ಸಮುದಾಯವು (ಅಂತಗತಂ) ಕೊನೆಯಾಗಿ ಹೋಗಿರುವದೊ (ತೇ) ಅವರು (ದ್ವಂದ್ವಮೋಹನಿರ್ಮುಕ್ತಾಃ) ಸುಖ, ದುಃಖ-ಮೊದಲಾದ ಜೋಡಿಗಳ ಆವೇಶವನ್ನು ಹರಿಸಿಕೊಂಡವರಾಗಿ (ದೃಢವ್ರತಾಃ) ಪರಮಾರ್ಥ ತತ್ತ್ವವಿದೇ ಸರಿಯೆಂದು ಗಟ್ಟಿಯಾದ ವ್ರತವನ್ನು ಧರಿಸಿದವರಾಗಿ (ಮಾಂ) ನನ್ನನ್ನು (ಭಜಂತೇ) ಭಜಿಸುತ್ತಾರೆ ಹಿಂದಿನ ಪಾಪಕರ್ಮಗಳ ಫಲಗಳನ್ನೆಲ್ಲ ಅನುಭವಿಸಿಯೇ ತೀರಿಸುವದೆಂದರೆ ಅದು ಮುಗಿಯುವ ಮಾತಲ್ಲವಾದ್ದರಿಂದ ಪುಣ್ಯಕರ್ಮಗಳಿಂದ ಪಾಪಕರ್ಮಗಳನ್ನು ತಳಕ್ಕೆ ತುಳಿದವರು ಪರಮಾತ್ಮ ಸ್ವರೂಪವನ್ನು ತಿಳಿಯುವರು

ಆಗ ಅವರ ಭಜನೆಯ ಉದ್ದೇಶವೇನಿರುವದೆಂದರೆ —

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮಚಾಖಿಲಮ್ ॥ ೨೯ ॥**

(ಯೇ) ಯಾರು (ಜರಾಮರಣಮೋಕ್ಷಾಯ) ಮುಪ್ಪು, ಸಾವು-ಮೊದಲಾದವುಗಳಿಂದಾಗುವ ಅನರ್ಥಕ್ಕೆ ಹೇಸಿ ಅವುಗಳ ಕುಣಿಕೆಯಿಂದ ನುಣಿಚಿಕೊಳ್ಳಬೇಕೆಂದು (ಮಾಂ) ನನ್ನನ್ನು (ಆಶ್ರಿತ್ಯ) ಆಶ್ರಯಿಸಿ (ಯತಂತಿ) ಪ್ರಯತ್ನಿಸುತ್ತಾರೋ (ತೇ) ಅವರು (ತತ್) ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದಂಥ ಆ (ಬ್ರಹ್ಮ) ಪರ ಬ್ರಹ್ಮಸ್ವರೂಪವನ್ನೂ (ಅಧ್ಯಾತ್ಮಂ) ತನ್ನೊಳಗಿರುವ ಆತ್ಮದ ವಿಷಯ ವಾದದ್ದನ್ನೂ ಮತ್ತು (ಅಖಿಲಂ ಕರ್ಮ ಚ) ಅವೆರಡರ ಸ್ವರೂಪವನ್ನು ತಿಳಿಯುವ ಯೋಗ್ಯತೆಯನ್ನು ತಂದುಕೊಡುವ ಯಜ್ಞ, ದಾನ, ತಪಸ್ಸು ಮೊದಲಾದ ಎಲ್ಲ ಕರ್ಮಗಳನ್ನೂ (ಕೃತ್ಸ್ನಂ) ಸಂಪೂರ್ಣವಾಗಿ (ವಿದುಃ) ತಿಳಿದುಕೊಳ್ಳುವರು

ಆ ತಿಳಿವಳಿಕೆ ದೃಢವಾಗುವ ಬಗೆ ಹೇಗೆಂದರೆ —

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥**

(ಮಾಂ) ನನ್ನನ್ನು (ಸಾಧಿಭೂತಾದಿದೈವಂ) ಅದಿಭೂತದಿಂದಲೂ ಅಧಿದೈವದಿಂದಲೂ ಕೂಡಿದವನೆಂದೂ (ಸಾಧಿಯಜ್ಞಂ ಚ) ಅಧಿಯಜ್ಞ ದಿಂದ ಕೂಡಿದವನೆಂದೂ (ಯೇ) ಯಾರು (ವಿದುಃ) ತಿಳಿಯುತ್ತಾರೊ (ಯುಕ್ತಚೇತಸಃ) ನನ್ನಲ್ಲಿಯೇ ಮನಸ್ಸನ್ನಿಟ್ಟಿರುವಂಥ (ತೇ) ಅವರು (ಪ್ರಯಾಣಕಾಲೇಽಪಿ ಚ) ಇಂದ್ರಿಯ, ಮನಸ್ಸು-ಮೊದಲಾದವುಗಳೆಲ್ಲ ಎಚ್ಚರ ತಪ್ಪುವಂಥ ಸಾವಿನ ಸಮಯದಲ್ಲಿಯೂ ಕೂಡ (ಮಾಂ) ನನ್ನನ್ನು (ವಿದುಃ) ತಿಳಿಯುವರು

ಇಲ್ಲಿಗೆ **ಜ್ಞಾನವಿಜ್ಞಾನಯೋಗ**ವೆಂಬ ಏಳನೆ ಅಧ್ಯಾಯವು ಮುಗಿಯಿತು



# ಎಂಟನೆ ಅಧ್ಯಾಯ

ಪರಮಾತ್ಮನನ್ನು ಆಶ್ರಯಿಸಿದವರು ಬ್ರಹ್ಮ, ಅಧ್ಯಾಯ–ಮೊದಲಾದವುಗಳನ್ನೆಲ್ಲ ತಿಳಿಯುವರೆಂದು ಹೇಳಿದ ಮಾತನ್ನು ಕೇಳಿ ಅವುಗಳ ಅರ್ಥವನ್ನು ತಿಳಿಯಬೇಕೆಂದು,

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು :—

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

(ಪುರುಷೋತ್ತಮ, ಮಧುಸೂದನ) ಶ್ರೀಕೃಷ್ಣನೆ, ಕೇಳು (ತತ್) ಆ (ಬ್ರಹ್ಮ) ಬ್ರಹ್ಮವೆಂಬುವದು (ಕಿಂ) ಏನು? (ಅಧ್ಯಾತ್ಮಂ) ಅಧ್ಯಾತ್ಮವೆಂಬುವದು (ಕಿಂ) ಏನು? (ಕರ್ಮ) ಕರ್ಮವೆಂದರೆ (ಕಿಂ) ಏನು? (ಅಧಿಭೂತಂ ಚ) ಅಧಿಭೂತವೆಂದು (ಕಿಂ ಪ್ರೋಕ್ತಂ) ಏನನ್ನು ಹೇಳಿದೆ? (ಅಧಿದೈವಂ) ಅಧಿದೈವವೆಂದು (ಕಿಮುಚ್ಯತೇ) ಯಾವದಕ್ಕೆ ಹೆಸರು? (ಅಧಿಯಜ್ಞಃ) ಅಧಿಯಜ್ಞವೆನ್ನುವದು (ಅಸ್ಮಿನ್) ಈ (ದೇಹೇ) ದೇಹದಲ್ಲಿ (ಅತ್ರ) ಇಲ್ಲಿ (ಕಃ) ಯಾರು (ಕಥಂ) ಹೇಗೆ? (ನಿಯತಾತ್ಮಭಿಃ) ಮನಸ್ಸನ್ನು ಬಿಗಿ ಹಿಡಿದವರಿಂದ (ಪ್ರಯಾಣಕಾಲೇ ಚ) ಇಂದ್ರಿಯ ಮೊದಲಾದವುಗಳೆಲ್ಲ ಎಚ್ಚರದಪ್ಪುವ ಸಾವಿನ ಸಮಯದಲ್ಲಿ ಕೂಡ (ಕಥಂ) ಹೇಗೆ (ಜ್ಞೇಯಃ) ತಿಳಿಯುವದಕ್ಕಾಗುವವನು (ಅಸಿ) ಆಗಿದ್ದಿ? ಈ ಏಳು ಪ್ರಶ್ನೆಗಳ ಉತ್ತರವನ್ನು ಹೇಳು

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು :—

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

ಮೊದಲನೆಯದು ಬ್ರಹ್ಮವೆಂಬ ಶಬ್ದವು ಚತುರ್ಮುಖ ಬ್ರಹ್ಮನಿಗೂ ಇದ್ದರೂ* (ಅಕ್ಷರಂ) ನಾಶರಹಿತವಾದ (ಪರಮಂ) ಪರಬ್ರಹ್ಮವು (ಬ್ರಹ್ಮ) ಇಲ್ಲಿ ಹೇಳಿದ ಬ್ರಹ್ಮ ಅಕ್ಷರವೆಂಬ ಮಾತು ಓಂ ಎಂಬ ವರ್ಣಕ್ಕೂ ಹೊಂದಿದರೂ 'ಪರಮಂ' ಎಂಬ ಮಾತಿನೊಡನೆ ಸಂಬಂಧ ವಿರುವಾಗ ಅದು ಓಂಕಾರಕ್ಕೆ ಸಲ್ಲುವದಿಲ್ಲ ಓಂಕಾರವು ಪರಬ್ರಹ್ಮನಿಗೆ ವಾಚಕವಾದ್ದರಿಂದ ಅವನಿಗೊಪ್ಪುವ ಅಕ್ಷರವೆಂಬ ಮಾತನ್ನು ಅದಕ್ಕೆ ಹೇಳುವದಾಗಿದೆ ಎರಡನೆಯದು (ಸ್ವಭಾವಃ) ತನ್ನ ಸ್ವರೂಪವನ್ನೇ ಪ್ರತಿ ದೇಹದಲ್ಲಿಯೂ ಅಂತರಾತ್ಮವಾಗಿ ಮಾಡಿರುವಿಕೆಯು (ಅಧ್ಯಾತ್ಮಂ) ಅಧ್ಯಾತ್ಮವು (ಉಚ್ಯತೇ) ಎನಿಸುವದು ಮೂರನೆಯದು (ಭೂತಭಾವೋದ್ಭವ ಕರಃ) ಪ್ರಾಣಿಸಮೂಹಗಳ ಉತ್ಪತ್ತಿಯನ್ನು ಮಾಡುವಂಥ (ವಿಸರ್ಗಃ) ಹೋಮ, ದಾನ–ಮೊದಲಾದವು (ಕರ್ಮಸಂಜ್ಞಿತಃ) ಕರ್ಮವೆನಿಸುವದು ಹೋಮ ಮೊದಲಾದ ಆಹುತಿಗಳಿಂದ ಮಳೆಬೆಳೆಗಳಾಗಿ ಜಗಚ್ಚಕ್ರವು ಸಾಗುವದೆಂಬ ವಿಷಯವನ್ನು ಹಿಂದೆಯೇ ಹೇಳಿದ್ದಾಗಿದೆ

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥**

(ದೇಹಭೃತಾಂ) ದೇಹವನ್ನು ಧರಿಸಿರುವ ಪ್ರಾಣಿಗಳಲ್ಲೆಲ್ಲ (ವರ) ಶ್ರೇಷ್ಠನಾದ ಅರ್ಜುನನೆ, ಕೇಳು ನಾಲ್ಕನೆಯದು (ಕ್ಷರಃ) ಹುಟ್ಟು ಸಾವುಗಳುಳ್ಳ (ಭಾವಃ) ವಸ್ತುಗಳೆಲ್ಲ (ಅದಿಭೂತಂ) ಪ್ರಾಣಿಗಳಿಗೆಂಗಿ

---

* "ತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಮನಣ್ವ ಹ್ರಸ್ವಮ ದೀರ್ಘಂ, ಏತಸ್ಯಾಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ, ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ" — ಓ ಗಾರ್ಗಿ, ಬ್ರಾಹ್ಮಣರು ಈ ಅಕ್ಷರವಾದ ಬ್ರಹ್ಮವನ್ನು ಅಸ್ಥೂಲ, ಅನಣು, ಅಹ್ರಸ್ವ, ಅದೀರ್ಘ—ಎಂದು ಹೇಳು ತ್ತಾರೆ, ಓ ಗಾರ್ಗಿ, ಈ ಅಕ್ಷರದ ಅಪ್ಪಣೆಯಂತೆ ಸೂರ್ಯ ಚಂದ್ರರು ನಿಯಮದಿಂದ ನಡೆಯುತ್ತಿರುವರು, ಓ ಗಾರ್ಗಿ, ಈ ಅಕ್ಷರದಲ್ಲಿಯೇ ಆಕಾಶವು ಓತಪ್ರೋತ ವಾಗಿರುವದು.—ಶ್ರು.

ಇರುವದರಿಂದ ಅಧಿಭೂತವೆನಿಸುವದು ಐದನೆಯದು (ಪುರುಷಶ್ಚ) ಜಗತ್ತಿನಲ್ಲೆಲ್ಲ ಯಾವನು ತುಂಬಿಕೊಂಡಿರುವನೊ ಅಥವ ದೇಹವೆಂಬ ಪುರದಲ್ಲಿ ಯಾವನು ವಿಶ್ರಮಿಸಿಕೊಂಡಿರುವನೋ ಅಥವ ಯಾವನು ಸೂರ್ಯಬಿಂಬದಲ್ಲಿ ಅಂತರ್ಯಾಮಿಯಾಗಿ ಸಮಸ್ತ ಪ್ರಾಣಿಗಳ ಇಂದ್ರಿಯಗಳಿಗೂ ಒತ್ತಾಸೆಯನ್ನು ಕೊಡುವವನಾಗಿದ್ದಾನೊ ಆ ಹಿರಣ್ಯಗರ್ಭನು (ಅಧಿದೈವತಮ್) ಅಧಿದೈವತವು ಇನ್ನು ಆರನೆಯದು (ಅತ್ರ) ಈ (ದೇಹೇ) ದೇಹದಲ್ಲಿ (ಅಧಿಯಜ್ಞಃ) ಸರ್ವಯಜ್ಞಗಳಿಗೂ ಅಭಿಮಾನಿಯಾದ ವಿಷ್ಣುವೆಂಬ ದೇವತೆಯು (ಅಹಮೇವ) ನಾನೆ

ಇನ್ನು ಏಳನೆಯ ಪ್ರಶ್ನೆಯ ಉತ್ತರವನ್ನು ಕೇಳು —

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥**

(ಯಃ) ಯಾವನು, ಯಾವಾಗಲೂ ನನ್ನಲ್ಲಿಯೇ ಮನಸ್ಸನ್ನಿಟ್ಟಿರುವದರ ಸಂಸ್ಕಾರದ ಬಲದಿಂದ (ಅಂತಕಾಲೇ ಚ) ಸಾವಿನ ಸಮಯದಲ್ಲಿಯೂ ಕೂಡ (ಮಾಮೇವ) ಪರಮೇಶ್ವರನಾದ ನನ್ನನ್ನೆ (ಸ್ಮರನ್) ಧ್ಯಾನಮಾಡುತ್ತ (ಕಲೇವರಂ) ಶರೀರವನ್ನು (ಮುಕ್ತ್ವಾ) ಬಿಟ್ಟು (ಪ್ರಯಾತಿ) ಹೋಗುತ್ತಾನೋ (ಸಃ) ಅವನು (ಮದ್ಭಾವಂ) ನನ್ನ ಸ್ವರೂಪವನ್ನು (ಯಾತಿ) ಪಡೆಯುತ್ತಾನೆ (ಅತ್ರ) ಈ ವಿಷಯದಲ್ಲಿ (ಸಂಶಯಃ) ಸಂಶಯವು (ನಾಸ್ತಿ) ಇಲ್ಲ

ಈ ನಿಯಮವು ನನ್ನ ವಿಷಯದಲ್ಲಿ ಮಾತ್ರವೇ ಅಲ್ಲ ಮತ್ತೇನೆಂದರೆ —

**ಯಂ ಯಂ ವಾಪಿ* ಸ್ಮರನ್ಭಾವಂ ತ್ಯಜತ್ಯನ್ತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬ ॥**

* ಕೆಲವರು ಟೀಕಾಕಾರರು 'ಯಂ ಯಂ ಚಾಪಿ' ಎಂಬ ಪಾಠಾಂತರವನ್ನು ಹಿಡಿದುಕೊಂಡಿರುತ್ತಾರೆ

(ಕೌಂತೇಯ) ಅರ್ಜುನನೆ, ಕೇಳು. (ಸದಾ). ಯಾವಾಗಲೂ ಎಡೆಬಿಡದೆ (ತದ್ಭಾವಭಾವಿತಃ) ಯಾವದೋ ಒಂದು ದೇವತೆಯನ್ನು ಧ್ಯಾನಮಾಡಿದ ಸಂಸ್ಕಾರದ ಬಲವುಳ್ಳವನಾಗಿ (ಯಂ ಯಂ ವಾಪಿ ಭಾವಂ) ಯಾವ ಯಾವ ರೂಪವನ್ನು (ಸ್ಮರನ್) ಚಿಂತಿಸುತ್ತ (ಅಂತೇ) ಸಾವಿನ ಸಮಯದಲ್ಲಿ (ಕಲೇವರಂ) ಶರೀರವನ್ನು (ತ್ಯಜತಿ) ಬಿಡುತ್ತಾನೊ (ತಂ ತಮೇವ) ತಾನು ಚಿಂತಿಸಿದ ಆಯಾ ದೇವತಾ ಸ್ವರೂಪವನ್ನೇ (ಏತಿ) ಪಡೆಯುತ್ತಾನೆ

ಕೊನೆಯ ಭಾವನೆಯ ಫಲವು ಹೀಗಿರುವದರಿಂದ.—

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥ ೭ ॥**

(ತಸ್ಮಾತ್) ಆದ್ದರಿಂದ (ಸರ್ವೇಷು ಕಾಲೇಷು) ಎಲ್ಲ ಸಮಯಗಳಲ್ಲಿಯೂ (ಮಾಂ) ನನ್ನನ್ನು (ಅನುಸ್ಮರ) ಚಿಂತಿಸು ಈ ನನ್ನ ಧ್ಯಾನವು ನಿನ್ನ ಅಂತಃಕರಣದಲ್ಲಿ ಚೆನ್ನಾಗಿ ಮೈದುಂಬಿಕೊಳ್ಳುವದಕ್ಕೆ ತಕ್ಕದ್ದಾಗುವ ಹಾಗೆ ಈಗ ನೀನು ಅದನ್ನು ಆದಷ್ಟು ಅಭ್ಯಾಸಮಾಡುತ್ತ (ಯುಧ್ಯ ಚ) ನಿನ್ನ ಶಾಸ್ತ್ರವಿಹಿತಕರ್ಮವಾದ ಯುದ್ಧವನ್ನೂ ಮಾಡು. ಹೀಗೆ ಚೆನ್ನಾಗಿ. ಚಿತ್ತಶುದ್ಧಿಯನ್ನು ಮಾಡಿಕೊಂಡರೆ (ಮಯ್ಯರ್ಪಿತಮನೋಬುದ್ಧಿಃ) ಮನಸ್ಸನ್ನೂ ಬುದ್ಧಿಯನ್ನೂ ನನಗೆ ಒಪ್ಪಿಸಿದವನಾಗಿ (ಮಾಮೇವ) ನನ್ನ ಸ್ವರೂಪವನ್ನೆ (ಏಷ್ಯಸಿ) ಹೊಂದುತ್ತಿ (ಅಸಂಶಯಃ) ಈ ಮಾತಿಗೆರಡಿಲ್ಲ

ಮತ್ತೇನೆಂದರೆ —

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮ ॥**

(ಪಾರ್ಥ) ಅರ್ಜುನನೆ, ಕೇಳು. (ಅಭ್ಯಾಸಯೋಗಯುಕ್ತೇನ) ಬೇರೆ ಬೇರೆ ವಿಷಯಾಕಾರಗಳನ್ನೇನೂ ಪಡೆಯದೆ ಪರಮಾತ್ಮಾಕಾರವಾದ ವೃತ್ತಿಯಾಗಿಯೇ ಎಣ್ಣೆಯ ಧಾರೆಯಂತೆ ಎಡೆಬಿಡದೆ ಹರಿಯು

ತ್ತಿರುವ ಸಾಧನದಿಂದ ಕೂಡಿದಂಥ ಮತ್ತು (ನಾನ್ಯಗಾಮಿನಾ) ವಿಷಯ ಗಳು ಎದುರಿಗಿದ್ದರೂ ಅವುಗಳ ಕಡೆಗೆ ಎರಗದಿರುವಂಥ (ಚೇತಸಾ) ಮನಸ್ಸಿನಿಂದ (ಅನುಚಿಂತಯನ್) ಶಾಸ್ತ್ರವೂ ಗುರುಗಳೂ ಹೇಳಿದಂತೆ ಧ್ಯಾನಮಾಡಿ (ಪರಮಂ) ನಿರತಿಶಯವಾದಂಥ ಮತ್ತು (ದಿವ್ಯಂ) ಸೂರ್ಯ ಮಂಡಲದಲ್ಲಿರುವಂಥ (ಪುರುಷಂ) ಪುರುಷನನ್ನು (ಯಾತಿ) ಹೊಂದು ತ್ತಾನೆ.

ಎಂಥ ಪುರುಷನನ್ನೆಂದರೆ :—

**ಕವಿಂ ಪುರಾಣಮನುಶಾಸಿತಾರ-**
**ಮಣೋರಣೀಯಾಂಸಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರಮಚಿಂತ್ಯರೂಪ-**
**ಮಾದಿತ್ಯವರ್ಣಂ ತಮಸಃ ಪರಸ್ತಾತ್** ॥ ೯ ॥

(ಕವಿಂ) ಹಿಂದಿನದನ್ನೂ ಈಗಿನದನ್ನೂ ಮುಂದಿನದನ್ನೂ ಎಲ್ಲವನ್ನೂ ತಿಳಿಯುವಂಥ (ಪುರಾಣಂ) ಜಗತ್ತಿಗೆಲ್ಲ ಮೊದಲನೆಯ ಕಾರಣನಾದಂಥ (ಅನುಶಾಸಿತಾರಂ) ಜಗತ್ತಿನ ಮೇಲೆಲ್ಲ ಅಧಿಕಾರವನ್ನು ನಡೆಸುವಂಥ ಅಥವಾ ಪ್ರಾಣಿಗಳ ಹೃದಯದಲ್ಲಿದ್ದು ಎಲ್ಲರನ್ನೂ ಅವರವರ ಕರ್ಮಗಳಿಗೆ ತಕ್ಕಂತೆ ನಡೆಸುವಂಥ (ಅಣೋಃ) ಜಗತ್ತಿನಲ್ಲಿರುವ ಆಕಾಶ ಮೊದಲಾದ ಸೂಕ್ಷ್ಮ ಪದಾರ್ಥಗಳನ್ನೆಲ್ಲ (ಅಣೀಯಾಂಸಂ) ಮನಸ್ಸಿಗೆ ಕೂಡ ನಿಲುಕ ದಷ್ಟು ಸೂಕ್ಷ್ಮವಾಗಿರುವಂಥ (ಸರ್ವಸ್ಯ) ಎಲ್ಲ ಕರ್ಮಗಳ ಫಲಗಳನ್ನೂ (ಧಾತಾರಂ) ಅವರವರಿಗೆ ತಕ್ಕಂತೆ ಹಂಚುವವನಾದಂಥ (ಅಚಿಂತ್ಯರೂಪಂ) ಚಿಂತಿಸುವದಕ್ಕೆ ಅಶಕ್ಯವಾದ ರೂಪವುಳ್ಳಂಥ (ತಮಸಃ ಪರಸ್ತಾತ್) ಅಜ್ಞಾನವೆಂಬ ಕತ್ತಲೆಯ ಆಚೆ ಇರುವಂಥ (ಆದಿತ್ಯವರ್ಣಂ) ನಿತ್ಯ ಪ್ರಕಾಶಸ್ವರೂಪನಾದ ಸೂರ್ಯನಂತೆ ನಿತ್ಯಚೈತನ್ಯಪ್ರಕಾಶವುಳ್ಳಂಥ ಪುರುಷ ನನ್ನು (ಯಃ) ಯಾವನು (ಅನುಸ್ಮರೇತ್) ಶಾಸ್ತ್ರವೂ ಗುರುಗಳೂ ಹೇಳಿದಂತೆ ಧ್ಯಾನಿಸುವನೊ,

ಮತ್ತು :—

**ಪ್ರಯಾಣಕಾಲೇ ಮನಸಾಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥ ೧೦ ॥**

(ಪ್ರಯಾಣಕಾಲೇ) ದೇಹವನ್ನು ಬಿಟ್ಟು ಹೋಗುವ ಕಾಲದಲ್ಲಿ (ಅಚಲೇನ) ವಿಷಯದ ಕಡೆಗೆ ಜೋಲದೆ ಇರುವಂಥ (ಮನಸಾ) ಮನಸ್ಸಿನಿಂದ (ಭಕ್ತ್ಯಾ) ಪ್ರೇಮವಿಶೇಷದಿಂದ (ಯುಕ್ತಃ) ಕೂಡಿದವನಾಗಿ (ಯೋಗಬಲೇನ ಚೈವ) ಮನಸ್ಸನ್ನು ಆತ್ಮಾಕಾರವಾದ ಒಂದೇ ವೃತ್ತಿಯಲ್ಲಿ ಹೆಚ್ಚು ಹೆಚ್ಚು ಕಾಲ ಇಟ್ಟುಕೊಳ್ಳುವ ಸಾಮರ್ಥ್ಯದಿಂದಲಿ (ಪ್ರಾಣಂ) ಪ್ರಾಣವಾಯುವನ್ನು (ಭ್ರುವೋಃ) ಎರಡು ಹುಬ್ಬುಗಳ (ಮಧ್ಯೇ) ನಡುವೆ (ಸಮ್ಯಕ್) ಚೆನ್ನಾಗಿ (ಆವೇಶ್ಯ) ನಿಲ್ಲಿಸಿ, (ಸಃ) ಆ ಯೋಗಿಯು (ತಂ) ಮೇಲೆ ಹೇಳಿದಂಥ ಆ (ದಿವ್ಯಂ) ಸೂರ್ಯಮಂಡಲದಲ್ಲಿರುವ (ಪರಂ ಪುರುಷಂ) ಪರಮಪುರುಷನನ್ನು (ಉಪೈತಿ) ಪಡೆಯುತ್ತಾನೆ

ಧ್ಯಾನಕಾಲದಲ್ಲಿ ಸ್ಮರಣೆಗೆ ಉಪಯೋಗವಾದ ನಾಮವು ಯಾವದೆಂದರೆ·—

**ಯದಕ್ಷರಂ* ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥**

* "ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ। ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥" ಯಾವ ಪದವನ್ನು ಎಲ್ಲ ವೇದಗಳೂ ಮತ್ತು ಎಲ್ಲ ತಪಸ್ಸುಗಳೂ ಹೇಳುವವೂ ಯಾವದನ್ನು ಬಯಸಿ ಬ್ರಹ್ಮಚರ್ಯವನ್ನು ಮಾಡುತ್ತಾರೊ ಆ ಪದವನ್ನು ನಿನಗೆ ಸಂಕ್ಷೇಪವಾಗಿ ಹೇಳುತ್ತೇನೆ. ಅದು ಓಂ ಎಂಬುದು —ಶ್ರು

(ಯತ್) ಯಾವ (ಅಕ್ಷರಂ) ಪರಬ್ರಹ್ಮದ ಅಥವಾ ಅಪರಬ್ರಹ್ಮದ ಹೆಸರಾದ ಅಥವಾ ಶಾಲಿಗ್ರಾಮ ಮೊದಲಾದವುಗಳಂತೆ ಪ್ರತೀಕವಾದ ಅಕ್ಷರವನ್ನು (ವೇದವಿದಃ) ವೇದಾರ್ಥಗಳನ್ನೆಲ್ಲ ತಿಳಿದವರು (ವದಂತಿ) ಯಾವದೊಂದು ಧರ್ಮವೂ ಇಲ್ಲದ್ದೆಂದು ಎಂದರೆ ಎಲ್ಲಕ್ಕೂ ಮೀರಿದ್ದೆಂದು ಹೇಳುತ್ತಾರೊ ಮತ್ತು (ಯತ್) ಯಾವ ಅಕ್ಷರವನ್ನು (ವೀತರಾಗಾಃ) ಬೇಕುಬೇಡೆಂಬಿವುಗಳಿಲ್ಲದಂಥ (ಯತತಃ) ಮನೋನಿಗ್ರಹಶಾಲಿಗಳು (ವಿಶಂತಿ) ತಮ್ಮ ಉಪಾಸನೆಯ ಪ್ರಭಾವದಿಂದ ಸೇರುತ್ತಾರೊ (ಯತ್) ಯಾವ ಅಕ್ಷರವನ್ನು (ಇಚ್ಛಂತಃ) ತಿಳಿದುಕೊಳ್ಳಬೇಕೆಂಬ ಬಯಕೆಯುಳ್ಳವರಾಗಿ ಸಾಧಕರು (ಬ್ರಹ್ಮಚರ್ಯಂ) ಭಿಕ್ಷಾನ್ನವನ್ನುಂಡು ಗುರುಸೇವೆಯನ್ನು ಮಾಡಿಕೊಂಡು ಅದರ ಸಾಧನೆಗಳನ್ನು (ಚರಂತಿ) ನಡೆಸಿಕೊಂಡಿರುವರೊ (ತತ್) ಆ (ಪದಂ) ಪಡೆಯುವದಕ್ಕೆ ಯೋಗ್ಯವಾದ ಬ್ರಹ್ಮವನ್ನು ಹೇಳುವ ಅಕ್ಷರವನ್ನು (ತೇ) ನಿನಗೆ (ಸಂಗ್ರಹೇಣ) ಸಂಕ್ಷೇಪವಾಗಿ (ಪ್ರವಕ್ಷ್ಯೇ) ಹೇಳುತ್ತೇನೆ

ಯೋಗಧಾರಣೆಯಿಂದ ಕೂಡಿದ ಅದರ ಉಪಾಸನೆಯ ಕ್ರಮವೇನೆಂದರೆ :—

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್॥**
**॥ ೧೨ ॥**

(ಸರ್ವದ್ವಾರಾಣಿ) ಹೊರಗಣ ವಿಷಯಗಳನ್ನು ಗ್ರಹಿಸುವ ಸಾಧನಗಳಾದ ಕಣ್ಣು, ಕಿವಿ–ಮೊದಲಾದ ಬಾಗಿಲುಗಳನ್ನೆಲ್ಲ (ಸಂಯಮ್ಯ) ತಡೆದುಕೊಂಡು ಎಂದರೆ ವಿಷಯುಗಳ ದೋಷವನ್ನು ತಿಳಿಸಿಕೊಡುತ್ತ ಅವುಗಳನ್ನು ಕಣ್ಣು ಮೊದಲಾದವು ಒಳಕ್ಕೆ ಬಿಟ್ಟುಕೊಳ್ಳದೆ ಹಾಗೆ ಹಿಡಿತದಲ್ಲಿಟ್ಟುಕೊಂಡು (ಮನಃ) ಮನಸ್ಸನ್ನು, ಅಭ್ಯಾಸದಿಂದಲೂ ವೈರಾಗ್ಯದಿಂದಲೂ (ಹೃದಿ) ಹೃದಯದ ಸ್ಥಲದಲ್ಲಿ (ನಿರುಧ್ಯ ಚ) ನಿಲ್ಲಿಸಿಕೊಂಡು ಎಂದರೆ ವಿಷಯಗಳನ್ನು ಚಿಂತಿಸದೆ ಸುಮ್ಮನಿರುವಂತೆ ಬಿಗಿಹಿಡಿದುಕೊಂಡು (ಆತ್ಮನಃ) ತನ್ನ (ಪ್ರಾಣಂ) ಪ್ರಾಣವಾಯುವನ್ನು (ಮೂರ್ಧ್ನಿ) ಗುರುಗಳು

ಹೇಳಿಕೊಟ್ಟ ರೀತಿಯಿಂದ ಮೆಲ್ಲಗೆ ಹೃದಯದಿಂದ ಮೇಲಕ್ಕೆ ಹೋಗುವಂಥ ಸುಷುಮ್ನಾ ಎಂಬ ನಾಡಿಯ ಮೂಲಕವಾಗಿ ಏರಿಸಿ ನಡುನೆತ್ತಿಯಲ್ಲಿ (ಆಧಾಯ) ಇಟ್ಟುಕೊಂಡು (ಯೋಗಧಾರಣಾಮ್) ಈ ಪ್ರಕಾರವಾದ ಯೋಗಧಾರಣೆಯನ್ನು (ಆಸ್ಥಿತಃ) ಅಳವಡಿಸಿಕೊಂಡವನಾಗಿ,

ಮುಂದೇನು ಮಾಡಬೇಕೆಂದರೆ :—

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ ॥ ೧೩ ॥**

(ಓಂ ಇತಿ) ಓಂ ಎಂದು (ಏಕಾಕ್ಷರಂ) ಒಂದೇ ಅಕ್ಷರವಾಗಿರುವಂಥ (ಬ್ರಹ್ಮ) ಬ್ರಹ್ಮನ ಹೆಸರಾಗಿರುವದರಿಂದ ಬ್ರಹ್ಮವೆನಿಸಿಕೊಳ್ಳುವ ಓಂಕಾರವನ್ನು (ವ್ಯಾಹರನ್) ಉಚ್ಚರಿಸುತ್ತ ಮತ್ತು (ಮಾಂ) ಅದರ ಅರ್ಥವಾದ ನನ್ನನ್ನು (ಅನುಸ್ಮರನ್) ನೆನೆಯುತ್ತ, ನನ್ನ ಜ್ಞಾನವಾಗುವದರೊಳಗೇ (ಯಃ) ಯಾವನು (ದೇಹಂ) ಶರೀರವನ್ನು (ತ್ಯಜನ್) ಸುಷುಮ್ನಾನಾಡಿಯ ಬಾಗಿಲಿನಿಂದ ಬಿಟ್ಟು (ಪ್ರಯಾತಿ) ಸಾಯುತ್ತಾನೊ ಎಂದರೆ ಹೊರಬೀಳುತ್ತಾನೊ (ಸಃ) ಅವನು ಬ್ರಹ್ಮಲೋಕದಲ್ಲಿ ದಿವ್ಯ ಭೋಗಗಳನ್ನು ಬಹುಕಾಲ ಭೋಗಿಸಿ ಅಲ್ಲಿ ಜ್ಞಾನವನ್ನು ಪಡೆದು ಅಲ್ಲಿಂದಲೆ (ಪರಮಾಂ) ಉತ್ಕೃಷ್ಟವಾದ (ಗತಿಂ) ಪರಬ್ರಹ್ಮ ಪದವಿಯನ್ನೆ (ಯಾತಿ) ಹೊಂದುತ್ತಾನೆ, ಮತ್ತೆ ಹುಟ್ಟುವದಿಲ್ಲ

ಓಂ ಎಂದು ಪರಬ್ರಹ್ಮಕ್ಕೇಕೆ ಹೆಸರಾಯಿತೆಂದರೆ–ಪರಬ್ರಹ್ಮವು ಇಂದ್ರಿಯಗಳಿಗೆ ಗೋಚರವಾಗುವಂಥದ್ದಲ್ಲ. ಹಾವಾಗಿ ಕಾಣುವದನ್ನು ಪರೀಕ್ಷಿಸಿ ಅದರ ಆಧಾರವಾದ ಹಗ್ಗವನ್ನು ತಿಳಿಯುವಂತೆ ಜಗತ್ತಾಗಿ ಕಾಣುತ್ತಿರುವದನ್ನು ಪರೀಕ್ಷಿಸಿ ಅದಕ್ಕೆ ಆಧಾರವಾಗಿರುವ ಬ್ರಹ್ಮವನ್ನು ತಿಳಿಯಬೇಕಾಗಿದೆ ಜಗತ್ತೆಲ್ಲವನ್ನೂ ಒಟ್ಟಾಗಿ ತೆಗೆದುಕೊಂಡಾಗ ಅದಕ್ಕೆ ಓಂ ಎಂದು ಹೆಸರಿಡಬಹುದು ಏಕೆಂದರೆ ಓಂ ಎಂದುಚ್ಚರಿಸುವಾಗ ಬಾಯಿ ತೆಗೆದು ಮುಚ್ಚುವದರಿಂದ ಬಾಯಿ ತೆಗೆದು ಮುಚ್ಚುವವರೆಗೆ ಉಚ್ಚಾರವಾಗುವ ಎಲ್ಲ ಹೆಸರುಗಳೂ ಅಡಗಿದ್ದಂತಾಯಿತು. ನಾಮವೂ

ರೂಪವೂ ಒಂದನ್ನೊಂದು ಬಿಟ್ಟಿರುವದಿಲ್ಲ ಆದ್ದರಿಂದ ಓಂ ಎಂದರೆ ನಾಮರೂಪಾತ್ಮಕವಾದ ಜಗತ್ತಾಯಿತು ಪರೀಕ್ಷೆಯಲ್ಲಿ ಇದು ಅಸತ್ತೆಂದು ಕಂಡಾಗ ಇದರಲ್ಲಿ 'ಇದು ಇದೆ' ಎಂಬ ರೂಪದಿಂದ ಕಾಣುತ್ತಿದ್ದ ಬ್ರಹ್ಮವು ಸ್ಫೂರ್ತಿಯಾಗುವದು ಆದ್ದರಿಂದ ಅದಕ್ಕೂ ಓಂ ಎಂದು ಹೆಸರು ಅಥವಾ ಜಗತ್ತಿನಲ್ಲಿ ಎಚ್ಚರ, ಕನಸು, ನಿದ್ರೆ–ಎಂಬ ಮೂರವಸ್ಥೆಗಳಿವೆ ಈ ಮೂರರಕ್ಕೂ ಮೀರಿದವನು ಪರಮಾತ್ಮನು ಓಂಕಾರದಲ್ಲಿ ಅಕಾರ, ಉಕಾರ, ಮಕಾರ–ಎಂಬ ಮೂರು ಮಾತ್ರೆಗಳಿವೆ ಈ ಮೂರರಕ್ಕೂ ಮೀರಿದ ಓಂಕಾರವು ಪರಮಾತ್ಮನ ಹೆಸರು ಅಥವಾ ಅ+ಉ+ಮ್ ಸೇರಿ ಆಗಿರುವ ಓಂಕಾರದಲ್ಲಿ ಬಾಯಿ ಬಿಡುತ್ತಲೆ ಹುಟ್ಟುವ ಸ್ವರವಾದ ಅಕಾರವು ಸೃಷ್ಟಿಗೂ ನಡುವಣ ಉಕಾರವು ಸ್ಥಿತಿಗೂ ಶಬ್ದವನ್ನು ಮುಗಿಸುವ ಮಕಾರವು ಲಯಕ್ಕೂ ಹೋಲಿಕೆಯಾಗಿ ಓಂಕಾರವು ಜಗತ್ತಿನ ಸೃಷ್ಟಿಸ್ಥಿತಿಸಂಹಾರಕರ್ತನಾದ ಪರಬ್ರಹ್ಮನ ವಾಚಕವಾಗಿರುವದು

ಹೀಗೆ ಯೋಗಮಾರ್ಗದಿಂದ ಕೊನೆ ಮುಟ್ಟುವದು ಕಷ್ಟವೆನಿಸಿದರೂ ಅದು ಸುಲಭವಾಗಿ ದಕ್ಕುವ ಬಗೆಯನ್ನು ಕೇಳು —

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥**

(ಪಾರ್ಥ) ಅರ್ಜುನನೆ, ಕೇಳು ಯೋಗಧಾರಣೆಯಿಂದ ಪ್ರಾಣತ್ಯಾಗವನ್ನು ತನ್ನ ಅಧಿಕಾರಕ್ಕೊಳಪಡಿಸಿಕೊಂಡಿರುವದು ಕಷ್ಟವೆನಿಸಿದರೂ (ಯಃ) ಯಾವನು (ಅನನ್ಯಚೇತಾಃ) ಬೇರೆ ಯಾವ ವಿಷಯದ ನೆನಪನ್ನೂ ಅಥವಾ ಬೇರೆ ಯಾವ ದೇವತೆಯ ನೆನಪನ್ನೂ ಮನಸ್ಸಿನೊಳಕ್ಕೆ ಬಿಟ್ಟುಕೊಳ್ಳದೆ (ಮಾಂ) ಪರಮಾತ್ಮನಾದ ನನ್ನನ್ನು (ನಿತ್ಯಶಃ) ಎಷ್ಟು ದಿನಗಳಾದರೂ ಬೇಸತ್ತು ಬಿಡದೆ (ಸತತಃ) ಆ ಪ್ರತಿದಿವಸಗಳಲ್ಲಿಯೂ ಎರಡನೆಯ ಉದ್ಯೋಗಕ್ಕೆಡೆಗೊಡದೆ ಯಾವಾಗಲೂ (ಸ್ಮರತಿ) ನೆನೆಯುತ್ತಾನೊ (ನಿತ್ಯಯುಕ್ತಸ್ಯ) ಯಾವಾಗಲೂ ಮನಸ್ಸನ್ನು ಬಿಗಿ ಹಿಡಿದಿಟ್ಟುಕೊಂಡಿರುವ (ಯೋಗಿನಃ) ಉಪಾಸಕನಾದ (ತಸ್ಯ) ಅವನಿಗೆ (ಅಹಂ) ನಾನು (ಸುಲಭಃ) ಅನಾಯಾಸವಾಗಿ ಕೈಸೇರುವೆನು.

ನಾನು ಕೈಸೇರುವದರಿಂದಾಗುವದೇನೆಂದರೆ —

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥**

(ಮಾಂ) ಸುಲಭವಾಗಿ ದೊರೆಯುವ ನನ್ನನ್ನು (ಉಪೇತ್ಯ) ಪಡೆದ ಮೇಲ ಅವರು* ನನ್ನ ಲೋಕದಲ್ಲಿ ದಿವ್ಯಭೋಗಗಳನ್ನು ಭೋಗಿಸಿ ಆಮೇಲೆ ಅಲ್ಲಿಯೆ ಬ್ರಹ್ಮಜ್ಞಾನಿಗಳಾಗಿ (ಪರಮಾಂ) ಉತ್ಕೃಷ್ಟವಾದ (ಸಂಸಿದ್ಧಿಂ) ಮೋಕ್ಷವನ್ನು (ಗತಾಃ) ಪಡೆದವರಾಗುವಂಥ (ಮಹಾತ್ಮಾನಃ) ಆ ದೊಡ್ಡ ಮನಸ್ಸಿನವರು (ದುಃಖಾಲಯಮ್) ದುಃಖಗಳಿಗೆಲ್ಲ ತೌರುಮನೆಯಾದಂಥ ಮತ್ತು (ಅಶಾಶ್ವತಮ್) ಮೂರು ದಿನದ ಬಾಳಿನದಾದಂಥ (ಪುನರ್ಜನ್ಮ) ಮತ್ತೆ ಹುಟ್ಟುವಿಕೆಯನ್ನು (ನಾಪ್ನುವಂತಿ) ಪಡೆಯುವದಿಲ್ಲ

ನನ್ನನ್ನು ಪಡೆದವರಿಗೆ ಮತ್ತೆ ಹುಟ್ಟುಸಾವುಗಳಿಲ್ಲವೆನ್ನುವದರಿಂದ ಬೇರೆ ಗತಿಗಳನ್ನು ಪಡೆದವರಿಗೆಲ್ಲ ಅವು ಉಂಟೆಂದಾಗುವದಷ್ಟೆ, ಅದು ನಿಜ —

**ಆಬ್ರಹ್ಮಭುವನಾಲ್ಲೋಕಾಃ† ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥**

(ಅರ್ಜುನ) ಅರ್ಜುನನೆ, ಕೇಳು ನನ್ನ ಪ್ರಾಪ್ತಿಯನ್ನು ಬಯಸದೆ ಹಚ್ಚಿನ ಸುಖಕ್ಕ ಬಾಯಿನೀರು ಸುರಿಸಿಕೊಂಡು ಉಪಾಸನ ಮಾಡಿದವರು ತಮ್ಮ ಉಪಾಸನೆಯ ಫಲವಾಗಿ ಬ್ರಹ್ಮಲೋಕ ಮೊದಲಾದವುಗಳನ್ನು ಪಡೆಯಬಹುದು ಆದರೆ ಆ ಸುಖವೇನೂ ಶಾಶ್ವತವಾದದ್ದಲ್ಲ ವಿಷಯ

---

* ಬ್ರಹ್ಮಲೋಕದಂತೆ ವಿಷ್ಣುಲೋಕವೆಂಬುದೊಂದು ಬೇರೆ ಉಂಟೆಂದು ತಿಳಿಯಬಾರದು ಪುರಾಣವಲ್ಲಿ ಇಂಥ ಕಲ್ಪನೆಗಳಿರುವವಾದರೂ ಅವೆಲ್ಲ ಉಪಾಸಕರಿಗೆ ಉತ್ತೇಜಕವಾಗಿ ಹೇಳಿದ ಮಾತುಗಳೆಂದರಿಯಬೇಕು ಒಂದೇ ಲೋಕವೇ ಅವರ ಉಪಾಸನೆಗೆ ತಕ್ಕಂತೆ ಬ್ರಹ್ಮಲೋಕವಾಗಿಯೊ ವಿಷ್ಣುಲೋಕವಾಗಿಯೊ ಕಾಣುವದು.

† ಬ್ರಹ್ಮಭವನವೆಂದು ಪಾಠಾಂತರ. ಅರ್ಥವೆಲ್ಲ ಒಂದೆ.

ಸುಖೇಚ್ಛೆಯಿಂದ ಬ್ರಹ್ಮಲೋಕವನ್ನು ಪಡೆದವರು ಆ ಕಲ್ಪದಲ್ಲಿಯೇ ತಿರುಗಿ ಹುಟ್ಟುವದಿಲ್ಲವೇ ಹೊರತು ಮುಂದಿನ ಕಲ್ಪದಲ್ಲಿ ಹುಟ್ಟಿಯೇ ಹುಟ್ಟುವರು. (ಆಬ್ರಹ್ಮಭುವನಾತ್) ಬ್ರಹ್ಮನ ಲೋಕವನ್ನು ಮೊದಲು ಮಾಡಿಕೊಂಡು (ಲೋಕಾಃ) ಎಲ್ಲ ಲೋಕಗಳೂ ಎಂದರೆ ಎಲ್ಲ ಲೋಕಗಳನ್ನು ಪಡೆದಿರುವವರೂ (ಪುನರಾವರ್ತಿನಃ) ಮತ್ತೆ ಹುಟ್ಟುವವರೆ (ಕೌಂತೇಯ) ಅರ್ಜುನನೆ, ಕೇಳು (ಮಾಮುಪೇತ್ಯ ತು) ನನ್ನನ್ನು ಪಡೆದರಾದರೊ (ಪುನರ್ಜನ್ಮ) ಮತ್ತೆ ಹುಟ್ಟುವಿಕೆಯು (ನ ವಿದ್ಯತೇ) ಇಲ್ಲ

ಬ್ರಹ್ಮಲೋಕದವರು ಮೊದಲುಗೊಂಡು ಎಲ್ಲರೂ ಹಿಂದಿರುಗುವದಕ್ಕೆ ಆ ಲೋಕಗಳೆಲ್ಲ ಕಾಲಕ್ಕೆ ಕಟ್ಟುಬಿದ್ದಿರುವದೇ ಕಾರಣ ಹೇಗೆಂದರೆ :—

**ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥ ೧೭ ॥**

(ತೇ) ಆ (ಅಹೋರಾತ್ರವಿದಃ) ಹಗಲಿರುಳುಗಳ ಕಾಲಪರಿಮಾಣವನ್ನರಿತವರಾದ (ಜನಾಃ) ಜನರು (ಸಹಸ್ರಯುಗಪರ್ಯಂತಂ) ನಮ್ಮ ಯುಗಗಳವರೆಗಿನ (ಯತ್) ಯಾವ ಕಾಲವನ್ನು (ಬ್ರಹ್ಮಣಃ) ವಿರಾಡ್ರೂಪನಾದ ಬ್ರಹ್ಮನ (ಅಹಃ) ಒಂದು ಹಗಲೆಂದು (ಯುಗಸಹಸ್ರಾಂತಾಂ) ಆ ಹಗಲಿನಂತೆಯೇ ನಮ್ಮ ಸಾವಿರ ಯುಗಗಳವರೆಗಿನ ಕಾಲವನ್ನು (ರಾತ್ರಿಂ) ಇರುಳೆಂದು (ವಿದುಃ) ತಿಳಿಯುವರು

ಆ ವಿರಾಡ್ರೂಪನಾದ ಪ್ರಜಾಪತಿಯು ಹಗಲಿರುಳುಗಳಲ್ಲಿ ಆಗುವ ಕಾರ್ಯಭೇದವೇನೆಂದರೆ —

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

(ಅವ್ಯಕ್ತಾತ್) ಒಂದೂ ಕಾಣದಂತಾಗಿರುವ ಆ ಪ್ರಜಾಪತಿಯ ನಿದ್ದೆಯ ಸ್ಥಿತಿಯಿಂದ (ಅಹರಾಗಮೇ) ಹಗಲು ಬರುವಾಗ ಎಂದರೆ

ಎಚ್ಚರವಾಗುವಾಗ (ವ್ಯಕ್ತಯಃ) ಕಾಣಬರುವಂಥ (ಸರ್ವಾಃ) ಸ್ಥಾವರ ಜಂಗಮಗಳೆಲ್ಲವೂ (ಪ್ರಭವಂತಿ) ಹುಟ್ಟುತ್ತವೆ. (ರಾತ್ರ್ಯಾಗಮೇ) ಇರುಳಾದರೆ ಎಂದರೆ ಪ್ರಜಾಪತಿಗೆ ನಿದ್ದೆ ಬಂದರೆ, ಅವುಗಳೆಲ್ಲ (ತತ್ರೈವ) ಅಲ್ಲಿಯೇ (ಅವ್ಯಕ್ತಸಂಜ್ಞಕೇ) ನಿದ್ರಾವಸ್ಥೆಯಲ್ಲಿ (ಪ್ರಲೀಯಂತೇ) ಅಡಗುತ್ತವೆ.

ಹೀಗೆ ಈ ಹುಟ್ಟು ಸಾವುಗಳ ಸುಳಿಗೆ ಸಿಕ್ಕಿದ ಜೀವರ ಅವಸ್ಥೆ ಏನಾಗುವದೆಂದರೆ —

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

(ಪಾರ್ಥ) ಅರ್ಜುನನೆ, ಕೇಳು (ಸ ಏವ) ಹಿಂದಿನ ಕಲ್ಪದಲ್ಲಿದ್ದಂಥ ಅದೇ (ಅಯಂ) ಈ (ಭೂತಗ್ರಾಮಃ) ಸ್ಥಾವರಜಂಗಮಸಮುದಾಯವು ತನ್ನ ಹಿಂದಿನ ಕರ್ಮಗಳ ಫಲಗಳನ್ನು ಉಂಡು ತೀರಿಸುವದಕ್ಕಾಗಿ (ಭೂತ್ವಾ ಭೂತ್ವಾ) ಹೀಗೆ ಹಗಲು ಬರುತ್ತಲೇ ಹುಟ್ಟಿ ಹುಟ್ಟಿ (ಅವಶಃ) ಪರತಂತ್ರವಾಗಿ (ರಾತ್ರ್ಯಾಗಮೇ) ಬ್ರಹ್ಮನ ಇರುಳು ಬರುತ್ತಲೆ (ಪ್ರಲೀಯತೇ) ಅಡಗುತ್ತದೆ, (ಅಹರಾಗಮೇ) ಬ್ರಹ್ಮನ ಹಗಲು ಬರುತ್ತಲೆ (ಪ್ರಭವತಿ) ಹುಟ್ಟುತ್ತದೆ

ಹೀಗೆ ಲೋಕಾಂತರಗಳೆಲ್ಲಾ ಕಾಲಕ್ಕ ಕಟ್ಟುಬಿದ್ದವುಗಳಾಗಿ ಹಿಂದಿರುಗುವಿಕಗೆ ಕಾರಣಗಳಾಗುವವೆಂದ ಮೇಲೆ ಕಾಲಕ್ಕ ಕಟ್ಟುಬೀಳದಿರುವದು ಯಾವದೆಂದರೆ —

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

(ಯಃ) ಯಾವನು (ತಸ್ಮಾತ್ತು) ಕಣ್ಣಿಗೆ ಕಾಣಿಸದಿರುವ ಆ ಜಗದ್ಬೀಜಕ್ಕಿಂತಲೂ (ಪರಃ) ಹೆಚ್ಚಿನವನಾಗಿ (ಅನ್ಯಃ) ಬೇರೆಯಾಗಿ (ಭಾವಃ) ಜಗತ್ತಿನಲ್ಲೆಲ್ಲ ವ್ಯಾಪಿಸಿಕೊಂಡಿರುವ 'ಇದೆ, ಇದೆ' ಎಂಬ ರೂಪದಲ್ಲಿರುವವನಾಗಿಯೂ (ಅವ್ಯಕ್ತಃ) ಇಂದ್ರಿಯಗಳಿಗೆ ಗೋಚರನಾಗದವನಾಗಿಯೂ

(ಅವ್ಯಕ್ತಾತ್) ಆ ಕಣ್ಣಿಗೆ ಕಾಣಿಸದ ಜಗದ್ಬೀಜಕ್ಕಿಂತಲೂ (ಸನಾತನಃ) ಬಹು ಹಿಂದಿನವನಾಗಿಯೂ ಇರುವನೊ (ಸಃ) ಅವನು (ಸರ್ವೇಷು) ಎಲ್ಲ (ಭೂತೇಷು) ಚರಾಚರವಸ್ತುಗಳು (ನಶ್ಯತ್ಸು) ನಾಶವಾದರೂ (ನ ವಿನಶ್ಯತಿ) ನಾಶವಾಗುವದಿಲ್ಲ.

ಅದು ಯಾವದೆಂದರೆ :—

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥**

ಇಲ್ಲಿ (ಅವ್ಯಕ್ತಃ) ಇಂದ್ರಿಯಗಳಿಗೆ ಗೋಚರವಾಗತಕ್ಕದ್ದಲ್ಲವೆಂದೂ (ಅಕ್ಷರಃ) ಓಂಕಾರವೆಂಬ ಹೆಸರುಳ್ಳದ್ದೆಂದೂ (ಇತಿ) ಹೀಗೆ (ಉಕ್ತಃ) ಯಾವದನ್ನು ಹೇಳಿದೆಯೊ (ತಂ) ಅದನ್ನೆ (ಪರಮಾಂ) ಸರ್ವೋತ್ಕೃಷ್ಟವಾದ (ಗತಿಂ) ಮೋಕ್ಷಪದವಿಯೆಂಬುದನ್ನಾಗಿ (ಆಹುಃ) ಶ್ರುತಿಸ್ಮೃತಿಗಳು ಹೇಳುವವು (ಯಂ) ಯಾವ ಗತಿಯನ್ನು (ಪ್ರಾಪ್ಯ) ಹೊಂದಿದ ಮೇಲೆ (ನ ನಿವರ್ತಂತೇ) ಮತ್ತೆ ಹುಟ್ಟುಸಾವುಗಳ ಸುಳಿಗೆ ತಿರುಗುವದಿಲ್ಲವೊ (ತತ್) ಅದು (ಮಮ) ನನ್ನ (ಪರಮಂ) ಸರ್ವೋತ್ಕೃಷ್ಟವಾದ (ಧಾಮ) ಸ್ಥಾನವು

ಅದನ್ನು ಪಡೆಯುವ ಉಪಾಯವೇನೆಂದರೆ :—

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ* ಸರ್ವಮಿದಂ ತತಮ್ ॥ ೨೨ ॥**

(ಪಾರ್ಥ) ಅರ್ಜುನನೆ, ಕೇಳು. ಭ್ರಾಂತಿಕಾಲದಲ್ಲಿ ಹಾವು, ಹೂವಿನ ಮಾಲೆ-ಮೊದಲಾದವುಗಳಂತೆ ಕಾಣಬರುವವುಗಳೆಲ್ಲ ಹಗ್ಗದಲ್ಲಿಯೇ ಇರುವಂತೆ (ಭೂತಾನಿ) ಚರಾಚರವಸ್ತುಗಳೆಲ್ಲ (ಯಸ್ಯ) ಯಾವ ಪರಮಾತ್ಮನ

---

* "ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿವಾ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ"—ಈ ಜಗತ್ತಿನಲ್ಲಿ ಏನೇನು ಕಾಣಬರುವದೊ ಕೇಳಬರುವದೊ ಅವುಗಳೆಲ್ಲ ನಾರಾಯಣನು ಒಳಗೂ ಹೊರಗೂ ವ್ಯಾಪಿಸಿಕೊಂಡಿರುವನು.—ಶ್ರು.

(ಅಂತಃಸ್ಥಾನಿ) ಒಳಗಿರತಕ್ಕವುಗಳಾಗಿರುವವೊ ಮತ್ತು ಗಡಿಗೆ, ಮಡಿಕೆ-ಮೊದಲಾದವುಗಳಲ್ಲೆಲ್ಲ ಮಣ್ಣು ವ್ಯಾಪಿಸಿಕೊಂಡಿರುವಂತೆ (ಇದಂ) ಈ (ಸರ್ವಂ) ಎಲ್ಲವೂ (ಯೇನ) ಯಾವ ಪರಮಾತ್ಮನಿಂದ (ತತಂ) ವ್ಯಾಪ್ತವಾಗಿರುವದೊ (ಸಃ) ಆ (ಪರಃ)* ಸರ್ವೋತ್ಕೃಷ್ಟನಾದ (ಪುರುಷಃ) ಪುರುಷನು ಎಂದರೆ ಜಗತ್ತಿನಲ್ಲೆಲ್ಲ ತುಂಬಿಕೊಂಡಿರುವದರಿಂದ ಅಥವಾ ಶರೀರವೆಂಬ ಪಟ್ಟಣದಲ್ಲಿ ಬಿಡಾರವನ್ನು ಹೂಡಿರುವವನಾದ್ದರಿಂದ ಪುರುಷನೆನಿಸಿರುವ ಪರಮಾತ್ಮನು (ಅನನ್ಯಯಾ) ತನಗಿಂತ ಬೇರೆಯಲ್ಲವೆಂಬ (ಭಕ್ತ್ಯಾ ತು) ಪ್ರೇಮಾತಿಶಯದಿಂದ ಕೂಡಿದ ಉಪಾಸನೆಯಿಂದಲಾದರೊ (ಲಭ್ಯಃ) ಸಿಕ್ಕುವನು

ಇನ್ನು —

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥**

(ಭರತರ್ಷಭ) ಅರ್ಜುನನೆ, ಕೇಳು (ಪ್ರಯಾತಾಃ) ದೇಹವನ್ನು ಬಿಟ್ಟು ಹೊರಟಂಥ (ಯೋಗಿನಃ) ಉಪಾಸಕರೂ ಕರ್ಮಠರೂ (ಯತ್ರ) ಯಾವ (ಕಾಲೇ ತು)† ಕಾಲಾಭಿಮಾನಿದೇವತೆಗಳ ದಾರಿಯಲ್ಲಿ ಹೋಗಿ

* ಪುರುಷಾನ್ನ ಪರಂ ಕಿಂಚಿತ್ಸಾಕಾಷ್ಠಾ ಸಾ ಪರಾ ಗತಿಃ — ಪುರುಷನಿಗಿಂತ ಹೆಚ್ಚಿನದೇನೇನೂ ಇಲ್ಲ ಅದೇ ತೀರ ಮೇಲಿನದು ಅದೇ ಸರ್ವೋತ್ಕೃಷ್ಟವಾದ ಗತಿ -ಶ್ರು

† ಇಲ್ಲಿರುವ ಕಾಲವೆಂಬ ಮಾತಿಗೆ ಮುಖ್ಯಾರ್ಥವನ್ನಿಟ್ಟುಕೊಂಡರೆ ಆ ಕಾಲವೇ ಮುಂದೆ ಹೇಳುವ ಬ್ರಹ್ಮಲೋಕವನ್ನೂ ಸ್ವರ್ಗವನ್ನೂ ಕೊಡುವದೆಂದಾಗುತ್ತದೆ ಹೀಗಾಗುವದರಿಂದ ಮನುಷ್ಯನು ಅವುಗಳಿಗೆ ಪ್ರಯತ್ನಿಸಬೇಕಾದದ್ದೇ ಇರುವದಿಲ್ಲ ಇದು ಸರಿಯಲ್ಲ ಇದಲ್ಲದೆ ಇದನ್ನು ಮುಂದೆ ೨೬ ನೆ ಶ್ಲೋಕದಲ್ಲಿ 'ಗತಿ' ಯೆಂದೂ ೨೭ ರಲ್ಲಿ 'ಸೃತಿ' ಯೆಂದೂ ಕರೆದಿರುವದರಿಂದ ಇದನ್ನು ದಾರಿಯೆಂದೇ ಹೇಳಬೇಕು. ಆದ್ದರಿಂದ ಕಾಲಾಭಿಮಾನಿದೇವತೆಗಳ ದಾರಿಯೆಂದರ್ಥವಾಗುತ್ತದೆ ಭೀಷ್ಮಾಚಾರ್ಯರು ಉತ್ತರಾಯಣವನ್ನು ನಿರೀಕ್ಷಿಸಿಕೊಂಡಿದ್ದು ದೇಹತ್ಯಾಗವನ್ನು ಮಾಡಿದರೆಂಬ ಕಥೆಯಿಂದ ಕಾಲಕ್ಕೆ ಪ್ರಾಶಸ್ತ್ಯವು ತೋರಿದರೂ ಆ ಪುರಾಣದ ಕಥೆಯ ಮಾತಿನ ಅಕ್ಷರಾರ್ಥವು ವಿಚಾರ

(ಅನಾವೃತ್ತಿಂ) ತಿರುಗಿ ಬರದೆ ಇರುವಿಕೆಯನ್ನೂ ಮತ್ತು (ಆವೃತ್ತಿಂ ಚೈವ) ತಿರುಗಿ ಬರುವಿಕೆಯನ್ನೂ ಕೂಡ (ಯಾಂತಿ) ಪಡೆಯುತ್ತಾರೊ (ತಂ) ಆ (ಕಾಲಂ) ಕಾಲಾಭಿಮಾನಿದೇವತೆಗಳ ದಾರಿಯನ್ನು (ವಕ್ಷ್ಯಾಮಿ) ಹೇಳುತ್ತೇನೆ

ತಿರುಗಿ ಬರದೆ ಇರುವ ದಾರಿ ಯಾವದೆಂದರೆ.—

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥**

(ಜ್ಯೋತಿಃ) ಪ್ರಕಾಶರೂಪವಾದ (ಅಗ್ನಿಃ) ಬೆಳಗಿನ ಅಭಿಮಾನ ದೇವತೆಯಾದ ಅಗ್ನಿಯೆಂಬ ದೇವತೆಯು (ಅಹಃ) ಹಗಲಿನ ಅಭಿಮಾನ ದೇವತೆಯು (ಶುಕ್ಲಃ) ಶುಕ್ಲಪಕ್ಷದ ಅಭಿಮಾನದೇವತೆಯು (ಉತ್ತರಾಯಣಂ) ಉತ್ತರಾಯಣರೂಪವಾದ (ಷಣ್ಮಾಸಾಃ) ಆರು ತಿಂಗಳ ಅಭಿಮಾನ ದೇವತೆಯೂ ಹಾಗೆಯೇ ಮುಂದೆ ಸಂವತ್ಸರ, ದೇವಲೋಕ, ವಾಯು, ಆದಿತ್ಯ, ಚಂದ್ರ, ವಿದ್ಯುತ್, ವರುಣ, ಇಂದ್ರ, ಪ್ರಜಾಪತಿ–ಈ ದೇವತೆಗಳಿರುವಂಥ (ತತ್ರ) ಉತ್ತರ ಮಾರ್ಗದಲ್ಲಿ (ಪ್ರಯಾತಾ) ಹೊರಟಂಥ (ಬ್ರಹ್ಮವಿದಃ) ಬ್ರಹ್ಮವಸ್ತುವಿನ ಉಪಾಸಕರಾದ (ಜನಾಃ) ಜನರು (ಬ್ರಹ್ಮ) ಸಗುಣಬ್ರಹ್ಮವನ್ನು ಕುರಿತು (ಗಚ್ಛಂತಿ) ಹೋಗುವರು ಆ ಬ್ರಹ್ಮ ಲೋಕದಲ್ಲಿ ಆ ಕಲ್ಪದ ಕೊನೆಯವರೆಗೆ ಬೇಕಾದಷ್ಟು ವೈಭವವನ್ನು ಅನುಭವಿಸಿ ಬ್ರಹ್ಮಜ್ಞಾನವನ್ನು ಪಡೆದು ಆ ಸಗುಣಬ್ರಹ್ಮನೊಡನೆ ಅಲ್ಲಿಂದಲೇ ಹಾಗೆಯೇ ಪರಬ್ರಹ್ಮವನ್ನೇ ಪಡೆಯುವರು ಇಲ್ಲಿಯೇ ಬ್ರಹ್ಮಜ್ಞಾನವನ್ನು ಪಡೆದರಂತು ಅವರಿಗೆ ಹೋಗುವಿಕೆ ಬರುವಿಕೆಗಳೇನೂ

---

ಪ್ರಧಾನವಾದ ವೇದಾಂತಕ್ಕೆ ಹೊಂದುಗಡೆಯಾಗುವದಿಲ್ಲ ಭೀಷ್ಮಾಚಾರ್ಯರ ತಂದೆಯಾದ ಶಂತನುರಾಜನು ತಾನು ಇಚ್ಛಿಸಿದ ಕನ್ಯೆಯನ್ನು ತನಗೆ ದೊರಕಿಸುವದಕ್ಕಾಗಿ ಆಜೀವ ಬ್ರಹ್ಮಚರ್ಯವನ್ನು ವಹಿಸಿದ ತನ್ನ ಮಗನಿಗೆ "ನೀನು ಸ್ವೇಚ್ಛಾಮರಣಿಯಾಗು" ಎಂದು ಕೊಟ್ಟ ವರದ ಪ್ರಭಾವವನ್ನು ಜಗತ್ತಿಗೆ ತೋರಿಸಬೇಕೆಂದು ಭೀಷ್ಮಾಚಾರ್ಯರು ತಮ್ಮ ಮರಣವನ್ನು ಕೆಲವು ದಿವಸ ತಡೆದರೆಂದು ತಿಳಿಯಬೇಕು

ಇಲ್ಲವೇ ಇಲ್ಲ ಅವರ ಪ್ರಾಣಗಳು ಬ್ರಹ್ಮದಲ್ಲಿಯೇ ಅಡಗಿಹೋಗುವವು. ಅವರು ಇಲ್ಲಿಯೇ ಬ್ರಹ್ಮರೇ ಆಗಿರುವರು

ತಿರುಗಿ ಬರುವ ದಾರಿ ಯಾವದೆಂದರೆ —

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ ೨೫ ॥**

(ಧೂಮಃ) ಸಂಜೆಗಭಿಮಾನಿಯಾದ ಧೂಮವೆಂಬ ದೇವತೆಯು (ರಾತ್ರಿಃ) ರಾತ್ರಿಯ ಅಭಿಮಾನ ದೇವತೆಯು (ತಥಾ) ಮತ್ತು (ಕೃಷ್ಣಃ) ಕೃಷ್ಣಪಕ್ಷದ ಅಭಿಮಾನ ದೇವತೆಯು (ದಕ್ಷಿಣಾಯನಂ) ದಕ್ಷಿಣಾಯನ ರೂಪವಾದ (ಷಣ್ಮಾಸಾ) ಆರು ತಿಂಗಳಿನ ಅಭಿಮಾನ ದೇವತೆಯೂ ಹಾಗೆಯೇ ಮುಂದೆ ಪಿತೃಲೋಕಾಭಿಮಾನಿ ದೇವತೆ, ಆಕಾಶಾಭಿಮಾನಿ ದೇವತೆ–ಇವರಿರುವಂಥ (ತತ್ರ) ದಕ್ಷಿಣದ ದಾರಿಯಲ್ಲಿ ಹೊರಟ (ಯೋಗೀ) ಅಗ್ನಿಹೋತ್ರ ಮೊದಲಾದ ಕರ್ಮವನ್ನು ಮಾಡಿದವನೂ ಕೆರೆ, ಭಾವಿ–ಮೊದಲಾದವನ್ನು ಕಟ್ಟಿಸಿದವನೂ, ಯೋಗ್ಯವಾದ ದಾನವನ್ನು ಮಾಡಿದವನೂ, (ಚಾಂದ್ರಮಸಂ) ಚಂದ್ರನ ಸಂಬಂಧವಾದ (ಜ್ಯೋತಿಃ) ತೇಜಸ್ಸುಳ್ಳ ಸ್ವರ್ಗವನ್ನು (ಪ್ರಾಪ್ಯ) ಹೊಂದಿ. ಅಲ್ಲಿ ತನ್ನ ಪುಣ್ಯವೆಲ್ಲ ತೀರುವವರೆಗೂ ಸುಖವನ್ನನುಭವಿಸಿ ಆಮೇಲೆ (ನಿವರ್ತತೇ) ಮತ್ತೆ ಹುಟ್ಟುತ್ತಾನೆ

ಒಟ್ಟು ತಾತ್ಪರ್ಯವೇನೆಂದರೆ —

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥ ೨೬ ॥**

(ಏತೇ) ಈ (ಶುಕ್ಲಕೃಷ್ಣೇ) ಹೋದ ಕಡೆಯಲ್ಲಿಯೇ ಜ್ಞಾನವನ್ನುಂಟುಮಾಡುವದರಿಂದ ಬೆಳಕಿನ ದಾರಿಯೆನಿಸುವದೊಂದು ಮತ್ತು ಆ ಲಾಭವನ್ನು ದೊರಕಿಸದಿರುವದರಿಂದ ಕತ್ತಲೆಯ ದಾರಿಯೆನಿಸುವದೊಂದು–ಹೀಗೆ ಎರಡು (ಗತೀ ಹಿ) ದಾರಿಗಳೂ (ಜಗತಃ) ಜಗತ್ತಿನಲ್ಲಿರುವ

ಉಪಾಸಕರ ಮತ್ತು ಅಗ್ನಿಹೋತ್ರ ಮೊದಲಾದವುಗಳನ್ನು ಮಾಡುವ ಕರ್ಮಿಗಳ ಭಾಗಕ್ಕೆ (ಶಾಶ್ವತೇ) ಈ ಸಂಸಾರವು ಹೇಗೋ ಹಾಗೆ ಎಂದೆಂದಿಗೂ ಇರತಕ್ಕವುಗಳೆಂದು (ಮತೇ) ಹೇಳಿಸಿಕೊಂಡಿರುವವು (ಏಕಯಾ) ಒಂದನೆ ಬೆಳಕಿನ ದಾರಿಯಿಂದ ಹೋದವನು (ಅನಾವೃತ್ತಿಂ) ತಿರುಗಿ ಬರದೆ ಇರುವಿಕೆಯನ್ನು (ಯಾತಿ) ಹೊಂದುತ್ತಾನೆ (ಅನ್ಯಯಾ) ಎರಡನೆ ಕತ್ತಲೆಯ ದಾರಿಯಿಂದ ಹೋದವನು (ಪುನಃ) ಮತೆ (ಆವರ್ತತೇ) ತಿರುಗಿ ಬರುತ್ತಾನೆ ಬ್ರಹ್ಮೋಪಾಸಕರೂ ಅಲ್ಲದೆ, ಅಗ್ನಿಹೋತ್ರ ಮೊದಲಾದವುಗಳನ್ನು ಮಾಡುವ ಕರ್ಮಿಗಳೂ ಅಲ್ಲದೆ ಇರುವವರು ಪಾಪ ಜೀವಿಗಳಾಗಿ ಅಧೋಗತಿಯೆಂಬ ಮೂರನೆ ದಾರಿಯನ್ನು ಹಿಡಿಯುವರು ಅವರ ವಿಷಯವು ವಿಚಾರಕ್ಕೆ ತೆಗೆದುಕೊಳ್ಳುವದಕ್ಕೆ ಕೂಡ ಯೋಗ್ಯವಲ್ಲ.

ಇದರಿಂದ ನೀನು ಗ್ರಹಿಸಬೇಕಾದದ್ದೇನೆಂದರೆ.—

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ॥ ೨೭ ॥**

(ಪಾರ್ಥ) ಅರ್ಜುನನೆ, ಕೇಳು (ಏತೇ) ನಡುನೆತ್ತಿಯಲ್ಲಿರುವ ಸುಷುಮ್ನೆಯ ಬಾಯಾದ ಉತ್ತರಮಾರ್ಗದ ಮತ್ತು ಮುಖದಲ್ಲಿರುವ ರಂಧ್ರಗಳಿಂದ ಹೊರಡುವ ದಕ್ಷಿಣಮಾರ್ಗದ ಈ ಎರಡು (ಸೃತೀ) ದಾರಿಗಳನ್ನು (ಜಾನನ್) ತಿಳಿದಂಥ (ಕಶ್ಚನ) ,ಯಾವನೊಬ್ಬ (ಯೋಗೀ) ಸಾಧಕನು (ನ ಮುಹ್ಯತಿ) ಭ್ರಾಂತಿಗೊಳ್ಳುವದಿಲ್ಲ ಎಂದರೆ ತಿರುಗಿ ಬರದೆ ಇರುವ ದಾರಿಯೊಂದಿರುವಾಗ ತಿರುಗಿ ಬರುವ ದಾರಿಯಲ್ಲಿಯೇ ತೊಳಲುತ್ತಿರುವದು ಯೋಗ್ಯವೆಂದು ಭಾವಿಸುವದಿಲ್ಲ. (ಅರ್ಜುನ) ಅರ್ಜುನನೆ, ಕೇಳು (ತಸ್ಮಾತ್) ಆದ್ದರಿಂದ (ಸರ್ವೇಷು) ಎಲ್ಲ (ಕಾಲೇಷು) ಕಾಲಗಳಲ್ಲಿಯೂ (ಯೋಗಯುಕ್ತಃ) ಉಪಾಸನೆಯಿಂದ ಕೂಡಿದವನು (ಭವ) ಆಗು

ಆ ಉಪಾಸನೆಯ ಮಹಿಮೆಯನ್ನು ಕೇಳು:—

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥ ೨೮ ॥**

(ವೇದೇಷು) ಬ್ರಹ್ಮಚರ್ಯ ಮೊದಲಾದ ನಿಯಮಗಳಿಂದ ಕೂಡಿ ವ್ಯಾಕರಣ ಮೊದಲಾದ ಷಡಂಗಗಳೊಡನೆ ವೇದಗಳ ಅಧ್ಯಯನವನ್ನು ಮಾಡಿದರೆ (ಯಜ್ಞೇಷು) ಸಾಂಗವಾಗಿ ಅಶ್ವಮೇಧ ಮೊದಲಾದ ಯಜ್ಞವನ್ನು ಮಾಡಿದರೆ (ತಪಃಸು ಚೈವ) ಶಾಸ್ತ್ರದ ಪಂಜುಕ್ಕ್ರಯಲ್ಲಿ ಹೇಳಿದಂತೆ ಕೃಚ್ಛ್ರ, ಚಾಂದ್ರಾಯಣ–ಮೊದಲಾದ ಉಪವಾಸವ್ರತಗಳನ್ನು ಮಾಡಿದರೆ (ದಾನೇಷು) ಯೋಗ್ಯವಾದ ದೇಶಕಾಲಗಳಲ್ಲಿ ಯೋಗ್ಯರಿಗೆ ಯೋಗ್ಯ ವಸ್ತುಗಳನ್ನು ಶ್ರದ್ಧೆಯಿಂದ ಸತ್ಕಾರಪೂರ್ವಕವಾಗಿ ದಾನ ಮಾಡಿದರೆ (ಯತ್) ಯಾವ (ಪುಣ್ಯಫಲಂ) ಪುಣ್ಯದ ಫಲವು (ಪ್ರದಿಷ್ಟಂ) ಶಾಸ್ತ್ರದಲ್ಲಿ ಹೇಳಿದೆಯೊ (ತತ್) ಆ (ಸರ್ವಂ) ಎಲ್ಲವನ್ನೂ (ಯೋಗೀ) ಉಪಾಸಕನು (ಇದಂ) ಈ ಏಳು ಪ್ರಶ್ನೆಗಳ ನಿರ್ಣಯವನ್ನು (ವಿದಿತ್ವಾ) ತಿಳಿದು (ಅತ್ಯೇತಿ) ದಾಟುತ್ತಾನೆ ಎಂದರೆ ಆ ಎಲ್ಲ ಪುಣ್ಯಫಲಗಳಿಗಿಂತ ಹೆಚ್ಚಿನದಕ್ಕೆ ಪಾತ್ರನಾಗುತ್ತಾನೆ ಅವನು ಹೀಗೆ ಪುಣ್ಯಫಲಗಳನ್ನು ಪಡೆಯುವದಿಷ್ಟೇ ಅಲ್ಲ (ಆದ್ಯಂ) ಜಗತ್ತಿನ ಮೂಲಕಾರಣವಾದ ಬ್ರಹ್ಮದ (ಪರಂ) ಸರ್ವೋತ್ಕೃಷ್ಟವಾದ (ಸ್ಥಾನಂ ಚ) ಮೋಕ್ಷವೆಂಬ ಪದವಿಯನ್ನೂ (ಉಪೈತಿ) ಪಡೆಯುತ್ತಾನೆ

ಇಲ್ಲಿಗೆ **ಬ್ರಹ್ಮಾಕ್ಷರನಿರ್ದೇಶಯೋಗ**ವೆಂಬ

ಎಂಟನೆ ಅಧ್ಯಾಯವು ಮುಗಿಯಿತು.



# ಒಂಬತ್ತನೆ ಅಧ್ಯಾಯ

ಹಿಂದಿನ ಅಧ್ಯಾಯದಲ್ಲಿ ಸುಷುಮ್ನಾನಾಡಿಯ ಮೂಲಕವಾಗಿ ದೇಹವನ್ನು ಬಿಟ್ಟು ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿಂದ ಕಾಲಾಂತರದಲ್ಲಿ ಮೋಕ್ಷವನ್ನು ಪಡೆಯುವ ಯೋಗಪೂರ್ವಕವಾದ ಸಗುಣೋಪಾಸನೆಯ ಮಾರ್ಗವನ್ನು ಹೇಳಿದ್ದಾಯಿತು ಮೋಕ್ಷಕ್ಕೆ ಇದರ ಹೊರತು ಬೇರೆ ದಾರಿಯಿಲ್ಲವೆಂದು ತಿಳಿಯದಿರಲೆಂದು ನಿರ್ಗುಣಸ್ವರೂಪವಾದ ಬ್ರಹ್ಮದ ಜ್ಞಾನವನ್ನು ತಿಳಿಸುವದಕ್ಕೆ,

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥೧॥**

(ಯತ್) ಯಾವ ಆತ್ಮಸ್ವರೂಪವನ್ನು (ಜ್ಞಾತ್ವಾ) ಬರೀ ಭಾವಿಸುವದಾಗಿರದೆ ನಿಸ್ಸಂದೇಹವಾಗಿ ತಿಳಿದು (ಅಶುಭಾತ್) ಅಮಂಗಲಕರವಾದ ಹುಟ್ಟುಸಾವುಗಳ ಸುಳಿಯಿಂದ (ಮೋಕ್ಷ್ಯಸೇ) ಬಿಡುಗಡೆಯನ್ನು ಹೊಂದುತ್ತೀಯೋ ಅಂಥ (ವಿಜ್ಞಾನಸಹಿತಂ) ಅನುಭವದಿಂದ ಕೂಡಿದಂಥ (ಗುಹ್ಯತಮಂ) ಆದ್ದರಿಂದಲೆ ರಹಸ್ಯವಾಗಿಟ್ಟುಕೊಂಡಿರುವದಕ್ಕೆ ಯೋಗ್ಯವಾದಂಥ (ಇದಂ ತು) ಈ (ಜ್ಞಾನಂ) ಬ್ರಹ್ಮಜ್ಞಾನವನ್ನು (ಅನಸೂಯವೇ) ಅಸೂಯೆ ಮೊದಲಾದ ಕೆಟ್ಟ ಗುಣಗಳಿಲ್ಲದಂಥ (ತೇ) ನಿನಗೆ (ಪ್ರವಕ್ಷ್ಯಾಮಿ) ಹೇಳುತ್ತೇನೆ

ಆ ಜ್ಞಾನವು ಎಂಥದ್ದೆಂದರೆ —

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥**

(ಇದಂ) ಇದು (ರಾಜವಿದ್ಯಾ) ತಿಳಿವಳಿಕೆಯನ್ನು ಕೊಡುವ ವಿದ್ಯೆಗಳಲ್ಲೆಲ್ಲ ಮೇಲಾದದ್ದು. ಏಕೆಂದರೆ ಇದೊಂದನ್ನು ತಿಳಿದರೆ ಇನ್ನೇನೂ ತಿಳಿಯತಕ್ಕದ್ದೇ ಉಳಿಯುವದಿಲ್ಲ (ರಾಜಗುಹ್ಯಂ) ವಿದ್ಯೆಗಳೆಲ್ಲ ಯೋಗ್ಯತೆ

ಯನ್ನು ನೋಡಿ ಕೊಡಬೇಕೆಂದು ರಹಸ್ಯವಾಗಿಡತಕ್ಕವುಗಳಾದ್ದರಿಂದ ಸರ್ವೋತ್ಕೃಷ್ಟವಾದ ಯೋಗ್ಯತೆಯುಳ್ಳವನು ದೊರೆಯುವವರೆಗೂ ಸರ್ವ ಶ್ರೇಷ್ಠವಾದ ಈ ವಿದ್ಯೆಯು ಬಹಳ ರಹಸ್ಯವಾಗಿಡತಕ್ಕದ್ದು. (ಉತ್ತಮಂ) ಬಹಳ ಹೆಚ್ಚಿನ (ಪವಿತ್ರಂ) ಶುದ್ಧಿಕರವು ಪ್ರಾಯಶ್ಚಿತ್ತದ ಕರ್ಮಗಳು ಯಾವದಾದರೂ ಒಂದೊಂದು ಪಾಪವನ್ನು ಹೋಗಲಾಡಿಸುವವು. ಆದರೂ ಆ ಪಾಪಗಳ ಸಂಸ್ಕಾರವೇನೋ ಮನಸ್ಸಿನಲ್ಲಿ ಉಳಿದೇ ಇರುವದು ಈ ಬ್ರಹ್ಮಜ್ಞಾನವು ಅನೇಕ ಜನ್ಮಗಳಿಂದ ರಾಶಿಯಾಗುತ್ತ ಬಂದಿರುವ ಸರ್ವ ಪಾಪಗಳನ್ನೂ ಅವುಗಳ ಜೊತೆಗೆ ಪುಣ್ಯಗಳನ್ನೂ ಕೂಡ ಹುಟ್ಟುಸಾವುಗಳ ಬೀಜವೇ ಉಳಿಯದಂತೆ ಸುಟ್ಟು ಬೂದಿಮಾಡುವದು. (ಪ್ರತ್ಯಕ್ಷಾವಗಮಂ) ಸುಖದುಃಖಗಳು ಹೇಗೆ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವವೋ ಹಾಗೆ ಇದರ ವಿಷಯದಲ್ಲಿ ಸಂಶಯಕ್ಕೆ ಅವಕಾಶವಿಲ್ಲದಂತೆ ಈಗಲೆ ಇಲ್ಲಿಯೆ ಅನುಭವಕ್ಕೆ ಬರತಕ್ಕದ್ದು. (ಧರ್ಮ್ಯಂ) ಎಷ್ಟೋ ಗುಣವುಳ್ಳ ವಸ್ತುಗಳು ಧರ್ಮಕ್ಕೆ ವಿರುದ್ಧವಾಗಿರಬಹುದಾದರೂ ಇದು ಅನೇಕ ಜನ್ಮಗಳಲ್ಲಿ ಕೂಡಿ ಹಾಕಿದ ನಿಷ್ಕಾಮಕರ್ಮದ ರೂಪವಾದ ಧರ್ಮದ ಫಲವಾಗಿ ಎಲ್ಲ ವರ್ಣದವರಿಗೂ ಸ್ವಧರ್ಮವಾಗಿರುವದು ಇದನ್ನು ಸಂಪಾದಿಸುವದು ಯಜ್ಞಯಾಗಾದಿಗಳಂತೆ ಬಹು ಕಷ್ಟವೆಂದು ತಲೆಯ ಮೇಲೆ ಕೈಹೊತ್ತು ಆಕಾಶದ ಕಡೆಗೆ ನಿಟ್ಟಿಸಬೇಕಾದ್ದಿಲ್ಲ (ಕರ್ತುಂ) ಅದನ್ನು ಆಚರಿಸುವದಕ್ಕೆ (ಸ ಸುಖಂ) ಶ್ರದ್ಧೆ, ಇಂದ್ರಿಯನಿಗ್ರಹ–ಮೊದಲಾದ ಗುಣಗಳುಳ್ಳ ಸಾಧಕರಿಗೆ ಬಹು ಸುಲಭವಾಗಿರುವದು ಮತ್ತು ಜಗತ್ತಿನಲ್ಲಿ ಸುಲಭವಾಗಿ ದೊರೆತದ್ದು ಸುಲಭವಾಗಿ ಕೈಬಿಟ್ಟು ಹೋಗುವದಷ್ಟೆ ಇದು ಸುಲಭಸಾಧ್ಯ ವಾದದ್ದಾದರೂ (ಅವ್ಯಯಂ) ಎಂದಿಗೂ ಅಚ್ಚಳಿಯದೆ ಇರುವಂಥ ದ್ದಾಗಿರುವದು.

ಇಂಥದ್ದನ್ನು ಎಲ್ಲರೂ ಏಕೆ ಬಯಸುವದಿಲ್ಲವೆಂದರೆ:—

**ಅಶ್ರದ್ಧಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩ ॥**

(ಪರಂತಪ) ಅರ್ಜುನನೆ, ಕೇಳು (ಅಸ್ಯ) ಈ (ಧರ್ಮಸ್ಯ) ಆತ್ಮ ಜ್ಞಾನವೆಂಬ ಧರ್ಮದ (ಅಶ್ರದ್ಧಧಾನಾಃ) ಶ್ರದ್ಧೆಯಿಲ್ಲದಂಥ (ಪುರುಷಾಃ) ದೇಹವನ್ನೆ ಆತ್ಮವೆಂದು ತಿಳಿದುಕೊಂಡು ಬರೀ ಹೊಟ್ಟೆಗಾಗಿ ಹಾಹಾಕಾರ ವನ್ನು ಮಾಡುವ ಮನುಷ್ಯರು (ಮಾಂ) ಪರಮೇಶ್ವರನಾದ ನನ್ನನ್ನು (ಅಪ್ರಾಪ್ಯ) ಪಡೆಯದೆ (ಮೃತ್ಯುಸಂಸಾರವರ್ತ್ಮನಿ) ಹುಟ್ಟುಸಾವು ಗಳಿಂದ ಕೂಡಿದ ಸಂಸಾರದ ದಾರಿಯಾದ ನರಕದ ಅಥವಾ ಪಶು ಪಕ್ಷ್ಯಾದಿ ಜನ್ಮಗಳ ದಾರಿಯಲ್ಲಿ (ನಿವರ್ತಂತೇ) ಬಿಡದೆ ಸುತ್ತುತ್ತಿರುವವ ರಾಗುತ್ತಾರೆ

ಆ ಜ್ಞಾನವನ್ನು ಹೇಳುತ್ತೇನೆ ಕೇಳು —

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥**

ಕಣ್ಣಿಗೆ ಕಾಣದೆ ಇರುವ ಹಗ್ಗವು 'ಇದು ಹಾವು, ಇದು ಹೂ ಮಾಲೆ'-ಎಂದು ಮೊದಲಾಗಿ ಭ್ರಮೆಯಿಂದ ಹೇಳುವ ವ್ಯವಹಾರದಲ್ಲಿ ಹಾವು, ಹೂಮಾಲೆ-ಮೊದಲಾದವುಗಳನ್ನು 'ಇದು, ಇದು' ಎಂಬ ರೂಪದಿಂದ ಹಗ್ಗವು ವ್ಯಾಪಿಸಿಕೊಂಡಿರುವಂತೆ (ಇದಂ) ಈ (ಸರ್ವಂ) ಎಲ್ಲ (ಜಗತ್) ಜಗತ್ತು (ಅವ್ಯಕ್ತಮೂರ್ತಿನಾ) ನಾಲ್ಕು ತೋಳುಗಳಿಂದ ಕಾಣುವ ನನ್ನ ಈ ಮೂರ್ತಿಗಿಂತ ಬೇರೆಯಾಗಿ ಇಂದ್ರಿಯಗಳಿಗೆ ಗೋಚರ ವಾಗದೆ ಇರುವಂಥ ಸಚ್ಚಿದಾನಂದ ಸ್ವರೂಪನಾದ (ಮಯಾ) ನನ್ನಿಂದ (ತತಂ) 'ಇದು ಇದೆ, ಇದು ಇದೆ' ಎಂಬ ರೂಪದಿಂದ ವ್ಯಾಪಿಸಲ್ಪಟ್ಟಿ ರುವದು ಮತ್ತು ಭ್ರಾಂತಿಯ ಹಾವು, ಹೂಮಾಲೆ-ಮೊದಲಾದವು ಗಳೆಲ್ಲ ಹಗ್ಗದಲ್ಲಿಯೇ ಇರುವವುಗಳೆನಿಸುವಂತೆ (ಸರ್ವಭೂತಾನಿ) ಚತು ರ್ಮುಖಬ್ರಹ್ಮನನ್ನು ಮೊದಲುಗೊಂಡು ಮೋಟುಮರದವರೆಗೂ ಇರುವ ವಸ್ತುಗಳು (ಮತ್ಸ್ಥಾನಿ) ನನ್ನಲ್ಲಿಯೇ ಇರುವವುಗಳಾಗುವವು ನಾನೇ ಅವುಗಳ ಆತ್ಮನಾಗಿರುವದನ್ನು ನೋಡಿ ನಾನು ಅವುಗಳೊಳಗಿರುವನೆಂದು ತಿಳಿವಳಿಕೆ ಇಲ್ಲದವರು ತಿಳಿಯುವರು. ಹಗ್ಗವು ಹೇಗೆ ಹಾವು ಮೊದ

ಲಾದವುಗಳಲ್ಲಿರುವದಿಲ್ಲವೊ ಹಾಗೆ (ಅಹಂ) ನಾನು (ತೇಷು) ಆ ವಸ್ತುಗಳಲ್ಲಿ (ನ ಚ ಅವಸ್ಥಿತಃ) ಒಳಗಿರುವವನಲ್ಲ

ಆದ್ದರಿಂದಲೆ —

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

ಎಲ್ಲವೂ ನನ್ನೊಳಗಿರುವವೆಂಬ ಮಾತು ಕೂಡ ತೋರಿಕೆಗೆ ಬೆಲೆಯನ್ನು ಕೊಟ್ಟು ಹೇಳಿದ ಮಾತೇ ಹೊರತು ಅವು ನಿಜವಾಗಿಲ್ಲ ಕನಸಿನ ಜಗತ್ತು ಕನಸುಗಾಣುವವನಲ್ಲಿ ನಿಜವಾಗಿ ಹೇಗೆ ಇಲ್ಲವೊ ಹಾಗೆ (ಭೂತಾನಿ) ಚರಾಚರವಸ್ತುಗಳು (ನ ಚ ಮತ್ಸ್ಥಾನಿ) ನನ್ನೊಳಗೆ ಇಲ್ಲವೂ ಇಲ್ಲ ಮಾಯೆಯ ಸೃಷ್ಟಿಯೆಲ್ಲ ಬರೀ ತೋರಿಕೆ (ಮೇ) ನನ್ನ (ಐಶ್ವರಮ್) ಈಶ್ವರತ್ವದ ಸಂಬಂಧವಾದ (ಯೋಗಂ) ಅಘಟನಘಟನಾ ಸಾಮರ್ಥ್ಯವನ್ನು (ಪಶ್ಯ) ನೋಡು ನಾನು ಅವುಗಳೊಳಗೆ ಇಲ್ಲದ್ದರಿಂದಲೂ ಅವುಗಳು ನನ್ನಲ್ಲಿಯೂ ಇಲ್ಲದ್ದರಿಂದಲೂ ನನಗ ಯಾವದರ ಸೋಂಕೂ ಇಲ್ಲವಷ್ಟೆ (ಭೂತಭಾವನಃ) ಚರಾಚರವಸ್ತುಗಳ ಸೃಷ್ಟಿಸ್ಥಿತಿಗಳನ್ನು ಮಾಡುವಂಥ (ಮಮ) ನಾಲ್ಕು ತೋಳು ಮೊದಲಾದವುಗಳುಳ್ಳ ನನ್ನ (ಆತ್ಮಾ) ಆತ್ಮವಾದ ಸಚ್ಚಿದಾನಂದರೂಪ ಚೈತನ್ಯವು (ಭೂತಭೃತ್) ಚರಾಚರ ಜಗತ್ತನ್ನೆಲ್ಲ ಧಾರಣೆಮಾಡಿಕೊಂಡಿರುವದು, (ನ ಚ ಭೂತಸ್ಥಃ) ಆ ಜಗತ್ತಿನಲ್ಲಿರುವಂಥದ್ದಾಗಿಲ್ಲ

ನಾನು ಸೋಂಕಿಲ್ಲದವನಾಗಿರುವದು ಹೇಗೆಂದರೆ ನೋಡು —

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

(ನಿತ್ಯಂ) ಯಾವಾಗಲೂ (ಸರ್ವತ್ರಗಃ) ಹತ್ತು ದಿಕ್ಕುಗಳಲ್ಲಿಯೂ ಬೀಸುತ್ತಿರುವಂಥ (ಮಹಾನ್) ಆದ್ದರಿಂದಲೆ ಬಹುದೊಡ್ಡದೆನಿಸಿರುವಂಥ (ವಾಯುಃ) ಗಾಳಿಯು (ಯಥಾ) ಹೇಗೆ (ಆಕಾಶಸ್ಥಿತಃ) ಆಕಾಶಕ್ಕೆ ಸೋಂಕದೆ ಆಕಾಶದಲ್ಲಿರುವದೊ (ತಥಾ) ಹಾಗೆ (ಸರ್ವಾಣಿ) ಎಲ್ಲ

(ಭೂತಾನಿ) ಚರಾಚರವಸ್ತುಗಳು (ಮತ್ಸ್ಥಾನಿ) ನನಗೆ ಸೋಂಕದೆ ನನ್ನಲ್ಲಿರುವವು (ಇತಿ) ಎಂದು (ಉಪಧಾರಯ) ತಿಳಿ

ಹೀಗೆ ನನಗೆ ಸೋಂಕಿಲ್ಲದಿರುವದು ಜಗತ್ತಿನ ಸ್ಥಿತಿಕಾಲದಲ್ಲಿ ಮಾತ್ರವೇ ಅಲ್ಲ —

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**

(ಕೌಂತೇಯ) ಅರ್ಜುನನೇ, ಕೇಳು ಮಾಯಗಾರನು ಮಾಡಿದ ಸೃಷ್ಟಿಯು ಮಾಯೆ ಮುಗಿಯುತ್ತಲೆ ಮಾಯಗಾರನೊಳಗೆ ಸೇರಿಹೋಗುವಂತೆ ಅಥವಾ ಕನಸಿನ ಜಗತ್ತು ಕನಸು ಮುಗಿಯುತ್ತಲೆ ಕನಸುಗಾಣುವವನಲ್ಲಿಯೇ ಅಡಗುವಂತೆ (ಕಲ್ಪಕ್ಷಯೇ) ಕಲ್ಪವು ಮುಗಿದು ಪ್ರಲಯವಾದಾಗ (ಸರ್ವಭೂತಾನಿ) ಸಮಸ್ತ ಚರಾಚರ ವಸ್ತುಗಳೂ (ಮಾಮಿಕಾಂ) ನನ್ನ ಸಂಬಂಧವಾದ (ಪ್ರಕೃತಿಂ) ಸತ್ತ್ವ, ರಜ, ತಮ–ಈ ಮೂರು ಗುಣಗಳ ಸಮ್ಮೇಲನದ ಮಾಯಾಶಕ್ತಿಯನ್ನು (ಯಾಂತಿ) ಹೊಂದುತ್ತವೆ (ಕಲ್ಪಾದೌ) ಹೊಸ ಕಲ್ಪವು ಮೊದಲಾದಾಗ (ತಾನಿ) ಆ ಚರಾಚರವಸ್ತುಗಳನ್ನು (ಪುನಃ) ಮತ್ತೆ (ಅಹಂ) ನಾನು (ವಿಸೃಜಾಮಿ) ಹೊರಗೆಡಹುತ್ತೇನೆ ಆದರೂ ಮಾಯೆಯ ಸೃಷ್ಟಿಯ ವಸ್ತುಗಳ ಸೋಂಕು ಮಾಯಗಾರನಿಗಿಲ್ಲದಿರುವಂತೆ ಅಥವ ಕನಸಿನ ಜಗತ್ತಿನ ಸೋಂಕು ಕನಸುಗಾಣುಹವನಿಗಿಲ್ಲದಿರುವಂತೆ ನನಗೆ ಈ ಜಗತ್ತಿನ ಸೋಂಕಿಲ್ಲ

ಹೀಗೆ —

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥**

(ಸ್ವಾಂ) ನನ್ನ (ಪ್ರಕೃತಿಂ) ಮಾಯಾಶಕ್ತಿಯನ್ನು (ಅವಷ್ಟಭ್ಯ) ಮುಂದು ಮಾಡಿಕೊಂಡು (ಅವಶಂ) ಪರಮಾತ್ಮಸ್ವರೂಪವನ್ನರಿಯದ ದೋಷದಿಂದ ಗುಣಗಳ ಬಲೆಗೆ ಬಿದ್ದು ತೊಳಲುತ್ತಿರುವ (ಇಮಂ) ಈ (ಭೂತಗ್ರಾಮಂ) ಚರಾಚರವಸ್ತುಗಳ ಸಮುದಾಯವನ್ನು (ಕೃತ್ಸ್ನಂ) ಎಲ್ಲವನ್ನೂ (ಪ್ರಕೃತೇಃ

ವಶಾತ್) ಅವುಗಳ ಪೂರ್ವಸ್ವಭಾವಕ್ಕನುಗುಣವಾಗಿ (ಪುನಃ ಪುನಃ) ಮತ್ತೆ ಮತ್ತೆ (ವಿಸೃಜಾಮಿ) ಹೊರಗೆಡಹುತ್ತೇನೆ

ಹಾಗಾದರೆ ಈ ಸೃಷ್ಟಿಯಲ್ಲಿ ಮೇಲುಕೀಳುಗಳನ್ನು ಮಾಡಿರುವದಕ್ಕಾಗಿ ನನಗೆ ಪುಣ್ಯಪಾಪಗಳು ಬಂದು ಗಂಟುಬೀಳುವವೆಂದರೆ —

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**

(ಧನಂಜಯ) ಅರ್ಜುನನೆ, ಕೇಳು ಮಾಯೆಯ ಮತ್ತು ಕನಸಿನ ಸೃಷ್ಟಿಯ ಮೇಲುಕೀಳುಗಳು ಮಾಯಾಗಾರನಿಗೂ ಕನಸುಗಾಣುವವನಿಗೂ ಪುಣ್ಯಪಾಪಗಳನ್ನು ತಂದು ಗಂಟುಹಾಕದಿರುವಂತೆ ನನ್ನ ಸೃಷ್ಟಿಯೂ ನನಗೆ ಪಾಪಪುಣ್ಯಗಳನ್ನುಂಟುಮಾಡುವದಿಲ್ಲವೆನ್ನದೆ ಜಗತ್ತಿನಲ್ಲಿ ಮಾಡುವ ಇತರರೆಲ್ಲ ಕಟ್ಟಿಗೊಳಗಾಗುತ್ತಿರುವ ದೃಷ್ಟಿಯಿಂದ ನೋಡಿದರೂ (ಉದಾಸೀನವತ್) ಇಬ್ಬರ ಜಗಳದಲ್ಲಿ ನಡುವಣವನು ಏನನ್ನೂ ಹಚ್ಚಿಕೊಳ್ಳದೆ ಸುಮ್ಮನೆ ನೋಡುತ್ತಿರುವಂತೆ (ಆಸೀನಂ) ಬರೀ ಸಾಕ್ಷಿ ಮಾತ್ರನಾಗಿರುವ ಮತ್ತು (ತೇಷು) ಆ (ಕರ್ಮಸು) ಕರ್ಮಗಳಲ್ಲಿ (ಅಸಕ್ತಂ) ನಾನು ಮಾಡುವೆನೆಂಬ ಮತ್ತು ನಾನು ಫಲವನ್ನು ಪಡೆಯುವನೆಂಬ ಆಸಕ್ತಿ ಇಲ್ಲದಿರುವಂಥ (ಮಾಂ) ನನ್ನನ್ನು (ತಾನಿ) ಆ (ಕರ್ಮಾಣಿ) ಸೃಷ್ಟಿಸ್ಥಿತಿಸಂಹಾರಕರ್ಮಗಳು (ನ ಚ ನಿಬಧ್ನಂತಿ) ಪುಣ್ಯಪಾಪಗಳ ಕಟ್ಟಿಗೊಳಪಡಿಸುವದೂ ಇಲ್ಲ

ಒಮ್ಮೆ ಜಗತ್ತನ್ನು ಹೊರಗೆಡಹುವೆನನ್ನುವದೂ ಅದೇ ಬಾಯಿಂದ ಉದಾಸೀನನಾಗಿರುವೆನೆನ್ನುವದೂ ಹೇಗೆ ಒಪ್ಪುವದೆಂದರೆ —

**ಮಯಾಧ್ಯಕ್ಷೇಣ* ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦ ॥**

---

* "ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ"

(ಕೌಂತೇಯ) ಅರ್ಜುನನೆ, ಕೇಳು (ಅಧ್ಯಕ್ಷೇಣ) ಸುಮ್ಮನೆ ನೋಡುವವನಾಗಿರುವಂಥ (ಮಯಾ) ನನ್ನ ಸಾನ್ನಿಧ್ಯದಿಂದ (ಪ್ರಕೃತಿಃ) ತ್ರಿಗುಣಾತ್ಮಕವಾದ ಮಾಯಾಶಕ್ತಿಯು (ಸಚರಾಚರಂ) ಚರಾಚರಗಳಿಂದ ಕೂಡಿದ ಜಗತ್ತನ್ನು (ಸೂಯತೇ) ಹಡೆಯುತ್ತದೆ ಸೂರ್ಯನ ಸಾನ್ನಿಧ್ಯದ ಬಲದಿಂದ ಜಗದ್ವ್ಯಾಪಾರವು ನಡೆಯುವಂತೆ (ಅನೇನ) ಈ (ಹೇತುನಾ) ನಾನು ಸುಮ್ಮನೆ ನೋಡುತ್ತಿರುವ ಕಾರಣದಿಂದಲೆ (ಜಗತ್) ಚರಾಚರಾತ್ಮಕವಾದ ಜಗತ್ತು (ವಿಪರಿವರ್ತತೇ) ಬಗೆಬಗೆಯಾಗಿ ರೂಪುಗೊಳ್ಳುತ್ತಿರುವದು ಜಗತ್ತಿನವರ ವ್ಯಾಪಾರಕ್ಕೆ ಸೂರ್ಯನ ಬೆಳಕು ಕಾರಣವಾಗಿ ಕಂಡರೂ ಆ ವ್ಯಾಪಾರದ ಗುಣದೋಷಗಳು ಸೂರ್ಯನಿಗೆ ಹೇಗಿಲ್ಲವೊ ಹಾಗೆ ಮಾಯೆಯ ವ್ಯಾಪಾರದ ಗುಣದೋಷಗಳು ನನಗಿಲ್ಲ

ನಾನು ಹೀಗಿದ್ದರೂ —

**ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧ ॥**

(ಭೂತಮಹೇಶ್ವರಮ್) ಚರಾಚರಗಳಿಗೆಲ್ಲ ಮಹಾಸ್ವಾಮಿಯಾದಂಥ (ಮಮ) ನನ್ನ (ಪರಂ) ಉತ್ಕೃಷ್ಟವಾದ (ಭಾವಂ) ಸಚ್ಚಿದಾನಂದ ಸ್ವರೂಪವನ್ನು (ಅಜಾನಂತಃ) ತಿಳಿಯದವರಾದ (ಮೂಢಾಃ) ಅವಿವೇಕಿಗಳು (ಮಾಂ) ಭಕ್ತರನ್ನು ಉದ್ಧರಿಸುವದಕ್ಕಾಗಿ ಮನುಷ್ಯಾವತಾರ ಮಾಡಿರುವ ನನ್ನನ್ನು (ಮಾನುಷೀಂ) ಎಲ್ಲ ಮನುಷ್ಯರಂಥ ಸಾಧಾರಣವಾದ (ತನುಂ) ಶರೀರವನ್ನು (ಆಶ್ರಿತಂ) ಧರಿಸಿ ವ್ಯವಹರಿಸುತ್ತಿರುವನೆಂದು (ಅವಜಾನಂತಿ) ಅವಮಾನಗೊಳಿಸುತ್ತಾರೆ

---

ಒಬ್ಬನೇ ದೇವನು ಎಲ್ಲ ಚರಾಚರವಸ್ತುಗಳೊಳಗಿದ್ದುಕೊಂಡು ಎಲ್ಲವನ್ನೂ ವ್ಯಾಪಿಸಿಕೊಂಡು ಎಲ್ಲಕ್ಕೂ ಅಂತರಾತ್ಮನಾಗಿ ಎಲ್ಲ ಕರ್ಮಗಳನ್ನೂ ನೋಡುವವನಾಗಿ ಸರ್ವವಸ್ತುಗಳಿಗೂ ಆಧಾರವಾಗಿ ಸಾಕ್ಷಿಯಾಗಿ ಚೈತನ್ಯಸ್ವರೂಪದ ಒಬ್ಬನೇ ಆಗಿ ನಿರ್ಗುಣನಾಗಿರುವನು—ಶ್ರು

ಇದರಿಂದ ಅವರಿಗಾಗುವದೇನೆಂದರೆ —

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥**

ಅವರು (ಮೋಘಾಶಾಃ) ಯಾರನ್ನು ಬೇಡಿದರೆ ಇಷ್ಟಾರ್ಥಗಳೆಲ್ಲ ಒಟ್ಟಿಗೆ ನೆರವೇರುವವೊ ಅಂಥ ನನ್ನನ್ನರಿಯದೆ ನೆಲವನ್ನು ಗುದ್ದಿ ಮೈ ನೋಯಿಸಿಕೊಂಡಂತೆ ಯಾವ ಸುಖವನ್ನೂ ಕೂಡಲರಿಯದ ವಿಷಯಗಳ ಮುಂದೆ ಸುಖಕ್ಕಾಗಿ ಸುಮ್ಮನೆ ಬಾಯಿ ನೀರು ಸುರಿಸಿ ಸುರಿಸಿ ಬಳಲುವವರಾಗಿ (ಮೋಘಕರ್ಮಾಣಃ) ಕರ್ಮಗಳ ಫಲವನ್ನು ಕೊಡುವ ನನ್ನ ಕಡೆಗೆ ಕಣ್ಣು ಹಾಕದೆ ಸುಮ್ಮನೆ ದುಡಿದು ದುಡಿದು ದಣಿಯುವವರಾಗಿ (ಮೋಘಜ್ಞಾನಾಃ) ಯಾವ ಜ್ಞಾನವು ಶಾಂತಿಯನ್ನುಂಟುಮಾಡುವದೊ ಅಂಥ ನನ್ನ ಸ್ವರೂಪದ ಜ್ಞಾನವಿಲ್ಲದೆ ಮನಸ್ಸಿನ ಹರಿದಾಟವನ್ನು ಹೆಚ್ಚಿಸುವಂಥ ವಿಷಯಜ್ಞಾನಗಳನ್ನು ತುಂಬಿ ತುಂಬಿ ತಲೆನೋವು ತಂದುಕೊಳ್ಳುವವರಾಗಿ (ವಿಚೇತಸಃ) ವಿವೇಕಬುದ್ಧಿಯನ್ನು ಕಳೆದುಕೊಂಡವರಾಗಿ (ರಾಕ್ಷಸೀಂ) ರಾಕ್ಷಸರಂತೆ ಪರರಿಗೆ ಹಿಂಸೆಯನ್ನು ಮಾಡುವಂಥ ತಮೋಗುಣದ ಮತ್ತು (ಆಸುರೀಂ) ಅಸುರರಂತೆ ಶಾಸ್ತ್ರಕ್ಕೆ ಸಮ್ಮತವಲ್ಲದ ರೀತಿಯ ವಿಷಯಸುಖವನ್ನು ಬಯಸುವ ರಜೋಗುಣದ ಅಲ್ಲದೆ (ಮೋಹಿನೀಂ ಚೈವ) ದೇಹಾತ್ಮಬುದ್ಧಿಯನ್ನೇ ಹೆಚ್ಚಿಸುವಂಥದ್ದೂ ಆಗಿರುವ (ಪ್ರಕೃತಿಂ) ಸ್ವಭಾವವನ್ನು (ಶ್ರಿತಾಃ) ಅವಲಂಬಿಸಿದವರಾಗುತ್ತಾರೆ

ಹೀಗಲ್ಲದೆ —

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೩ ॥**

(ಪಾರ್ಥ) ಅರ್ಜುನನೆ, ಕೇಳು (ಮಹಾತ್ಮಾನಸ್ತು) ಬಯಕೆ, ಸಿಟ್ಟು-ಮೊಗಲಾದವುಗಳಿಗೆ ಉಪ್ಪು ಹಾಕದೆ ಇರುವ ದೊಡ್ಡ ಮನಸ್ಸಿನವರಾವರೋ (ದೈವೀಂ) ಸಾತ್ತ್ವಿಕರಾದ ದೇವತೆಗಳಿಗೆ ಯೋಗ್ಯವಾದ (ಪ್ರಕೃತಿಂ) ಎಲ್ಲರನ್ನೂ ತನ್ನಂತೆ ನೋಡೋಣ, ಮನಸ್ಸನ್ನು ಸಮಾಧಾನದಿಂದಿಟ್ಟು

ಕೊಳ್ಳೋಣ–ಮೊದಲಾದ ಸ್ವಭಾವಗಳನ್ನು (ಆಶ್ರಿತಾಃ) ಅವಲಂಬಿಸಿದವರಾಗಿ (ಮಾಂ) ನನ್ನನ್ನು (ಅವ್ಯಯಮ್) ಎಂದಿಗೂ ಅಳಿಯದೆ ಇರುವಂಥ (ಭೂತಾದಿಂ) ಸರ್ವಜಗತ್ಕಾರಣನೆಂದು (ಜ್ಞಾತ್ವಾ) ತಿಳಿದು (ಅನನ್ಯ ಮನಸಃ) ಮನಸ್ಸನ್ನು ಇನ್ನೊಂದು ದೇವತೆಯ ಕಡೆಗೆ ಹಾಕದೆ (ಭಜಂತಿ) ಜ್ಞಾನಪೂರ್ವಕವಾಗಿ ಉಪಾಸನೆ ಮಾಡುತ್ತಾರೆ

ಅವರ ಉಪಾಸನೆಯ ರೀತಿಯನ್ನು ಕೇಳು —

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥**

(ಸತತಂ) ಯಾವಾಗಲೂ (ದೃಢವ್ರತಾಃ) ಅಹಿಂಸೆ, ಸತ್ಯ, ಬ್ರಹ್ಮ ಚರ್ಯ–ಮೊದಲಾದ ನಿಯಮಗಳನ್ನು ಮುಕ್ಕು ಹೋಗಗೊಡದೆ (ಮಾಂ) ಸಚ್ಚಿದಾನಂದಸ್ವರೂಪನಾದ ನನ್ನನ್ನು (ಕೀರ್ತಯಂತಃ) ಉಪನಿಷತ್ತುಗಳ ಆವೃತ್ತಿಯಿಂದ ಮತ್ತು ಪ್ರಣವಜಪ ಮೊದಲಾದವುಗಳಿಂದ ಕೀರ್ತಿಸುತ್ತ (ಯತಂತಶ್ಚ) ಇಂದ್ರಿಯಗಳನ್ನು ಬಿಗಿ ಹಿಡಿಯುವದು ಮತ್ತು ಮನಸ್ಸನ್ನು ಹರಿಯಗೊಡದಿರುವದು ಮೊದಲಾದ ಯತ್ನಗಳನ್ನೂ ಮಾಡುತ್ತ (ಮಾಂ) ಭಕ್ತರ ಉದ್ಧಾರಕ್ಕಾಗಿ ಆಗಿರುವ ನನ್ನ ಅವತಾರಮೂರ್ತಿಯನ್ನು (ನಮ ಸ್ಯಂತಶ್ಚ) ನಮಸ್ಕರಿಸುತ್ತಲೂ (ಭಕ್ತ್ಯಾ) ಭಕ್ತಿಯಿಂದ (ನಿತ್ಯಯುಕ್ತಾ) ಯಾವಾಗಲೂ ನನ್ನಲ್ಲಿ ಮನಸ್ಸಿಟ್ಟವರಾಗಿ (ಉಪಾಸತೇ) ಜ್ಞಾನಪೂರ್ವಕ ವಾದ ಉಪಾಸನೆಯನ್ನು ಮಾಡುತ್ತಾರೆ

ಆ ಉಪಾಸನೆಯ ಬೇರೆ ಬೇರೆ ಬಗೆಗಳೇನೆಂದರೆ —

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಂ ॥ ೧೫ ॥**

(ಅನ್ಯೇ) ಉತ್ತಮಾಧಿಕಾರಿಗಳಾದ ಕಲವರು (ಏಕತ್ವೇನ) ಜಗತ್ತಿ ಗೆಲ್ಲ ಕಾರಣನಾದವನು ಪರಮಾತ್ಮನೊಬ್ಬನೇ ಎಂಬ ದೃಷ್ಟಿಯಿಂದಲೂ (ಪೃಥಕ್ತ್ವೇನ) ಆ ಪರಮಾತ್ಮನೆ ಚಂದ್ರನ ರೂಪದಲ್ಲಿಯೋ ಸೂರ್ಯನ

ರೂಪದಲ್ಲಿಯೋ ಬೇರೆ ಬೇರೆ ರೂಪದಲ್ಲಿ ಬೆಳಗುತ್ತಿರುವನೆಂಬ ದೃಷ್ಟಿಯಿಂದಲೂ (ಬಹುಧಾ) ಬಹುಬಗೆಯಾಗಿ (ವಿಶ್ವತೋಮುಖಂ) ಎಲ್ಲ ರೂಪುಗಳೂ ಆಗಿರುವ (ಮಾಂ) ನನ್ನನ್ನು (ಜ್ಞಾನಯಜ್ಞೇನ ಚಾಪಿ) ಈ ಬಗೆಯ ತಿಳಿವಳಿಕೆಯೆಂಬ ಯಜ್ಞದಿಂದಲೂ (ಯಜಂತಃ) ಪೂಜಿಸುವವರಾಗಿ (ಉಪಾಸತೇ) ಉಪಾಸನೆ ಮಾಡುತ್ತಾರೆ

ನಾನು ಬಗೆಬಗೆಯ ಎಲ್ಲ ರೂಪಗಳೂ ಆಗಿರುವದು ಹೇಗೆಂದರೆ.—

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬ ॥**

(ಅಹಂ) ನಾನೆ (ಕ್ರತುಃ) ಅಗ್ನಿಷ್ಟೋಮ ಮೊದಲಾದ ಶ್ರುತ್ಯುಕ್ತ ಕರ್ಮಗಳು (ಅಹಂ) ನಾನೆ (ಯಜ್ಞಃ) ವೈಶ್ವದೇವ ಮೊದಲಾದ ಸ್ಮೃತ್ಯುಕ್ತ ಕರ್ಮಗಳು (ಅಹಂ) ನಾನೆ (ಸ್ವಧಾ) ಪಿತೃಗಳಿಗೆ ಕೊಡುವ ಅನ್ನ ಅಥವಾ ಎಲ್ಲರೂ ಉಣ್ಣುವ ಅನ್ನ (ಅಹಂ) ನಾನೆ (ಔಷಧಂ) ಎಲ್ಲರೂ ಊಟಮಾಡುವ ಬತ್ತ, ಗೋಧಿ–ಮೊದಲಾದದ್ದು ಅಥವಾ ರೋಗದ ಚಿಕಿತ್ಸೆಯ ಔಷಧ (ಅಹಂ) ನಾನೆ (ಮಂತ್ರಃ) ದೇವತೆಗಳಿಗೂ ಪಿತೃಗಳಿಗೂ ಹವಿಸ್ಸನ್ನು ಕೊಡುವಾಗ ಹೇಳುವ ಮಂತ್ರವು (ಅಹಮೇವ) ನಾನೆ (ಆಜ್ಯಂ) ಹವಿಸ್ಸಾದ ತುಪ್ಪವು (ಅಹಂ) ನಾನೆ (ಅಗ್ನಿಃ) ಹವಿಸ್ಸನ್ನು ತೆಗೆದುಕೊಳ್ಳುವ ಅಗ್ನಿಯು (ಅಹಂ) ನಾನೆ (ಹುತಂ) ಅಗ್ನಿಯಲ್ಲಿ ತುಪ್ಪವನ್ನು ಹಾಕುವದೆಂಬ ಹವನಕರ್ಮ

ಮತ್ತು —

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮಯಜುರೇವ ಚ ॥ ೧೭ ॥**

(ಅಹಂ) ನಾನೆ (ಅಸ್ಯ) ಈ (ಜಗತಃ) ಜಗತ್ತಿನ (ಪಿತಾ) ಹುಟ್ಟಿಸಿದ ತಂದೆಯು, (ಮಾತಾ) ಹಡೆದ ತಾಯಿಯು, (ಧಾತಾ) ಅವರವರ ಕರ್ಮಗಳ ಫಲಗಳನ್ನು ಅವರವರಿಗೆ ಹಂಚುವವನು, (ಪಿತಾಮಹಃ) ಲೋಕ

ಗಳ ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನಿಗೆ ತಂದೆಯಾದವನು, (ವೇದ್ಯಂ) ಎಲ್ಲರೂ ತಿಳಿಯಬೇಕಾಗಿರುವ ಪರಮೇಶ್ವರನು, (ಪವಿತ್ರಂ) ಗಂಗಾ, ಗಾಯತ್ರಿ-ಮೊದಲಾದ ಶುದ್ಧವಸ್ತುಗಳು, (ಓಂಕಾರಃ) ಬ್ರಹ್ಮಜ್ಞಾನಕ್ಕೆ ಸಾಧನವಾದ ಓಂಕಾರವು ಮತ್ತು (ಋಕ್ಸಾಮಯಜುರೇವ ಚ) ಸಕಲ ಕರ್ಮಗಳಿಗೂ ಆತ್ಮಜ್ಞಾನಕ್ಕೂ ಪ್ರಮಾಣವಾದ ಋಗ್ವೇದ, ಯಜುರ್ವೇದ, ಸಾಮವೇದ

ಮತ್ತು —

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ ೧೮ ॥**

(ಗತಿಃ) ಕರ್ಮದ ಫಲಗಳಾದ ಸ್ವರ್ಗ ಮೊದಲಾದವುಗಳ ಸ್ವರೂಪನು (ಭರ್ತಾ) ಸುಖಸಾಧನಗಳನ್ನು ಕೊಟ್ಟು ಕಾಪಾಡುವವನು (ಪ್ರಭುಃ) ಒಡೆಯನು (ಸಾಕ್ಷೀ) ಎಲ್ಲರ ಪುಣ್ಯಪಾಪಕರ್ಮಗಳನ್ನೂ ಸೂರ್ಯಚಂದ್ರರಂತೆ ನೋಡುವವನು (ನಿವಾಸಃ) ಸಮಸ್ತ ಪ್ರಾಣಿಗಳ ವಾಸಸ್ಥಾನವು (ಶರಣಂ) ಮರಹೊಕ್ಕವರನ್ನು ಕಾಯುವವನು (ಸುಹೃತ್) ತನಗೆ ಇತರರು ಉಪಕಾರ ಮಾಡಬೇಕೆಂದಿಟ್ಟುಕೊಳ್ಳದೆ ತಾನು ಇತರರಿಗೆ ಉಪಕಾರವನ್ನು ಮಾಡುವವನು (ಪ್ರಭವಃ) ಜಗತ್ತಿನ ಹುಟ್ಟುವಿಕೆಯು (ಪ್ರಲಯಃ) ಜಗತ್ತಿನ ಲಯವಾಗುವಿಕೆಯು (ಸ್ಥಾನಂ) ಜಗತ್ತಿನ ಇರುವಿಕೆಯು (ನಿಧಾನಂ) ಮುಂದೆ ಉಪಯೋಗಕ್ಕೆ ಬರುವ ಅನೇಕ ವಸ್ತುಗಳ ಗಣಿಯು (ಅವ್ಯಯಮ್) ಸಂಸಾರವಿರುವವರೆಗೂ ನಾಶವಾಗದೆ ಇರುವಂಥ (ಬೀಜಂ) ಬೆಳೆಯುವ ವಸ್ತುಗಳ ಬೀಜವು

ಮತ್ತು ,—

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥**

(ಅರ್ಜುನ) ಅರ್ಜುನನೆ, ಕೇಳು (ಅಹಂ) ನಾನು (ತಪಾಮಿ) ಸೂರ್ಯನಾಗಿ ಬಿರುಬಿಸಿಲಿನಿಂದ ಕಾಯಿಸುತ್ತೇನೆ (ಅಹಂ) ನಾನು (ವರ್ಷಂ) ಮಳೆಯನ್ನು (ನಿಗೃಹ್ಣಾಮಿ) ಬೇಸಿಗೆಯಲ್ಲಿ ಬಿಗಿಹಿಡಿಯುತ್ತೇನೆ, (ಉತ್ಸೃಜಾಮಿ ಚ) ಮಳೆಗಾಲದಲ್ಲಿ ಬಿಟ್ಟುಬಿಡುತ್ತೇನೆ (ಅಮೃತಂ ಚೈವ) ದೇವತೆಗಳ ಸಾವಿಲ್ಲದಿರುವಿಕೆಯೂ ಆಗಿದ್ದೇನೆ (ಮೃತ್ಯುಶ್ಚ) ಎಲ್ಲ ಪ್ರಾಣಿಗಳ ಸಾವೂ ಆಗಿದ್ದೇನೆ (ಅಹಂ) ನಾನು (ಸತ್) ಸ್ಥೂಲರೂಪವೆಲ್ಲವು ಮತ್ತು (ಅಸಚ್ಚ) ಸೂಕ್ಷ್ಮರೂಪವೆಲ್ಲವು

ಹೀಗೆ ಉಪಾಸನೆ ಮಾಡಿದವರು ನನ್ನನ್ನು ಪಡೆಯುತ್ತಾರೆ ಹೀಗಲ್ಲದೆ —

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ**
**ಮಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥ ೨೦ ॥**

(ತ್ರೈವಿದ್ಯಾಃ) ಕರ್ಮಗಳಿಗೆ ಅಗತ್ಯವಾದ ಋಗ್ವೇದ, ಯಜುರ್ವೇದ, ಸಾಮವೇದ–ಈ ಮೂರನ್ನೂ ತಿಳಿದವರಾಗಿ, ನನ್ನ ನಿಜಸ್ವರೂಪದ ಕಡೆಗೆ ಕಣ್ಣುಹಾಕದೆ (ಯಜ್ಞೈಃ) ಯಜ್ಞಗಳಿಂದ (ಮಾಂ) ವಸು, ರುದ್ರ, ಆದಿತ್ಯ–ಈ ರೂಪಗಳಲ್ಲಿರುವ ನನ್ನನ್ನು (ಇಷ್ಟ್ವಾ) ಪೂಜೆಮಾಡಿ (ಸೋಮಪಾಃ) ಎಲೆಗಳು ಶುಕ್ಲಪಕ್ಷದಲ್ಲಿ ಹುಟ್ಟಿ ಕೃಷ್ಣಪಕ್ಷದಲ್ಲಿ ಉದುರಿ ಹೋಗುವ ಸೋಮವಲ್ಲಿಯೆಂಬ ಬಿಳೀ ಬಳ್ಳಿಯ ರಸವನ್ನು ವೈದಿಕಾಗ್ನಿಯಲ್ಲಿ ಹೋಮಮಾಡಿ ಅದರ ಶೇಷವನ್ನು ಕುಡಿದವರಾಗಿ (ಪೂತಪಾಪಾಃ) ಪಾಪಗಳನ್ನೆಲ್ಲ ತೊಳೆದುಕೊಂಡು (ಸ್ವರ್ಗತಿಂ) ಸ್ವರ್ಗವೆಂಬ ಸ್ಥಾನವನ್ನು (ಪ್ರಾರ್ಥಯಂತೇ) ಬಯಸುತ್ತಾರೆ ಇದರಿಂದ (ತೇ) ಅವರು (ಪುಣ್ಯಂ) ಪುಣ್ಯದ ಫಲವಾದ (ಸುರೇಂದ್ರಲೋಕಂ) ಇಂದ್ರನ ಲೋಕವನ್ನು (ಆಸಾದ್ಯ) ಸೇರಿ (ದಿವಿ) ಸ್ವರ್ಗದಲ್ಲಿ (ದಿವ್ಯಾನ್) ಮನುಷ್ಯರಿಗೆ ಸಿಕ್ಕದೆ

ಇರುವಂಥ (ದೇವಭೋಗಾನ್) ದೇವತಾಶರೀರದಿಂದ ಅನುಭವಿಸುವ ಸುಖ ಸಾಧನಗಳನ್ನು (ಅಶ್ನಂತಿ) ಭೋಗಿಸುತ್ತಾರೆ

ನನ್ನ ನಿಜಸ್ವರೂಪದ ಕಡೆಗೆ ಕಣ್ಣುಹಾಕದಿದ್ದರೂ ಅವರಿಗೆ ಒಳ್ಳೆಯ ಫಲವೇ ಆಯಿತಲ್ಲ! ಎಂದರೆ —

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ***
**ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥**

(ತೇ) ಅವರ (ವಿಶಾಲಂ) ದೊಡ್ಡದಾದ (ತಂ) ಆ (ಸ್ವರ್ಗಲೋಕಂ) ಬಹಳ ಸುಖವನ್ನು ಕೊಡುವ ಸ್ವರ್ಗ ಲೋಕವನ್ನು (ಭುಕ್ತ್ವಾ) ಭೋಗಿಸಿ–ಎಂದರೆ ಅಲ್ಲಿನ ಸುಖಗಳನ್ನು ಅನುಭವಿಸಿ (ಪುಣ್ಯೇ) ಅವರು ಭೂಲೋಕದಲ್ಲಿ ಮಾಡಿದ್ದ ಪುಣ್ಯವು (ಕ್ಷೀಣೇ) ಮುಗಿದು ಹೋಗುತ್ತಲೆ (ಮರ್ತ್ಯಲೋಕಂ) ಮತ್ತೆ ಭೂಲೋಕವನ್ನು (ವಿಶಂತಿ) ಪ್ರವೇಶಿಸುತ್ತಾರೆ—ಎಂದರೆ ಪಡೆಯುತ್ತಾರೆ (ಏವಂ) ಹೀಗೆ (ಕಾಮಕಾಮಾಃ) ವಿಷಯಸುಖವನ್ನು ಬಯಸುವವರಾಗಿ (ತ್ರಯೀಧರ್ಮಂ) ಋಗ್ವೇದ, ಯಜುರ್ವೇದ, ಸಾಮವೇದ–ಇವುಗಳಲ್ಲಿ ಹೇಳಿರುವಂಥ ಕಾಮ್ಯಕರ್ಮಗಳನ್ನು (ಅನುಪ್ರಪನ್ನಾ) ಶರಣುಹೋಗಿರುವವರು (ಗತಾಗತಂ) ಭೂಲೋಕದಲ್ಲಿ ಮಾಡಿದ ಪುಣ್ಯದ ಫಲವನ್ನು ಉಣ್ಣುವದಕ್ಕೆ ಸ್ವರ್ಗಲೋಕಕ್ಕೆ ಹೋಗುವದು, ಅಲ್ಲಿ ಅದನ್ನು ಉಂಡು ಮುಗಿಸಿ ಅದು ಮುಗಿಯುತ್ತಲೆ ಮತ್ತೆ ಭೂಲೋಕಕ್ಕೆ ಬರುವದು ಹೀಗೆ ಸ್ವರ್ಗಕ್ಕೂ ಭೂಮಿಗೂ ಓಡಾಟವನ್ನು (ಲಭಂತೇ) ಪಡೆಯುತ್ತಾರ

---

* "ಏವಂ ಹಿ ತ್ರೈಧರ್ಮ್ಯಮನುಪ್ರಪನ್ನಾಃ" ಎಂದು ಪಾಠಾಂತರ. ಅರ್ಥದಲ್ಲೇನೂ ವ್ಯತ್ಯಾಸವಿಲ್ಲ

ನನಗೆ ಶರಣುಬಂದವರ ಜೀವನಯಾತ್ರೆಗೇನು ಗತಿಯೆಂದರೆ —

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**
**॥ ೨೨ ॥**

(ಯೇ) ಯಾವ (ಜನಾಃ) ಜನರು (ಅನನ್ಯಾಃ) ಪರಮಾತ್ಮನಿಗಿಂತ ಬೇರೆಯಲ್ಲದವರಾಗಿ ಎಂದರೆ ಮಹಾವಿಷ್ಣುವೇ ತಮ್ಮ ಆತ್ಮನೆಂದು ತಿಳಿದು (ಮಾಂ) ಆ ಮಹಾವಿಷ್ಣುವಿನ ಅವತಾರವಾದ ನನ್ನನ್ನು (ಚಿಂತಯಂತಃ) ಧ್ಯಾನಮಾಡುತ್ತ (ಪರ್ಯುಪಾಸತೇ) ಚೆನ್ನಾಗಿ ಉಪಾಸನೆಯನ್ನು ಮಾಡುತ್ತಾರೊ (ನಿತ್ಯಾಭಿಯುಕ್ತಾನಾಂ) ಯಾವಾಗಲೂ ನನ್ನಲ್ಲಿಯೇ ಮನಸ್ಸನ್ನಿಟ್ಟಿರುವ (ತೇಷಾಂ) ಅವರ (ಯೋಗಕ್ಷೇಮಂ) ಯೋಗಕ್ಷೇಮವನ್ನು ಎಂದರೆ ಇಲ್ಲದ್ದನ್ನು ದೊರಕಿಸುವ ಭಾರವನ್ನೂ ಇದ್ದದ್ದನ್ನು ಹೋಗಿಸದಿರುವ ಭಾರವನ್ನೂ (ಅಹಂ) ನಾನು (ವಹಾಮಿ) ಹೊತ್ತುಕೊಳ್ಳುತ್ತೇನೆ ಸಾಮಾನ್ಯವಾಗಿ ಜಗತ್ತಿನಲ್ಲಿರುವ ಎಲ್ಲರ ಯೋಗಕ್ಷೇಮದ ಭಾರವೂ ನನ್ನದೇ ಆದರೂ ಅವರೆಲ್ಲರ ವಿಷಯದಲ್ಲಿಯೂ ಅವರವರ ಯೋಗಕ್ಷೇಮಕ್ಕೆ ಅವರವರಿಂದ ಪ್ರಯತ್ನಮಾಡಿಸಿ ಅವರ ಇಷ್ಟವನ್ನು ನೆರವೇರಿಸುತ್ತೇನೆ ಆತ್ಮಜ್ಞಾನವನ್ನು ಪಡೆದು ನನಗೆ ಶರಣುಬಂದವರ ವಿಷಯದಲ್ಲಿ ಅವರ ಪ್ರಯತ್ನವನ್ನಪೇಕ್ಷಿಸದೆ ನಾನೇ ಅವರ ಇಷ್ಟಗಳನ್ನು ಸಾಧಿಸುತ್ತೇನೆ

'ಯಾವ ದೇವತೆಗೆ ಶರಣೆಂದರೂ ಅದು ನಿನ್ನ ಪೂಜೆಯೇ ಅಲ್ಲವೆ?' ಎಂದರೆ :—

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ॥ ೨೩ ॥**

(ಕೌಂತೇಯ) ಅರ್ಜುನನೆ, ಕೇಳು (ಯೇಽಪಿ) ಯಾರು (ಅನ್ಯದೇವತಾಭಕ್ತಾಃ) ಇಂದ್ರ, ಅಗ್ನಿ-ಮೊದಲಾದ ಇತರ ದೇವತೆಗಳ ಭಕ್ತರಾಗಿ (ಶ್ರದ್ಧಯಾನ್ವಿತಾಃ) ಆಸ್ತಿಕ್ಯಬುದ್ಧಿಯಿಂದ ಕೂಡಿದವರಾಗಿ (ಯಜಂತೇ)

ಜ್ಯೋತಿಷ್ಟೋಮ ಮೊದಲಾದ ಯಜ್ಞಗಳನ್ನು ಮಾಡುತ್ತಾರೊ (ತೇಽಪಿ) ಅವರು ಕೂಡ (ಮಾಮೇವ) ಇಂದ್ರ ಮೊದಲಾದವರ ಅಂತರ್ಯಾಮಿಯಾಗಿರುವ ನನ್ನನ್ನೆ (ಅವಿಧಿಪೂರ್ವಕಂ) ಹಾಗೆ ತಿಳಿಯದೆ ಅವರು ನನಗಿಂತ ಬೇರೆಯಾದವರೆಂದು (ಯಜಂತಿ) ಪೂಜಿಸುತ್ತಾರೆ.

ಇದರಿಂದಾಗುವದೇನೆಂದರೆ —

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪ ॥**

(ಅಹಂ ಹಿ) ಪರಮಾತ್ಮನಾದ ನಾನೆ (ಸರ್ವಯಜ್ಞಾನಾಂ) ಎಲ್ಲ ಯಜ್ಞಗಳ (ಭೋಕ್ತಾ ಚ) ಬೇರೆಬೇರೆ ದೇವತೆಗಳ ರೂಪದಿಂದ ಹವಿರ್ಭಾಗವನ್ನುಣ್ಣುವನೂ ಆಗಿರುವೆನು (ಪ್ರಭುರೇವ ಚ) ಯಜ್ಞವನ್ನು ಮಾಡಿದವರಿಗೆ ಫಲವನ್ನು ಕೊಡುವ ಸ್ವಾಮಿಯೂ ಆಗಿರುವೆನು ಹೀಗಿದ್ದರೂ ಅವರು (ಮಾಂ) ನನ್ನನ್ನು (ತತ್ತ್ವೇನ) ಎಲ್ಲ ದೇವತೆಗಳ ಅಂತರ್ಯಾಮಿಯೆಂದು ಇದ್ದದ್ದಿದ್ದ ಹಾಗೆ (ನ ತು ಅಭಿಜಾನಂತಿ) ಚೆನ್ನಾಗಿ ತಿಳಿಯುವದಿಲ್ಲ ಇದರಿಂದಾಗುವ ಹಾನಿಯೇನೆಂದರೆ (ಅತಃ) ನನ್ನ ಯಥಾರ್ಥವನ್ನು ತಿಳಿಯದೆ ಇರುವ ಕಾರಣದಿಂದ (ತೇ) ಅವರು (ಚ್ಯವಂತಿ) ನನ್ನನ್ನು ತಿಳಿದು ಆರಾಧನೆ ಮಾಡಿದ್ದರಿಂದ ಸತ್ತ ಮೇಲೆ ಮತ್ತೆ ಹುಟ್ಟದಂಥ ಫಲವನ್ನು ಕಳದುಕೊಂಡು ಮತ್ತೆ ಮತ್ತೆ ಹುಟ್ಟು ಸಾವುಗಳ ಕೂರಕಲಿಗೆ ಜಾರಿ ಬೀಳುತ್ತಿರುತ್ತಾರೆ.

ಹಾಗಾದರೆ ಇತರ ದೇವತೆಗಳನ್ನು ಆರಾಧಿಸುವದು ವ್ಯರ್ಥವೆ? ಎಂದರೆ —

**ಯಾಂತಿ ದೇವವ್ರತಾ ದೇವಾನ್ ಪಿತ್ರೂನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿಮಾಮ್* ॥ ೨೫ ॥**

* 'ತಂ ಯಥಾ ಯಥೋಪಾಸತೇ ತದೇವ ಭವತಿ'— ಯಾರು ಯಾವ ಯಾವ ದೇವತೆಯನ್ನುಪಾಸಿಸುವರೊ ಅವರು ಆಯಾ ದೇವತಾಭಾವವನ್ನೆ ಪಡೆಯುವರು.—ಶ್ರು.

(ದೇವವ್ರತಾಃ) ಯಜ್ಞ ಮೊದಲಾದವುಗಳಿಂದ ಇಂದ್ರನೇ ಮೊದಲಾದ ದೇವತೆಗಳನ್ನು ಪೂಜಿಸುವ ಸಾತ್ತ್ವಿಕರು (ದೇವಾನ್) ಆ ಇಂದ್ರನೆ ಮೊದಲಾದ ದೇವತೆಗಳನ್ನು (ಯಾಂತಿ) ಪಡೆಯುತ್ತಾರೆ (ಪಿತೃವ್ರತಾಃ) ಶ್ರಾದ್ಧ ಮೊದಲಾದ ಕರ್ಮಗಳಿಂದ ಅಗ್ನಿಷ್ವಾತ್ ಮೊದಲಾದ ಪಿತೃಗಳನ್ನಾರಾಧಿಸುವ ರಾಜಸರು (ಪಿತೄನ್) ಆ ಅಗ್ನಿಷ್ವಾತ್ ಮೊದಲಾದ ಪಿತೃಗಳನ್ನು (ಯಾಂತಿ) ಪಡೆಯುತ್ತಾರೆ (ಭೂತೇಜ್ಯಾಃ) ಪ್ರಾಣಗಳನ್ನು ಬಲಿಗೊಡುವುದರ ಮೂಲಕ ಯಕ್ಷ, ರಾಕ್ಷಸ-ಮೊದಲಾದ ಭೂತಗಳನ್ನು ಪೂಜಿಸುವ ತಾಮಸರು (ಭೂತಾನಿ) ಆ ಯಕ್ಷ, ರಾಕ್ಷಸ-ಮೊದಲಾದ ಭೂತಗಳನ್ನು (ಯಾಂತಿ) ಪಡೆಯುತ್ತಾರೆ (ಮದ್ಯಾಜಿನೋಽಪಿ) ಇನ್ನು ಪರಮೇಶ್ವರನಾದ ನನ್ನನ್ನು ತಮ್ಮ ಆತ್ಮವೆಂದು ಆರಾಧಿಸುವವರಾದರೊ (ಮಾಂ) ನನ್ನ ಸ್ವರೂಪವನ್ನೆ (ಯಾಂತಿ) ಪಡೆಯುತ್ತಾರೆ ಎಲ್ಲ ಆರಾಧನೆಗಳ ಆಯಾಸವೂ ಒಂದೇ ಆದರೂ ಅವಿವೇಕಿಗಳಾಗಿ ನನ್ನನ್ನು ತಿಳಿಯದವರು ನನ್ನಿಂದಾಗುವ ಹೆಚ್ಚಿನ ಫಲವನ್ನು ಕಳೆದುಕೊಳ್ಳುವರು

ನನ್ನ ಆರಾಧನೆಯು ಹೆಚ್ಚಿನ ಫಲವನ್ನು ಕೊಡುವದರ ಜೊತೆಗೆ ಬಹು ಸುಲಭಸಾಧ್ಯವಾಗಿಯೂ ಇರುವದು ಹೇಗೆಂದರೆ —

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥**

ಇತರ ದೇವತೆಗಳಿಗಾಗಿ ಮಾಡುವ ಯಜ್ಞಗಳು ಸಾಂಗವಾಗುವದಕ್ಕೆ ಪಶುಗಳು ಬೇಕು, ತುಪ್ಪವು ಬೇಕು, ಸೋಮರಸವು ಬೇಕು, ಧನ ಬೇಕು, ಧಾನ್ಯ ಬೇಕು, ಜನ ಬೇಕು ನನ್ನ ಪೂಜೆಗೆ ಅವೇನೂ ಅಗತ್ಯವಿಲ್ಲ (ಪತ್ರಂ) ದ್ರೌಪದಿಯು ಅಕ್ಷಯಪಾತ್ರೆಯಲ್ಲಿ ಉಳಿದಿದ್ದ ಒಂದು ಅಗಸೆಯ ಸೊಪ್ಪನ್ನು ಕೊಟ್ಟಂತೆ ಒಂದು ಕಾಡೆಲೆ ಸಾಕು (ಪುಷ್ಪಂ) ಗಜೇಂದ್ರನು ಕೊಳದಲ್ಲಿದ್ದ ಕಮಲದ ಹೂವನ್ನು ಕಿತ್ತೆಸೆದಂತೆ ಒಂದು ಕಾಡು ಹೂ ಸಾಕು. (ಫಲಂ) ಶಬರಿಯು ಕೊಟ್ಟ ಯಲಚಿಯ ಹಣ್ಣಿನಂತೆ ಒಂದು ಕಾಡು ಹಣ್ಣು ಸಾಕು. (ತೋಯಂ) ವಿದುರನು ಹಾಲು ಕೊಟ್ಟಂತೆ

ಒಂದಿಷ್ಟು ನೀರು ಸಾಕು ರಾಜನ ಪದಾರ್ಥಗಳನ್ನೆ ಸೇವಕನು ರಾಜ ಭಕ್ತಿಪೂರ್ವಕವಾಗಿ ರಾಜನಿಗೆ ಸಮರ್ಪಿಸುವಂತೆ ನಾನು ಸೃಷ್ಟಿಸಿದ ವಸ್ತುಗಳಲ್ಲಿ ಅಗ್ಗವಾಗಿ ದೊರೆಯುವವುಗಳನ್ನೆ (ಯಃ) ಯಾವನು (ಮೇ) ಪರಮಾತ್ಮನಾದ ನನಗೆ (ಭಕ್ತ್ಯಾ) ಪ್ರೇಮಪೂರ್ವಕವಾಗಿ (ಪ್ರಯಚ್ಛತಿ) ಕೊಡುತ್ತಾನೊ (ಪ್ರಯತಾತ್ಮನಃ) ಶುದ್ಧವಾದ ಬುದ್ಧಿಯುಳ್ಳವನ (ಭಕ್ತ್ಯು ಪಹೃತಂ) ಭಕ್ತಿಪೂರ್ವಕವಾಗಿ ತಂದ (ತತ್) ಅದನ್ನು (ಅಹಂ) ನಾನು (ಅಶ್ನಾಮಿ) ಭೋಗಿಸುತ್ತೇನೆ ಅಥವಾ ದೇವತೆಗಳ ತೃಪ್ತಿಗೆ ಉಣ್ಣುವದೂ ತಿನ್ನುವದೂ ಬೇಕಿಲ್ಲ. ಬರೀ ದರ್ಶನದಿಂದಲೆ ಅವರಿಗೆ ತೃಪ್ತಿ. ಆದ್ದರಿಂದ ನಾನು ಅವುಗಳನ್ನು ಸ್ವೀಕರಿಸುತ್ತೇನೆ ನಾನು ಪದಾರ್ಥದ ಘನತೆ, ಸೌಂದರ್ಯ-ಮೊದಲಾದ ಹೆಚ್ಚುಗಾರಿಕೆಗಳನ್ನು ನೋಡುವದಿಲ್ಲ. ಆ ಪದಾರ್ಥವನ್ನು ನನ್ನ ಮುಂದಿಡುವಾಗಿನ ಭಕ್ತಿ ವಿಶೇಷವನ್ನು ನೋಡು ತ್ತೇನೆ ಭಕ್ತಿಯೊಂದಿತ್ತೆಂದರೆ ಎಂಥ ಅಲ್ಪಪದಾರ್ಥವಾದರೂ ಮಹತ್ತ್ವ ವನ್ನು ಪಡೆಯುತ್ತದೆ

ಅಥವಾ ಇವುಗಳನ್ನು ತಂದು ಕೊಡುವಷ್ಟು ಆಯಾಸ ತಾನೆ ಏಕೆ —

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ ೨೭ ॥**

(ಕೌಂತೇಯ) ಅರ್ಜುನನೆ, ಕೇಳು. (ಯತ್) ಮಾಡಲೇಬೇಕಾಗಿ ಬಂದ ಯಾವದನ್ನು (ಕರೋಷಿ) ಮಾಡುತ್ತೀಯೊ (ಯತ್) ಉಣ್ಣಲೇ ಬೇಕಾಗಿ ಬಂದ ಯಾವದನ್ನು (ಅಶ್ನಾಸಿ) ಉಣ್ಣುತ್ತೀಯೊ (ಯತ್) ಹೋಮ ಮಾಡಲೇಬೇಕಾಗಿ ಬಂದ ಯಾವದನ್ನು (ಜುಹೋಷಿ) ಹೋಮ ಮಾಡುತ್ತೀಯೊ (ಯತ್) ದಾನ ಮಾಡಲೇಬೇಕಾಗಿ ಬಂದ ಯಾವದನ್ನು (ದದಾಸಿ) ದಾನ ಮಾಡುತ್ತೀಯೊ (ಯತ್) ತಪಸ್ಸು ಮಾಡಲೇಬೇಕಾಗಿ ಬಂದ ಯಾವದನ್ನು (ತಪಸ್ಯಸಿ) ತಪಸ್ಸು ಮಾಡುತ್ತೀಯೊ ಎಂದರೆ ಉಪವಾಸ ಮೊದಲಾದ ವ್ರತಗಳಲ್ಲಿರುತ್ತೀಯೊ (ತತ್) ಅದನ್ನು (ಮದರ್ಪಣಂ) ಪರಮಾತ್ಮನಾದ ನನಗೆ ಪ್ರೀತಿಯಾಗಲೆಂದು (ಕುರುಷ್ವ) ಮಾಡು,

ಇದರ ಫಲವನ್ನು ಕೇಳು —

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥೨೮॥**

(ಏವಂ) ಹೀಗೆ ನೀನು ನಿನ್ನ ಸರ್ವಕರ್ಮವನ್ನೂ ನನಗೊಪ್ಪಿಸಿ ಬಿಟ್ಟರೆ (ಕರ್ಮಬಂಧನೈಃ) ಕರ್ಮರೂಪವಾದ ಕಟ್ಟುಗಳಾಗಿರುವಂಥ (ಶುಭಾಶುಭಫಲೈಃ) ಪುಣ್ಯ ಮತ್ತು ಪಾಪ-ಎಂಬ ಫಲಗಳಿಂದ (ಮೋಕ್ಷ್ಯಸೇ) ಬಿಡುಗಡೆಯನ್ನು ಹೊಂದುತ್ತೀಯೆ ಮತ್ತು (ಸಂನ್ಯಾಸಯೋಗಯುಕ್ತಾತ್ಮಾ) ಕರ್ಮಗಳನ್ನೆಲ್ಲ ನನಗೆ ಒಪ್ಪಿಸಿಬಿಟ್ಟದ್ದರಿಂದ ಆಗುವ ಸಂನ್ಯಾಸದಿಂದಲೂ ಅವುಗಳನ್ನು ನಡೆಸುತ್ತಿರುವುದರಿಂದ ಆಗುವ ಯೋಗದಿಂದಲೂ ಶುದ್ಧಿಯನ್ನು ಹೊಂದಿದ ಮನಸ್ಸುಳ್ಳವನಾಗಿ (ವಿಮುಕ್ತಃ) ಬದುಕಿರುವಾಗಲೆ ಮುಕ್ತನೆ ಆಗಿದ್ದು, ಸತ್ತ ಮೇಲೆ (ಮಾಂ) ಪರಮಾತ್ಮನಾದ ನನ್ನ ಸ್ವರೂಪವನ್ನು (ಉಪೈಷ್ಯಸಿ) ಪಡೆಯುತ್ತಿ

ತನಗೆ ಶರಣೆಂದವರಿಗೆ ಮೋಕ್ಷವನ್ನೂ ಇತರರಿಗೆ ಶರಣೆಂದವರಿಗೆ ಹುಟ್ಟು ಸಾವುಗಳನ್ನೂ ಕೊಡುವದು ನನ್ನ ಪಕ್ಷಪಾತವಲ್ಲ ಏಕೆಂದರೆ —

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯ**
**ಹಮ್ ॥ ೨೯ ॥**

(ಸರ್ವಭೂತೇಷು) ನನ್ನ ಭಕ್ತರು, ಇತರರ ಭಕ್ತರು-ಮೊದಲಾದ ಎಲ್ಲ ಪ್ರಾಣಿಗಳಲ್ಲಿಯೂ (ಅಹಂ) ಪರಮಾತ್ಮನಾದ ನಾನು (ಸಮಃ) ಒಂದೇ ರೀತಿಯಾಗಿರುವೆನು ಎಲ್ಲರ ಆತ್ಮವೂ ನಾನೆ ಆದ್ದರಿಂದ (ಮೇ) ನನಗೆ (ದ್ವೇಷ್ಯಃ) ಬೇಡವಾದವನು (ನ ಅಸ್ತಿ) ಇಲ್ಲ (ಪ್ರಿಯಃ) ಬೇಕಾದವನು (ನ) ಇಲ್ಲ. ಹಾಗಾದರೆ ಜನರಿಗೆ ದೊರೆಯುದ ಬೇರೆ ಬೇರೆ ಫಲಕ್ಕೆ ಕಾರಣವೇನೆಂದರೆ ಶೀತವನ್ನು ಕಳೆಯುವದು ಅಗ್ನಿಯ ಸ್ವಭಾವವಾದರೂ ಬೇಡಿದ್ದನ್ನು ಕೊಡುವದು ಕಲ್ಪವೃಕ್ಷ, ಕಾಮಧೇನು,

ಚಿಂತಾಮಣಿ-ಇವುಗಳ ಸ್ವಭಾವವಾದರೂ ಅಗ್ನಿಯೂ ಕಲ್ಪವೃಕ್ಷ ಮೊದಲಾದವುಗಳೂ ತಮ್ಮ ಬಳಿಗೆ ಬಂದವರಿಗೆ ಮಾತ್ರ ತಮ್ಮ ಆಶ್ರಯದ ಫಲವನ್ನು ಕೊಡುವಂತೆ (ಯೇ ತು) ಯಾರು (ಮಾಂ) ನನ್ನನ್ನು (ಭಕ್ತ್ಯಾ) ಪ್ರೇಮದಿಂದ (ಭಜಂತಿ) ಆಶ್ರಯಿಸುತ್ತಾರೋ (ತೇ) ಅವರು (ಮಯಿ) ಸ್ವಭಾವವಾಗಿ ನನ್ನಲ್ಲಿರುತ್ತಾರೆ ನಿಜವಾಗಿ ಎಲ್ಲರೂ ನನ್ನಲ್ಲಿಯೇ ಇರುವರಾದರೂ ಜ್ಞಾನಿಗಳು ನನ್ನನ್ನು ತಮ್ಮ ಆತ್ಮವಾಗಿ ತಿಳಿದಿರುವದರಿಂದ ಅವರು ನನ್ನಲ್ಲಿರುವವರಾಗುತ್ತಾರೆ ಇದೇ ಕಾರಣದಿಂದಲೆ (ಅಹಂ) ನಾನು (ತೇಷುಚಾಪಿ) ಅವರಲ್ಲಿಯೂ ಇರುವೆನು ಹೀಗೆ ಹುಟ್ಟು ಸಾವುಗಳನ್ನು ಉಳಿಸಿಕೊಂಡಿರುವದಾಗಲಿ ಕಳೆದುಕೊಳ್ಳುವದಾಗಲಿ ಅವರವರ ತಿಳಿವಳಿಕೆಯ ಅಧೀನವೇ ಹೊರತು ಅದರಲ್ಲಿ ನನ್ನ ಪಕ್ಷಪಾತವೇನೂ ಇಲ್ಲ ನನ್ನನ್ನು ತಿಳಿದುಕೊಂಡವರಿಗೆ ಮೋಕ್ಷ, ಇಲ್ಲದವರಿಗೆ ಎಂದಿನಂತೆ ಸಂಸಾರ. ಹೀಗೆ ಅವರು ನನ್ನ ಮೇಲೆ ತಮ್ಮ ಪ್ರೇಮವನ್ನು ಉಪಯೋಗಿಸಿ ತಮ್ಮ ಉದ್ಧಾರವನ್ನು ಮಾಡಿಕೊಳ್ಳುವರು ಇತರರು ಹಾಗೆ ಮಾಡುವದಿಲ್ಲ. ಆದ ಮಾತ್ರಕ್ಕೆ ಆ ಇತರರ ಮೇಲೆ ನನಗೇನಾದರೂ ಹಗೆತನ ಉಂಟೆಂದು ತಿಳಿಯಬಾರದು

ನನ್ನ ಭಕ್ತಿಯ ಮಹಿಮೆಯನ್ನು ನೋಡು —

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**

(ಸುದುರಾಚಾರಃ ಅಪಿ ಚೇತ್) ಅಜಾಮಿಳ ಮೊದಲಾದವರಂತೆ ಬಹು ಕೆಟ್ಟ ನಡೆನಳಿಕೆಯುಳ್ಳವನಾದರೂ ಯಾವನು (ಮಾಂ) ಪರಮಾತ್ಮನಾದ ನನ್ನನ್ನು (ಅನನ್ಯಭಾಕ್) ನೀನೇ ಗತಿಯೆಂದು (ಭಜತೇ) ಉಪಾಸನೆ ಮಾಡುತ್ತಾನೊ (ಸಃ) ಅವನು (ಸಾಧುರೇವ) ಸದಾಚಾರವುಳ್ಳವನೇ ಎಂದು (ಮಂತವ್ಯಃ) ತಿಳಿಯಬೇಕು (ಹಿ) ಏಕೆಂದರೆ (ಸಃ) ಅವನು (ಸಮ್ಯಗ್ವ್ಯವಸಿತಃ) ಒಳ್ಳೆ ನಿಶ್ಚಯವನ್ನು ಮಾಡಿದವನಾಗಿರುವನು.

ಆ ಒಳ್ಳೆ ನಿಶ್ಚಯದಿಂದಾಗುವದೇನೆಂದರೆ —

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥**

ಅದರಿಂದ ಅವನು (ಕ್ಷಿಪ್ರಂ) ಬಹುಬೇಗ (ಧರ್ಮಾತ್ಮಾ) ಧರ್ಮದಲ್ಲಿ ಮನಸ್ಸುಳ್ಳವನು (ಭವತಿ) ಆಗುತ್ತಾನೆ ಮತ್ತು (ಶಶ್ವತ್) ಎಂದಿಗೂ ಹೋಗದೆ ಇರುವಂಥ (ಶಾಂತಿಂ) ಸಮಾಧಾನವನ್ನು (ನಿಗಚ್ಛತಿ) ಪಡೆಯುತ್ತಾನೆ. (ಕೌಂತೇಯ) ಅರ್ಜುನನೆ, ಕೇಳು (ಮೇ) ಪರಮಾತ್ಮನಾದ ನನ್ನ (ಭಕ್ತಃ) ಭಕ್ತನು (ನ ಪ್ರಣಶ್ಯತಿ) ಇತರ ದೇವತೆಗಳ ಭಕ್ತರಂತೆ ಇಳಿತವನ್ನು ಪಡೆಯುವದಿಲ್ಲ ಹೀಗೆಂದು (ಪ್ರತಿಜಾನೀಹಿ) ನೀನು ನಾಲ್ಕು ದಾರಿಗಳು ಸೇರಿದ ಕಡೆ ಈ ವಿಷಯದಲ್ಲಿ ಸಂದೇಹಗೂಳ್ಳುವವರ ಮುಂದೆ ಎರಡು ಕೈಗಳನ್ನೂ ಎತ್ತಿ ಆಣೆ ಮಾಡಿ ಹೇಳು

ಇಷ್ಟೇ ಅಲ್ಲ.—

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರೀಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್॥**
**॥ ೩೨ ॥**

(ಪಾರ್ಥ) ಅರ್ಜುನನೆ, ಕೇಳು (ಹಿ) ಇನ್ನೂ ಹೆಚ್ಚಿನದೇನೆಂದರೆ (ಯೇ) ಸ್ವಭಾವವಾಗಿ ವಿಷಯದ ಸುಖಕ್ಕೇ ಬಾಯಿನೀರು ಸುರಿಸುತ್ತಿರುವಂಥ (ಸ್ತ್ರೀಯಃ) ಹಂಗಸರೊ (ವೈಶ್ಯಾಃ) ವೈಶ್ಯರೊ (ತಥಾ) ಹಾಗೆಯೇ (ಶೂದ್ರಾಃ) ಶೂದ್ರರೊ ಮತ್ತು (ಪಾಪಯೋನಯಃ ಅಪಿಸ್ಯುಃ) ಇನ್ನೂ ಪಾಪದ ಜನ್ಮಗಳಲ್ಲಿ ಹುಟ್ಟಿರುವವರೊ (ತೇಽಪಿ) ಅವರೆಲ್ಲರೂ (ಮಾಂ) ಪರಮಾತ್ಮನಾದ ನನ್ನನ್ನು (ವ್ಯಪಾಶ್ರಿತ್ಯ) ಮರೆಹೊಕ್ಕು (ಪರಾಂ) ಉತ್ಕೃಷ್ಟವಾದ (ಗತಿಂ) ಮೋಕ್ಷವನ್ನು (ಯಾಂತಿ) ಪಡೆಯುತ್ತಾರೆ.

ಹೀಗಾದ ಮೇಲೆ:—

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ ೩೩ ॥**

(ಪುಣ್ಯಾಃ) ನನ್ನನ್ನು ಪಡೆಯುವ ದಾರಿಯಲ್ಲಿಯೇ ಮನಸ್ಸು ಹರಿಯುವ ಪರಂಪರೆಯವರಾದಂಥ (ಬ್ರಾಹ್ಮಣಾಃ) ಬ್ರಾಹ್ಮಣರೂ (ತಥಾ) ಅದರಂತೆ (ಭಕ್ತಾಃ) ಭಕ್ತರಾದ (ರಾಜರ್ಷಯಃ) ರಾಜರೂ ಆಗಿ ಋಷಿಗಳಂತೆ ನಡೆಯುತ್ತಿರುವವರೂ (ಕಿಂ ಪುನಃ) ನನ್ನನ್ನು ತಮ್ಮ ಆತ್ಮನೆಂದು ಉಪಾಸನೆ ಮಾಡಿ ಮೋಕ್ಷವನ್ನು ಪಡೆಯುವರೆಂದು ಹೇಳಬೇಕಾದ್ದೇನಿದೆ? ಅರ್ಜುನನೆ, ಈಗ ನೀನು ಮಾಡಬೇಕಾದ್ದೇನೆಂದರೆ (ಅನಿತ್ಯಂ) ಮೂರು ಗಳಿಗೆಯ ಬಾಳಿನದಾಗಿರುವಂಥ ಮತ್ತು (ಅಸುಖಂ) ದುಃಖಮಯವಾಗಿರುವಂಥ (ಇಮಂ) ಈ (ಲೋಕಂ) ಭೂಲೋಕವನ್ನು (ಪ್ರಾಪ್ಯ) ಪಡೆದು, ಇದರಲ್ಲಿ ಮೋಕ್ಷವನ್ನು ಸಾಧಿಸುವ ಸಾಮರ್ಥ್ಯವುಳ್ಳ ಮನುಷ್ಯ ಜನ್ಮವನ್ನು ಹೊಂದಿರುವ ನೀನು (ಮಾಂ) ಪರಮಾತ್ಮನಾದ ನನ್ನನ್ನು (ಭಜಸ್ವ) ನಿನ್ನ ಆತ್ಮನೆಂದು ಸೇವಿಸು

ಸೇವಿಸುವದು ಹೇಗೆಂದರೆ —

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥**

(ಮನ್ಮನಾಭವ) ಪರಮಾತ್ಮನಾದ ನನ್ನಲ್ಲಿಯೇ ಮನಸಿಟ್ಟು ನನ್ನನ್ನು ಧ್ಯಾನಿಸು ಚಿತ್ತವು ಅದರಲ್ಲಿ ಬೇಸತ್ತರೆ (ಮದ್ಭಕ್ತಃ) ನನ್ನ ಗುಣಗಾನರೂಪವಾದ ಭಜನೆಯನ್ನು ಮಾಡು ಅದರಲ್ಲಿಯೂ ಆಯಾಸವು ತೋರಿದಾಗ (ಮದ್ಯಾಜೀ) ನನ್ನ ಮೂರ್ತಿಯನ್ನು ಹೂ, ಗಂಧ-ಮೊದಲಾದವುಗಳಿಂದ ಪೂಜೆಮಾಡು ಅದೂ ಸಾಕೆನಿಸಿದರೆ (ಮಾಂ) ನನ್ನನ್ನು (ನಮಸ್ಕುರು) ನಮಸ್ಕಾರಮಾಡು (ಏವಂ) ಹೀಗೆ (ಮತ್ಪರಾಯಣಃ) ಎಲ್ಲರ ಆತ್ಮನಾದ ನಾನೇ ನಿನಗೆ ಹೆಚ್ಚಿನ ಗತಿಯೆಂದು ತಿಳಿದವನಾಗಿ (ಆತ್ಮಾನಂ) ನಿನ್ನನ್ನು (ಯುಕ್ತ್ವಾ) ಉಪಾಸನೆಯಲ್ಲಿ ತೊಡಗಿಸಿದರೆ (ಮಾಮೇವ) ನನ್ನ ಸ್ವರೂಪವನ್ನೇ (ಏಷ್ಯಸಿ) ಪಡೆಯುತ್ತೀಯೆ.

ಇಲ್ಲಿಗೆ **ರಾಜವಿದ್ಯಾರಾಜಗುಹ್ಯಯೋಗವೆಂಬ**
**ಒಂಬತ್ತನೆ ಅಧ್ಯಾಯವು ಮುಗಿಯಿತು.**



# ಹತ್ತನೆ ಅಧ್ಯಾಯ

ಹಿಂದಿನ ಅಧ್ಯಾಯದಲ್ಲಿ ಹೇಳಿದ ನಿರ್ಗುಣಬ್ರಹ್ಮಸ್ವರೂಪವು ಮನಸ್ಸಿನಲ್ಲಿ ಮೂಡದೆ ಹೋಗುವ ಸಂದರ್ಭದಲ್ಲಿ ಸಗುಣವನ್ನು ಉಪಾಸನೆ ಮಾಡಬೇಕಾದಾಗ ಪರಮಾತ್ಮನ ಬಗಬಗೆಯ ರೂಪುಗಳಾಗಿರುವ ಈ ಪ್ರಪಂಚದಲ್ಲಿ ಪರಮಾತ್ಮ ಭಾವನೆಗೆ ಪ್ರಶಸ್ತವಾದ ಸ್ಥಲಗಳನ್ನು ತೋರಿಸುವದಕ್ಕಾಗಿ,

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥ ೧ ॥**

(ಮಹಾಬಾಹೋ) ಅರ್ಜುನನೆ, ಕೇಳು (ಪ್ರೀಯಮಾಣಾಯ) ನನ್ನ ಮಾತನ್ನು ಕೇಳಿ ಕೇಳಿ ಉತ್ಸಾಹಗೊಳ್ಳುತ್ತಿರುವ (ತೇ) ನಿನಗೆ (ಹಿತಕಾಮ್ಯಯಾ) ಅನುಕೂಲವನ್ನು ಮಾಡಬೇಕೆಂಬ ಉದ್ದೇಶದಿಂದ (ಅಹಂ) ನಾನು (ಯತ್) ಯಾವ ಮಾತನ್ನು (ವಕ್ಷ್ಯಾಮಿ) ಹೇಳುತ್ತೇನೆಯೊ ಅಂಥ (ಮೇ) ನನ್ನ (ಪರಮಂ) ಉತ್ಕೃಷ್ಟವಾದ ಪರಮಾತ್ಮವಸ್ತುವನ್ನು ಕಾಣಿಸುವಂಥ (ವಚಃ) ಮಾತನ್ನು (ಭೂಯ ಏವ) ಮತ್ತೆಯೂ (ಶೃಣು) ಕೇಳು

ನಾನಾಗಿ ಇದನ್ನು ಏಕೆ ಹೇಳುತ್ತೇನೆಂದರೆ —

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥ ೨ ॥***

* "ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾ ಯಸ್ಮಿನ್ ಯುಕ್ತಾ ಮಹರ್ಷಯೋ ದೇವತಾಶ್ಚ" ಬ್ರಹ್ಮದಲ್ಲಿ ಮನಸ್ಸನ್ನಿಟ್ಟಿರುವಂಥ ಮಹರ್ಷಿಗಳೂ ದೇವತೆಗಳೂ ಆ ಬ್ರಹ್ಮವಸ್ತುವಿನಿಂದಲೆ ಬಹುಬಗೆಯಾಗಿ ಹುಟ್ಟಿರುವರು.

(ಮೇ) ನನ್ನ (ಪ್ರಭವಂ) ಹುಟ್ಟನ್ನು ಅಥವಾ ಪ್ರಭುಶಕ್ತಿಯನ್ನು (ಸುರಗಣಾಃ) ದೇವತೆಗಳ ಗುಂಪು (ನ ವಿದುಃ) ತಿಳಿಯರು (ಮಹರ್ಷಯಃ) ಸರ್ವಜ್ಞರಾದ ದೊಡ್ಡ ದೊಡ್ಡ ಋಷಿಗಳೂ (ನ) ತಿಳಿಯರು (ಹಿ) ಏಕೆಂದರೆ (ದೇವಾನಾಂ) ದೇವತೆಗಳಿಗೂ (ಮಹರ್ಷೀಣಾಂ ಚ) ದೊಡ್ಡ ದೊಡ್ಡ ಋಷಿಗಳಿಗೂ (ಸರ್ವಶಃ) ಎಲ್ಲ ಬಗಯಿಂದಲೂ (ಅಹಂ) ನಾನು (ಆದಿಃ) ಮೊದಲನೆಯವನು ನನ್ನ ಮುಂದೆ ಈಗ ಕಣ್ಣುಬಿಟ್ಟಿರುವವರು ನನ್ನ ಆಳವನ್ನು ಹೇಗೆ ತಿಳಿದಾರು?

ಕೊನೆಗೆ ಇಷ್ಟು ತಿಳಿದರೂ ಎಷ್ಟೋ ಗುಣ ಉಂಟು —

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩ ॥**

(ಯಃ) ಯಾವನು (ಮಾಂ) ನನ್ನನ್ನು (ಅಜಂ) ಹುಟ್ಟುವಿಕೆ ಎಂಬುದೇ ಇಲ್ಲದವನನ್ನಾಗಿಯೂ (ಅನಾದಿಂ ಚ) ದೇವತೆಗಳಿಗೂ ಮಹರ್ಷಿಗಳಿಗೂ ನಾನು ಹೇಗೆ ಆದಿಯೊ ಹಾಗೆ ನನಗೆ ಬೇರೊಬ್ಬ ಆದಿಯಾದವನಿಲ್ಲವೆಂಬುದಾಗಿಯೂ ಮತ್ತು (ಲೋಕಮಹೇಶ್ವರಂ) ಜಗತ್ತಿನಲ್ಲಿ ವಿಷಯಗಳ ಸೆಳೆತಕ್ಕೆ ಸಿಕ್ಕಿದವನಾಗಿರದ ಎಲ್ಲದರ ಮೇಲೆಯೂ ಅಧಿಕಾರವನ್ನು ನಡೆಸುವ ದೊಡ್ಡ ಒಡೆಯನನ್ನಾಗಿಯೂ (ವೇತ್ತಿ) ತಿಳಿಯುತ್ತಾನೊ (ಸಃ) ಅವನು (ಮರ್ತ್ಯೇಷು) ಮನುಷ್ಯರಲ್ಲೆಲ್ಲ (ಅಸಂಮೂಢಃ) ದೇಹ ಮೊದಲಾದವುಗಳನ್ನೆ ಆತ್ಮವೆಂದು ತಪ್ಪು ತಿಳಿದುಕೊಳ್ಳದವನಾಗಿ (ಸರ್ವಪಾಪೈಃ) ತಿಳಿದು ಮಾಡಿದ ಅಥವಾ, ತಿಳಿಯದೆ ಮಾಡಿದ ಎಲ್ಲ ಪಾಪಪುಣ್ಯಗಳಿಂದಲೂ (ಪ್ರಮುಚ್ಯತೇ) ಬಿಡುಗಡೆಯನ್ನು ಹೊಂದುತ್ತಾನೆ

ನಾನು ಲೋಕಕ್ಕೆಲ್ಲ ದೊಡ್ಡ ಒಡೆಯನೆಂಬುದು ಹೇಗೆಂದರೆ.—

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥ ೪ ॥**

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥**

(ಬುದ್ಧಿಃ) ಅಂತಃಕರಣದಲ್ಲಿ ಸೂಕ್ಷ್ಮವಾದ ವಿಚಾರಗಳನ್ನು ತಿಳಿಯುವ ಸಾಮರ್ಥ್ಯವು (ಜ್ಞಾನಂ) ಸಮಸ್ತ ಪದಾರ್ಥಗಳ ತಿಳಿವಳಿಕೆ (ಅಸಂಮೋಹಃ) ಅಯೋಗ್ಯವಾದ ನಡೆವಳಿಕೆಗೆ ಮರುಳಾಗದೆ ಯೋಗ್ಯವಾದ ರೀತಿಯಲ್ಲಿ ನಡೆಯುವದು (ಕ್ಷಮಾ) ಯಾರಾದರೂ ಹೊಡೆದರೂ ಬೈದರೂ ಮನಸ್ಸಿನಲ್ಲಿ ಹೆಚ್ಚು ಕುಂದುಗಳಾಗದಿರುವದು (ಸತ್ಯಂ) ಕಂಡದ್ದನ್ನು ಕಂಡಂತೆ ಕೇಳಿದ್ದನ್ನು ಕೇಳಿದಂತೆ ಹೇಳುವದು (ದಮಃ) ಕಣ್ಣು, ಕಿವಿ-ಮೊದಲಾದ ಇಂದ್ರಿಯಗಳನ್ನು ಬಿಗಿ ಹಿಡಿಯುವದು (ಶಮಃ) ಮನಸ್ಸನ್ನು ಸಮಾಧಾನವಾಗಿಟ್ಟುಕೊಳ್ಳುವದು (ಸುಖಂ) ಧರ್ಮ ಸಮ್ಮತವಾದ ಅನುಕೂಲದಿಂದ ಪಡುವ ಆನಂದ (ದುಃಖಂ) ಅಧರ್ಮವಾಗಿ ನಮಗೆ ಪ್ರತಿಕೂಲವಾಗಿರುವದು (ಭವಃ) ಹುಟ್ಟುವಿಕೆಯು (ಅಭಾವಃ) ಸಾಯುವಿಕೆಯು (ಭಯಂ ಚ) ಹೆದರಿಕೆಯೂ (ಅಭಯಮೇವ ಚ) ಧೈರ್ಯವೂ (ಅಹಿಂಸಾ) ಯಾರನ್ನೂ ಪೀಡಿಸದಿರುವದು (ಸಮತಾ) ಬೇಕುಬೇಡವೆಂಬುದಿಲ್ಲದೆ ಮನಸ್ಸು ಸಮಸ್ಥಿತಿಯಲ್ಲಿರುವದು (ತುಷ್ಟಿಂ) ಬಂದಷ್ಟು ಸಾಕೆಂದು ಸಂತೋಷಿಸುವದು (ತಪಃ) ಇಂದ್ರಿಯಗಳನ್ನು ಬಿಗಿ ಹಿಡಿಯುವಹರ ಮೂಲಕ ಶರೀರವನ್ನು ಸೊರಗಿಸುವದು (ದಾನಂ) ಯೋಗ್ಯರಿಗ ತನ್ನ ಪದಾರ್ಥಗಳನ್ನು ಹಂಚುವದು (ಯಶಃ) ಧರ್ಮಿಷ್ಠನೆಂಬ ಒಳ್ಳೆ ಹೆಸರು (ಅಯಶಃ) ಅಧರ್ಮಪರನೆಂಬ ಕೆಟ್ಟ ಹೆಸರು-ಈ ಎಲ್ಲಾ (ಭಾವಾಃ) ಭಾವಗಳು (ಭೂತಾನಾಂ) ಪ್ರಾಣಿಗಳಿಗೆ (ಮತ್ತ ಏವ) ನನ್ನಿಂದಲೆ (ಪೃಥಗ್ವಿಧಾಃ) ಅವರವರ ಕರ್ಮಕ್ಕೆ ತಕ್ಕಂತೆ ಬೇರೆ ಬೇರೆ ಬಗೆಯಾಗಿ (ಭವಂತಿ) ಹುಟ್ಟುತ್ತವ.

ಇನ್ನೂ ಏಕೆಂದರೆ.—

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥**
**॥ ೬ ॥**

(ಇಮಾಃ) ಸ್ಥಾವರಜಂಗಮಗಳಾದ ಎಲ್ಲವೂ (ಪ್ರಜಾಃ) ಪ್ರಜೆಗಳೂ (ಯೇಷಾಂ) ಯಾವ ಮಹರ್ಷಿಗಳ ಮತ್ತು ಮನುಗಳ (ಲೋಕಃ) ಸೃಷ್ಟಿಯೊ ಅಂಥ (ಸಪ್ತಮಹರ್ಷಯಃ) ಮರೀಚಿ, ಅಂಗಿರಸ್, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ-ಎಂಬ ಏಳುಜನ ಮಹರ್ಷಿಗಳೂ (ತಥಾ) ಹಾಗೆಯೇ (ಪೂರ್ವೇ) ಬಹಳ ಹಿಂದಿನವರೆಂದು ಪ್ರಸಿದ್ಧ ರಾಗಿರುವ (ಚತ್ವಾರಃ) ಸನಕ ಮೊದಲಾದ ನಾಲ್ಕುಜನ ಮಹರ್ಷಿಗಳೂ (ಮನವಃ) ಸ್ವಾಯಂಭು ಮೊದಲಾದ ಹದಿನಾಲ್ಕು ಮನುಗಳೂ (ಮದ್ಭಾವಾಃ) ನನ್ನಲ್ಲಿಯೇ ಮನಸ್ಸುಳ್ಳವರಾಗಿ ನನ್ನ ಜ್ಞಾನ, ಐಶ್ವರ್ಯ-ಮೊದಲಾದವುಗಳನ್ನೆಲ್ಲ ವಶಮಾಡಿಕೊಂಡಿರುವವರಾಗಿಯೂ (ಮಾನಸಾಃ) ಉಳಿದ ಮನುಷ್ಯರಂತೆ ಗರ್ಭವಾಸದಿಂದ ಬಂದವರಾಗಿರದೆ ನನ್ನ ಮನಸ್ಸಿನಿಂದಲೆ ಬಂದವರಾಗಿಯು (ಜಾತಃ) ಹುಟ್ಟಿರುವರು

ಇದನ್ನೆಲ್ಲ ಏಕ ಹೇಳಿದೆನೆಂದರೆ. —

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥**

(ಮಮ) ನನ್ನ (ಏತಾಂ) ಈ ಮೇಲೆ ಹೇಳಿದಂಥ (ವಿಭೂತಿಂ) ಬುದ್ಧಿ ಮೊದಲುಗೊಂಡು ಮನುಗಳವರೆಗಿನ ವಿಸ್ತಾರವನ್ನು (ಯೋಗಂ ಚ) ಈ ವಿಸ್ತಾರವನ್ನೆಲ್ಲ ಮಾಡುವ ಸಾಮರ್ಥ್ಯವನ್ನೂ (ಯಃ) ಯಾವನು (ತತ್ತ್ವತಃ) ಇದ್ದದ್ದಿದ್ದಹಾಗೆ (ವೇತ್ತಿ) ತಿಳಿಯುತ್ತಾನೊ (ಸಃ) ಅವನು (ಅವಿಕಂಪೇನ) ಕದಲದೆ ಇರುವಂಥ (ಯೋಗೇನ) ಆತ್ಮವಿಷಯಕ ಚಿತ್ತ ಸ್ಥೈರ್ಯದಿಂದ (ಯುಜ್ಯತೇ) ಕೂಡಿದವನಾಗುತ್ತಾನೆ (ಅತ್ರ) ಈ ವಿಷಯ ದಲ್ಲಿ (ನ ಸಂಶಯಃ) ಸಂದೇಹವಿಲ್ಲ

ಆ ಚಿತ್ತಸ್ಥೈರ್ಯದ ರೀತಿ ಹೇಗಿರುವದೆಂದರೆ —

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥**

(ಅಹಂ) ಪರಬ್ರಹ್ಮಸ್ವರೂಪನಾದ ನಾನು (ಸರ್ವಸ್ಯ) ಎಲ್ಲ ಜಗತ್ತಿಗೂ (ಪ್ರಭವಃ) ಹುಟ್ಟುವಿಕಗೆ ಕಾರಣನು ಮತ್ತು (ಮತ್ತಃ) ಪರಬ್ರಹ್ಮಸ್ವರೂಪನಾದ ನನ್ನಿಂದಲೆ (ಸರ್ವಂ ಪ್ರವರ್ತತೇ) ಸ್ಥಿತಿ, ನಾಶ-ಮೊದಲಾದವುಗಳೆಲ್ಲ ಆಗುತ್ತವೆ ಅಥವಾ ಸೂರ್ಯ, ಚಂದ್ರ-ಮೊದಲಾದವರೆಲ್ಲರೂ ನನ್ನ ಪ್ರೇರಣೆಯಿಂದಲೇ ನಡೆಯುವರು (ಇತಿ) ಹೀಗೆಂದು (ಮತ್ವಾ) ತಿಳಿದುಕೊಂಡು (ಬುಧಾಃ) ನನ್ನ ನಿಜವನ್ನರಿತವರು (ಭಾವಸಮನ್ವಿತಾಃ) ಪ್ರೇಮದಿಂದ ಕೂಡಿದವರಾಗಿ (ಮಾಂ) ನನ್ನನ್ನು (ಭಜಂತೇ) ಭಜಿಸುತ್ತಾರೆ

ಮತ್ತು,

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯ ॥**

ಅವರು (ಮಚ್ಚಿತ್ತಾಃ) ನನ್ನಲ್ಲಿಯೇ ಮನಸ್ಸನ್ನಿಟ್ಟು ಚಿಂತಿಸುವವರಾಗಿ ಮತ್ತು (ಮದ್ಗತಪ್ರಾಣಾಃ) ಕಣ್ಣು ಮೊದಲಾದ ಇಂದ್ರಿಯಗಳನ್ನೆಲ್ಲ ನನ್ನ ಕಡೆಗೆ ತಿರುಗಿಸಿದವರಾಗಿ ಅಥವಾ ತಮ್ಮ ಪ್ರಾಣವಿರುವದು ನನ್ನ ಭಜನೆಗಾಗಿಯೇ ಎಂದು ತಿಳಿದವರಾಗಿ (ನಿತ್ಯಂ) ಯಾವಾಗಲೂ (ಮಾಂ) ನನ್ನನ್ನು (ಪರಸ್ಪರಂ) ಒಬ್ಬರಿಗೊಬ್ಬರು (ಬೋಧಯಂತಃ) ತಮಗೆ ತಿಳಿದದ್ದನ್ನು ಮತ್ತೊಬ್ಬರ ಮನಸ್ಸಿಗೆ ಹಿಡಿಯುವಂತೆ ತಿಳಿಸಿಕೊಡುವವರಾಗಿಯೂ (ಕಥಯಂತಶ್ಚ) ಇಬ್ಬರಿಗೂ ತಿಳಿದಿರುವಂಥ ಜ್ಞಾನ, ಬಲ, ವೀರ್ಯ-ಮೊದಲಾದ ನನ್ನ ಧರ್ಮಗಳನ್ನು ಹೇಳುವವರಾಗಿಯೂ (ತುಷ್ಯಂತಿ ಚ) ಧನ್ಯರಾದೆವೆಂದು ಸಂತೋಷಗೊಳ್ಳುವರು ಮತ್ತು (ರಮಂತಿ ಚ) ಅದರಿಂದಲೆ ಅವರು ಸುಖವನ್ನನುಭವಿಸುವರು

ಇದರಿಂದ ಅವರಿಗೆ ಆಗುಹದೇನೆಂದರೆ.—

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥ ೧೦ ॥**

(ಸತತಯುಕ್ತಾನಾಂ) ಹೀಗೆ ಹೊರಗಣ ವಿಷಯಗಳ ಕಡೆಗೆ ಮನಸ್ಸನ್ನು ಜೋಲುಬಿಡದ ಯಾವಾಗಲೂ ನನ್ನಲ್ಲಿಯೇ ಮನಸ್ಸನ್ನಿಟ್ಟವರಾಗಿ (ಪ್ರೀತಿಪೂರ್ವಕಂ) ಲಾಭ, ಗೌರವ, ಖ್ಯಾತಿ–ಮೊದಲಾದ ಲೌಕಿಕ ಪ್ರಯೋಜನಗಳ ಮೇಲಿನ ಪ್ರೀತಿಯನ್ನು ಹಿಂದಕ್ಕೆ ತಳ್ಳಿ ನನ್ನಲ್ಲಿಯೇ ಇರುವ ಪ್ರೀತಿಯಿಂದ (ಭಜತಾಂ) ಭಜನೆ ಮಾಡುವಂಥ (ತೇಷಾಂ) ಅವರಿಗೆ (ತೇ) ಅವರು (ಯೇನ) ಯಾವದರಿಂದ (ಮಾಂ) ಪರಮೇಶ್ವರನಾದ ನನ್ನನ್ನು ತಮ್ಮ ಆತ್ಮನನ್ನಾಗಿ (ಉಪಯಾಂತಿ) ಪಡೆಯುತ್ತಾರೊ (ತಂ) ಅಂಥ (ಬುದ್ಧಿಯೋಗಂ) ನನ್ನ ಸ್ವರೂಪಜ್ಞಾನದ ಪ್ರಾಪ್ತಿಯನ್ನು (ದದಾಮಿ) ಕೊಡುತ್ತೇನೆ

ಹೇಗೆ ಕೊಡುತ್ತೇನೆಂದರೆ,—

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

(ತೇಷಾಂ) ಆ ಉಪಾಸಕರ ಮೇಲಿನ (ಅನುಕಂಪಾರ್ಥಮೇವ) ಕನಿಕರದಿಂದಲೆ ಎಂದರೆ ಪಾಪ! ಅವರು ಉಧ್ಧಾರವಾಗಲೆಂಬ ದಯೆಯಿಂದ (ಅಹಂ) ನಾನು (ಭಾಸ್ವತಾ) ಯಾವಾಗಲೂ ನನ್ನಲ್ಲಿ ಮನಸ್ಸಿಟ್ಟದ್ದರ ಫಲವಾಗಿ ಹೊಳೆಯುವಂಥ (ಜ್ಞಾನದೀಪೇನ) ನನ್ನ ನಿಜ ಸ್ವರೂಪಜ್ಞಾನವೆಂಬ ದೀಪದ ರೂಪವಾಗಿ (ಆತ್ಮಭಾವಸ್ಥಃ) ಅವರ ಮನಸ್ಸಿನಲ್ಲಿರುವವನಾಗಿ (ಅಜ್ಞಾನಜಂ) ಅವಿವೇಕದಿಂದುಂಟಾಗಿದ್ದಂಥ (ತಮಃ) ದೇಹವೇ ನಾನೆಂಬ ಮುಂತಾಧ ತಪ್ಪುತಿಳಿವಳಿಕೆಯ ರೂಪವಾದ ಕತ್ತಲೆಯನ್ನು (ನಾಶಯಾಮಿ) ಹೋಗಲಾಡಿಸುತ್ತೇನೆ

ಇಷ್ಟೆಲ್ಲ ವಿಸ್ತಾರವನ್ನೂ ಸಾಮರ್ಥ್ಯವನ್ನೂ ತಿಳಿದ ಮೇಲೆ,

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು .—

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨ ॥**

**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ ೧೩ ॥**

(ಭವಾನ್) ನೀನು (ಪರಂ) ಚತುರ್ಮುಖಬ್ರಹ್ಮನಿಗಿಂತ ಮೇಲಿನ (ಬ್ರಹ್ಮ) ಸರ್ವಕಾರಣವಾದ ಬ್ರಹ್ಮವು (ಪರಂ) ಸರ್ವೋತ್ಕೃಷ್ಟವಾದ (ಧಾಮ) ತೇಜವು ಅಥವಾ ವೈಕುಂಠ, ಕೈಲಾಸ–ಮೊದಲಾದೆಲ್ಲಕ್ಕಿಂತ ಹೆಚ್ಚಿನ ಸ್ಥಾನವು (ಪರಮಂ) ಬಹಳ ಹೆಚ್ಚಿನ (ಪವಿತ್ರಂ) ಪಾವನವಾದ ವಸ್ತು ಗಂಗಾ ಮೊದಲಾದ ತೀರ್ಥಗಳು ಅದುವರೆಗಿನ ಪಾಪಗಳನ್ನು ಹೋಗಲಾಡಿಸಿದರೂ ಮುಂದೆ ಪಾಪವನ್ನು ಮಾಡದಂತೆ ಮಾಡಲಾರವು ಇದಲ್ಲದೆ ಅವು ಪುಣ್ಯದ ಫಲವಾದ ಹುಟ್ಟುಸಾವುಗಳನ್ನಂತೂ ತಪ್ಪಿಸಲೇ ಆರವು. ನೀನು ಹಿಂದೆ ಮಾಡಿದ ಪುಣ್ಯಪಾಪಗಳನ್ನೆಲ್ಲ ಕಳೆಯುವದಲ್ಲದೆ ಆತ್ಮನು ಕರ್ತನಲ್ಲವೆಂಬ ಬುದ್ಧಿಯನ್ನು ಕೊಡುವದರ ಮೂಲಕ ಅವನಿಗೆ ಮುಂದಿನ ಪಾಪಪುಣ್ಯಗಳ ಸಂಬಂಧವೂ ಇಲ್ಲದಂತೆ ಮಾಡುವೆಯಾದ್ದರಿಂದ ಜಗತ್ತಿನಲ್ಲಿ ನಿನ್ನ ಪಾವನತ್ವಕ್ಕೆ ಸಮಾನವಿಲ್ಲ (ತ್ವಾಂ) ನಿನ್ನನ್ನು (ಪುರುಷಂ) ಜಗತ್ತಿಗೆಲ್ಲ ಮೂಲಕಾರಣವಾದ ಪರಬ್ರಹ್ಮವೆಂದೂ (ಶಾಶ್ವತಂ) ಎಲ್ಲ ಕಾಲದಲ್ಲಿಯೂ ಒಂದೇ ಬಗೆಯಾಗಿರುವನೆಂದೂ (ದಿವ್ಯಂ) ಸ್ವಪ್ರಕಾಶ ಸ್ವರೂಪನೆಂದೂ (ಆದಿದೇವಂ) ದೇವತೆಗಳಿಗೆಲ್ಲ ಮೊದಲನೆ ದೇವನೆಂದೂ (ಅಜಂ) ಹುಟ್ಟುವಿಕೆಯಿಲ್ಲದವನೆಂದೂ (ವಿಭುಂ) ಸರ್ವವ್ಯಾಪಕನೆಂದೂ (ಸರ್ವೇ) ಭೃಗು ಮೊದಲಾದ ಎಲ್ಲ (ಋಷಯಃ) ಋಷಿಗಳೂ (ದೇವರ್ಷಿಃ) ದೇವತೆಗಳಲ್ಲಿ ಋಷಿಗಳಾದ (ನಾರದಃ) ನಾರದರೂ (ತಥಾ) ಹಾಗೆಯೇ (ಅಸಿತಃ) ಅಸಿತನೆಂಬುವನೂ (ದೇವಲಃ) ದೇವಲನೆಂಬುವನೂ (ವ್ಯಾಸಃ) ವ್ಯಾಸರೂ (ಆಹುಃ) ಹೇಳುವರು, (ಸ್ವಯಂ ಚೈವ) ನೀನು ಕೂಡ (ಮೇ) ನನಗೆ (ಬ್ರವೀಷಿ) ಹೇಳುತ್ತಿ

ಆದ್ದರಿಂದಲೆ,—

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪ ॥**

(ಕೇಶವ) ಕೃಷ್ಣನೆ, ಕೇಳು (ಮಾಂ) ನನ್ನನ್ನು ಕುರಿತು (ಯತ್) ಯಾವ ವಿಷಯವನ್ನು (ವದಸಿ) ಹೇಳುತ್ತೀಯೊ (ಏತತ್) ಈ ಮೇಲೆ ಹೇಳಿದಂಥ (ಸರ್ವಂ) ಎಲ್ಲವೂ (ಋತಂ) ನಿಜವೆಂದು (ಮನ್ಯೇ) ತಿಳಿಯು ತ್ತೇನೆ (ಹಿ) ಆದ್ದರಿಂದಲೆ (ಭಗವನ್) ಹೇ ಕೃಷ್ಣ, (ತೇ) ನಿನ್ನ (ವ್ಯಕ್ತಿಂ) ಪ್ರಭಾವವನ್ನು (ದೇವಾಃ) ದೇವತೆಗಳು (ನ ವಿದುಃ) ತಿಳಿಯರು, (ದಾನವಾಃ) ರಾಕ್ಷಸರು (ನ) ತಿಳಿಯರು ಇನ್ನು ಮನುಷ್ಯರ ಪಾಡೇನು ?

ಆದ್ದರಿಂದ —

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥**

(ಪುರುಷೋತ್ತಮ) ಪುರುಷರಿಗೆಲ್ಲ ಶ್ರೇಷ್ಠನಾದವನೆ, (ಭೂತಭಾವನ) ಚರಾಚರಪ್ರಪಂಚವನ್ನು ಹುಟ್ಟಿಸುವವನೆ, (ಭೂತೇಶ) ಜಗತ್ತಿನ ಮೇಲೆಲ್ಲ ನಿನ್ನ ಆಜ್ಞೆಯನ್ನು ನಡೆಸುವವನೆ, (ದೇವದೇವ) ದೇವತೆಗಳಿಗೆಲ್ಲ ದೇವ ನಾದವನೆ (ಜಗತ್ಪತೇ) ಜಗತ್ತಿಗೆಲ್ಲ ರಕ್ಷಕನಾಗಿರುವವನೆ (ತ್ವಂ) ನೀನು (ಆತ್ಮಾನಂ) ನಿನ್ನ ಸ್ವರೂಪವನ್ನು (ಆತ್ಮನಾ) ನಿನ್ನಿಂದಲೆ (ಸ್ವಯಮೇವ) ನೀನಾಗಿಯೇ (ವೇತ್ಥ) ತಿಳಿದುಕೊಂಡಿದ್ದಿ

ನಾನು ಈಗ ಕೇಳುವದೇನೆಂದರೆ —

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬ ॥**

(ತ್ವಂ) ನೀನು (ಇಮಾನ್) ಈ (ಲೋಕಾನ್) ಲೋಕಗಳನ್ನು (ಯಾಭಿಃ) ಯಾವ (ವಿಭೂತಿಭಿಃ) ಮಹಿಮಾವಿಶೇಷವುಳ್ಳ ವಸ್ತುಸಮು ದಾಯಗಳಿಂದ (ವ್ಯಾಪ್ಯ) ವ್ಯಾಪಿಸಿಕೊಂಡು (ತಿಷ್ಠಸಿ) ಇರುವೆಯೋ ಅಂಥ (ದಿವ್ಯಾ ಹಿ) ತೇಜೋವಿಶೇಷದಿಂದ ಕೂಡಿರುವಂಥ (ಆತ್ಮವಿಭೂತಯಃ) ನಿನ್ನ ಮಹಿಮಾವಿಶೇಷವುಳ್ಳ ವಸ್ತುಸಮುದಾಯಗಳನ್ನು (ಅಶೇಷೇಣ) ಒಂದೂ ಬಿಡದೆ (ವಕ್ತುಂ ಅರ್ಹಸಿ) ಹೇಳಬೇಕು

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥ ೧೭ ॥**

(ಯೋಗಿನ್) ಸರ್ವಸಮರ್ಥನಾದ ಕೃಷ್ಣನೆ, ಕೇಳು (ಅಹಂ) ಸ್ಥೂಲಬುದ್ಧಿಯುಳ್ಳ ಅರ್ಜುನನಾದ ನಾನು (ತ್ವಾಂ) ಮಹಾಮಹಿಮನಾದ ನಿನ್ನನ್ನು (ಸದಾ) ಯಾವಾಗಲೂ (ಪರಿಚಿಂತಯನ್) ಧ್ಯಾನಿಸುತ್ತ (ಕಥಂ) ಹೇಗೆ (ವಿದ್ಯಾಂ) ತಿಳಿದೇನು? (ಭಗವನ್) ಶ್ರೀಕೃಷ್ಣನೆ, ಕೇಳು (ಕೇಷು ಕೇಷು ಚ) ಯಾವ ಯಾವ (ಭಾವೇಷು) ವಸ್ತುಗಳಲ್ಲಿ (ಮಯಾ) ನನ್ನಿಂದ (ಚಿಂತ್ಯೋಽಸಿ) ಧ್ಯಾನಮಾಡತಕ್ಕದ್ದು?

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥**
**॥ ೧೮ ॥**

(ಜನಾರ್ದನ) ದೇವತೆಗಳ ಎದುರಾಳಿಗಳಾದ ಅಸುರರನ್ನೆಲ್ಲ ನರಕಕ್ಕೆ ನೂಕುವ ಅಥವಾ ಈ ಲೋಕದ ಅಥವಾ ಪರಲೋಕದ ಸುಖಕ್ಕಾಗಿ ಜನರಿಂದ ಬೇಡಿಸಿಕೊಳ್ಳುವ ಶ್ರೀಕೃಷ್ಣನೆ, ಕೇಳು ನಿನ್ನ ವಿಭೂತಿ ವಿಶೇಷಗಳ ವಿಷಯವನ್ನು ನೀನಾಗಿಯೇ ಮೊದಲೇ ಹೇಳಿರುವೆಯಾದರೂ (ಆತ್ಮನಃ) ನಿನ್ನ (ಯೋಗಂ) ಸಾಮರ್ಥ್ಯವಿಶೇಷವನ್ನೂ (ವಿಭೂತಿಂ ಚ) ಧ್ಯಾನಕ್ಕೆ ಯೋಗ್ಯವಾಗಿರುವ ಮಹಿಮಾವಿಶೇಷಗಳಿರುವ ವಸ್ತುಸಮುದಾಯವನ್ನೂ (ವಿಸ್ತರೇಣ) ವಿಸ್ತಾರವಾಗಿ (ಭೂಯಃ) ಮತ್ತೆ (ಕಥಯ) ಹೇಳು (ಹಿ) ಏಕೆಂದರೆ (ಅಮೃತಂ) ನಿನ್ನ ಬಾಯಿಂದ ಹೊರಡುವ ಅಮೃತದಂಥ ಮಾತನ್ನು (ಶೃಣ್ವತಃ) ಕೇಳುವ (ಮೇ) ನನಗೆ (ತೃಪ್ತಿಃ) ಸಾಕೆನಿಸುವದು (ನಾಸ್ತಿ) ಇಲ್ಲ

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು.—

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮ ವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯ ॥**

(ಕುರುಶ್ರೇಷ್ಠ) ಅರ್ಜುನನೆ, ಕೇಳು (ಹಂತ) ಈಗ (ತೇ) ನಿನಗೆ (ದಿವ್ಯಾ ಹಿ) ತೇಜೋವಿಶೇಷದಿಂದ ಕೂಡಿದಂಥ (ಆತ್ಮವಿಭೂತಯಃ) ನನ್ನ ಮಹಿಮಾವಿಶೇಷಗಳುಳ್ಳ ವಸ್ತುಸಮುದಾಯಗಳನ್ನು (ಪ್ರಾಧಾನ್ಯತಃ) ಮುಖ್ಯಮುಖ್ಯವಾದವುಗಳನ್ನು ಆರಿಸಿ (ಕಥಯಿಷ್ಯಾಮಿ) ಹೇಳುತ್ತೇನೆ. ಎಲ್ಲವನ್ನೂ ಏಕೆ ಹೇಳುವದಿಲ್ಲವೆಂದರೆ (ಮೇ) ನನ್ನ (ವಿಸ್ತರಸ್ಯ) ಮಹಿಮಾ ವಿಶೇಷವುಳ್ಳ ಪದಾರ್ಥಗಳಿಗೆ (ಅಂತಃ) ಕೊನೆಯೆಂಬುವದು (ನಾಸ್ತಿ) ಇಲ್ಲ.

ಮೊದಲು ಮುಖ್ಯವಾಗಿ ತಿಳಿದಿರಬೇಕಾದದ್ದೇನೆಂದರೆ .—

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥ ೨೦ ॥**

(ಗುಡಾಕೇಶ) ತಮೋಗುಣದ ನಿದ್ರೆಯನ್ನು ಗೆದ್ದಿರುವ ಅರ್ಜುನನೆ, ಕೇಳು. (ಅಹಂ) ನಾನು (ಸರ್ವಭೂತಾಷಯಸ್ಥಿತಃ) ಎಲ್ಲ ಪ್ರಾಣಿಗಳ ಹೃದಯದಲ್ಲಿ ಇರುವಂಥ (ಆತ್ಮಾ) ಚೈತನ್ಯರೂಪನಾದ ಆತ್ಮನು. ನನ್ನನ್ನು ಯಾವಾಗಲೂ ಹೀಗೆ ಧ್ಯಾನಕ್ಕೆ ತಂದುಕೊಳ್ಳಬೇಕು. ಈ ಭಾವನೆಯು ಮನಸ್ಸಿನಲ್ಲಿ ಅಳವಡದಿದ್ದರೆ ಮುಂದೆ ಹೇಳುವ ನನ್ನ ಮಹಿಮಾವಿಶೇಷವುಳ್ಳ ಬೇರೆ ಬೇರೆ ವಸ್ತುಗಳನ್ನು ಅವಲಂಬಿಸಬಹುದು ಏಕೆಂದರೆ (ಭೂತಾನಾಂ) ಎಲ್ಲ ಪ್ರಾಣಿಗಳಿಗೂ (ಆದಿಶ್ಚ) ಮೊದಲೂ (ಮಧ್ಯಂ ಚ) ನಡುವೆಯೂ (ಅಂತಶ್ಚ) ಕೊನೆಯೂ (ಅಹಮೇವ) ನಾನೆ.

ಮಹಿಮಾವಿಶೇಷಗಳುಳ್ಳ ಬೇರೆ ಬೇರ ಯಾವ ವಸ್ತುಗಳನ್ನು ಧ್ಯಾನಕ್ಕೆ ತೆಗೆದುಕೊಳ್ಳಬಹುದೆಂದರೆ —

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥**

(ಆದಿತ್ಯಾನಾಂ) ಹನ್ನೆರಡು ಜನ ಆದಿತ್ಯರಲ್ಲಿ (ವಿಷ್ಣುಃ) ವಿಷ್ಣುವೆಂಬ ಆದಿತ್ಯನು (ಅಹಂ) ನಾನು. (ಜ್ಯೋತಿಷಾಂ) ಬೆಳಗುತ್ತಿರುವ ವಸ್ತು ಗಳಲ್ಲೆಲ್ಲ (ಅಂಶುಮಾನ್) ಚೆನ್ನಾಗಿ ಬೆಳಗುವ ಕಿರಣಗಳುಳ್ಳ (ರವಿಃ)

ಸೂರ್ಯನು ನಾನು (ಮರುತಾಂ) ಮರುತ್ತೆಂಬ ನಲವತ್ತೊಂಬತ್ತು ದೇವತಾ ವಿಶೇಷಗಳ ನಡುವೆ (ಮರೀಚಿರಸ್ಮಿ) ಮರೀಚಿಯೆಂಬ ಮರುತ್ತಾಗಿದ್ದೇನೆ. (ನಕ್ಷತ್ರಾಣಾಂ) ಅಶ್ವಿನೀ ಮೊದಲಾದ ನಕ್ಷತ್ರಗಳಲ್ಲಿ (ಶಶೀ) ಚಂದ್ರನು (ಅಹಂ) ನಾನು

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥**

(ವೇದಾನಾಂ) ನಾಲ್ಕು ವೇದಗಳಲ್ಲಿ (ಸಾಮವೇದೋಽಸ್ಮಿ) ಗಾನ ರೂಪವಾದ ಸಾಮವೇದವಾಗಿದ್ದೇನೆ (ದೇವಾನಾಂ) ದೇವತೆಗಳಲ್ಲಿ (ವಾಸವಃ ಅಸ್ಮಿ) ಅವರಿಗೆಲ್ಲ ಅಧಿಪತಿಯಾದ ಇಂದ್ರನಾಗಿರುವೆನು (ಇಂದ್ರಿಯಾಣಾಂ) ಕಣ್ಣು, ಕಿವಿ–ಮೊದಲಾದ ಇಂದ್ರಿಯಗಳಲ್ಲಿ (ಮನಶ್ಚಾಸ್ಮಿ) ಅವುಗಳನ್ನೆಲ್ಲ ಕೆಲಸದಲ್ಲಿ ತೊಡಗಿಸುವ ಮನಸ್ಸಾಗಿದ್ದೇನೆ (ಭೂತಾನಾಂ) ದೇಹೇಂದ್ರಿಯಗಳಿಂದ ಕೂಡಿದ ಪ್ರಾಣಿಗಳಲ್ಲಿ (ಚೇತನಾ ಅಸ್ಮಿ) ಯಾವಾಗಲೂ ತೋರಿಕೊಳ್ಳುವ ಬುದ್ಧಿವೃತ್ತಿಯಾಗಿದ್ದೇನೆ

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥ ೨೩ ॥**

(ರುದ್ರಾಣಾಂ) ಹನ್ನೊಂದು ಜನ ರುದ್ರರಲ್ಲಿ (ಶಂಕರಶ್ಚಾಸ್ಮಿ) ಭಕ್ತರಿಗೆ ಮೋಕ್ಷವನ್ನು ಕೊಡುವ ಶಂಕರನೆಂಬ ರುದ್ರನಾಗಿರುವೆನು (ಯಕ್ಷ ರಕ್ಷಸಾಂ) ಯಕ್ಷರಲ್ಲಿ ಮತ್ತು ರಾಕ್ಷಸರಲ್ಲಿ (ವಿತ್ತೇಶಃ) ಧನಾಧಿಪತಿಯಾದ ಕುಬೇರನು ನಾನು (ವಸೂನಾಂ) ಎಂಟು ಜನ ವಸುಗಳ ನಡುವೆ (ಪಾಪಕಶ್ಚಾಸ್ಮಿ) ಅಗ್ನಿಯು ನಾನಾಗಿರುವೆನು. (ಶಿಖರಿಣಾಂ) ರತ್ನಮಯ ವಾದ ಶಿಖರಗಳುಳ್ಳ ಪರ್ವತಗಳ ನಡುವೆ (ಮೇರುಃ) ಬಂಗಾರದ ಬೆಟ್ಟ ವಾದ ಮೇರುಪರ್ವತವು (ಅಹಂ) ನಾನು.

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ ೨೪ ॥**

(ಪಾರ್ಥ) ಅರ್ಜುನನೆ, ಕೇಳು (ಪುರೋಧಸಾಂ ಚ) ರಾಜ ಪುರೋಹಿತರುಗಳಲ್ಲೆಲ್ಲ (ಮುಖ್ಯಂ) ಶ್ರೇಷ್ಠನಾದ (ಬೃಹಸ್ಪತಿಂ) ದೇವ ಪುರೋಹಿತನಾದ ಬೃಹಸ್ಪತಿಯನ್ನು (ಮಾಂ) ನನ್ನನ್ನಾಗಿ (ವಿದ್ಧಿ) ತಿಳಿ. (ಸೇನಾನೀನಾಂ) ಸೇನಾಪತಿಗಳಲ್ಲೆಲ್ಲ (ಸ್ಕಂದಃ) ದೇವಸೇನಾಪತಿಯಾದ ಕುಮಾರಸ್ವಾಮಿಯು (ಅಹಂ) ನಾನು (ಸರಸಾಂ) ದೇವತೆಗಳು ತೋಡಿದ ಜಲಾಶಯಗಳಲ್ಲೆಲ್ಲ (ಸಾಗರಃ ಅಸ್ಮಿ) ನಾನು ಸಗರನ ಮಕ್ಕಳು ತೋಡಿದಂಥ ಸಾಗರವು

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ॥ ೨೫ ॥**

(ಮಹರ್ಷೀಣಾಂ) ಬ್ರಹ್ಮನ ಮಕ್ಕಳಾದ ಮಹರ್ಷಿಗಳಲ್ಲಿ (ಭೃಗುಃ) ಭೃಗುವೆಂಬ ಮಹರ್ಷಿಯು (ಅಹಂ) ನಾನು (ಗಿರಾಂ) ಮಾತುಗಳಲ್ಲೆಲ್ಲ (ಏಕಂ ಅಕ್ಷರಂ) ಎಲ್ಲ ಮಾತುಗಳನ್ನೂ ಅಡಕಗೊಂಡಿರುವ ಓಂ ಎಂಬ ಒಂದಕ್ಷರದ ಮಾತಾಗಿ (ಅಸ್ಮಿ) ಇದ್ದೇನೆ (ಯಜ್ಞಾನಾಂ) ಅಶ್ವಮೇಧ ಮೊದಲಾದ ಯಜ್ಞಗಳಲ್ಲಿ (ಜಪಯಜ್ಞಃ ಅಸ್ಮಿ) ಯಾವ ಹಿಂಸೆಯೂ ಇಲ್ಲದಿರುವಂಥ ಜಪರೂಪವಾದ ಯಜ್ಞವಾಗಿದ್ದೇನೆ (ಸ್ಥಾವರಾಣಾಂ) ಅಲ್ಲಾಡದೆ ನಿಂತಿರುವ ವಸ್ತುಗಳಲ್ಲಿ (ಹಿಮಾಲಯಃ) ಹಿಮಾಲಯವೆಂಬ ಪರ್ವತವಾಗಿದ್ದೇನೆ

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥**

(ಸರ್ವವೃಕ್ಷಾಣಾಂ) ಮರಗಳೊಳಗೆಲ್ಲ (ಅಶ್ವತ್ಥಃ) ಅರಳೀಮರ ವಾಗಿರುವೆನು. (ದೇವರ್ಷೀಣಾಂ ಚ) ದೇವತೆಗಳೂ ಆಗಿದ್ದು ಋಷಿಗಳೂ ಆಗಿರುವವರಲ್ಲಿ (ನಾರದಃ) ನಾರದನಾಗಿರುವೆನು. (ಗಂಧರ್ವಾಣಾಂ) ಗಾಯಕರಾದ ಗಂಧರ್ವರ ನಡುವೆ (ಚಿತ್ರರಥಃ) ಚಿತ್ರರಥನೆಂಬುವನಾಗಿ

ಇರುವೆನು (ಸಿದ್ಧಾನಾಂ) ಹುಟ್ಟುವಾಗಿನಿಂದಲೆ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ–ಮೊದಲಾದವುಗಳನ್ನು ಪಡೆದಿರುವವರಲ್ಲಿ (ಕಪಿಲಃ) ಕಪಿಲನೆಂಬ (ಮುನಿಃ) ಮುನಿಯಾಗಿರುವೆನು

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥ ೨೭ ॥**

(ಅಶ್ವಾನಾಂ) ಕುದುರೆಗಳಲ್ಲೆಲ್ಲ (ಅಮೃತೋದ್ಭವಂ) ಅಮೃತಕ್ಕಾಗಿ ದೇವತೆಗಳೂ ರಾಕ್ಷಸರೂ ಕ್ಷೀರಸಮುದ್ರವನ್ನು ಕಡೆದಾಗ ಹುಟ್ಟಿದ (ಉಚ್ಚೈಃಶ್ರವಸಂ) ಉಚ್ಚೈಃಶ್ರವಾ ಎಂಬ ಕುದುರೆಯನ್ನು (ಮಾಂ) ನನ್ನನ್ನಾಗಿ (ವಿದ್ಧಿ) ತಿಳಿ (ಗಜೇಂದ್ರಾಣಾಂ) ಒಳ್ಳೆ ಆನೆಗಳಲ್ಲೆಲ್ಲ (ಐರಾವತಂ) ಐರಾವತವೆಂಬ ಇಂದ್ರನ ಬಿಳೀ ಆನೆಯು ನಾನು (ನರಾಣಾಂ ಚ) ಮನುಷ್ಯರಲ್ಲೆಲ್ಲ (ನರಾಧಿಪಂ) ಧರ್ಮವನ್ನು ಹಿಡಿಯುವಂತೆಯೂ ಅಧರ್ಮವನ್ನು ಬಿಡುವಂತೆಯೂ ಮಾಡುವ ರಾಜನು ನಾನು

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥**

(ಆಯುಧಾನಾಂ) ಆಯುಧಗಳಲ್ಲೆಲ್ಲ (ವಜ್ರಂ) ದಧೀಚಿಋಷಿಗಳ ಮೂಳೆಯಿಂದ ಆಗಿರುವ ವಜ್ರಾಯುಧವು (ಅಹಂ) ನಾನು (ಧೇನೂನಾಂ) ಬೇಕಾದಷ್ಟು ಹಾಲು ಕೊಡುವ ಆಕಳುಗಳಲ್ಲೆಲ್ಲ (ಕಾಮಧುಕ್ ಅಸ್ಮಿ) ಕೇಳಿದ್ದನ್ನೆಲ್ಲ ಕೊಡುವಂಥದ್ದಾಗಿ ವಸಿಷ್ಠರ ಬಳಿಯಲ್ಲಿರುವ ಕಾಮಧೇನು ನಾನಾಗಿರುವೆನು. (ಪ್ರಜನಶ್ಚ) ಸಂತತಿಯನ್ನುಂಟುಮಾಡುವಂಥ (ಕಂದರ್ಪಃ ಅಸ್ಮಿ) ಕಾಮವು ನಾನಾಗಿದ್ದೇನೆ (ಸರ್ಪಾಣಾಂ) ವಿಷವುಳ್ಳ ಹಾವುಗಳಲ್ಲೆಲ್ಲ (ವಾಸುಕಿಃ ಅಸ್ಮಿ) ಅವುಗಳಿಗೆ ರಾಜನಾದ ವಾಸುಕಿಯಾಗಿರುವೆನು

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥೨೯॥**

(ನಾಗಾನಾಂ) ವಿಷವಿಲ್ಲದ ಹಾವುಗಳಲ್ಲೆಲ್ಲ (ಅನಂತಶ್ಚಾಸ್ಮಿ) ಅವುಗಳಿಗೆ ರಾಜನಾದ ಅನಂತನಾಗಿರವೆನು (ಯಾದಸಾಂ) ನೀರಿನಲ್ಲಿರುವ ಪ್ರಾಣಿಗಳಲ್ಲೆಲ್ಲ (ವರುಣಃ) ಅವರಿಗೆ ರಾಜನಾದ ವರುಣನು (ಅಹಂ) ನಾನು (ಪಿತೄಣಾಂ) ಪಿತೃದೇವತೆಗಳಲ್ಲೆಲ್ಲ (ಆರ್ಯಮಾ ಚ ಅಸ್ಮಿ) ಅವರಿಗೆ ರಾಜನಾದ ಆರ್ಯಮನೆಂಬುವನಾಗಿರವೆನು (ಸಂಯಮತಾಂ) ನಿಯಮನಮಾಡುವವರಲ್ಲಿ (ಯಮಃ) ಧರ್ಮದ ಫಲವಾದ ಸುಖವನ್ನೂ ಅಧರ್ಮದ ಫಲವಾದ ದುಃಖವನ್ನೂ ಸೆರಗಿಗೆ ಗಂಟುಹಾಕುವ ಯಮನು (ಅಹಂ) ನಾನು.

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್॥೩೦॥**

(ದೈತ್ಯಾನಾಂ) ದಿತಿಯ ವಂಶದವರಲ್ಲೆಲ್ಲ (ಪ್ರಹ್ಲಾದಶ್ಚಾಸ್ಮಿ) ಸಾತ್ತ್ವಿಕ ಸ್ವಭಾವದಿಂದ ಎಲ್ಲರಿಗೂ ಆನಂದವನ್ನು ಕೊಡುವ ಪ್ರಹ್ಲಾದ ನಾಗಿದ್ದೇನೆ (ಕಲಯತಾಂ) ಲೆಕ್ಕವನ್ನು ಮಾಡುವವರಲ್ಲಿ (ಕಾಲಃ) ಕಾಲಪುರಷನು (ಅಹಂ) ನಾನು (ಮೃಗಾಣಾಂ ಚ) ಮೃಗಗಳೊ ಳಗೆಲ್ಲ (ಮೃಗೇಂದ್ರಃ) ಅವುಗಳಿಗೆ ರಾಜನಾದ ಸಿಂಹವು (ಅಹಂ) ನಾನು. (ಪಕ್ಷಿಣಾಂ) ಹಕ್ಕಿಗಳೊಳಗೆಲ್ಲ (ವೈನತೇಯಶ್ಚ) ವಿನತೆಯ ಮಗನಾದ ಗರುಡನಾಗಿರುವೆನು.

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧ ॥**

(ಪವತಾಂ) ವೇಗವುಳ್ಳವುಗಳಲ್ಲಿ ಅಥವಾ ಶುದ್ಧಿಕರವಾದ ವಸ್ತು ಗಳಲ್ಲಿ (ಪವನಃ ಅಸ್ಮಿ) ವಾಯುವಾಗಿರುವೆನು. (ಶಸ್ತ್ರಭೃತಾಮ್) ಶಸ್ತ್ರವನ್ನು ಹಿಡಿದು ಯುದ್ಧವನ್ನು ಮಾಡುವವರಲ್ಲಿ (ರಾಮಃ) ಅನೇಕ ರಾಕ್ಷಸರನ್ನು ಸಂಹಾರಮಾಡಿದ ದಾಶರಥಿರಾಮನು (ಅಹಂ) ನಾನು. (ಝಷಾಣಾಂ) ಮೀನುಗಳಲ್ಲಿ (ಮಕರಶ್ಚ ಅಸ್ಮಿ) ಮೊಸಳೆಯ ಜಾತಿ

ಯಾಗಿದ್ದೇನೆ. (ಸ್ರೋತಸಾಂ) ಹರಿಯುವ ನೀರುಗಳಲ್ಲಿ (ಜಾಹ್ನವೀ ಅಸ್ಮಿ) ಗಂಗಾನದಿಯಾಗಿರುವೆನು

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨ ॥**

(ಅರ್ಜುನ) ಅರ್ಜುನನೆ, ಕೇಳು ಎಲ್ಲ ಪ್ರಾಣಿಗಳ ಮೊದಲೂ ನಡುವೆಯೂ ಕೊನೆಯೂ ನಾನೆ ಎಂದು ಮೊದಲೆ ಹೇಳಿದೇನಷ್ಟೆ. (೨೦) (ಸರ್ಗಾಣಾಂ) ಎಲ್ಲ ಸೃಷ್ಟಿಗಳ (ಆದಿಃ) ಮೊದಲೂ (ಅಂತಶ್ಚ) ಕೊನೆಯೂ (ಮಧ್ಯಂ ಚೈವ) ನಡುವೆಯೂ (ಅಹಂ) ನಾನು (ವಿದ್ಯಾನಾಂ) ತಿಳಿವಳಿಕೆಯನ್ನುಂಟುಮಾಡುವ ವಿದ್ಯೆಗಳಲ್ಲೆಲ್ಲ (ಅಧ್ಯಾತ್ಮವಿದ್ಯಾ) ಮೋಕ್ಷವನ್ನು ಕೊಡತಕ್ಕಂಥ ಆತ್ಮವಿದ್ಯೆಯು ನಾನು (ಪ್ರವದತಾಂ) ವಾದವನ್ನು ಮಾಡುವವರಲ್ಲಿ (ವಾದಃ) ಒಬ್ಬರನ್ನೊಬ್ಬರು ಗೆಲ್ಲುವದಕ್ಕಲ್ಲದೆ ನಿಜವನ್ನರಿಯುವದಕ್ಕೆ ಮಾಡುವ ಉತ್ತರಪ್ರತ್ಯುತ್ತರವು (ಅಹಂ) ನಾನು

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥ ೩೩ ॥**

(ಅಕ್ಷರಾಣಾಂ) ಅಕ್ಷರಗಳಲ್ಲಿ (ಅಕಾರಃ ಅಸ್ಮಿ) ಎಲ್ಲ ಅಕ್ಷರಗಳ ಸ್ವರೂಪದಲ್ಲಿಯೂ ಕೂಡಿಕೊಂಡಿರುವ ಅಕಾರವಾಗಿದ್ದೇನೆ (ಸಾಮಾಸಿಕಸ್ಯ ಚ) ಸಮಾಸಗಳಲ್ಲೆಲ್ಲ (ದ್ವಂದ್ವಃ) ಎರಡು ಪದಾರ್ಥಗಳಿಗೂ ಪ್ರಾಧಾನ್ಯವಿರುವ ದ್ವಂದ್ವ ಸಮಾಸವಾಗಿದ್ದೇನೆ (ಅಕ್ಷಯಃ) ಎಂದಿಗೂ ನಾಶವಾಗದೆ ಇರುವ (ಕಾಲಃ) ಕಾಲವು (ಅಹಮೇವ) ನಾನೆ (ವಿಶ್ವತೋಮುಖಃ) ನಾಲ್ಕು ಕಡೆಗೂ ಮುಖಗಳುಳ್ಳ (ಧಾತಾ) ಎಲ್ಲರ ಕರ್ಮ ಫಲಗಳನ್ನೂ ಹಂಚುವ ಬ್ರಹ್ಮನು (ಅಹಂ) ನಾನು

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥**
**॥ ೩೪ ॥**

(ಸರ್ವಹರಶ್ಚ) ಬರೀ ಧನಾದಿಗಳನ್ನು ಮಾತ್ರವೇ ಅಲ್ಲದೆ ಎಲ್ಲವನ್ನೂ ಕಸಿದುಕೊಂಡ ಹಾಗೆ ಆಗುವ (ಮೃತ್ಯುಃ) ಪ್ರಾಣಾಪಹಾರಕನು (ಅಹಂ) ನಾನು ಅಥವಾ ಪ್ರಲಯಕಾಲದಲ್ಲಿ ಸಮಸ್ತ ಜಗತ್ತನ್ನೂ ನುಂಗಿ ನೀರು ಕುಡಿಯುವ ಮೃತ್ಯು ನಾನು (ಭವಿಷ್ಯತಾಂ) ಮುಂದೆ ಏಳಿಗೆಗೆ ಬರುವವರಲ್ಲಿ (ಉದ್ಭವಶ್ಚ) ಏಳಿಗೆಯ ರೂಪಾಗಿರುವೆನು (ನಾರೀಣಾಂ) ಸ್ತ್ರೀಯರಲ್ಲಿ (ಕೀರ್ತಿಃ) ಧರ್ಮಮೂಲಕವಾದ ಒಳ್ಳೆಯ ಹೆಸರು, (ಶ್ರೀಃ) ಶರೀರದ ಕಾಂತಿ ಅಥವಾ ಧರ್ಮಾರ್ಥಕಾಮಗಳು, (ವಾಕ್ಚ) ಅರ್ಥವನ್ನು ಕೊಡುವ ಮಾತು, (ಸ್ಮೃತಿಃ) ನೆನಪು, (ಮೇಧಾ) ಅರ್ಥವನ್ನು ತಿಳಿಯುವ ಶಕ್ತಿ, (ಧೃತಿಃ) ಎಂಥ ಕಷ್ಟ ಬಂದರೂ ತಡೆದುಕೊಳ್ಳುವ ಶಕ್ತಿ ಅಥವಾ ಇಂದ್ರಿಯಗಳನ್ನು ಬಿಗಿ ಹಿಡಿಯುವ ಶಕ್ತಿ, (ಕ್ಷಮಾ) ಹರ್ಷ ವಿಷಾದಗಳಲ್ಲಿ ಮನಸ್ಸು ಉಬ್ಬರ ವಿಳಿತಗಳನ್ನು ಪಡೆಯದಿರುವದು–ಇವುಗಳು ನಾನು.

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥**
**॥ ೩೫ ॥**

(ತಥಾ) ಹಾಗೆಯೇ (ಸಾಮ್ನಾಂ) ಗಾಯನರೂಪವಾದ ಸಾಮಗಳಲ್ಲಿ (ಬೃಹತ್ಸಾಮ) ಸರ್ವಕ್ಕೂ ಈಶ್ವರನೆಂದು ಇಂದ್ರನನ್ನು ಸ್ತುತಿಸುವಂಥ ಬೃಹತ್ಸಾಮವೆಂಬುದು ನಾನು (ಛಂದಸಾಂ) ಅಕ್ಷರಗಳಿಗೂ ಪಾದಗಳಿಗೂ ನಿಯಮವುಳ್ಳವುಗಳಲ್ಲಿ (ಗಾಯತ್ರೀ) ದ್ವಿಜತ್ವವನ್ನು ಸಾರ್ಥಕಪಡಿಸುವಂಥ ಇಪ್ಪತ್ತನಾಲ್ಕು ಅಕ್ಷರಗಳುಳ್ಳ ಗಾಯತ್ರಿಯು (ಅಹಂ) ನಾನು. (ಮಾಸಾನಾಂ) ತಿಂಗಳುಗಳಲ್ಲಿ (ಮಾರ್ಗಶೀರ್ಷಃ) ಚಳಿಯೂ ಸೆಕೆಯೂ ಸಮಪ್ರಮಾಣದಲ್ಲಿ ಆರೋಗ್ಯಕರವಾಗಿರುವ ಅಥವಾ ಹಿಂದೆ ವರ್ಷಾರಂಭದ ತಿಂಗಳಾಗಿದ್ದ ಮಾರ್ಗಶೀರ್ಷವು (ಅಹಂ) ನಾನು (ಋತೂನಾಂ) ಋತುಗಳಲ್ಲಿ (ಕುಸುಮಾಕರಃ) ಎಲ್ಲರಿಗೂ ಹೃದಯಂಗಮವಾಗಿ ಸುಗಂಧಮಯವಾದ ಹೂಗಳಿಂದ ತುಂಬಿಯೂ ಯಜ್ಞಗಳಿಗೆ ತಕ್ಕ ಕಾಲವಾಗಿಯೂ ಇರುವ ವಸಂತಋತು ನಾನು.

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥೩೬॥**

(ಛಲಯತಾಂ) ಮೋಸಮಾಡುವವುಗಳಲ್ಲಿ (ದ್ಯೂತಂ ಅಸ್ಮಿ) ಎಲ್ಲವನ್ನೂ ಒಟ್ಟಿಗೆ ಮೋಸಮಾಡುವ ಜೂಜು ನಾನು (ತೇಜಸ್ವಿನಾಂ) ಎಲ್ಲರ ಮೇಲೆಯೂ ಆಜ್ಞೆಯನ್ನು ನಡೆಸುವವರಲ್ಲಿ (ತೇಜಃ) ಎದುರಿಲ್ಲದ ಆಜ್ಞೆಯು (ಅಹಂ) ನಾನು (ಜಯೋಽಸ್ಮಿ) ಗೆಲುವಿನ ರೂಪನಾಗಿದ್ದೇನೆ (ವ್ಯವಸಾಯೋಽಸ್ಮಿ) ಉದ್ಯೋಗದ ರೂಪನಾಗಿದ್ದೇನೆ (ಸತ್ತ್ವವತಾಂ) ಸಾತ್ತ್ವಿಕರಲ್ಲಿ (ಸತ್ತ್ವಂ) ಸತ್ತ್ವಗುಣವು (ಅಹಂ) ನಾನು

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ೩೭ ॥**

(ವೃಷ್ಣೀನಾಂ) ಯಾದವರಲ್ಲಿ (ವಾಸುದೇವೋಽಸ್ಮಿ) ವಾಸುದೇವನ ಮಗನಾದ ಕೃಷ್ಣನಾಗಿದ್ದೇನೆ (ಪಾಂಡವಾನಾಂ) ಪಾಂಡುರಾಯನ ಐವರು ಮಕ್ಕಳಲ್ಲಿ (ಧನಂಜಯಃ) ಸಮಸ್ತ ದಿಕ್ಕುಗಳಿಂದಲೂ ಧನವನ್ನು ಗೆದ್ದು ತಂದ ಧನಂಜಯನೆಂಬ ಹೆಸರುಳ್ಳ ನೀನಾಗಿದ್ದೇನೆ (ಮುನೀನಾಮಪಿ) ಪರಮಾತ್ಮನ ಚಿಂತನೆಯನ್ನೇ ಮಾಡುತ್ತಿರುವವರಲ್ಲಿ (ವ್ಯಾಸಃ) ವ್ಯಾಸನು (ಅಹಂ) ನಾನು (ಕವೀನಾಂ) ಸೂಕ್ಷ್ಮ ವಿಚಾರವನ್ನು ತಿಳಿಯುವವರಲ್ಲಿ (ಉಶನಾ) ಶುಕ್ರಾಚಾರ್ಯನೆಂಬ (ಕವಿಃ) ಸೂಕ್ಷ್ಮದರ್ಶಿಯು ನಾನು

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್॥೩೮॥**

(ದಮಯತಾಂ) ಬಗ್ಗಿ ನಡೆದುಕೊಳ್ಳುವಂತೆ ಮಾಡುವವರ ನಡುವೆ (ದಂಡಃ) ದಂಡೋಪಾಯವು ಎಂದರೆ ಹೊಡೆತವು (ಅಸ್ಮಿ) ಆಗಿದ್ದೇನೆ. (ಜಿಗೀಷತಾಂ) ಗೆಲ್ಲಬೇಕೆನ್ನುವವರಲ್ಲಿ (ನೀತಿರಸ್ಮಿ) ನ್ಯಾಯರೂಪನಾಗಿದ್ದೇನೆ. (ಗುಹ್ಯಾನಾಂ) ಗುಟ್ಟಾಗಿಡುವವುಗಳಲ್ಲಿ (ಮೌನಂ ಚೈವಾಸ್ಮಿ) ಮಾತಾಡ ದಿರುವಿಕೆಯೂ ಆಗಿದ್ದೇನೆ. ಅಥವಾ ನಿಧಿಧ್ಯಾಸನವಾಗಿದ್ದೇನೆ. (ಜ್ಞಾನ

ವತಾಂ) ಜ್ಞಾನವುಳ್ಳವರಲ್ಲಿ (ಜ್ಞಾನಂ) ಅಜ್ಞಾನಗಳನ್ನೆಲ್ಲ ಕಳೆಯುವ ಆತ್ಮಜ್ಞಾನವು (ಅಹಂ) ನಾನು

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥ ೩೯ ॥**

(ಅರ್ಜುನ) ಅರ್ಜುನನೆ, ಕೇಳು (ಸರ್ವಭೂತಾನಾಂ) ಎಲ್ಲ ಭೂತಗಳಿಗೂ (ಯಚ್ಚಾಪಿ) ಯಾವದು ಕಾರಣವೊ (ತತ್) ಆ (ಬೀಜಂ) ಮಾಯೋಪಾಧಿಯಿಂದ ಕೂಡಿದ ಚೈತನ್ಯವೆಂಬ ಬೀಜವು (ಅಹಂ) ನಾನು (ಮಯಾ) ನನ್ನಿಂದ (ವಿನಾ ಭೂತಂ) ಹೊರತಾದಂಥ (ಚರಾಚರಂ) ಚಲನೆಯುಳ್ಳ ಅಥವಾ ಚಲನೆಯಿಲ್ಲದ ವಸ್ತು (ಯತ್ ಸ್ಯಾತ್) ಯಾವುದುಂಟೋ (ತತ್) ಅದು (ನ ಅಸ್ತಿ) ಇಲ್ಲ ಎಂದರೆ ನನ್ನನ್ನು ಬಿಟ್ಟು ಯಾವ ವಸ್ತುವೂ ಇಲ್ಲ

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ॥೪೦॥**

(ಪರಂತಪ) ಅರ್ಜುನನೆ, ಕೇಳು (ಮಮ) ನನ್ನ (ದಿವ್ಯಾನಾಂ) ತೇಜೋವಿಶೇಷವುಳ್ಳಂಥ (ವಿಭೂತೀನಾಂ) ಮಾಹಾತ್ಮ್ಯವುಳ್ಳ ವಸ್ತುಗಳಿಗೆ (ಅಂತಃ) ಕೊನೆಯು (ನ ಅಸ್ತಿ) ಇಲ್ಲ (ವಿಭೂತೇಃ) ಮಹಿಮಾವಿಶೇಷವುಳ್ಳ ವಸ್ತುಗಳ (ವಿಸ್ತರಃ) ವಿಸ್ತಾರವಾದ (ಏಷ ತು) ಇದುವರೆಗೆ ಹೇಳಿದ್ದಾದರೊ (ಮಯಾ) ನನ್ನಿಂದ (ಉದ್ದೇಶತಃ) ಪ್ರಯತ್ನಪೂರ್ವಕವಾಗಿ ಸ್ಮರಣೆಗೆ ತಂದುಕೊಂಡು (ಪ್ರೋಕ್ತಃ) ಹೇಳಿದ್ದಾಗಿರುವದು

ಮಹಿಮಾವಿಶೇಷಗಳನ್ನು ಗುರ್ತಿಸುವ ಹೆದ್ದಾರಿ ಯಾವದೆಂದರೆ —

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್ ॥ ೪೧ ॥**

(ಯದ್ಯತ್) ಯಾವ ಯಾವ (ಸತ್ತ್ವಂ) ವಸ್ತು (ವಿಭೂತಿಮತ) ಐಶ್ವರ್ಯ ಮೊದಲಾದ ಹೆಚ್ಚುಗಾರಿಕೆಯಿಂದ ಕೂಡಿದೆಯೊ (ಶ್ರೀಮತ

ಕಾಂತಿಯಿಂದಾಗಲಿ ಸೌಂದರ್ಯದಿಂದಾಗಲಿ ಕೂಡಿದೆಯೊ (ಊರ್ಜಿತ ಮೇವ ವಾ) ಹೆಚ್ಚಿನ ಬಲದಿಂದ ಕೂಡಿದೆಯೊ (ತತ್ತದೇವ) ಅದನ್ನೇ (ಮಮ) ನನ್ನ (ತೇಜೋಽಂಶಸಂಭವಂ) ತೇಜಸ್ಸಿನ ಅಂಶದಿಂದ ಹುಟ್ಟಿದ್ದೆಂದು (ತ್ವಂ) ನೀನು (ಅವಗಚ್ಛ) ತಿಳಿ

ಈ ಬೇರೆ ಬೇರೆ ವಿಭೂತಿಗಳನ್ನು ತಿಳಿಯುವದಕ್ಕಿಂತ ಹೆಚ್ಚಿನದೇನೆಂದರೆ:—

**ಅಥವಾ ಬಹುನೈತೇನ ಕಿಂ ಜ್ಞಾನೇನ* ತವಾರ್ಜುನ ।**
**ವಿಷ್ಟಭ್ಯಾಹಮಿದಂ† ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨ ॥**

(ಅರ್ಜುನ) ಅರ್ಜುನನೆ, (ಅಥವಾ) ಇನ್ನೊಂದು ಬಗೆಯನ್ನು ಕೇಳು. (ಬಹುನಾ) ಅನೇಕವಾಗಿರುವ (ಏತೇನ) ಈ (ಜ್ಞಾನೇನ) ಜ್ಞಾನದಿಂದ (ತವ) ನಿನಗೆ (ಕಿಂ) ಪ್ರಯೋಜನವೇನು? ಮುಖ್ಯವಾಗಿ ತಿಳಿಯಬೇಕಾದದ್ದೇನೆಂದರೆ (ಅಹಂ) ನಾನು (ಇದಂ) ಈ (ಕೃತ್ಸ್ನಂ) ಸಮಸ್ತವಾದ (ಜಗತ್) ಜಗತ್ತನ್ನು (ಏಕಾಂಶೇನ) ಒಂದು ಪಾದದಿಂದ (ವಿಷ್ಟಭ್ಯ) ವ್ಯಾಪಿಸಿಕೊಂಡು (ಸ್ಥಿತಃ) ಇರುವೆನು ಈ ಜಗತ್ತೆಲ್ಲ ನನ್ನದೊಂದು ಪಾದ ಈ ಜಗತ್ತನ್ನೆಲ್ಲ ಮೀರಿ ಇನ್ನೂ ನನ್ನ ಮೂರು ಪಾದಗಳಿರುವವು

ಇಲ್ಲಿಗ ವಿಭೂತಿಯೋಗನೆಂಬ ಹತ್ತನೆ ಅಧ್ಯಾಯವು ಮುಗಿಯಿತು



* "ಜ್ಞಾತೇನ" ಎಂದು ಪಾಠಾಂತರ (ಜ್ಞಾತೇನ) ತಿಳಿದದ್ದರಿಂದ

† "ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ"—ಎಲ್ಲ ಜಗತ್ತೂ ಬ್ರಹ್ಮದ ಒಂದು ಪಾದ; ಉಳಿದ ಮೂರು ಪಾದಗಳು ಮೇಲೆ ಅಮೃತಸ್ವರೂಪವಾಗಿರುವವು.

# ಹನ್ನೊಂದನೆ ಅಧ್ಯಾಯ

ಜಗತ್ತೆಲ್ಲ ನನ್ನದೊಂದು ಪಾದವೆಂದು ಹೇಳಿದ ಮಾತನ್ನು ಕೇಳಿ ಆ ಜಗದಾತ್ಮರೂಪವನ್ನು ಕಣ್ಣಿಂದ ನೋಡಬೇಕೆಂದು ಬಯಸಿ,

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು —

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥**
**॥೧॥**

(ಮದನುಗ್ರಹಾಯ) ನನಗೆ ಒಳ್ಳೆಯದಾಗಲೆಂದು (ಪರಮಂ) ಬಹಳ ಹೆಚ್ಚಿನ ಯೋಗ್ಯತೆಯುಳ್ಳಂಥ (ಗುಹ್ಯಂ) ಯೋಗ್ಯತೆಯಿಲ್ಲದವರೆದುರಿಗೆ ಬಚ್ಚಿಡತಕ್ಕದ್ದಾಗಿರುವಂಥ ಮತ್ತು (ಅಧ್ಯಾತ್ಮಸಂಜ್ಞಿತಮ್) ಮೂರು ಗಳಿಗೆಯ ಬಾಳಿನದು ಯಾವದೆಂಬುದನ್ನು ಬೇರೆ ಮಾಡಿ ಯಾವಾಗಲೂ ಒಂದೇ ರೀತಿಯಲ್ಲಿ ಇರುವದು ಯಾವದೆಂಬುದನ್ನು ಬಿಡಿಸಿ ತಿಳಿಸುವಂಥ (ಯತ್) ಯಾವ (ವಚಃ) ಮಾತು (ತ್ವಯಾ) ನಿನ್ನಿಂದ (ಉಕ್ತಂ) ಹೇಳಲ್ಪಟ್ಟಿತೊ (ತೇನ) ಅದರಿಂದ (ಮಮ) ನನ್ನ (ಅಯಂ) ಈ (ಮೋಹಃ) ಭೀಷ್ಮನೇ ಮೊದಲಾದವರು ಸಾಯುವರೆಂಬ ಮತ್ತು ನಾನು ಅವರನ್ನು ಕೊಲ್ಲುವೆನೆಂಬ ತಪ್ಪು ತಿಳಿವಳಿಕೆಯು (ವಿಗತಃ) ಚೆನ್ನಾಗಿ ಬಿಟ್ಟುಹೋಯಿತು

ಮತ್ತೇನೆಂದರೆ —

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್** ॥ ೨ ॥

(ಕಮಲಪತ್ರಾಕ್ಷ) ಕಮಲದ ಎಸಳುಗಳಂತೆ ಕಣ್ಣುಗಳುಳ್ಳ ಕೃಷ್ಣನೆ, ಕೇಳು (ಮಯಾ) ನನ್ನಿಂದ (ವಿಸ್ತರಶಃ) ವಿಸ್ತಾರವಾಗಿ (ಭೂತಾನಾಂ) ಎಲ್ಲ ಭೂತಗಳ (ಭವಾಪ್ಯಯೌ ಹಿ) ಉತ್ಪತ್ತಿನಾಶಗಳು ಕೂಡ (ಶ್ರುತೌ)

ಕೇಳಲ್ಪಟ್ಟವುಗಳಾದವು. ಎಂಥರೆ ನಾನು ಅವುಗಳನ್ನು ಕೇಳಿದೆನು ಅವುಗಳಿಷ್ಟೇ ಅಲ್ಲ, (ಅವ್ಯಯಂ) ಅಚ್ಚಳಿಯದೆ ಇರುವಂಥ (ಮಾಹಾತ್ಮ್ಯಮಪಿ ಚ) ಜಗತ್ತನ್ನೆಲ್ಲ ಹುಟ್ಟಿಸುವವನಾದರೂ ಯಾವ ಹೆಚ್ಚುಕಡಿಮೆಗಳನ್ನೂ ಪಡೆಯದವನಾಗಿರುವದು ಮತ್ತು ಅಸಂಗನಾಗಿರುವದು ಮೊದಲಾದ ಹೆಚ್ಚುಗಾರಿಕೆಗಳನ್ನು (ತ್ವತ್ತಃ) ನಿನ್ನಿಂದಲೇ (ಶ್ರುತಃ)* ಕೇಳಿದ್ದಾಯಿತು

ಈಗ ನನಗೆ ಉಂಟಾಗಿರುವ ಬಯಕೆಯೇನೆಂದರೆ —

**ಏವ ಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩ ॥**

(ಪರಮೇಶ್ವರ) ಎಲ್ಲರಿಗೂ ಒಡೆಯನಾದ ಕೃಷ್ಣನೆ, (ತ್ವಂ) ನೀನು (ಆತ್ಮಾನಂ) ನಿನ್ನ ಸ್ವರೂಪವನ್ನು ಕುರಿತು (ಯಥಾ) ಯಾವ ರೀತಿಯಲ್ಲಿ (ಆತ್ಥ) ಹೇಳಿದೆಯೊ (ಏತತ್) ಇದು (ಏವಂ) ಹಾಗೆಯೇ ಸರಿ ಈ ವಿಷಯದಲ್ಲಿ ನನಗೆ ಸಂಶಯವೇನೂ ಇಲ್ಲದಿದ್ದರೂ (ಪುರುಷೋತ್ತಮ) ಎಲ್ಲರಿಗಿಂತ ಶ್ರೇಷ್ಠನಾದ ಕೃಷ್ಣನೆ, ಕೇಳು (ತೇ) ನಿನ್ನ (ಐಶ್ವರಂ) ಜ್ಞಾನ, ಐಶ್ವರ್ಯ, ಶಕ್ತಿ–ಮೊದಲಾದವುಗಳಿಂದ ಕೂಡಿದಂಥ (ರೂಪಂ) ವಿಶ್ವರೂಪವನ್ನು (ದ್ರಷ್ಟುಂ) ನೋಡುವದಕ್ಕೆ (ಇಚ್ಛಾಮಿ) ಬಯಸುತ್ತೇನೆ

ಆದ್ದರಿಂದ —

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥ ೪ ॥**

(ಪ್ರಭೋ) ನನ್ನ ಸ್ವಾಮಿಯಾದ ಕೃಷ್ಣನೆ, ನೀನೇನೊ ಆ ರೂಪವನ್ನು ತೋರಿಸಬಲ್ಲೆಯಾದರೂ (ತತ್) ಅದು (ಮಯಾ) ನನ್ನಿಂದ

---

* ಈ ಮಾತು ಮೂಲದಲ್ಲಿಲ್ಲವಾದರೂ ಮಾತು ಮುಗಿಯುವದಕ್ಕಾಗಿ ಹೊಸದಾಗಿ ಸೇರಿಸಿಕೊಂಡು ಅರ್ಥವನ್ನು ಮಾಡಿಕೊಳ್ಳಬೇಕು.

(ದ್ರಷ್ಟುಂ) ನೋಡಲ್ಪಡುವದಕ್ಕೆ (ಶಕ್ಯಂ) ಸಾಧ್ಯವಾದದ್ದು (ಇತಿ) ಹೀಗೆಂದು (ಯದಿ ಮನ್ಯಸೇ) ನಿನಗೆ ತೋರಿದರೆ (ಯೋಗೇಶ್ವರ) ಮಹಾ ಮಹಿಮನಾದವನೆ (ತತಃ) ಹಾಗಾದರೆ (ತ್ವಂ) ನೀನು (ಮೇ) ನನಗೆ (ಅವ್ಯಯಂ) ನಾಶರಹಿತವಾದಂಥ (ಆತ್ಮಾನಂ) ನಿನ್ನ ಸ್ವರೂಪವನ್ನು (ದರ್ಶಯ) ತೋರಿಸು.

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥**

(ಪಾರ್ಥ) ಅರ್ಜುನನೆ, ಕೇಳು (ಶತಶಃ) ನೂರುಗಟ್ಟಲೆ (ಅಥ) ಅಥವಾ (ಸಹಸ್ರಶಃ) ಸಾವಿರಗಟ್ಟಲೆಯಾಗಿ (ನಾನಾವಿಧಾನಿ) ಅನೇಕ ಬಗೆಯಾಗಿರುವಂಥ (ದಿವ್ಯಾನಿ) ತೇಜೋಮಯಗಳಾದಂಥ (ನಾನಾ ವರ್ಣಾಕೃತೀನಿ ಚ) ಅನೇಕ ಬಣ್ಣಗಳೂ ಆಕಾರಗಳೂ ಇರುವಂಥ (ಮೇ) ನನ್ನ (ರೂಪಾಣಿ) ರೂಪಗಳನ್ನು (ಪಶ್ಯ) ನೋಡು.

ಅದರಲ್ಲಿ ನಿನಗೆ ಕಾಣುವದೇನೆಂದರೆ —

**ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬ ॥**

(ಭಾರತ) ಅರ್ಜುನನೆ, ಕೇಳು (ಆದಿತ್ಯಾನ್) ಹನ್ನೆರಡು ಜನ ಆದಿತ್ಯರನ್ನೂ (ವಸೂನ್) ಎಂಟು ಜನ ವಸುಗಳನ್ನೂ (ರುದ್ರಾನ್) ಹನ್ನೊಂದು ಜನ ರುದ್ರರನ್ನೂ (ಅಶ್ವಿನೌ) ಇಬ್ಬರು ಅಶ್ವಿನೀ ಕುಮಾರ ರನ್ನೂ (ಮರುತಃ) ಉನಂಚಾಸರೆಂಬ ಏಳೇಳು ಜನರಿರುವ ಮರುತ ರನ್ನೂ (ಪಶ್ಯ) ನೋಡು (ತಥಾ) ಹಾಗೆಯೇ (ಅದೃಷ್ಟಪೂರ್ವಾಣಿ) ನೀನು ಮತ್ತು ಯಾರೂ ಮನುಷ್ಯ ಲೋಕದಲ್ಲಿ ಎಂದೂ ನೋಡದೆ ಇರುವಂಥ (ಬಹೂನಿ) ಅನೇಕವಾದ (ಆಶ್ಚರ್ಯಾಣಿ) ಅದ್ಭುತ ರೂಪ ಗಳನ್ನು (ಪಶ್ಯ) ನೋಡು

ಇಷ್ಟೇ ಅಲ್ಲ.—

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭ ॥**

(ಗುಡಾಕೇಶ) ಅರ್ಜುನನೆ, ಕೇಳು (ಇಹ) ಇಲ್ಲಿ (ಮಮ) ನನ್ನ (ದೇಹೇ) ದೇಹದಲ್ಲಿ (ಏಕಸ್ಥಂ) ಒಂದೇ ಕಡೆ ಸೇರಿರುವ (ಕೃತ್ಸ್ನಂ) ಸಂಪೂರ್ಣವಾದ (ಸಚರಾಚರಂ) ಚೇತನರೂಪವಾದ ಮತ್ತು ಜಡರೂಪ ವಾದ (ಜಗತ್) ಜಗತ್ತನ್ನೂ ಮತ್ತು (ಅನ್ಯತ್) ಬೇರೆ (ಯಚ್ಚ) ಜಯ ವಾಗುವದೋ ಇಲ್ಲವೊ ಎಂಬುದೇ ಮುಂತಾದ್ದನ್ನೂ ಯಾವ ಯಾವದನ್ನು (ದ್ರಷ್ಟುಂ) ನೋಡಬೇಕೆಂದು (ಇಚ್ಛಸಿ) ಬಯಸುತ್ತೀಯೋ ಅದನ್ನೆಲ್ಲ (ಅದ್ಯ) ಈಗ (ಪಶ್ಯ) ನೋಡು.

ನೀನು ನೋಡಬಹುದಾದರೆ ತೋರಿಸೆಂದೆಯಲ್ಲ!

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥ ೮ ॥**

(ಅನೇನ) ಪಂಚಭೂತಗಳಿಂದಾಗಿರುವ ಈ (ಸ್ವಚಕ್ಷುಷಾ ಏವ) ನಿನ್ನ ಕಣ್ಣುಗಳಿಂದಲೇ (ಮಾಂ) ವಿಶ್ವರೂಪಧರನಾದ ನನ್ನನ್ನು (ದ್ರಷ್ಟುಂ) ನೋಡುವದಕ್ಕೆ (ನ ತು ಶಕ್ಯಸೇ) ನೀನು ಸಮರ್ಥನಾಗುವದಿಲ್ಲ ಆದ್ದರಿಂದ (ತೇ) ನಿನಗೆ (ದಿವ್ಯಂ) ಭೂತಗಳಿಂದಾಗಿರದೆ ನನ್ನ ರೂಪನ್ನು ನೋಡು ವದಕ್ಕೆ ಸಮರ್ಥವಾದ ಬೆಳಕುಳ್ಳ (ಚಕ್ಷುಃ) ಕಣ್ಣನ್ನು (ದದಾಮಿ) ಕೊಡುತ್ತೇನೆ; (ಮೇ) ನನ್ನ (ಐಶ್ವರಂ) ಸರ್ವೇಶ್ವರತ್ವವನ್ನು ತೋರಿಸುವಂಥ (ಯೋಗಂ) ಮಹಿಮಾವಿಶೇಷವನ್ನು (ಪಶ್ಯ) ನೋಡು.

**ಸಂಜಯ ಉವಾಚ** ಸಂಜಯನು ಧೃತರಾಷ್ಟ್ರನಿಗೆ ಹೇಳಿದ್ದು .—

**ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ ೯ ॥**

(ರಾಜನ್) ಧೃತರಾಷ್ಟ್ರರಾಜನೆ, ಕೇಳು (ತತಃ) ಆಮೇಲೆ (ಮಹಾಯೋಗೇಶ್ವರಃ) ಮಹಾಮಹಿಮನಾದ (ಹರಿಃ) ಶ್ರೀಕೃಷ್ಣನು (ಏವಂ) ಈ ರೀತಿಯಲ್ಲಿ (ಉಕ್ತ್ವಾ) ಹೇಳಿ (ಪಾರ್ಥಾಯ) ಅರ್ಜುನನಿಗೆ (ಐಶ್ವರಂ) ಸರ್ವೇಶ್ವರತ್ವವನ್ನು ತೋರಿಸುವಂಥ (ಪರಮಂ) ಉತ್ಕೃಷ್ಟವಾದ (ರೂಪಂ) ರೂಪವನ್ನು (ದರ್ಶಯಾಮಾಸ) ತೋರಿಸಿದನು

ಅದು ಹೇಗಿತ್ತೆಂದರೆ —

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦ ॥**

(ಅನೇಕವಕ್ತ್ರನಯನಂ) ಲೆಕ್ಕವಿಲ್ಲದಷ್ಟು ಮುಖಗಳೂ ಕಣ್ಣುಗಳೂ ಉಳ್ಳಂಥ (ಅನೇಕಾದ್ಭುತದರ್ಶನಮ್) ಲೆಕ್ಕವಿಲ್ಲದಷ್ಟು ಬೆರಗುಮಾಡುವ ನೋಟಗಳುಳ್ಳಂಥ (ಅನೇಕದಿವ್ಯಾಭರಣಂ) ಲೆಕ್ಕವಿಲ್ಲದಷ್ಟು ಝುಗಝುಗಿಸುವ ಆಭರಣಗಳುಳ್ಳಂಥ (ದಿವ್ಯಾನೇಕೋದ್ಯತಾಯುಧಂ) ಲೆಕ್ಕಿಸುವದಕ್ಕಾಗದಂತೆ ಎತ್ತಿ ಹಿಡಿದಿರುವ ಪ್ರಭಾಮಯವಾದ ಚಕ್ರ, ಗದೆ–ಮೊದಲಾದ ಆಯುಧಗಳುಳ್ಳಂಥ

ಮತ್ತು —

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ॥೧೧॥**

(ದಿವ್ಯಮಾಲ್ಯಾಂಬರಧರಂ) ಉತ್ಕೃಷ್ಟವಾದ ಹೂವಿನ ಸರಗಳನ್ನೂ ರತ್ನದ ಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿರುವಂಥ (ದಿವ್ಯಗಂಧಾನುಲೇಪನಂ) ಉತ್ಕೃಷ್ಟವಾದ ಗಂಧವನ್ನು ಬಳಿದುಕೊಂಡಿರುವಂಥ (ಸರ್ವಾಶ್ಚರ್ಯಮಯಂ) ಎಲ್ಲ ಬಗೆಯ ಆಶ್ಚರ್ಯಗಳಿಂದ ತುಂಬಿರುವಂಥ (ದೇವಂ) ಪ್ರಕಾಶರೂಪನಾದಂಥ (ಅನಂತಂ) ಕೊನೆಮೊದಲಿಲ್ಲದಂಥ (ವಿಶ್ವತೋಮುಖಂ) ಎಲ್ಲರಿಗೂ ಆತ್ಮನಾದ್ದರಿಂದ ಎಲ್ಲ ಕಡೆಗೂ ಮುಖವುಳ್ಳಂಥ, ವಿಶ್ವರೂಪವನ್ನು ಕೃಷ್ಣನು ತೋರಿಸಿದನು ಅರ್ಜುನನು ನೋಡಿದನು

ಆ ವಿಶ್ವರೂಪದ ಬೆಳಕು ಹೇಗಿತ್ತೆಂದರೆ —

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥**

(ದಿವಿ) ಆಕಾಶದಲ್ಲಿ (ಸೂರ್ಯಸಹಸ್ರಸ್ಯ) ಸಾವಿರಾರು ಸೂರ್ಯರ (ಭಾಃ) ಬೆಳಕು (ಯುಗಪತ್) ಒಂದೇ ಸಲಕ್ಕೆ (ಉತ್ಥಿತಾ ಭವೇತ್ ಯದಿ) ಹೊರಹೊಮ್ಮುವದಾದರೆ (ತಸ್ಯ) ಆ (ಮಹಾತ್ಮನಃ) ವಿರಾಡ್ರೂಪನ (ಭಾಸಃ) ಬೆಳಕಿಗೆ (ಸಾ) ಅದು (ಸದೃಶೀ) ಸಮಾನವಾದದ್ದು (ಸ್ಯಾತ್) ಆದೀತು

ಮತ್ತೇನೆಂದರೆ —

**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩ ॥**

(ತತ್ರ) ವಿಶ್ವರೂಪವನ್ನು ಧರಿಸಿದ (ದೇವದೇವಸ್ಯ) ಶ್ರೀಕೃಷ್ಣನ (ಶರೀರೇ) ದೇಹದಲ್ಲಿ (ತದಾ) ಆಗ (ಪಾಂಡವಃ) ಅರ್ಜುನನು (ಅನೇಕಧಾ) ಅನೇಕ ಬಗೆಯಾಗಿ (ಪ್ರವಿಭಕ್ತಂ) ಬಿಡಿಬಿಡಿಯಾಗಿ (ಏಕಸ್ಥಂ) ಒಂದೇ ಕಡೆ ಇರುವ (ಕೃತ್ಸ್ನಂ) ಸಮಸ್ತವಾದ (ಜಗತ್) ಜಗತ್ತನ್ನು (ಅಪಶ್ಯತ್) ನೋಡಿದನು.

ಆಗ ಏನಾಯಿತೆಂದರೆ —

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥**

(ತತಃ) ಆಮೇಲೆ (ವಿಸ್ಮಯಾವಿಷ್ಟಃ) ಬಹಳ ಬೆರಗಾದಂಥವನಾಗಿ (ಹೃಷ್ಟರೋಮಾ) ಮೈಮೇಲಿನ ಕೂದಲು ನೆಟ್ಟಗಾಗಿರುವಂಥ (ಸಃ) ಆ (ಧನಂಜಯಃ) ಅರ್ಜುನನು (ಶಿರಸಾ) ತಲೆಯಿಂದ (ಪ್ರಣಮ್ಯ) ನಮಸ್ಕಾರ ಮಾಡಿ (ಕೃತಾಂಜಲಿಃ) ಕೈಮುಗಿದುಕೊಂಡು (ದೇವಂ) ಶ್ರೀಕೃಷ್ಣನನ್ನು ಕುರಿತು (ಅಭಾಷತ) ಮಾತನಾಡಿದನು

**ಅರ್ಜುನ ಉವಾಚ** ಅರ್ಜುನನು ಹೇಳಿದ್ದು :—

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಂ**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥**

(ದೇವ) ಶ್ರೀಕೃಷ್ಣನೆ (ತವ) ನಿನ್ನ (ದೇಹೇ) ಶರೀರದಲ್ಲಿ (ದೇವಾನ್) ವಸು, ರುದ್ರ, ಆದಿತ್ಯ-ಮೊದಲಾದ ಎಲ್ಲ ದೇವತೆಗಳನ್ನೂ (ತಥಾ) ಹಾಗೆಯೇ (ಸರ್ವಾನ್) ಎಲ್ಲ (ಭೂತವಿಶೇಷಸಂಘಾನ್) ಸ್ಥಾವರವಾದ ಮತ್ತು ಜಂಗಮವಾದ ಎಲ್ಲ ಭೂತಗಳ ಸಮುದಾಯವನ್ನೂ (ಈಶಂ) ಎಲ್ಲರ ಮೇಲೆಯೂ ಅಧಿಕಾರವನ್ನು ನಡೆಸುವವನಾಗಿ (ಕಮಲಾಸನಸ್ಥಂ) ಭೂಮಂಡಲವೆಂಬ ಕಮಲದ ಕರ್ಣಿಕೆಯಾದ ಮೇರುವೆಂಬ ಪೀಠದ ಮೇಲಿರುವಂಥ (ಬ್ರಹ್ಮಾಣಂ) ಚತುರ್ಮುಖಬ್ರಹ್ಮನನ್ನೂ (ಸರ್ವಾನ್) ಸಮಸ್ತರಾದ (ಋಷೀಂಶ್ಚ) ವಸಿಷ್ಠರೇ ಮೊದಲಾದ ಋಷಿಗಳನ್ನೂ (ದಿವ್ಯಾನ್) ದೇವಲೋಕದಲ್ಲಿರುವಂಥ (ಉರಗಾಂಶ್ಚ) ವಾಸುಕಿ ಮೊದಲಾದವರನ್ನೂ (ಪಶ್ಯಾಮಿ) ನೋಡುತ್ತೇನೆ

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾ ಸರ್ವತೋಽನಂತರೂಪಮ್ ।**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬ ॥**

(ಸರ್ವತಃ) ಎಲ್ಲ ಕಡೆಗೂ ಹರಡಿಕೊಂಡಿರುವ (ಅನಂತರೂಪಮ್) ಲೆಕ್ಕವಿಲ್ಲದಷ್ಟು ರೂಪಗಳಿರುವಂಥ (ಅನೇಕಬಾಹೂದರವಕ್ತ್ರನೇತ್ರಂ) ಲೆಕ್ಕ ವಿಲ್ಲದಷ್ಟು ತೋಳುಗಳೂ ಹೊಟ್ಟೆಗಳೂ ಮುಖಗಳೂ ಕಣ್ಣುಗಳೂ ಉಳ್ಳಂಥ (ತ್ವಾ) ನಿನ್ನನ್ನು (ಪಶ್ಯಾಮಿ) ನೋಡುತ್ತೇನೆ. (ವಿಶ್ವೇಶ್ವರ) ಹೇ ಜಗತ್ತಿನ ಸ್ವಾಮಿಯೆ, (ವಿಶ್ವರೂಪ) ಜಗದ್ರೂಪನಾದವನೆ, (ತವ) ನಿನ್ನ (ಅಂತಂ) ಕೊನೆಯನ್ನು (ನ ಪಶ್ಯಾಮಿ) ಕಾಣೆನು, (ಮಧ್ಯಂ)

ನಡುವನ್ನು (ನ) ಕಾಣೆನು, (ಪುನಃ) ಇದಲ್ಲದೆ (ಆದಿಂ) ಮೊದಲನ್ನು (ನ) ಕಾಣೆನು

ಮತ್ತೇನೆಂದರೆ —

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ-**
**ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥ ೧೭ ॥**

(ಕಿರೀಟಿನಂ) ತಲೆಗೆ ಕಿರೀಟವನ್ನಿಟ್ಟಿರುವಂಥ (ಗದಿನಂ) ಗದೆಯನ್ನು ಹಿಡಿದಿರುವಂಥ (ಚಕ್ರಿಣಂ ಚ) ಚಕ್ರಾಯುಧವನ್ನು ತಿರುಗಿಸುತ್ತಿರುವಂಥ (ಸರ್ವತಃ) ಎಲ್ಲ ಕಡೆಯಲ್ಲಿಯೂ (ದೀಪ್ತಿಮಂತಂ) ಬೆಳಗುತ್ತಿರುವ (ತೇಜೋರಾಶಿಂ) ಎಲ್ಲ ತೇಜಸ್ಸುಗಳ ಗುಂಪಾಗಿರುವಂಥ (ಸಮಂತಾತ್) ಎಲ್ಲ ಕಡೆಯಲ್ಲಿಯೂ (ದೀಪ್ತಾನಲಾರ್ಕದ್ಯುತಿಂ) ಚೆನ್ನಾಗಿ ಪುಷ್ಟಿಗೊಂಡಿರುವ ಬೆಂಕಿಯಂತೆ ಮತ್ತು ಸೂರ್ಯನಂತೆ ಕಾಂತಿಯುಳ್ಳಂಥ (ಅಪ್ರಮೇಯಂ) ಇಷ್ಟೇ ಸರಿಯೆಂದು ತಿಳಿಯುವದಕ್ಕಾಗದಂಥ (ದುರ್ನಿರೀಕ್ಷ್ಯಂ) ನಿಟ್ಟಿಸುವದಕ್ಕೆ ಬಹು ಕಷ್ಟವಾದಂಥ (ತ್ವಾಂ) ನಿನ್ನನ್ನು (ಪಶ್ಯಾಮಿ) ನೋಡುತ್ತೇನೆ.

ಇದರಿಂದ ನನಗೆ ತೋರುವದೇನೆಂದರೆ :—

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ***
**ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥**

---

* (ಶಾಶ್ವತ) ಯಾವಾಗಲೂ ನೆಲೆಯಾಗಿರುವಂಥವನೆ—ಎಂದು ಸಂಬೋಧನ ವಿಭಕ್ತಿಯಾಗಿಯೂ ಅರ್ಥವನ್ನು ಮಾಡಿಕೊಳ್ಳಬಸುದು.

(ತ್ವಂ) ನೀನು (ಅಕ್ಷರಂ) ನಾಶವಿಲ್ಲದಂಥ (ವೇದಿತವ್ಯಂ) ಹುಟ್ಟು ಸಾವುಗಳನ್ನು ಕಳೆದುಕೊಳ್ಳಬೇಕೆನ್ನುವವರು ತಿಳಿಯಬೇಕಾದಂಥ (ಪರಮಂ) ಪರಬ್ರಹ್ಮವು (ತ್ವಂ) ನೀನು (ಅಸ್ಯ) ಈ (ವಿಶ್ವಸ್ಯ) ಜಗತ್ತಿಗೆಲ್ಲ (ಪರಂ) ಬಹಳ ಹೆಚ್ಚಿನ (ನಿಧಾನಂ) ಆಶ್ರಯಸ್ಥಾನವು (ತ್ವಂ) ನೀನು (ಅವ್ಯಯಃ) ಹೆಚ್ಚುಕಡಿಮೆಗಳಾಗದೆ ಇರತಕ್ಕವನು ಮತ್ತು (ಶಾಶ್ವತಧರ್ಮಗೋಪ್ತಾ) ಎಂದೆಂದಿಗೂ ಇರುವಂತೆ ಧರ್ಮವನ್ನು ಕಾಪಾಡುವವನು

ಮತ್ತೇನೆಂದರೆ —

**ಅನಾದಿಮಧ್ಯಾಂತಮನಂತವೀರ್ಯ-**
**ಮನಂತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪಂತಂ** ॥ ೧೯ ॥

(ಅನಾದಿಮಧ್ಯಾಂತಂ) ಮೊದಲೂ ನಡುವೆಯೂ ಕೊನೆಯೂ ಇಲ್ಲದಿರುವಂಥ (ಅನಂತವೀರ್ಯಂ) ಕೊನೆಯಿಲ್ಲದ ಪರಾಕ್ರಮ ಉಳ್ಳಂಥ (ಅನಂತಬಾಹುಂ) ಲೆಕ್ಕವಿಲ್ಲದಷ್ಟು ತೋಳುಗಳುಳ್ಳಂಥ (ಶಶಿಸೂರ್ಯನೇತ್ರಂ) ಚಂದ್ರನೂ ಸೂರ್ಯನೂ ಕಣ್ಣುಗಳಾಗಿರುವಂಥ (ದೀಪ್ತಹುತಾಶವಕ್ತ್ರಂ) ಧಗಧಗಿಸುವ ಅಗ್ನಿಯಂತೆ ಮುಖವುಳ್ಳಂಥ (ಸ್ವತೇಜಸಾ) ತನ್ನ ಬೆಳಕಿನಿಂದ (ಇದಂ) ಈ (ವಿಶ್ವಂ) ಜಗತ್ತನ್ನು (ತಪಂತಂ) ಕಾಯಿಸುತ್ತಿರುವಂಥ (ತ್ವಾಂ) ನಿನ್ನನ್ನು (ಪಶ್ಯಾಮಿ) ನೋಡುತ್ತೇನೆ

**ದ್ಯಾವಾಪೃಥಿವ್ಯೋರಿದಮಂತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮಿದಂ ತವೋಗ್ರಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್** ॥ ೨೦ ॥

(ತ್ವಯಾ ಏಕೇನ) ನಿನ್ನೊಬ್ಬನಿಂದಲೇ (ದ್ಯಾವಾಪೃಥಿವ್ಯೋಃ) ಭೂಮ್ಯಾಕಾಶಗಳ (ಇದಂ) ಈ (ಅಂತರಂ ಹಿ) ನಡುವಣ ಬಯಲೂ

(ಸರ್ವಾಃ) ಎಲ್ಲ (ದಿಶಶ್ಚ) ದಿಕ್ಕುಗಳೂ (ವ್ಯಾಪ್ತಂ) ತುಂಬಿಕೊಂಡಿರುವದು. (ಮಹಾತ್ಮನ್) ಹೆ, ವಿಶ್ವರೂಪನೆ, (ತವ) ನಿನ್ನ (ಉಗ್ರಂ) ಭಯಂಕರವಾದ (ಇದಂ) ಈ (ಅದ್ಭುತಂ) ಆಶ್ಚರ್ಯಕರವಾದ (ರೂಪಂ) ರೂಪವನ್ನು (ದೃಷ್ಟ್ವಾ) ನೋಡಿ (ಲೋಕತ್ರಯಂ) ಸ್ವರ್ಗ, ಮರ್ತ್ಯ, ಪಾತಾಲ–ಈ ಮೂರು ಲೋಕಗಳೂ (ಪ್ರವ್ಯಥಿತಂ) ಕಳವಳಗೊಳ್ಳುತ್ತಿರುವದು.

ಮತ್ತೊಂದು ವಿಶೇಷವೇನೆಂದರೆ.—

**ಅಮೀ ಹಿ ತ್ವಾ* ಸುರಸಂಘಾ ವಿಶಂತಿ**
**ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾ**
**ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥**

(ತ್ವಾ) ನಿನ್ನನ್ನು (ಅಮೀ ಹಿ) ಈ (ಸುರಸಂಘಾಃ) ಮನುಷ್ಯರೂಪದಿಂದ ಅವತಾರ ಮಾಡಿರುವ ದೇವತೆಗಳ ಸಮೂಹವಾಗಿ ನನ್ನೆದುರಿಗೆ ಯುದ್ಧಕ್ಕೆ ನಿಂತಿರುವ ರಾಜರೆಲ್ಲ (ವಿಶಂತಿ) ಒಳಹೋಗುತ್ತಿದ್ದಾರೆ. (ಕೇಚಿತ್) ಕೆಲವರು (ಭೀತಾಃ) ಹೆದರಿದವರಾಗಿ (ಪ್ರಾಂಜಲಯಃ) ಕೈಜೋಡಿಸಿಕೊಂಡು (ಗೃಣಂತಿ) ನಿನ್ನನ್ನು ಕೊಂಡಾಡುತ್ತಿರುವರು. (ಮಹರ್ಷಿಸಿದ್ಧಸಂಘಾಃ) ನಾರದರೇ ಮೊದಲಾದ ಋಷಿಗಳೂ ಕಪಿಲರೇ ಮೊದಲಾದ ಸಿದ್ಧರೂ (ಸ್ವಸ್ತಿ) ಜಗತ್ತಿಗೆ ಮೇಲಾಗಲಿ (ಇತಿ) ಹೀಗೆಂದು (ಉಕ್ತ್ವಾ) ಹರಿಕೆಯನ್ನು ಹೊತ್ತು (ತ್ವಾಂ) ನಿನ್ನನ್ನು (ಪುಷ್ಕಲಾಭಿಃ) ಬೇಕಾದಷ್ಟು (ಸ್ತುತಿಭಿಃ) ಸ್ತೋತ್ರಗಳಿಂದ (ಸ್ತುವಂತಿ) ಹೊಗಳುತ್ತಾರೆ.

---

* 'ತ್ವಾಸುರಸಂಘಾಃ' ಎಂಬ ಪಾಠವನ್ನಿಟ್ಟುಕೊಂಡು (ತು+ಅಸುರಸಂಘಾಃ) ಅಸುರಸ್ವಭಾವದ ದುರ್ಯೋಧನಾದಿಗಳೆಂದು ಅರ್ಥವನ್ನು ಮಾಡಿದರೂ ಬರುತ್ತದೆ.

ಇನ್ನೊಂದೇನೆಂದರೆ :—

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವಯಕ್ಷಾಸುರಸಿದ್ಧಸಂಘಾ**
**ವೀಕ್ಷಂತೇ ತ್ವಾಂ-ವಿಸ್ಮಿತಾಶ್ಚೈವ ಸರ್ವೇ ॥ ೨೨ ॥**

(ಯೇ ಚ) ಯಾವ (ರುದ್ರಾದಿತ್ಯಾಃ) ಹನ್ನೊಂದು ರುದ್ರರೂ ಹನ್ನೆರಡು ಸೂರ್ಯರೂ (ವಸವಃ) ಎಂಟು ವಸುಗಳೂ (ಸಾಧ್ಯಾಃ) ಹನ್ನೆರಡು ಸಾಧ್ಯರೂ (ವಿಶ್ವೇ) ಹತ್ತು ವಿಶ್ವೇದೇವತೆಗಳೂ (ಅಶ್ವಿನೌ) ಇಬ್ಬರು ಅಶ್ವಿನೀಕುಮಾರರೂ (ಮರುತಶ್ಚ) ನಲವತ್ತೊಂಬತ್ತು ವಾಯುಗಳೂ (ಊಷ್ಮಪಾಶ್ಚ) ಅನ್ನದ ಮೇಲಿನ ಬಿಸಿಯ ಹೊಗೆಯನ್ನು ಪಾನಮಾಡುವ ಪಿತೃದೇವತೆಗಳೂ (ಗಂಧರ್ವಯಕ್ಷಾಸುರಸಿದ್ಧಸಂಘಾಃ) ಹಾಹಾ ಹೂಹೂ ಮೊದಲಾದ ಗಂಧರ್ವರೂ, ಕುಬೇರ ಮೊದಲಾದ ಯಕ್ಷರೂ, ವಿರೋಚನ ಮೊದಲಾದ ಅಸುರರೂ, ಕಪಿಲ ಮೊದಲಾದ ಸಿದ್ಧರೂ–ಇವರ ಗುಂಪುಗಳು ಈ (ಸರ್ವೇ) ಎಲ್ಲರೂ (ವಿಸ್ಮಿತಾಶ್ಚೈವ) ಬೆರಗಾದವರಾಗಿ (ತ್ವಾಂ) ನಿನ್ನನ್ನು (ವೀಕ್ಷಂತೇ) ನೋಡುತ್ತಾರೆ

ಏಕೆಂದರೆ —

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥ ೨೩ ॥**

(ಮಹಾಬಾಹೋ) ಕೃಷ್ಣನೇ, ಕೇಳು. (ಬಹುವಕ್ತ್ರನೇತ್ರಂ) ಅನೇಕ ಮುಖಗಳೂ ಕಣ್ಣುಗಳೂ ಇರುವಂಥ (ಬಹುಬಾಹೂರುಪಾದಂ) ಅನೇಕ ತೋಳುಗಳೂ ತೊಡೆಗಳೂ ಹೆಜ್ಜೆಗಳೂ ಇರುವಂಥ (ಬಹೂದರಂ) ಅನೇಕ ಹೊಟ್ಟೆಗಳಿರುವಂಥ (ಬಹುದಂಷ್ಟ್ರಾಕರಾಲಂ) ಅನೇಕ ಕೋರೆ ದಾಡೆಗಳಿಂದ ಭಯಂಕರವಾದ (ತೇ) ನಿನ್ನ (ಮಹತ್) ಈ ದೊಡ್ಡ

(ರೂಪಂ) ರೂಪವನ್ನು (ದೃಷ್ಟ್ವಾ) ನೋಡಿ (ಲೋಕಾಃ) ಎಲ್ಲಾ ಲೋಕಗಳವರೂ (ಪ್ರವ್ಯಥಿತಾಃ) ಬಹಳ ಕಳವಳಗೊಂಡಿರುವರು, (ಅಹಂ) ನಾನು (ತಥಾ) ಹಾಗೆಯೇ ಕಳವಳಕ್ಕೊಳಗಾಗಿರುವೆನು

ಅದಕ್ಕೆ ಕಾರಣವೇನೆಂದರೆ :—

**ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ**
**ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ** ॥ ೨೪ ॥

(ವಿಷ್ಣೋ) ಶ್ರೀಕೃಷ್ಣನೆ, ಕೇಳು (ನಭಃಸ್ಪೃಶಂ) ಮುಗಿಲು ಮುಟ್ಟುತ್ತಿರುವಂಥ (ದೀಪ್ತಂ) ಝುಗಝುಗಿಸುತ್ತಿರುವಂಥ (ಅನೇಕವರ್ಣಂ) ಬಗೆಬಗೆಯ ಬಣ್ಣಗಳಿರುವಂಥ (ವ್ಯಾತ್ತಾನನಂ) ಬಾಯಿ ಅಗಲಿಸಿಕೊಂಡಿರುವಂಥ (ದೀಪ್ತವಿಶಾಲನೇತ್ರಂ) ಧಗಧಗಿಸುತ್ತಿರುವ ಅಗಲವಾದ ಕಣ್ಣುಗಳುಳ್ಳಂಥ (ತ್ವಾಂ) ನಿನ್ನನ್ನು (ದೃಷ್ಟ್ವಾ ಹಿ) ನೋಡಿ (ಪ್ರವ್ಯಥಿತಾಂತರಾತ್ಮಾ) ಮನಸ್ಸಿನ ಹೆದರಿಕೆಯಿಂದ ತುಂಬ ಕಳವಳ ಉಂಟಾದವನಾಗಿ (ಧೃತಿಂ) ಎದುರಿಗೆ ನಿಲ್ಲುವ ಧೈರ್ಯವನ್ನೂ (ಶಮಂಚ) ಮನಸ್ಸಿನ ಸಮಾಧಾನವನ್ನೂ (ನ ವಿಂದಾಮಿ) ಕಾಣಲರಿಯೆನು

ಏಕೆಂದರೆ —

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸನ್ನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ** ॥ ೨೫ ॥

(ದೇವೇಶ) ದೇವತೆಗಳಿಗೆಲ್ಲ ಒಡೆಯನಾದವನೆ, (ಜಗನ್ನಿವಾಸ) ಜಗತ್ತಿಗೆಲ್ಲ ಆಧಾರಭೂತನಾದವನೆ, (ಕಾಲಾನಲಸನ್ನಿಭಾನಿ) ಪ್ರಲಯ ಕಾಲದ ಬೆಂಕಿಯಂತಿರುವ ಮತ್ತು (ದಂಷ್ಟ್ರಾಕರಾಲಾನಿ ಚ) ಕೋರೆ

ದಾಡೆಗಳಿಂದ ಭಯಂಕರವಾಗಿರುವ (ತೇ) ನಿನ್ನ (ಮುಖಾನಿ) ಮುಖಗಳನ್ನು (ದೃಷ್ಟ್ವೈವ) ನೋಡಿದ ಮಾತ್ರದಿಂದಲೆ (ದಿಶಃ) ದಿಕ್ಕುಗಳನ್ನು (ನ ಜಾನೇ) ತಿಳಿಯಲರಿಯೆನು ಆದ್ದರಿಂದಲೆ ನಿನ್ನನ್ನು ನೋಡಿದರೂ (ಶರ್ಮ) ಸುಖವನ್ನು (ನ ಲಭೇಚ) ಹೊಂದಲು ಅರಿಯೆನು. ಆದ್ದರಿಂದ (ಪ್ರಸೀದ) ಪ್ರಸನ್ನನಾಗು

ಈಗ ನಾನು ಸೋತೇನೆಂಬ ಸಂದೇಹವು ಹೋಯಿತು. ಏಕೆಂದರೆ:—

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಽಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬ ॥**

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾಂತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭ ॥**

(ಅವನಿಪಾಲಸಂಘೈಃ) ಸಹಾಯಕ್ಕಾಗಿ ಬಂದಿರುವ ರಾಜರ ಗುಂಪುಗಳಿಂದ (ಸಹೈವ) ಕೂಡಿಯೇ (ಧೃತರಾಷ್ಟ್ರಸ್ಯ) ಧೃತರಾಷ್ಟ್ರರಾಯನ (ಅಮೀ ಚ) ಈ (ಸರ್ವೇ) ಎಲ್ಲ (ಪುತ್ರಾಃ) ಮಕ್ಕಳೂ (ಅಸ್ಮದೀಯೈಃ) ನಮ್ಮ ಕಡೆಯವರಾದ (ಯೋಧಮುಖ್ಯೈರಪಿ) ಧೃಷ್ಟದ್ಯುಮ್ನ ಮೊದಲಾದ ಕಾದಾಳುಗಳಲ್ಲಿ ತಲೆಯಾದವರಿಂದಲೂ (ಸಹ) ಕೂಡಿ (ಭೀಷ್ಮಃ) ಭೀಷ್ಮಾಚಾರ್ಯರೂ (ದ್ರೋಣಃ) ದ್ರೋಣಾಚಾರ್ಯರೂ (ತಥಾ) ಅದರಂತೆ (ಅಸೌ) ಈ (ಸೂತಪುತ್ರಃ) ಸೂತನ ಮಗನಾದ ಕರ್ಣನೂ (ತೇ) ನಿನ್ನ (ಭಯಾನಕಾನಿ) ಭಯಂಕರಗಳಾದಂಥ (ದಂಷ್ಟ್ರಾಕರಾಲಾನಿ) ಕೋರೆದಾಡೆಗಳಿಂದ ವಿಕಾರವಾಗಿರುವ (ವಕ್ತ್ರಾಣಿ) ಬಾಯಿಗಳನ್ನು ಎಂದರೆ (ತ್ವಾಂ) ನಿನ್ನನ್ನು (ತ್ವರಮಾಣಾಃ) ಬೇಗಬೇಗ (ವಿಶಂತಿ)

ಪ್ರವೇಶಿಸುತ್ತಿದ್ದಾರೆ (ಕೇಚಿತ್) ಕೆಲವರು (ದಶನಾಂತರೇಷು) ಹಲ್ಲುಗಳ ಸಂದುಗಳಲ್ಲಿ (ವಿಲಗ್ನಾಃ) ಸಿಕ್ಕಿಕೊಂಡವರಾಗಿ (ಚೂರ್ಣಿತೈಃ) ಪುಡಿಪುಡಿಯಾಗಿರುವ (ಉತ್ತಮಾಂಗೈಃ) ತಲೆಗಳಿಂದ ಕೂಡಿದವರಾಗಿ (ಸಂದೃಶ್ಯಂತೇ) ಕಾಣಬರುತ್ತಾರೆ

ಅವರು ಹೇಗೆ ಪ್ರವೇಶಿಸುತ್ತಿರುವರೆಂದರೆ —

**ಯಥಾ ನದೀನಾಂ ಬಹವೋಽಂಬುವೇಗಾ**
**ಸಮುದ್ರಮೇವಾಭಿಮುಖಾ ದ್ರವಂತಿ ।**
**ತಥಾ ತವಾಮೀ ನರಲೋಕವೀರಾ**
**ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ*** ॥ ೨೮ ॥

(ಯಥಾ) ಹೇಗೆ (ನದೀನಾಂ) ಸಿಂಧು, ಗಂಗಾ–ಮೊದಲಾದ ನದಿಗಳ (ಬಹವಃ) ಅನೇಕವಾದ (ಅಂಬುವೇಗಾಃ) ನೀರಿನ ವೇಗಗಳು (ಸಮುದ್ರಮೇವ) ಸಮುದ್ರವನ್ನೆ (ಅಭಿಮುಖಾಃ) ನೋಡುತವುಗಳಾಗಿ ಎಂದರೆ ಸಮುದ್ರದ ಕಡೆಗೇ (ದ್ರವಂತಿ) ಹರಿಯುವವೊ (ತಥಾ) ಹಾಗೆ (ಅಮೀ) ಈ (ನರಲೋಕವೀರಾಃ) ಭೂಲೋಕದಲ್ಲಿರುವ ಶೂರರಾದ ರಾಜರು (ಅಭಿವಿಜ್ವಲಂತಿ) ನಾಲ್ಕು ಕಡೆಗೂ ಬೆಳಗುತ್ತಿರುವಂಥ (ತವ) ನಿನ್ನ (ವಕ್ತ್ರಾಣಿ) ಮುಖಗಳನ್ನು (ವಿಶಂತಿ) ಪ್ರವೇಶಿಸುತ್ತಾರೆ

ಏಕೆ ಮತ್ತು ಹೇಗೆ ಪ್ರವೇಶಿಸುತ್ತಾರೆಂದರೆ —

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ**
**ವಿಶಂತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶಂತಿ ಲೋಕಾ–**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ** ॥ ೨೯ ॥

---

* "ವಕ್ತ್ರಾಣ್ಯಭಿತೋ ಜ್ವಲಂತಿ" ಎಂದು ಪಾಠಾಂತರ. ಅರ್ಥದಲ್ಲೇನೂ ವ್ಯತ್ಯಾಸವಿಲ್ಲ.

(ಯಥಾ) ಹೇಗೆ (ಸಮೃದ್ಧವೇಗಾಃ) ಬಹಳ ವೇಗವುಳ್ಳಂಥ (ಪತಂಗಾಃ) ದೀಪದ ಹುಳುಗಳು (ನಾಶಾಯ) ತಮ್ಮ ನಾಶವಾಗುವಂತೆ (ಪ್ರದೀಪ್ತಂ) ಧಗಧಗ ಉರಿಯುತ್ತಿರುವಂಥ (ಜ್ವಲನಂ) ಅಗ್ನಿಯನ್ನು (ವಿಶಂತಿ) ಪ್ರವೇಶಿಸುತ್ತವೊ (ತಥೈವ) ಹಾಗೆಯೇ (ಸಮೃದ್ಧವೇಗಾಃ) ಬಹಳ ವೇಗವುಳ್ಳಂಥ (ಲೋಕಾಃ) ದುರ್ಯೋಧನನೆ ಮೊದಲಾದ ಜನಸಮೂಹವು (ನಾಶಾಯ) ತಮ್ಮ ನಾಶವಾಗುವಂತೆ (ತವ) ನಿನ್ನ (ವಕ್ತ್ರಾಣ್ಯಪಿ) ಮುಖಗಳನ್ನು (ವಿಶಂತಿ) ಪ್ರವೇಶಿಸುತ್ತಾರೆ

ಸೀನಾದರೊ —

**ಲೇಲಿಹ್ಯಸೇ ಗ್ರಸಮಾನಃ ಸಮಂತಾ-**
**ಲ್ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾ ಪ್ರತಪಂತಿ ವಿಷ್ಣೋ ॥ ೩೦ ॥**

(ವಿಷ್ಣೋ) ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವ ಶ್ರೀಕೃಷ್ಣನೆ, ಕೇಳು (ಜ್ವಲದ್ಭಿಃ) ಧಗಧಗಿಸುತ್ತಿರುವಂಥ (ವದನೈಃ) ಮುಖಗಳಿಂದ (ಸಮಗ್ರಾನ್) ಸಮಸ್ತವಾದ (ಲೋಕಾನ್) ಲೋಕಗಳನ್ನು (ಸಮಂತಾತ್) ಎಲ್ಲ ಕಡೆಯಿಂದಲೂ (ಗ್ರಸಮಾನಃ) ನುಂಗುವವನಾಗಿ (ಲೇಲಿಹ್ಯಸೇ) ಚಪ್ಪರಿಸುತ್ತಿ. (ತವ) ನಿನ್ನ (ಉಗ್ರಾಃ) ತೀಕ್ಷ್ಣವಾದ (ಭಾಸಃ) ಕಿರಣಗಳು (ತೇಜೋಭಿಃ) ಬೆಳಕುಗಳಿಂದ (ಸಮಗ್ರಂ) ಎಲ್ಲ (ಜಗತ್) ಜಗತ್ತನ್ನು (ಆಪೂರ್ಯ) ತುಂಬಿ (ಪ್ರತಪಂತಿ) ಸುಡುತ್ತಿವೆ

ಆದ್ದರಿಂದ —

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ ೩೧ ॥**

(ಉಗ್ರರೂಪಃ) ಇಷ್ಟು ಭಯಂಕರವಾದ ರೂಪವುಳ್ಳ (ಭವಾನ್) ನೀನು (ಕಃ) ಯಾರು ? (ಮೇ) ನನಗೆ (ಆಖ್ಯಾಹಿ) ಹೇಳು (ದೇವ ವರ) ದೇವತೆಗಳಲ್ಲಿ ಶ್ರೇಷ್ಠನಾದ ಕೃಷ್ಣನೆ, (ತೇ) ನಿನಗೆ (ನಮೋಽಸ್ತು) ನನ್ನದೊಂದು ನಮಸ್ಕಾರವಿರಲಿ (ಪ್ರಸೀದ) ನನ್ನ ಮೇಲೆ ಪ್ರಸನ್ನನಾಗು (ಆದ್ಯಂ) ಎಲ್ಲಕ್ಕೂ ಕಾರಣನಾದ (ಭವಂತಂ) ನಿನ್ನನ್ನು (ವಿಜ್ಞಾತುಂ) ಯಾರೆಂದು ತಿಳಿಯುವದಕ್ಕೆ (ಇಚ್ಛಾಮಿ) ಬಯಸುತ್ತೇನೆ (ಹಿ) ಏಕೆಂದರೆ (ತವ) ನಿನ್ನ (ಪ್ರವೃತ್ತಿಂ) ನಡೆವಳಿಕೆಯನ್ನು (ನ ಪ್ರಜಾನಾಮಿ) ತಿಳಿಯದಿರುವೆನು

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ**
**ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾ ನ ಭವಿಷ್ಯಂತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥**

ನಾನು ಯಾರೆಂದರ (ಪ್ರವೃದ್ಧಃ) ಚೆನ್ನಾಗಿ ಬಳದವನಾಗಿ (ಲೋಕ ಕ್ಷಯಕೃತ್) ಜಗತ್ತನ್ನೆಲ್ಲ ನಾಶಮಾಡುವಂಥ (ಕಾಲೋಽಸ್ಮಿ) ಕಾಲ ರೂಪನಾದ • ಪರಮೇಶ್ವರನಾಗಿದ್ದೇನೆ ನಾನು ಈಗ ಕೈಗೊಂಡಿರುವ ಕೆಲಸವೇನೆಂದರೆ (ಲೋಕಾನ್) ಭೂಭಾರಭೂತರಾದ ದುರ್ಯೋಧನನೆ ಮೊದಲಾದ ಜನರನ್ನೆಲ್ಲ (ಸಮಾಹರ್ತುಂ) ನಾಶಮಾಡುವದಕ್ಕಾಗಿ (ಇಹ) ಈಗ (ಪ್ರವೃತ್ತಃ) ಮುಂದುವರಿದಿರುವೆನು ನೀನೊಂದುಪಕ್ಷ ನನ್ನ ಮಾತನ್ನು ಮೀರಿ ಯುದ್ಧಕ್ಕೇಳದಿದ್ದರೂ (ತ್ವಾಂ) ನಿನ್ನನ್ನು (ಋತೇಽಪಿ) ಹೊರತು (ಪ್ರತ್ಯನೀಕೇಷು) ಹಗೆಗಳ ಸೇನೆಯಲ್ಲಿ (ಅವ ಸ್ಥಿತಾಃ) ಇರುವಂಥ (ಯೋಧಾಃ) ಕಾದಾಳುಗಳು (ಯೇ) ಯಾರು ಯಾರು ಇದ್ದಾರೊ (ಸರ್ವೇ) ಭೀಷ್ಮದ್ರೋಣರನ್ನು ಮೊದಲು ಮಾಡಿ ಕೊಂಡು ಎಲ್ಲರೂ (ನ ಭವಿಷ್ಯಂತಿ) ಇಲ್ಲದೆ ಹೋಗುವರು.

ಆದ್ದರಿಂದ:—

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥**

(ಸವ್ಯಸಾಚಿನ್) ಎಡಗೈಯಿಂದಲೂ ಬಾಣವನ್ನು ಹೂಡಿ ಬಿಡ ಬಲ್ಲ ಅರ್ಜುನನೆ, ಕೇಳು (ತಸ್ಮಾತ್) ನೀನು ಯುದ್ಧಕ್ಕೇಳದಿದ್ದರೂ ಭೀಷ್ಮಾದಿಗಳು ಸಾಯುವದರಿಂದ (ತ್ವಂ) ನೀನು (ಉತ್ತಿಷ್ಠ) ಯುದ್ಧಕ್ಕೇಳು (ಯಶಃ) ದೇವತೆಗಳಿಂದ ಕೂಡ ಗೆಲ್ಲಲಾಗದಂಥ ಭೀಷ್ಮದ್ರೋಣರನ್ನು ಗೆದ್ದನೆಂಬ ಕೀರ್ತಿಯನ್ನು (ಲಭಸ್ವ) ಹೊಂದು. (ಶತ್ರೂನ್) ದುರ್ಯೋಧನ ಮೊದಲಾದ ಹಗೆಗಳನ್ನು (ಜಿತ್ವಾ) ಗೆದ್ದು (ಸಮೃದ್ಧಂ) ಇನ್ನೊಬ್ಬರ ತೊಂದರಯಿಲ್ಲದಂಥ (ರಾಜ್ಯಂ) ದೊರೆತನವನ್ನು (ಭುಂಕ್ಷ್ವ) ಅನುಭವಿಸು (ಏತೇ) ಈ ಭೀಷ್ಮದ್ರೋಣರು (ಪೂರ್ವಮೇವ) ಮೊದಲೇ (ಮಯ್ಯೈವ) ನನ್ನಿಂದಲೇ (ನಿಹತಾಃ) ಕೊಲ್ಲಲ್ಪಟ್ಟವರಾಗಿದ್ದಾರೆ ನೀನು (ನಿಮಿತ್ತಮಾತ್ರಂ ಭವ) ನೆಪಕ್ಕಾಗಿ ನಿಲ್ಲು

ಮತ್ತು.—

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪ ॥**

ಯಾರಯಾರೊಡನೆ ಕಾದುವದು ಬಲುಬಿಗಿಯೆಂದು ತಿಳಿದಿದ್ದೀಯೊ ಅಂಥ (ದ್ರೋಣಂ ಚ) ಧನುರ್ವೇದವನ್ನು ಕಲಿಸಿದವನೂ ದಿವ್ಯಾಸ್ತ್ರಗಳನ್ನುಳ್ಳವನೂ ಗುರುವೂ ಆದ ದ್ರೋಣನನ್ನೂ (ಭೀಷ್ಮಂ ಚ) ತಾನು ಬೇಕಾದಾಗ ಮಾತ್ರ ಸಾಯುವವನೂ ದಿವ್ಯಾಸ್ತ್ರಗಳುಳ್ಳವನೂ

ಪರಶುರಾಮನನ್ನು ಕೂಡ ಸೋಲಿಸಿದವನೂ ಆದ ಭೀಷ್ಮನನ್ನೂ (ಜಯದ್ರಥಂ ಚ) ಯಾರ ತಂದೆಯು ತನ್ನ ಮಗನ ತಲೆಯನ್ನು ನೆಲಕ್ಕುರುಳಿಸಿದವನ ತಲೆ ಸಾವಿರ ಹೋಳಾಗಲೆಂದು ತಪಸ್ಸು ಮಾಡುತ್ತಿರುವನೊ ಅಂಥ ಜಯದ್ರಥನನ್ನೂ (ಕರ್ಣಂ) ಇಂದ್ರನು ಕೊಟ್ಟ ಶಕ್ತಿಯುಳ್ಳವನಾಗಿ ಸೂರ್ಯನ ಮಗನಾದ ಕರ್ಣನನ್ನೂ (ತಥಾ) ಇದರಂತೆ (ಅನ್ಯಾನಪಿ) ಬೇರೆ ಬೇರೆ ಇನ್ನೂ ಇರುವಂಥ (ಯೋಧವೀರಾನ್) ಕೆಚ್ಚೆದೆಯ ಕಾದಾಳುಗಳನ್ನೂ (ಮಯಾ) ನನ್ನಿಂದ (ಹತಾನ್) ಕೊಲ್ಲಲ್ಪಟ್ಟಿರುವ ಇವರನ್ನೆಲ್ಲ (ತ್ವಂ) ನೀನು (ಜಹಿ) ನೆಪಮಾತ್ರಕ್ಕೆ ಕೊಲ್ಲು. (ಮಾ ವ್ಯಥಿಷ್ಠಾಃ) ಅವರ ಹದರಿಕೆಯಿಂದ ಕಳವಳಗೊಳ್ಳಬೇಡ (ಯುಧ್ಯಸ್ವ) ಕಾದು (ರಣೇ) ಯುದ್ಧದಲ್ಲಿ (ಸಪತ್ನಾನ್) ದುರ್ಯೋಧನ ಮೊದಲಾದ ಹಗೆಗಳನ್ನು (ಜೇತಾಸಿ) ಗೆಲ್ಲುತ್ತಿ

**ಸಂಜಯ ಉವಾಚ** ಸಂಜಯನು ಧೃತರಾಷ್ಟ್ರನಿಗೆ ಹೇಳಿದ್ದು —

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥**

(ಕೇಶವಸ್ಯ) ಶ್ರೀಕೃಷ್ಣನ (ಏತತ್) ಈ (ವಚನಂ) ಮಾತನ್ನು (ಶ್ರುತ್ವಾ) ಕೇಳಿ (ಕೃತಾಂಜಲಿಃ) ಕೈಮುಗಿದುಕೊಂಡವನಾಗಿಯೂ (ವೇಪಮಾನಃ) ಗಡಗಡನಡುಗುತ್ತಿರುವವನಾಗಿಯೂ ಇರುವ (ಕಿರೀಟೀ) ಅರ್ಜುನನು (ನಮಸ್ಕೃತ್ವಾ) ಅಡ್ಡಬಿದ್ದು (ಪ್ರಣಮ್ಯ) ಬಗ್ಗಿಕೊಂಡು (ಭೀತಭೀತಃ) ಮತ್ತೆ ಮತ್ತೆ ಹೆದರುತ್ತಿರುವವನಾಗಿ (ಕೃಷ್ಣಂ) ಕೃಷ್ಣನನ್ನು ಕುರಿತು (ಸಗದ್ಗದಂ) ಗದ್ಗದಸ್ವರದಿಂದ ಕೂಡಿದ ಮಾತನ್ನು (ಭೂಯ ಏವ) ಮತ್ತೆಯೂ (ಆಹ) ಹೇಳಿದನು

**ಅರ್ಜುನ ಉವಾಚ** ಅರ್ಜುನನು ಹೇಳಿದ್ದು —

***ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ** ॥ ೩೬ ॥

(ಹೃಷೀಕೇಶ) ಶ್ರೀಕೃಷ್ಣನೆ, ಕೇಳು ನಿನ್ನ ಸ್ಥಿತಿ ಹೀಗಿರುವದರಿಂದಲೆ (ತವ) ನಿನ್ನ (ಪ್ರಕೀರ್ತ್ಯಾ) ಯಶಸ್ಸನ್ನು ಹೊಗಳುವದರಿಂದ (ಜಗತ್) ನಾನೊಬ್ಬನೇ ಅಲ್ಲದೆ ಲೋಕವೆಲ್ಲ (ಪ್ರಹೃಷ್ಯತಿ) ಹರ್ಷವನ್ನು ಹೊಂದುತ್ತದೆ ಮತ್ತು (ಅನುರಜ್ಯತೇ ಚ) ನಿನ್ನ ಮೇಲೆ ಹೆಚ್ಚು ಪ್ರೀತಿಯನ್ನು ಮಾಡುತ್ತದೆ (ರಕ್ಷಾಂಸಿ) ರಾಕ್ಷಸರೆಲ್ಲ (ಭೀತಾನಿ) ಹೆದರಿಕೊಂಡವರಾಗಿ (ದಿಶಃ) ದಿಕ್ಕುದಿಕ್ಕಿಗೂ (ದ್ರವಂತಿ) ಓಡಿಹೋಗುತ್ತಾರೆ (ಸಿದ್ಧಸಂಘಾಃ) ಕಪಿಲನೆ ಮೊದಲಾದ ಸಿದ್ಧರ ಗುಂಪು (ಸರ್ವೇ) ಎಲ್ಲ (ನಮಸ್ಯಂತಿ ಚ) ನಮಸ್ಕಾರ ಮಾಡುತ್ತಲೂ ಇದ್ದಾರೆ ಇದೆಲ್ಲ (ಸ್ಥಾನೇ) ಯುಕ್ತವೆ

ಆ ಹರ್ಷ ಮೊದಲಾದವುಗಳಿಗೆ ಕಾರಣವೇನೆಂದರೆ .—

**ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ**
**ಅನಂತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್** ॥ ೩೭ ॥

(ಮಹಾತ್ಮನ್) ಹೇ ಮಹಾತ್ಮನೆ, (ಬ್ರಹ್ಮಣೋಽಪಿ) ಲೋಕಗಳ ನಿರ್ಮಾಣಕರ್ತನಾದ ಹಿರಣ್ಯಗರ್ಭನಿಗೆ ಕೂಡ (ಆದಿಕರ್ತ್ರೇ) ಮೂಲಕಾರಣನಾದ ಮತ್ತು (ಗರೀಯಸೇ) ಬಹುದೊಡ್ಡವನಾದ (ತೇ) ನಿನಗೆ

---

* ಈ ಶ್ಲೋಕವು ರಾಕ್ಷಸರ ನಾಶಕ್ಕಾಗಿ ಹೇಳುವ 'ರಕ್ಷೋಘ್ನ' ವೆಂಬ ಮಂತ್ರರೂಪದಿಂದ ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವದು.

(ಕಸ್ಮಾಚ್ಚ) ಯಾವ ಕಾರಣದಿಂದ ತಾನೆ (ನ ನಮೇರನ್) ನಮಸ್ಕಾರ ಮಾಡದೆ ಇದ್ದಾರು? (ಅನಂತ) ನಾಶರಹಿತನೆ (ದೇವೇಶ) ದೇವತೆ ಗಳೊಡೆಯನೆ (ಜಗನ್ನಿವಾಸ) ಜಗತ್ತಿಗೆಲ್ಲ ಆಧಾರಭೂತನೆ (ತ್ವಂ) ನೀನು (ಸದಸತ್ತತ್ಪರಂ) ಸ್ಥೂಲವಸ್ತುಗಳಿಗಿಂತಲೂ ಸೂಕ್ಷ್ಮವಸ್ತುಗಳಿಗಿಂತಲೂ ಹೆಚ್ಚಿನದು (ಯತ್) ಯಾವದೊ ಅಂಥ (ಅಕ್ಷರಂ) ಅಕ್ಷರಬ್ರಹ್ಮಸ್ವರೂಪ ನಾಗಿದ್ದಿ

**ತ್ವಮಾದಿದೇವಃ ಪುರುಷಃ ಪುರಾಣ-**
**ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನಂತರೂಪ ॥ ೩೮ ॥**

(ತ್ವಂ) ನೀನು (ಆದಿದೇವಃ) ಜಗತ್ತಿಗೆಲ್ಲ ಕಾರಣನಾದ ಮೊದಲನೆ ದೇವನು, (ಪುರುಷಃ) ಜಗತ್ತಿನಲ್ಲಲ್ಲ ತುಂಬಿಕೊಂಡಿರುವಂಥವನು ಅಥವಾ ದೇಹವೆಂಬ ಪುರದಲ್ಲಿ ಬಿಡಾರವನ್ನು ಮಾಡಿರುವವನು, (ಪುರಾಣಃ) ಬಹು ಹಿಂದಿನಿಂದ ಇರುವವನು (ತ್ವಂ) ನೀನು (ಅಸ್ಯ) ಈ (ವಿಶ್ವಸ್ಯ) ಜಗತ್ತಿಗೆ (ಪರಂ) ಹೆಚ್ಚಿನ (ನಿಧಾನಂ) ಒಳಕೊಳ್ಳುವ ಸ್ಥಾನವಾಗಿರುವವನು (ವೇತ್ತಾಸಿ) ಜಗತ್ತಿನ ಭೇದಗಳನ್ನೆಲ್ಲ ಸಾಕ್ಷಿಯಾಗಿ ತಿಳಿಯುವವನು (ವೇದ್ಯಂ ಚ) ಹಗ್ಗವು ಹಾವು ಮೊದಲಾದದ್ದಾಗಿರುವಂತೆ ತಿಳಿಯಬರುವಂಥ ಜಗತ್ತಿನ ಭೇದಗಳೂ ಆಗಿದ್ದಿ (ಪರಂ ಚ ಧಾಮ) ಸರ್ವೋತ್ಕೃಷ್ಟವಾದ ಮೋಕ್ಷಪದವಿಯೂ ಆಗಿದ್ದಿ (ಅನಂತರೂಪ) ಬಗೆಬಗೆಯ ರೂಪದವನೆ (ವಿಶ್ವಂ) ಜಗತ್ತೆಲ್ಲ (ತ್ವಯಾ) ನಿನ್ನಿಂದ (ತತಂ) ಹಾವು ಮೊದಲಾದವುಗಳಲ್ಲಿ ಹಗ್ಗವು ವ್ಯಾಪಿಸಿರುವಂತೆ ವ್ಯಾಪಿಸಲ್ಪಟ್ಟಿರುವದು

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥ ೩೯ ॥**

(ತ್ವಂ) ನೀನು (ವಾಯುಃ) ವಾಯುವು, (ಯಮಃ) ಯಮನು, (ಅಗ್ನಿಃ) ಅಗ್ನಿಯು, (ವರುಣಃ) ವರುಣನು, (ಶಶಾಂಕಃ) ಚಂದ್ರನು, (ಪ್ರಜಾಪತಿಃ) ಬ್ರಹ್ಮನು, (ಪ್ರಪಿತಾಮಹಶ್ಚ) ಪ್ರಜೆಗಳನ್ನು ನಿರ್ಮಿಸಿದ ಕಶ್ಯಪ ಮೊದಲಾದ ಪ್ರಜಾಪತಿಗಳಿಗೂ ತಂದೆಯಾಗವನು (ತೇ) ನಿನಗೆ (ಸಹಸ್ರಕೃತ್ವಃ) ಸಾವಿರಾರು ಸಲ (ನಮೋ ನಮಃ ಅಸ್ತು) ನಮಸ್ಕಾರ ವಿರಲಿ (ಪುನಶ್ಚ) ಮತ್ತೆಯೂ (ಭೂಯೋಽಪಿ) ಬಹಳವಾಗಿಯೂ (ತೇ) ನಿನಗೆ (ನಮೋ ನಮಃ) ನಮಸ್ಕಾರ, ನಮಸ್ಕಾರ

***ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನಂತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ ೪೦ ॥**

(ಸರ್ವ) ಸರ್ವಸ್ವರೂಪನೆ, (ತೇ) ನಿನಗೆ (ಪುರಸ್ತಾತ್) ಮುಂಗಡೆ ಯಿಂದ (ನಮಃ) ನಮಸ್ಕಾರ, (ಅಥ) ಮತ್ತು (ಪೃಷ್ಠತಃ) ಹಿಂಗಡೆ ಯಿಂದ (ನಮೋಽಸ್ತು) ನಮಸ್ಕಾರವಿರಲಿ (ತೇ) ನಿನ್ನ (ಸರ್ವತ ಏವ) ಎಲ್ಲ ಕಡೆಯಿಂದಲೂ (ನಮೋಽಸ್ತು) ನಮಸ್ಕಾರವಿರಲಿ (ತ್ವಂ) ನೀನು (ಅನಂತವೀರ್ಯಾಮಿತವಿಕ್ರಮಃ) ಬಹಳ ಹೆಚ್ಚಿನ ಶೌರ್ಯವೂ ಅಪಾರವಾದ ಪರಾಕ್ರಮವೂ ಉಳ್ಳವನು (ಸರ್ವಂ) ಸಮಸ್ತ ಜಗತ್ತನ್ನೂ (ಸಮಾಪ್ನೋಷಿ) 'ಇದು ಇದೆ' ಎಂಬ ರೂಪದಿಂದ ಎಲ್ಲೆಲ್ಲಿಯೂ ತುಂಬಿಕೊಂ ಡಿರುವವನಾಗಿದ್ದಿ. (ತತಃ) ಆದ್ದರಿಂದಲೆ ನೀನು (ಸರ್ವಃ ಅಸಿ) ಸರ್ವ ಸ್ವರೂಪನಾಗಿದ್ದಿ.

---

* "ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾತ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ" — ಮುಂಗಡೆಯೂ ಹಿಂಗಡೆಯೂ ದಕ್ಷಿಣದಲ್ಲಿಯೂ ಉತ್ತರದಲ್ಲಿಯೂ ಈ ಅಮೃತರೂಪವಾದ ಬ್ರಹ್ಮವೆ.—ಶ್ರು.

ಇದನ್ನರಿಯದೆ ನಾನು ತಪ್ಪುಮಾಡಿದವನಾದ್ದರಿಂದ.—

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ***
**ಮಯಾ ಪ್ರಮಾದಾತ್ಪ್ರಣಯೇನ ವಾಪಿ ॥ ೪೧ ॥**

**ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨ ॥**

(ತವ) ನಿನ್ನ (ಇದಂ) ಈ (ಮಹಿಮಾನಂ) ವಿಶ್ವರೂಪದ ಮಹಿಮೆಯನ್ನು (ಅಜಾನತಾ) ತಿಳಿಯದೆ ಇರುವಂಥ (ಮಯಾ) ನನ್ನಿಂದ (ಪ್ರಮಾದಾತ್) ಮನಸ್ಸಿನ ಹಾರಾಟದಿಂದಲೊ (ಪ್ರಣಯೇನ ವಾಪಿ) ಗೆಳೆಯತನದಿಂದಲೊ (ಸಖೇತಿ) ಗೆಳೆಯನೆಂದು (ಮತ್ವಾ) ತಿಳಿದು (ಹೇ ಕೃಷ್ಣ) ಎಲೈ ಕೃಷ್ಣನೆ, (ಹೇ ಯಾದವ) ಎಲೈ ಯದುವಂಶದವನೆ, (ಹೇ ಸಖ) ಎಲೊ ಗೆಳೆಯನೆ-(ಇತಿ) ಎಂದು (ಪ್ರಸಭಂ) ತಿರಸ್ಕಾರಪೂರ್ವಕವಾಗಿ (ಯದುಕ್ತಂ) ಯಾವ ಮಾತುಗಳನ್ನು ಉಪಯೋಗಿಸಿದೆನೊ ಅದನ್ನೂ ಮತ್ತು (ವಿಹಾರಶಯ್ಯಾಸನಭೋಜನೇಷು) ಆಟವಾಡುವಾಗಲೂ ಹಾಸಿಗೆಯ ಮೇಲಿರುವಾಗಲೂ ಸಿಂಹಾಸನ ಮೊದಲಾದವುಗಳ ಮೇಲೆ ಕುಳಿತಿರುವಾಗಲೂ ಊಟಮಾಡುತ್ತಿರುವಾಗಲೂ (ಏಕಃ) ಒಂಟಿಯಾಗಿರುವಾಗಲೂ (ಅಥವಾ) ಅಲ್ಲದೆ (ತತ್ಸಮಕ್ಷಮಪಿ) ಗೆಳೆಯರೆದುರಿಗಿರುವಾಗಲೂ (ಅವಹಾಸಾರ್ಥಂ) ಹಾಸ್ಯಕ್ಕಾಗಿ (ಯಚ್ಚ) ಯಾವ ಬಗೆಯಲ್ಲಿ (ಅಸತ್ಕೃತೋಽಸಿ) ಅವಮಾನಗೊಳಿಸಲ್ಪಟ್ಟಿದ್ದೀಯೊ (ತತ್) ಅದಕ್ಕಾಗಿ (ಅಚ್ಯುತ) ಶ್ರೀಕೃಷ್ಣನೆ, (ಅಪ್ರಮೇಯಂ) ಊಹಿಸುವದಕ್ಕೆ ಕೂಡ ಆಗದ ಸಾಮರ್ಥ್ಯ

* 'ತಮೇಮಂ' ಎಂದು ಪಾಠಾಂತರ. ಅರ್ಥದಲ್ಲೇನೂ ವ್ಯತ್ಯಾಸವಿಲ್ಲ.

ವಿಶೇಷವುಳ್ಳ (ತ್ವಾಂ) ನಿನ್ನನ್ನು (ಅಹಂ) ನಾನು (ತತ್) ಅದನ್ನು (ಕ್ಷಾಮಯೇ) ಕ್ಷಮಿಸೆಂದು ಬೇಡಿಕೊಳ್ಳುತ್ತೇನೆ

ಏಕೆಂದರೆ —

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ ೪೩ ॥**

(ಅಪ್ರತಿಮಪ್ರಭಾವ) ಹೋಲಿಕೆಯಿಲ್ಲದಂಥ ಪ್ರಭುಶಕ್ತಿಯುಳ್ಳ ಶ್ರೀಕೃಷ್ಣನೆ, ಕೇಳು (ತ್ವಂ) ನೀನು (ಅಸ್ಯ) ಈ (ಚರಾಚರಸ್ಯ) ಸ್ಥಾವರಜಂಗಮರೂಪವಾದ (ಲೋಕಸ್ಯ) ಜಗತ್ತಿನ (ಪಿತಾಸಿ) ತಂದೆಯಾಗಿದ್ದಿ. ಇಷ್ಟೇ ಅಲ್ಲ (ಪೂಜ್ಯಶ್ಚ) ಪೂಜೆಗೆ ಯೋಗ್ಯನೂ ಆಗಿದ್ದಿ (ಗುರುಃ) ಗುರುವೂ ಆಗಿದ್ದಿ (ಗರೀಯಾನ್) ಇನ್ನೂ ಹೆಚ್ಚಿನವನಾಗಿದ್ದಿ. ಏಕೆಂದರೆ (ಲೋಕತ್ರಯೇಽಪಿ) ಮೂರು ಲೋಕದಲ್ಲಿಯೂ (ತ್ವತ್ಸಮಃ) ನಿನಗೆ ಸಮಾನರು (ನ ಅಸ್ತಿ) ಇಲ್ಲ ನಿನ್ನಂತೆ ಬೇರೆ ಈಶ್ವರರೂ ಇದ ಪಕ್ಷದಲ್ಲಿ ವ್ಯವಹಾರವು ಹೇಗೆ ಸಾಗೀತು? (ಅನ್ಯಃ) ಬೇರೆ (ಅಭ್ಯಧಿಕಃ) ನಿನಗಿಂತ ಹೆಚ್ಚಿನವನು (ಕುತಃ) ಎಲ್ಲಿಂದ ಬಂದಾನು?

ಆದ್ದರಿಂದ —

**ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪ ॥**

(ತಸ್ಮಾತ್) ಆದಕಾರಣ (ಪ್ರಣಮ್ಯ) ಅಡ್ಡಬಿದ್ದು (ಕಾಯಂ) ಶರೀರವನ್ನು (ಪ್ರಣಿಧಾಯ) ಬಗ್ಗಿಸಿ (ಈಶಂ) ಜಗತ್ತಿಗೆಲ್ಲ ಒಡೆಯನಾದಂಥ ಮತ್ತು (ಈಡ್ಯಂ) ದೇವತೆಗಳಿಂದ ಕೂಡ ಹೊಗಳಿಸಿಕೊಳ್ಳುವಂಥ (ತ್ವಾಂ) ನಿನ್ನನ್ನು

(ಅಹಂ) ನಾನು (ಪ್ರಸಾದಯೇ) ಪ್ರಸನ್ನನಾಗೆಂದು ಬೇಡಿಕೊಳ್ಳುವೆನು (ದೇವ) ಶ್ರೀಕೃಷ್ಣನೆ, ಕೇಳು (ಪುತ್ರಸ್ಯ) ಮಗನ ತಪ್ಪನ್ನು (ಪಿತೇವ) ತಂದೆಯು ಮನ್ನಿಸುವಂತೆ (ಸಖ್ಯುಃ) ಗೆಳೆಯನ ತಪ್ಪನ್ನು (ಸಖೇವ) ಗೆಳೆಯನು ಮನ್ನಿಸುವಂತೆ (ಪ್ರಿಯಾಯಾಃ) ಹೆಂಡತಿಯ ತಪ್ಪನ್ನು (ಪ್ರಿಯಃ) ಗಂಡನು ಮನ್ನಿಸುವಂತೆ (ಸೋಢುಮರ್ಹಸಿ) ನೀನು ಮನ್ನಿಸಬೇಕು

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥**

(ಅದೃಷ್ಟಪೂರ್ವಂ) ನಾನಾಗಲಿ ಮತ್ತೊಬ್ಬರಾಗಲಿ ಹಿಂದೆ ಎಂದೂ ಕಾಣದೆ ಇದ್ದಂಥ ಈ ವಿಶ್ವರೂಪವನ್ನು (ದೃಷ್ಟ್ವಾ) ನೋಡಿ (ಹೃಷಿತೋಽಸ್ಮಿ) ಹರ್ಷಗೊಂಡಿರುವೆನು (ಭಯೇನ ಚ) ಆ ಅದ್ಭುತ ರೂಪವನ್ನು ನೋಡಿದ ಹೆದರಿಕೆಯಿಂದ (ಮೇ) ನನ್ನ (ಮನಃ) ಮನಸ್ಸು (ಪ್ರವ್ಯಥಿತಂ) ಕಳವಳ ಗೊಂಡಿರುವದು (ದೇವ) ಶ್ರೀಕೃಷ್ಣನೆ, (ಮೇ) ನನಗೆ (ತದೇವ ರೂಪಂ) ಆ ಗೆಳೆಯತನದ ರೂಪನ್ನೆ (ದರ್ಶಯ) ತೋರಿಸು (ದೇವೇಶ) ದೇವತೆಗಳ ಒಡೆಯನೆ, (ಜಗನ್ನಿವಾಸ) ಜಗತ್ತಿಗೆಲ್ಲ ಆಧಾರಭೂತನಾದವನೆ, (ಪ್ರಸೀದ) ಪ್ರಸನ್ನನಾಗು.

**ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥**

(ಕಿರೀಟಿನಂ) ಕಿರೀಟವನ್ನಿಟ್ಟುಕೊಂಡಿರುವಂಥ (ಗದಿನಂ) ಗದೆಯನ್ನು ಹಿಡಿದುಕೊಂಡಿರುವಂಥ (ಚಕ್ರಹಸ್ತಂ) ಚಕ್ರವನ್ನು ಕೈಯಲ್ಲಿಟ್ಟುಕೊಂಡಿರು ವಂಥ (ತ್ವಾಂ) ನಿನ್ನನ್ನು (ತಥೈವ) ಹಿಂದಿನಂತೆಯೇ (ದ್ರಷ್ಟುಂ) ನೋಡ ಬೇಕೆಂದು (ಅಹಂ) ನಾನು (ಇಚ್ಛಾಮಿ) ಬಯಸುತ್ತೇನೆ (ಸಹಸ್ರ

ಬಾಹೋ) ಸಹಸ್ರಬಾಹುಗಳುಳ್ಳವನೆ, (ವಿಶ್ವಮೂರ್ತೇ) ವಿಶ್ವರೂಪವನ್ನು ಧರಿಸಿರುವವನೆ (ಚತುರ್ಭುಜೇನ) ನಾಲ್ಕು ತೋಳುಗಳುಳ್ಳಂಥ (ತೇನೈವ ರೂಪೇಣ) ವಾಸುದೇವನ ಮಗನಾದ ಶ್ರೀಕೃಷ್ಣರೂಪದಿಂದಲೇ (ಭವ) ಕಾಣಿಸಿಕೊಳ್ಳುವವನಾಗು

**ಶ್ರೀಭಗವಾನುವಾಚ** ಶ್ರೀಕೃಷ್ಣನು ಅರ್ಜುನನನ್ನು ಸಮಾಧಾನ ಗೊಳಿಸುವದಕ್ಕೆ ಹೇಳಿದ್ದು —

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭ ॥**

(ಅರ್ಜುನ) ಅರ್ಜುನನೆ, ಕೇಳು (ಯತ್) ಯಾವದು (ತ್ವದನ್ಯೇನ) ನಿನ್ನ ಹೊರತು ಬೇರೆ ಯಾರಿಂದಲೂ (ನ ದೃಷ್ಟಪೂರ್ವಂ) ಇದುವರೆಗೆ ಕಾಣಲ್ಪಟ್ಟಿಲ್ಲವೊ ಅಂಥ (ಮೇ) ನನ್ನ (ತೇಜೋಮಯಂ) ಬೆಳಕಿನಿಂದ ತುಂಬಿರುವಂಥ (ವಿಶ್ವಂ) ಜಗದ್ರೂಪವಾದಂಥ (ಅನಂತಂ) ಕೊನೆ ಇಲ್ಲದಂಥ ಮತ್ತು (ಆದ್ಯಂ) ಮೊದಲನೆಯದಾದಂಥ (ಪರಂ) ಉತ್ಕೃಷ್ಟವಾದ (ಇದಂ) ಈ (ರೂಪಂ) ವಿಶ್ವರೂಪವು (ಆತ್ಮಯೋಗಾತ್) ನನ್ನ ಐಶ್ವರ್ಯ ಶಕ್ತಿಯ ಬಲದಿಂದ (ಪ್ರಸನ್ನೇನ) ಪ್ರಸನ್ನನಾದ (ಮಯಾ) ನನ್ನಿಂದ (ತವ) ನಿನಗೆ (ದರ್ಶಿತಂ) ತೋರಿಸಲ್ಪಟ್ಟಿತು ನಾನು ಇದಕ್ಕೆ ಮೊದಲು ಯಶೋದೆಗೂ ಅಕ್ರೂರನಿಗೂ ಧೃತರಾಷ್ಟ್ರನ ಮನೆಯಲ್ಲಿ ಭೀಷ್ಮಾದಿಗಳಿಗೂ ತೋರಿಸಿದ ವಿಶ್ವರೂಪವು ಇದರದೊಂದಂಶವಾದ್ದರಿಂದ ನಿನಗೆ ಈಗ ತೋರಿಸಿದ ಈ ರೂಪವು ಸರ್ವೋತ್ಕೃಷ್ಟವಾಗಿರುವದು

**ನ ವೇದಯಜ್ಞಾಧ್ಯಯನೈರ್ನ ದಾನೈ-**
**ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥**

(ಕುರುಪ್ರವೀರ) ಅರ್ಜುನನೆ, ಕೇಳು (ಏವಂರೂಪಃ) ಈಗ ತೋರಿಸಿದ ವಿಶ್ವರೂಪನಾದ (ಅಹಂ) ನಾನು (ನೃಲೋಕೇ) ಭೂಲೋಕದಲ್ಲಿ (ದ್ರಷ್ಟುಂ) ನೋಡುವದಕ್ಕೆ (ತ್ವದನ್ಯೇನ) ನಿನ್ನ ಹೊರತು ಬೇರೆಯವರಿಂದ (ವೇದಯಜ್ಞಾಧ್ಯಯನೈಃ) ನಾಲ್ಕು ವೇದಗಳನ್ನೂ ಅಧ್ಯಯನಮಾಡುವದರಿಂದಲೂ ಯಜ್ಞವಿಚಾರಗಳನ್ನೆಲ್ಲ ತಿಳಿದುಕೊಳ್ಳುವದರಿಂದಲೂ (ನ ಶಕ್ಯಃ) ಸಾಧ್ಯನಲ್ಲ (ದಾನೈಃ) ತುಲಾಪುರುಷದಾನ ಮೊದಲಾದ ದಾನಗಳಿಂದಲೂ (ನ) ಸಾಧ್ಯನಲ್ಲ. (ಕ್ರಿಯಾಭಿಃ) ಅಗ್ನಿಹೋತ್ರಾದಿಕರ್ಮಗಳಿಂದಲೂ (ನ ಚ) ಸಾಧ್ಯನಲ್ಲ (ಉಗ್ರೈಃ) ಶರೀರವನ್ನೆಲ್ಲ ಸೊರಗಿಸುವದರಿಂದ ಭಯಂಕರವಾದ (ತಪೋಭಿಃ) ಉಪವಾಸವ್ರತಗಳಿಂದಲೂ (ನ) ಸಾಧ್ಯನಲ್ಲ

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥**

(ಈದೃಕ್) ಈ ಬಗೆಯಾದ (ಮಮ) ನನ್ನ (ಇದಂ) ಈ (ಘೋರಂ) ಭಯಂಕರವಾದ (ರೂಪಂ) ವಿಶ್ವರೂಪವನ್ನು (ದೃಷ್ಟ್ವಾ) ನೋಡಿ (ತೇ) ನಿನಗೆ (ವ್ಯಥಾ) ಕಳವಳವು (ಮಾ) ಆಗದಿರಲಿ, (ವಿಮೂಢಭಾವಃ) ಮನಸ್ಸಿಗೆ ಮುಂದೋರದಿರುವಿಕೆಯು (ಮಾ ಚ) ಉಂಟಾಗದಿರಲಿ (ವ್ಯಪೇತಭೀಃ) ಹೆದರಿಕೆಯನ್ನು ಬಿಟ್ಟು (ಪ್ರೀತಮನಾಃ) ಪ್ರಸನ್ನವಾದ ಮನಸ್ಸಿನಿಂದ (ಪುನಃ) ಮತ್ತೆ (ತ್ವಂ) ನೀನು (ಮೇ) ನನ್ನ (ತದೇವ) ಆ ವಸುದೇವನ ಮಗನದೇ ಆದ (ಇದಂ) ಈ (ರೂಪಂ) ರೂಪವನ್ನು (ಪ್ರಪಶ್ಯ) ಚೆನ್ನಾಗಿ ನೋಡು

**ಸಂಜಯ ಉವಾಚ** ಸಂಜಯನು ಹೇಳಿದ್ದು .—

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥**

(ವಾಸುದೇವಃ) ಶ್ರೀಕೃಷ್ಣನು (ಅರ್ಜುನಂ) ಅರ್ಜುನನನ್ನು ಕುರಿತು (ಇತಿ) ಹೀಗೆಂದು (ತಥಾ) ಹಾಗೆ (ಉಕ್ತ್ವಾ) ಹೇಳಿ (ಭೂಯಃ) ಮತ್ತೆ (ಸ್ವಕಂ) ಶಂಖಚಕ್ರಗದಾಪದ್ಮಧಾರಿಯಾದ ತನ್ನ (ರೂಪಂ) ರೂಪವನ್ನು (ದರ್ಶಯಾಮಾಸ) ತೋರಿಸಿದನು (ಮಹಾತ್ಮಾ) ಆ ದೊಡ್ಡವನಾದ ಕೃಷ್ಣನು (ಪುನಃ) ಮತ್ತೆ (ಸೌಮ್ಯವಪುಃ) ಮನೋಹರವಾದ ದೇಹವುಳ್ಳವನು (ಭೂತ್ವಾ) ಆಗಿ (ಭೀತಂ) ಹೆದರಿದಂಥ (ಏನಂ) ಈ ಅರ್ಜುನನನ್ನು (ಆಶ್ವಾಸಯಾಮಾಸ ಚ) ಸಮಾಧಾನವನ್ನೂ ಮಾಡಿದನು.

**ಅರ್ಜುನ ಉವಾಚ** ಅರ್ಜುನನು ಹೇಳಿದ್ದು —

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥**

(ಜನಾರ್ದನ) ಶ್ರೀಕೃಷ್ಣನೆ, ಕೇಳು (ತವ) ನಿನ್ನ (ಸೌಮ್ಯಂ) ಶಾಂತವಾದ (ಇದಂ) ಈ (ಮಾನುಷಂ) ಮನುಷ್ಯತ್ವದ (ರೂಪಂ) ರೂಪವನ್ನು (ದೃಷ್ಟ್ವಾ) ನೋಡಿ (ಇದಾನೀಂ) ಈಗ (ಸಚೇತಾಃ) ಸಮಾಧಾನಚಿತ್ತನು (ಸಂವೃತ್ತಃ) ಆಗಿ (ಪ್ರಕೃತಿಂ) ನನ್ನ ಸ್ವಭಾವದ ಸ್ಥಿತಿಯನ್ನು (ಗತಃ) ಹೊಂದಿದವನು (ಅಸ್ಮಿ) ಆಗಿರುವೆನು

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨ ॥**

(ಮಮ) ನನ್ನ (ಸುದುರ್ದರ್ಶಂ) ಎಷ್ಟುಮಾತ್ರವೂ ನೋಡುವದಕ್ಕಾಗದಂಥ (ಇದಂ) ಈ (ಯತ್) ಯಾವ (ರೂಪಂ) ರೂಪವನ್ನು (ದೃಷ್ಟವಾನಸಿ) ನೋಡಿದವನಾಗಿದ್ದೀಯೋ (ಅಸ್ಯ) ಆ ಈ (ರೂಪಸ್ಯ) ರೂಪದ ವಿಷಯದಲ್ಲಿ (ದೇವಾ ಅಪಿ) ದೇವತೆಗಳು ಕೂಡ (ನಿತ್ಯಂ) ಯಾವಾಗಲೂ (ದರ್ಶನಕಾಂಕ್ಷಿಣಃ) ನೋಡಬೇಕೆಂದು ಬಯಸುತ್ತಿರುವರು. ಇನ್ನೂ ಅವರಿಗೆ ದೊರೆತಿಲ್ಲ, ದೊರೆಯುವದೂ ಇಲ್ಲ.

ಏಕೆಂದರೆ —

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩ ॥**

(ಮಾಂ) ನನ್ನನ್ನು (ಯಥಾ) ಯಾವ ರೂಪದಲ್ಲಿ (ದ್ರಷ್ಟವಾನಸಿ) ನೋಡಿದವನಾದೆಯೊ (ಏವಂ ವಿಧಃ) ಆ ಈ ಬಗೆಯನ್ನು (ದ್ರಷ್ಟುಂ) ನೋಡುವದಕ್ಕೆ (ಅಹಂ) ನಾನು (ವೇದೈಃ) ವೇದಗಳನ್ನೆಲ್ಲ ಅಧ್ಯಯನ ಮಾಡುವದರಿಂದ (ನ ಶಕ್ಯಃ) ಸಾಧ್ಯನಲ್ಲ, (ತಪಸಾ) ಉಪವಾಸವ್ರತಗಳಿಂಡ (ನ) ಸಾಧ್ಯನಲ್ಲ, (ದಾನೇನ) ಗೋದಾನ, ಭೂದಾನ–ಮೊದಲಾದ ದಾನಗಳಿಂದ (ನ) ಸಾಧ್ಯನಲ್ಲ, (ಇಜ್ಯಯಾಚ) ಯಜ್ಞಗಳಿಂದಲೂ (ನ) ಸಾಧ್ಯನಲ್ಲ

ಹೇಗೆ ಸಾಧ್ಯನೆಂದರೆ —

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೫೪ ॥**

(ಪರಂತಪ) ಶತ್ರುಗಳನ್ನು ಗೆಲ್ಲುವಂಥ (ಅರ್ಜುನ) ಅರ್ಜುನನೆ, ಕೇಳು (ಏವಂ ವಿಧಃ) ಈ ಪ್ರಕಾರದ ವಿಶ್ವರೂಪದ (ಅಹಂ) ನಾನು (ಅನನ್ಯಯಾ ತು) ವಿಷಯವಾಸನೆಗಳ ಕಡೆಗೆ ಜೋಲದೆ ಮತ್ತು ಮತ್ತೊಂದು ದೇವತೆಯ ಕಡೆಗೆ ಕಣ್ಣುಹಾಕದೆ ಇರುವಂಥ (ಭಕ್ತ್ಯಾ) ಭಕ್ತಿಯಿಂದ (ಜ್ಞಾತುಂ) ಶಾಸ್ತ್ರಮುಖದಿಂದಲೂ ಗುರುಮುಖದಿಂದಲೂ ತಿಳಿಯುವದಕ್ಕೂ (ತತ್ತ್ವೇನ) ಇದ್ದದ್ದಿದ್ದಹಾಗೆ (ದ್ರಷ್ಟುಂ ಚ) ಬರೀ ತಿಳಿವಳಿಕೆಯಲ್ಲಿಯೇ ಮುಗಿಯದೆ ಕಣ್ಣಾರೆ ಕಾಣುವದಕ್ಕೂ (ಪ್ರವೇಷ್ಟುಂ ಚ) ಕಂಡದ್ದಿಷ್ಟೇ ಅಲ್ಲದೆ ನನ್ನಲ್ಲಿಯೇ ಪ್ರವೇಶಮಾಡುವದಕ್ಕೂ ಎಂದರೆ ಮೋಕ್ಷವನ್ನು ಪಡೆಯುವದಕ್ಕೂ (ಶಕ್ಯಃ) ಸಾಧ್ಯವು

ಇದರಿಂದ ನೀನು ಈಗ ಮಾಡಬೇಕಾದುದೇನಂದರೆ.—

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥ ೫೫ ॥**

(ಪಾಂಡವ) ಅರ್ಜುನನೆ, ಕೇಳು (ಯಃ) ಯಾವನು (ಮತ್ಕರ್ಮಕೃತ್) ತನ್ನ ಸುಖಕ್ಕೆಂದಲ್ಲದೆ ನನ್ನ ಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡುವನೊ (ಮತ್ಪರಮಃ) ಆಳು ಅರಸನ ಪ್ರೀತ್ಯರ್ಥವಾಗಿ ಮಾಡಿದರೂ ಅರಸನೇ ತನಗೆ ಕೊನೆಯ ಗತಿಯೆಂದು ತಿಳಿಯದಿರುವಂತೆ ಇರದೆ ನನ್ನನ್ನೆ ಹೆಚ್ಚಿನ ಗತಿ ಯೆಂದು ತಿಳಿದಿರುವನೊ (ಮದ್ಭಕ್ತಃ) ಎಲ್ಲ ಬಗೆಯಿಂದಲೂ ನನ್ನನ್ನೆ ಉತ್ಸಾಹದಿಂದ ಭಜಿಸುವನೊ (ಸಂಗವರ್ಜಿತಃ) ಹಣ, ಕಾಸು, ಹೆಂಡತಿ, ಮಕ್ಕಳು–ಮೊದಲಾದವರಲ್ಲಿ ಆಸಕ್ತಿ ಇಲ್ಲದಿರುವನೊ (ಸರ್ವಭೂತೇಷು) ಯಾವ ಪ್ರಾಣಿಗಳ ವಿಷಯದಲ್ಲಿಯೂ (ನಿರ್ವೈರಃ) ಹಗೆತನವಿಲ್ಲದಿರುವನೊ (ಸಃ) ಅವನು (ಮಾಂ) ನನ್ನನ್ನು (ಏತಿ) ಪಡೆಯುತ್ತಾನೆ.

ಇಲ್ಲಿಗೆ **ವಿಶ್ವರೂಪದರ್ಶನ**ವೆಂಬ ಹನ್ನೊಂದನೆ ಅಧ್ಯಾಯವು ಮುಗಿಯಿತು.



# ಹನ್ನೆರಡನೆ ಅಧ್ಯಾಯ

ಶ್ರೀಕೃಷ್ಣನ ಉಪದೇಶದಲ್ಲಿ ಮೊದಲಿಂದ ಇಲ್ಲಿಯವರೆಗೂ ನಿರ್ಗುಣ ಬ್ರಹ್ಮದ ವರ್ಣನೆಯೇ ವಿಶೇಷವಾಗಿದ್ದು ಅಲ್ಲಲ್ಲಿ ಸಗುಣಬ್ರಹ್ಮದ ಉಪಾಸನೆಯ ವಿಚಾರವೂ ಬಂತು ವಿಶ್ವರೂಪ ದರ್ಶನವನ್ನು ಮಾಡಿಸಿದ್ದಂತು ಸಗುಣ ಸ್ವರೂಪದ ಉಪಾಸನೆಯನ್ನು ಮಾಡಲೆಂದೇ ಎಂದು ಸ್ಪಷ್ಟವಾಯಿತು. ಆದರೆ ಕೊನೆಯಲ್ಲಿ 'ನನ್ನ ಪ್ರೀತ್ಯರ್ಥವಾದ ಕರ್ಮಗಳನ್ನು ಮಾಡು' ಎಂದು ಮೊದಲಾಗಿ ಹೇಳಿರುವ ಮಾತಿನಿಂದ ಯಾವ ಸ್ವರೂಪವನ್ನು ಗ್ರಹಿಸ ಬೇಕೆಂಬುದನ್ನು ತಿಳಿಯಲು—

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು :—

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧ ॥**

(ಯೇ) ಯಾವ (ಭಕ್ತಾಃ) ಭಕ್ತರು (ಸತತಯುಕ್ತಾಃ) ಯಾವಾಗಲೂ ಭಗವತ್ಪ್ರೀತ್ಯರ್ಥವಾದ ಕರ್ಮ ಮೊದಲಾದವುಗಳಲ್ಲಿಯೇ ತೊಡಗಿದವರಾಗಿ (ಏವಂ) ಹೀಗೆ (ತ್ವಾಂ) ವಿಶ್ವರೂಪನಾದ ನಿನ್ನನ್ನೂ ಮತ್ತು (ಯೇ ಚಾಪಿ) ಬೇರೆ ಭಕ್ತರು (ಅವ್ಯಕ್ತಂ) ಇಂದ್ರಿಯಗಳಿಗೆ ಗೋಚರವಲ್ಲದಂಥ (ಅಕ್ಷರಂ) ನಿರ್ಗುಣಸ್ವರೂಪವನ್ನೂ (ಪರ್ಯುಪಾಸತೇ) ಧ್ಯಾನಮಾಡುತ್ತಾರೊ (ತೇಷಾಂ) ಅವರಲ್ಲಿ (ಕೇ) ಯಾರು (ಯೋಗವಿತ್ತಮಾಃ) ಯೋಗವನ್ನು ಬಹಳ ಚೆನ್ನಾಗಿ ತಿಳಿದವರು ?

ಆತ್ಮಸ್ವರೂಪದ ಯಥಾರ್ಥಜ್ಞಾನಿಗಳಾದ ನಿರ್ಗುಣೋಪಾಸಕರ ವಿಷಯವನ್ನು ಮುಂದಕ್ಕಿಟ್ಟುಕೊಂಡು—

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ ೨ ॥**

(ಯೇ) ಯಾವ ಭಕ್ತರು (ಮಯಿ) ವಿಶ್ವರೂಪನಾದ ನನ್ನ ಸಗುಣ ಸ್ವರೂಪದಲ್ಲಿ (ಮನಃ) ಮನಸ್ಸನ್ನು (ಆವೇಶ್ಯ) ಇಟ್ಟು (ಪರಯಾ) ಈ ಸ್ವರೂಪದ ಉಪಾಸನೆಯಿಂದಲೆ ತನ್ನ ಉದ್ಧಾರವಾಗುವದೆಂಬ ಹೆಚ್ಚಾದ (ಶ್ರದ್ಧಯಾ) ವಿಶ್ವಾಸದಿಂದ (ಉಪೇತಾಃ) ಕೂಡಿದವರಾಗಿ (ನಿತ್ಯಯುಕ್ತಾಃ) ಯಾವಾಗಲೂ ನನ್ನ ಪ್ರೀತ್ಯರ್ಥವಾದ ಕರ್ಮ ಮೊದಲಾದವುಗಳಲ್ಲಿಯೇ ತೊಡಗಿದವರಾಗಿ (ಮಾಂ) ಸರ್ವಜ್ಞನಾದ ನನ್ನನ್ನು (ಉಪಾಸತೇ) ಎಡೆಬಿಡದೆ ಧ್ಯಾನಮಾಡುತ್ತಾರೊ (ತೇ) ಅವರು (ಯುಕ್ತತಮಾಃ) ಬಹಳ ಹೆಚ್ಚಿನ ಯೋಗಿಗಳೆಂದು (ಮೇ) ನನಗೆ (ಮತಾಃ) ಸಮ್ಮತರಾಗಿರುವರು.

ನಿರ್ಗುಣಪಾಸಕರು ಹೆಚ್ಚಿನವರಲ್ಲವೊ ? ಎಂದರೆ

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ ೩ ॥**

**ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥ ೪ ॥**

(ಯೇ ತು) ಯಾವ ಭಕ್ತರು (ಸರ್ವತ್ರ) ತಮಗೆ ಅನುಕೂಲವಾದಾಗಲೂ ಅನನುಕೂಲವಾದಾಗಲೂ ಯಾವಾಗಲೂ (ಸಮಬುದ್ಧಯಃ) ಮನಸ್ಸನ್ನು ಸಮಸ್ಥಿತಿಯಲ್ಲಿಟ್ಟುಕೊಂಡಿರುವವರಾಗಿ (ಇಂದ್ರಿಯಗ್ರಾಮಂ) ಇಂದ್ರಿಯಗಳ ಸಮುದಾಯವನ್ನು (ಸಂನಿಯಮ್ಯ) ಚೆನ್ನಾಗಿ ಬಿಗಿ ಹಿಡಿದುಕೊಂಡು (ಸರ್ವಭೂತಹಿತೇ) ಎಲ್ಲ ಪ್ರಾಣಿಗಳಿಗೂ ಹಿತವನ್ನು ಮಾಡುವದರಲ್ಲಿ (ರತಾಃ) ಆಸಕ್ತರಾಗಿ (ಅನಿರ್ದೇಶ್ಯಂ) ಇಗೋ, ಇದೆಂದು ಬೆಟ್ಟಿಟ್ಟು ತೋರಿಸುವದಕ್ಕೆ ಬರದೆ ಇರುವಂಥದ್ದಾಗಿಯೂ (ಅವ್ಯಕ್ತಂ) ಇಂದ್ರಿಯಗಳಿಗೆ ಗೋಚರವಲ್ಲದ್ದಾಗಿಯೂ (ಸರ್ವತ್ರಗಂ) ಆಕಾಶದಂತೆ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವಂಥದ್ದಾಗಿಯೂ (ಅಚಿಂತ್ಯಂ ಚ) ಮನಸ್ಸಿನಿಂದ ಊಹಿಸುವದಕ್ಕೆ ಕೂಡ ಆಗದಂಥದ್ದಾಗಿಯೂ (ಕೂಟಸ್ಥಂ) ಸಂಸಾರದ ದೋಷಗಳಿಗೆ ತೌರುಮನೆಯಾದ ಮಾಯಾಶಕ್ತಿಯ ಮೇಲೆ ಅಧಿಕಾರವನ್ನು ನಡೆಸುವದಾಗಿಯೂ ಅಥವಾ ಅಕ್ಕಸಾಲೆಯ ಮನೆಯ ಅಡಿಗಲ್ಲಿನಂತೆ ತನ್ನ ಆಧಾರದ ಮೇಲೆ ಎಷ್ಟೋ ವಿಕಾರಗಳು ನಡೆದರೂ ತಾನು ಯಾವ ಹೆಚ್ಚು ಕಡಿಮೆಯನ್ನೂ ಹೊಂದದೆ ಇರುವದಾಗಿಯೂ (ಅಚಲಂ) ಆದ್ದರಿಂದಲೆ ಅಲ್ಲಾಡದಂಥದ್ದಾಗಿಯೂ (ಧ್ರುವಂ) ಆದ್ದರಿಂದಲೆ ನಾಶವೆಂಬ ಬದಲಾವಣೆಗೆ ಸಿಕ್ಕದೆ ಯಾವಾಗಲೂ ಇರುವಂಥದ್ದಾಗಿಯೂ ಇರುವ (ಅಕ್ಷರಂ) ನಿರ್ಗುಣಬ್ರಹ್ಮಸ್ವರೂಪವನ್ನು (ಪರ್ಯುಪಾಸತೇ) ಎಣ್ಣೆಯ ಧಾರೆಯು ನಡುವೆ ಕಡಿದು ಹೋಗದೆ ಒಂದೇ ಎಳೆಯಾಗಿರುವಂತೆ ಬಹುಕಾಲ ಮನಸ್ಸಿನಲ್ಲಿ ಮತ್ತೊಂದು ವಿಷಯವನ್ನು ತಂದುಕೊಳ್ಳದೆ ಧ್ಯಾನ ಮಾಡುತ್ತಾರೊ (ತೇ) ಅವರು (ಮಾಮೇವ) ನನ್ನನ್ನೆ (ಪ್ರಾಪ್ನುವಂತಿ) ಪಡೆಯುತ್ತಾರೆ. ಅಥವಾ ಪಡೆಯುತ್ತಾರೆಂದು ಹೇಳುವದೇನು? ಜ್ಞಾನಿಯು ನನ್ನ ಸ್ವರೂಪವೆ (೭–೧೮) ಎಂದು ಹೇಳಿದಂತೆ ಅವನಿಗೂ ನನಗೂ ಭೇದವೇ ಇಲ್ಲದ್ದರಿಂದ ಅವನಿಗೆ ಹೆಚ್ಚಿನವನೆಂಬ ಅಥವಾ ಕಡಿಮೆಯವನೆಂಬ ಮಾತು ಅನ್ವಯಿಸುವದಿಲ್ಲ.

ಮತ್ತೇನೆಂದರೆ :—

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥**

(ಅವ್ಯಕ್ತಾಸಕ್ತಚೇತಸಾಂ) ನಿರ್ಗುಣಸ್ವರೂಪದಲ್ಲಿ ಮನಸ್ಸಿಟ್ಟಂಥ (ತೇಷಾಂ) ಅವರಿಗೆ (ಕ್ಲೇಶಃ) ಆಯಾಸವು (ಅಧಿಕತರಃ) ಬಹಳ ಹೆಚ್ಚು. ಈಶ್ವರಪ್ರೀತ್ಯರ್ಥವಾದ ಕರ್ಮಗಳನ್ನು ಮಾಡುವದೇ ಮೊದಲಾದದ್ದೂ ಸಗುಣ ಬ್ರಹ್ಮದಲ್ಲಿ ಮನಸ್ಸನ್ನಿಡುವದೂ ಆಯಾಸಕರವೇ ಆದರೂ ನಿರ್ಗುಣಸ್ವರೂಪ ದಲ್ಲಿ ಮನಸ್ಸಿಡುವ ಆಯಾಸವು ಅದಕ್ಕಿಂತ ಹೆಚ್ಚಿನದು (ಹಿ) ಏಕೆಂದರೆ (ಅವ್ಯಕ್ತಾ) ಇಂದ್ರಿಯಗಳಿಗೆ ಗೋಚರವಾಗದೆ ಇರುವಂಥ (ಗತಿಃ)* ಆ ನಿರ್ಗುಣಸ್ವರೂಪವು (ದೇಹವದ್ಭಿಃ) ದೇಹದಲ್ಲಿ ನಾನೆಂಬ ಅಭಿಮಾನ ಉಳ್ಳವರಿಂದ (ದುಃಖಂ) ಬಹು ಕಷ್ಟಪಟ್ಟು (ಅವಾಪ್ಯತೇ) ಪಡೆಯ ಲಾಗುವದು ನನ್ನ ಉಪಾಸನೆಯು ಬಹಳ ಸುಲಭವೆಂದು ಹಿಂದೆ ನಾನು (೯–೨) ಹೇಳಿದ್ದು ದೇಹಾಭಿಮಾನವಿಲ್ಲದವರ ಮಾತು ಸುಖವಾಗಿ ಸಾಧ್ಯ ವಾಗುವ ಸಗುಣೋಪಾಸನೆಯಿಂದಲೂ ಬಹು ಕಷ್ಟಕರವಾದ ನಿರ್ಗುಣೋ ಪಾಸನೆಯಿಂದಲೂ ನಾನೇ ದೊರೆಯುವೆನಾದರೂ ಸಗುಣೋಪಾಸಕರಿಗೆ ಬ್ರಹ್ಮಲೋಕದಲ್ಲಿ ಬಹುಕಾಲ ವಾಸಮಾಡಿದ ಮೇಲೆ ದೊರೆಯುವೆನು, ನಿರ್ಗುಣೋಪಾಸಕರಿಗೆ ಈಗಲೇ ಇಲ್ಲಿಯೇ ದೊರೆಯುವೆನು

ಮತ್ತೊಂದೇನೆಂದರೆ ·—

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥**

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭ ॥**

---

* ಸಾ ಕಾಷ್ಠಾ ಸಾ ಪರಾ ಗತಿಃ ಅದೇ ಕೊನೆಯದು, ಅದೇ ಹೆಚ್ಚಿನ ಗತಿ.

(ಪಾರ್ಥ) ಅರ್ಜುನನೆ, ಕೇಳು (ಯೇ ತು) ಮತ್ತೆ ಯಾರು (ಸರ್ವಾಣಿ) ತಾವು ಮಾಡುವಂಥ ಎಲ್ಲ (ಕರ್ಮಾಣಿ) ಕರ್ಮಗಳನ್ನು (ಮಯಿ) ಸಗುಣಸ್ವರೂಪನಾದ ನನ್ನಲ್ಲಿ (ಸಂನ್ಯಸ್ಯ) ಒಪ್ಪಿಸಿ ಬಿಟ್ಟು (ಮತ್ಪರಾಃ) ವಾಸುದೇವನಾದ ನಾನೇ ತಮಗೆ ಹೆಚ್ಚಿದ ಗತಿಯೆಂದು ತಿಳಿದು (ಅನನ್ಯೇನೈವ) ವಿಶ್ವರೂಪನಾದ ನನ್ನನ್ನು ಬಿಟ್ಟು ಇನ್ನೊಂದನ್ನವಲಂಬಿಸದೆ ಇರುವ (ಯೋಗೇನ) ಒಂದೇ ಮನಸ್ಸಿನಿಂದ (ಮಾಂ) ನನ್ನನ್ನು (ಧ್ಯಾಯಂತಃ) ಧ್ಯಾನಮಾಡುತ್ತ (ಉಪಾಸತೇ) ಬಹುಕಾಲ ಅದನ್ನು ಸಾಗಿಸುವರೊ (ಮಯ್ಯಾವೇಶಿತಚೇತಸಾಂ) ನನ್ನಲ್ಲಿಯೇ ಮನಸ್ಸನ್ನಿಟ್ಟಿರುವಂಥ (ತೇಷಾಂ) ಅವರಿಗೆ (ನ ಚಿರಾತ್) ತಡವಿಲ್ಲದೆ (ಅಹಂ) ನಾನು (ಮೃತ್ಯುಸಂಸಾರಸಾಗರಾತ್) ಸಾವಿನಿಂದ ಕೂಡಿದ ಸಂಸಾರವೆಂಬ ಸಮುದ್ರದಿಂದ (ಸಮುದ್ಧರ್ತಾ) ಮೇಲಕ್ಕೆತ್ತಿಡುವವನು (ಭವಾಮಿ) ಆಗುವೆನು

ಆ ನನ್ನ ಸಗುಣೋಪಾಸನೆಯ ರೀತಿ ಹೇಗೆಂದರೆ —

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

(ಮಯ್ಯೇವ) ವಿಶ್ವರೂಪನಾದ ನನ್ನಲ್ಲಿಯೇ (ಮನಃ) ಸಾಮಾನ್ಯ ಜ್ಞಾನಸಾಧನವಾದ ಮನಸ್ಸನ್ನು (ಆಧತ್ಸ್ವ) ಇಡು (ಮಯಿ) ನನ್ನಲ್ಲಿಯೇ (ಬುದ್ಧಿಂ) ನಿಶ್ಚಯಾತ್ಮಕವಾದ ಬುದ್ಧಿಯನ್ನು (ನಿವೇಶಯ) ಇಡು (ಅತ ಊರ್ಧ್ವಂ) ಈ ದೇಹವನ್ನು ಬಿಟ್ಟಮೇಲೆ (ಮಯ್ಯೇವ) ಕೊನೆಗೆ ನನ್ನಲ್ಲಯೇ (ನಿವಸಿಷ್ಯಸಿ) ವಾಸಮಾಡುತ್ತಿ, (ನ ಸಂಶಯಃ) ಸಂದೇಹವಿಲ್ಲ

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯ ॥**

(ಧನಂಜಯ) ಅರ್ಜುನನೆ, ಕೇಳು (ಅಥ) ಇನ್ನು, ಮೇಲೆ ಹೇಳಿದ ರೀ[illegible]ಲ್ಲ (ಮಯಿ) ನನ್ನಲ್ಲಿ (ಚಿತ್ತಂ) ಮನಸ್ಸನ್ನು (ಸ್ಥಿರಂ) ಅಲ್ಲಾಡದಂತೆ (ಸಮಾಧಾತುಂ) ಚೆನ್ನಾಗಿ ಸಿಲ್ಲಿಸುವದಕ್ಕೆ (ನ ಶಕ್ನೋಷಿ) ಸಮರ್ಥನಾಗದಿದ್ದರೆ

(ತತಃ) ಆಮೇಲೆ (ಅಭ್ಯಾಸಯೋಗೇನ) ಮನಸ್ಸನ್ನು ಹಿಂದಿರುಗಿಸಿ ತಂದು ಮತ್ತೆ ಮತ್ತೆ ಹೊರಗಣ ಮೂರ್ತಿಗಳಲ್ಲಿ ಎಲ್ಲಿಯಾದರೂ ಒಂದೇ ಕಡೆ ನಿಲ್ಲಿಸುವ ಅಭ್ಯಾಸರೂಪವಾದ ಉಪಾಯದಿಂದ (ಮಾಂ) ವಿಶ್ವರೂಪನಾದ ನನ್ನನ್ನು (ಆಪ್ತುಂ) ಪಡೆಯುವದಕ್ಕೆ (ಇಚ್ಛ) ಬಯಸು

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ ॥ ೧೦ ॥**

(ಅಭ್ಯಾಸೇಽಪಿ) ಮನಸ್ಸನ್ನು ಹಿಂದಕ್ಕೆ ತಂದು ಒಂದು ಕಡೆ ಇಡುವ ವಿಷಯದಲ್ಲಿ (ಅಸಮರ್ಥೋಽಸಿ) ಕೈಲಾಗದಿದ್ದರೆ (ಮತ್ಕರ್ಮಪರಮಃ) ನನ್ನ ಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡುವದೇ ಮುಖ್ಯವೆಂದೆಣಿಸುವವನು (ಭವ) ಆಗು (ಮದರ್ಥಂ) ತನ್ನ ದೇಹೇಂದ್ರಿಯಗಳ ಸುಖವಲ್ಲದ ನನಗೆ ಪ್ರೀತಿಯಾಗಲೆಂದು (ಕರ್ಮಾಣಿ) ಕರ್ಮಗಳನ್ನು (ಕುರ್ವನ್ನಪಿ) ಮಾಡಿದರೂ (ಸಿದ್ಧಿಂ) ಚಿತ್ತಶುದ್ಧಿಯನ್ನೂ ಆಮೇಲೆ ಜ್ಞಾನವನ್ನೂ (ಅವಾಪ್ಸ್ಯಸಿ) ಪಡೆಯುತ್ತಿ

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

(ಅಥ) ಇನ್ನು (ಏತದಪಿ) ಇದನ್ನಾದರೂ (ಕರ್ತುಂ) ಮಾಡುವದಕ್ಕೆ (ಅಶಕ್ತೋಽಸಿ) ಕೈಲಾಗದವನಾದರೆ (ತತಃ) ಆಮೇಲೆ (ಯತಾತ್ಮವಾನ್) ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು (ಮದ್ಯೋಗಮಾಶ್ರಿತಃ) ಕರ್ಮಗಳನ್ನೆಲ್ಲ ನನಗೆ ಒಪ್ಪಿಸುತ್ತ ಮಾಡುವವನಾಗಿ (ಸರ್ವಕರ್ಮಫಲತ್ಯಾಗಂ) ನೀನು ಮಾಡುವ ಎಲ್ಲ ಕರ್ಮಗಳ ಫಲಗಳ ಮೇಲಿನ ಇಚ್ಛೆಯನ್ನು ಬಿಡುವ ಉದ್ಯೋಗವನ್ನು (ಕುರು) ಮಾಡು

**ಸರ್ವಕರ್ಮಫಲತ್ಯಾಗವನ್ನೇನೂ ಕಡಿಮೆಯದೆಂದು ತಿಳಿಯಬೇಡ. ಅದರ ಯೋಗ್ಯತೆ ಎಷ್ಟು ದೊಡ್ಡದೆಂದರೆ .—**

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥ ೧೨ ॥**

(ಅಭ್ಯಾಸಾತ್) ಹಟ್ಟು ಸಾವುಗಳನ್ನು ಕಳೆದುಕೊಳ್ಳುವದಕ್ಕೇನುಮಾಡ ಬೇಕೆಂಬುದರ ಕಡೆ ಮನಸ್ಸಿಟ್ಟು ಮತ್ತೆ ಮತ್ತೆ ವಿಚಾರವನ್ನೇ ಅಭ್ಯಾಸ ಮಾಡುವದಕ್ಕಿಂತಲೂ (ಜ್ಞಾನಂ) ಅದರ ನಿರ್ಣಯದ ತಿಳಿವಳಿಕೆಯು (ಶ್ರೇಯಃ ಹಿ) ಮೇಲಾದುದಷ್ಟೆ (ಜ್ಞಾನಾತ್) ಆ ನಿರ್ಣಯದ ತಿಳಿ ವಳಿಕೆಗಿಂತಲೂ (ಧ್ಯಾನಂ) ಅದನ್ನೇ ಎಡೆಬಿಡದೆ ಧ್ಯಾನಮಾಡುವದು (ವಿಶಿಷ್ಯತೇ) ಹೆಚ್ಚಿನದು (ಧ್ಯಾನಾತ್) ಆ ಧ್ಯಾನದಿಂದ (ಕರ್ಮಫಲ ತ್ಯಾಗಃ) ಕರ್ಮಫಲಗಳ ಆಶೆಯೆಲ್ಲ ಹೋಗುತ್ತದೆ ಧ್ಯಾನದ ಬಲದಿಂದ ಆತ್ಮಜ್ಞಾನವೇ ಆಗಿ ಆತ್ಮನಿಗೆ ಯಾವ ಕರ್ಮಗಳ ಸಂಬಂಧವೂ ಇಲ್ಲ ವೆಂದು ತಿಳಿದು ಅವನ ಭಾಗಕ್ಕ ಕರ್ಮಗಳೇ ಇಲ್ಲವಾಗುವಾಗ ಅವುಗಳ ಫಲಗಳ ಮಾತಿನ್ನೆಲ್ಲಿಯದು ? (ತ್ಯಾಗಾತ್) ಫಲಾಪೇಕ್ಷೆಯೆಲ್ಲ ಹೋದ ಮೇಲ (ಶಾಂತಿಃ) ಹುಟ್ಟುಸಾವುಗಳಡಗುವಿಕೆಯು (ಅನಂತರಂ) ಒಡನೆಯೆ ಆಗಿಬಿಡುವದು ಮನಸ್ಸು ಅನೇಕ ಫಲಗಳನ್ನು ಬಯಸುವದರಿಂದಲೆ ಆ ಫಲಗಳನ್ನು ಕೊಡುವದಕ್ಕಾಗಿ ಹುಟ್ಟುಸಾವುಗಳು ಬಂದು ಗಂಟು ಬೀಳುವವು ಫಲದ ಬಯಕೆಯೆಲ್ಲ ಹೋಗುತ್ತಲೆ ಹುಟ್ಟುಸಾವುಗಳು ಹೇಳುವದಕ್ಕೆ ಹೆಸರಿಲ್ಲದಂತೆ ಹೋಗುತ್ತವೆ ಆಗ ಶಾಂತಿಯು ಸ್ವತಃ ಸಿದ್ಧವಾಗಿರುತ್ತದೆ ಆದ್ದರಿಂದ ನಿಜವಾಗಿ ಫಲದಾಸೆ ಹುಟ್ಟಳಿದು ಹೋಗುವದೆಂಬುದು ಬಹು ದೊಡ್ಡ ಯೋಗ್ಯತೆಯದು ನೀನು ಅದನ್ನು ಈಗ ಸಾಧಿಸುವದಕ್ಕಾಗಿ ಪ್ರಯತ್ನದಿಂದ ಫಲತ್ಯಾಗಮಾಡುವದನ್ನು ಕಲಿ ಈ ಪ್ರಯತ್ನವು ಬಲಿಯುತ್ತ ಬಲಿಯುತ್ತ ಕರ್ಮಯೋಗಿ ಯಾಗಿ ಧ್ಯಾನವನ್ನು ನೈಗೂಡಿಸಿಕೊಂಡು ಜ್ಞಾನವನ್ನು ಪಡೆದು ಆತ್ಮಸ್ವರೂಪದಲ್ಲಿಯೇ ನೆಲೆಯಾಗಿರುವವನಾಗುತ್ತಿ

ಸಾಧ್ಯವಾದ ಮಟ್ಟಿಗೆ ಅನುಕರಿಸಲೆಂದು ಇನ್ನು ನಿರ್ಗುಣೋ ಪಾಸಕರ ಧರ್ಮಗಳನ್ನು ಹೇಳುತ್ತೇನೆ, ಕೇಳು :—

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**

(ಸರ್ವಭೂತಾನಾಂ) ಯಾವ ಪ್ರಾಣಿಗಳ ವಿಷಯದಲ್ಲಿಯೂ- ತನಗೆ ವಿರೋಧಿಯಾದ ಪ್ರಾಣಿಯ ವಿಷಯದಲ್ಲಿ ಕೂಡ (ಅದ್ವೇಷ್ಟಾ) ಹಗೆತನವಿಲ್ಲದೆ ತನ್ನಂತೆ ನೋಡುತ್ತಿರುವನು (ಮೈತ್ರಃ) ಅಷ್ಟೇ ಅಲ್ಲ, ಗೆಳೆಯನಾಗಿರುವನು. (ಕರುಣ ಏವ ಚ) ದುಃಖಿತರ ವಿಷಯದಲ್ಲಿ ಮರುಕವುಳ್ಳವನಾಗಿರುವನು (ನಿರ್ಮಮಃ) ದೇಹದಲ್ಲಿಯೂ ಕೂಡ ನನ್ನದೆಂಬಭಿಮಾನವಿಲ್ಲದಿರುವನು (ನಿರಹಂಕಾರಃ) ಆಚಾರ, ವಿದ್ಯೆ- ಮೊದಲಾದವುಗಳಲ್ಲಿ ತಾನು ಹೆಚ್ಚಿನವನೆಂಬ ಗರ್ವವಿಲ್ಲದಿರುವನು. (ಸಮ ದುಃಖಸುಖಃ) ದುಃಖ ಬಂತೆಂದು ತಗ್ಗದೆ ಸುಖ ಬಂತೆಂದು ಹಿಗ್ಗದೆ ಒಂದೇ ರೀತಿಯಲ್ಲಿರುವನು. (ಕ್ಷಮೀ) ಮತ್ತೊಬ್ಬರು ಬೈದರೂ ಹೊಡೆದರೂ ತಳಮಳವನ್ನು ಹೊಂದದಿರುವನು

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥**
**॥ ೧೪ ॥**

(ಯಃ) ಯಾವನು (ಸತತಂ) ಯಾವಾಗಲೂ (ಸಂತುಷ್ಟಃ) ಬದು ಕಿರುವದಕ್ಕೆ ತಕ್ಕಷ್ಟು ಅನ್ನ ವಸ್ತ್ರಗಳಾದರೂ ಸಿಕ್ಕಿದರೂ ಸಿಕ್ಕದಿದ್ದರೂ ತೃಪ್ತನಾಗಿರುವನೋ (ಯೋಗಿ) ಮನಸ್ಸನ್ನು ಬಿಗಿಹಿಡಿದಿರುವನೊ (ಯತಾ ತ್ಮಾ) ಶರೀರ ಮೊದಲಾದವುಗಳನ್ನೆಲ್ಲ ವಶದಲ್ಲಿಟ್ಟುಕೊಂಡಿರುವನೊ (ದೃಢನಿಶ್ಚಯಃ) ಆತ್ಮಸ್ವರೂಪದ ವಿಷಯವನ್ನು ಸಂಶಯವಿಲ್ಲದಂತೆ ತಿಳಿಗಿರುವನೊ (ಮಯ್ಯರ್ಪಿತಮನೋಬುದ್ಧಿಃ) ಮನಸ್ಸನ್ನೂ ಬುದ್ಧಿಯನ್ನೂ ಹೊರಕ್ಕೆ ಹೋಗಗೊಡದೆ ನನಗೇ ಒಪ್ಪಿಸಿಬಿಟ್ಟಿರುವನೊ (ಸಃ) ಆ (ಮದ್ಭಕ್ತಃ) ನನ್ನ ಭಕ್ತನು (ಮೇ) ನನಗೆ (ಪ್ರಿಯಃ) ಬೇಕಾದವನು.

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ॥**
**॥ ೧೫ ॥**

(ಯಸ್ಮಾತ್) ಯಾವನಿಂದ (ಲೋಕಃ) ಯಾರೂ (ನೋದ್ವಿಜತೇ) ತಳಮಳವನ್ನು ಹೊಂದುವದಿಲ್ಲವೊ (ಲೋಕಾತ್) ಜನರಿಂದ (ಯಃ) ಯಾವನು (ನೋದ್ವಿಜತೇ ಚ) ತಾನೂ ತಳಮಳವನ್ನು ಹೊಂದುವದಿಲ್ಲವೊ (ಹರ್ಷಾಮರ್ಷಭಯೋದ್ವೇಗೈಃ) ತನಗೆ ಬೇಕಾದ್ದು ದೊರೆಯಿತೆಂದು ಮನಸ್ಸು ಉಬ್ಬುವದು, ಮತ್ತೊಬ್ಬರ ಏಳಿಗೆಯನ್ನು ಸಹಿಸದಿರುವದು, ದುಷ್ಟಮೃಗಾದಿಗಳ ಹೆದರಿಕೆ, ಒಂಟಿಯಾಗಿ ಹೋಗಿರಲೆಂಬ ತಳಮಳ- ಇವುಗಳಿಂದ (ಯಃ) ಯಾವನು (ಮುಕ್ತಃ) ಬಿಡಲ್ಪಟ್ಟವನಾಗಿರುವನೊ (ಸ ಚ) ಅವನೂ (ಮೇ) ನನಗೆ (ಪ್ರಿಯಃ) ಬೇಕಾದವನು.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ ೧೬ ॥**

(ಯಃ) ಯಾವನು (ಅನಪೇಕ್ಷಃ) ದೇಹೇಂದ್ರಿಯಾದಿಗಳ ಸುಖಕ್ಕೆಂದು ಏನನ್ನೂ ಬಯಸದಿರುವನೊ (ಶುಚಿಃ) ಹೊರಗೂ ಒಳಗೂ ಶುಚಿಯಾಗಿರುವನೊ (ದಕ್ಷಃ) ಸಮರ್ಥನಾಗಿರುವನೊ (ಉದಾಸೀನಃ) ಯಾರ ಪಕ್ಷವನ್ನೂ ಹಿಡಿಯದಿರುವನೊ (ಗತವ್ಯಥಃ) ಹೆದರಿಕೆಯನ್ನು ಕಳೆದುಕೊಂಡಿರುವನೊ (ಸರ್ವಾರಂಭಪರಿತ್ಯಾಗೀ) ತನ್ನ ದೇಹೇಂದ್ರಿಯಗಳ ಸುಖಕ್ಕೆಂದು ಯಾವ ಉದ್ಯೋಗವನ್ನೂ ಹಿಡಿಯದಿರುವನೊ, (ಸಃ) ಆ (ಮದ್ಭಕ್ತಃ) ನನ್ನ ಭಕ್ತನು (ಮೆ) ನನಗೆ (ಪ್ರಿಯಃ) ಬೇಕಾದವನು

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ ॥ ೧೭ ॥**

(ಯಃ) ಯಾವನು (ನ ಹೃಷ್ಯತಿ) ಬೇಕಾದದ್ದು ದೊರೆಯಿತೆಂದು ಹಿಗ್ಗುವದಿಲ್ಲವೊ (ನ ದ್ವೇಷ್ಟಿ) ಬೇಡವಾದದ್ದು ಗಂಟುಬಿತ್ತೆಂದು ದ್ವೇಷಿಸುವ

ದಿಲ್ಲವೊ (ನ ಶೋಚತಿ) ಬೇಕಾಗಿದ್ದದ್ದು ಹೋಯಿತೆಂದು ಅಳುವದಿಲ್ಲವೊ (ನ ಕಾಂಕ್ಷತಿ) ಬೇಕಾದದ್ದೊಂದು ದೊರೆಯಬೇಕೆಂದು ಬಯಸುವದಿಲ್ಲವೊ (ಶುಭಾಶುಭಪರಿತ್ಯಾಗೀ) ತನಗೆ ಒಳ್ಳೆಯದಾಗುವ ಅಥವಾ ಕೆಟ್ಟದ್ದಾಗುವ ಕರ್ಮಗಳನ್ನೆಲ್ಲ ಬಿಟ್ಟಿರುವಂಥ ಮತ್ತು (ಭಕ್ತಿಮಾನ್) ನನ್ನಲ್ಲಿ ಪ್ರೇಮಾತಿಶಯವುಳ್ಳವನಾಗಿರುವಂಥ (ಸಃ) ಅವನು (ಮೇ) ನನಗೆ (ಪ್ರಿಯಃ) ಬೇಕಾದವನು

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ ೧೮ ॥**

(ಶತ್ರೌ ಚ) ಅಪಕಾರಮಾಡುವ ಹಗೆಯಲ್ಲಿಯೂ (ಮಿತ್ರೇ ಚ) ಉಪಕಾರಮಾಡುವ ಗೆಳೆಯನಲ್ಲಿಯೂ (ತಥಾ) ಹಾಗೆಯೇ (ಮಾನಾಪಮಾನಯೋಃ) ತನಗೆ ಪೂಜೆ ದೊರೆತಾಗ ಮತ್ತು ಅವಮಾನವಾದಾಗ (ಸಮಃ) ಅವೆಲ್ಲ ತನ್ನ ಕರ್ಮದ ಫಲಗಳೆಂದು ತಿಳಿದು ಒಂದೇ ರೀತಿ ಇರುವನು (ಶೀತೋಷ್ಣಸುಖದುಃಖೇಷು) ಶೀತ, ಉಷ್ಣ, ಸುಖ, ದುಃಖ–ಇವುಗಳಲ್ಲಿ (ಸಮಃ) ಒಂದೇ ರೀತಿ ಇರುವನು (ಸಂಗವಿವರ್ಜಿತಃ) ವಿಷಯುಗಳ ಮೇಲಿನ ಪ್ರೀತಿಯನ್ನು ಬಿಟ್ಟಿರುವನು

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥ ೧೯ ॥**

(ತುಲ್ಯನಿಂದಾಸ್ತುತಿಃ) ಹೊಗಳಿಕೆಯನ್ನೂ ಬೈಗುಳಗಳನ್ನೂ ಸಮವಾಗಿ ನೋಡುವವನು (ಮೌನೀ) ಹರಟದೆ ಇರುವವನು (ಯೇನ ಕೇನಚಿತ್) ಬದುಕಿರುವಷ್ಟಕ್ಕೆ ಏನು ಸಿಕ್ಕಿದರೂ (ಸಂತುಷ್ಟಃ) ಸಾಕೆಂದಿರುವವನು (ಅನಿಕೇತಃ) ಇಂಥದ್ದೇ ವಾಸಸ್ಥಲವೆಂಬ ನಿಯಮವಿಲ್ಲದವನು (ಸ್ಥಿರಮತಿಃ) ಆತ್ಮವಿಚಾರದಲ್ಲಿ ಬುದ್ಧಿಯು ನೆಲೆಗೊಂಡಿರುವವನು (ಭಕ್ತಿಮಾನ್) ಹೀಗೆ ನನ್ನ ಮೇಲೆ ಭಕ್ತಿಯುಳ್ಳಂಥ (ನರಃ) ಮನುಷ್ಯನು (ಮೇ) ನನಗೆ (ಪ್ರಿಯಃ) ಬೇಕಾದವನು.

ಇಷ್ಟೆಲ್ಲ ಧರ್ಮಗಳನ್ನೂ ಚೆನ್ನಾಗಿ ಮೈಗೂಡಿಸಿಕೊಂಡಿರುವವರು ನನಗೆ ಬೇಕಾದವರೆಂದಿಷ್ಟೇ ಅಲ್ಲ —

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ಧಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥**

(ಯೇ ತು) ಮತ್ತೆ ಯಾರು (ಇದಂ) ಈ (ಯಥೋಕ್ತಂ) ಮೇಲೆ ಹೇಳಿದಂಥ (ಧರ್ಮ್ಯಾಮೃತಂ) ಮೋಕ್ಷಕ್ಕೆ ಸಾಧನವಾದ್ದರಿಂದ ಅಮೃತವೆನಿಸಿದ ಧರ್ಮಸಮ್ಮತವಾದ ನಡೆವಳಿಕೆಗಳನ್ನು (ಪರ್ಯುಪಾಸತೇ) ಎಡೆಬಿಡದೆ ಮೈಗೂಡಿಸಿಕೊಳ್ಳುವ ಯತ್ನವನ್ನು ಮಾಡುತ್ತಿರುತ್ತಾರೊ ಆ (ಶ್ರದ್ಧಧಾನಾ) ಇದರಿಂದ ತಮ್ಮ ಉದ್ಧಾರವಾಗುವದೆಂದು ವಿಶ್ವಾಸವಿಟ್ಟಂಥ ಮತ್ತು (ಮತ್ಪರಮಾಃ) ನಿರ್ಗುಣಬ್ರಹ್ಮಸ್ವರೂಪವೇ ತಮ್ಮ ಹೆಚ್ಚಿನ ಗತಿಯೆಂದು ತಿಳಿದಿರುವಂಥ (ಭಕ್ತಾಃ) ಪರಮಾರ್ಥಜ್ಞಾನ ಸ್ವರೂಪವಾದ ಭಕ್ತಿಯುಳ್ಳ (ತೇ) ಅವರು (ಮೇ) ನನಗೆ (ಅತೀವಪ್ರಿಯಾಃ) ಬಹಳ ಬೇಕಾದವರು

ಇಲ್ಲಿಗೆ **ಭಕ್ತಿಯೋಗ**ವೆಂಬ ಹನ್ನೆರಡನೆ ಅಧ್ಯಾಯವು ಮುಗಿಯಿತು



# ಹದಿಮೂರನೆ ಅಧ್ಯಾಯ

ನಿರ್ಗುಣೋಪಾಸಕರ ಧರ್ಮವಿಶೇಷಗಳನ್ನು ಹೇಳಿದ ಮೇಲೆ ಯಾವ ಜ್ಞಾನದ ಬಲದಿಂದ ಅವರಲ್ಲಿ ಆ ಗುಣಗಳಿರುವವೋ ಅಂಥ ಆತ್ಮಜ್ಞಾನವನ್ನು ಅರ್ಜುನನಿಗೆ ತಿಳಿಸಬೇಕೆಂದು,

***ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು :—

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೧ ॥**

(ಕೌಂತೇಯ) ಅರ್ಜುನನೆ, ಕೇಳು. ನನ್ನ ಮಾಯಾಶಕ್ತಿಯು ಅಪರಾ, ಪರಾ—ಎಂದೆರಡು ಬಗೆಯಾಗಿರುವದೆಂದು ಹಿಂದೆ ಹೇಳಿದ್ದೆನಷ್ಟೆ (೭–೪, ೫) ಆ ಅಪರಾ ಎಂಬುದಕ್ಕೆ ಕ್ಷೇತ್ರವೆಂದೂ ಪರಾ ಎಂಬುದಕ್ಕೆ ಕ್ಷೇತ್ರಜ್ಞನೆಂದೂ ಹೆಸರಿಟ್ಟು ಅದನ್ನು ಇಲ್ಲಿ ಬೆಳೆಸಿ ಹೇಳುತ್ತೇನೆ, ಕೇಳು. (ಇದಂ) ಈ (ಶರೀರಂ) ಶರೀರವು (ಕ್ಷೇತ್ರಂ) ಕ್ಷೇತ್ರವು (ಇತಿ) ಎಂದು (ಅಭಿಧೀಯತೇ) ಹೇಳಲಾಗುವದು ಕ್ಷೇತ್ರವೆಂಬ ಮಾತಿಗೆ ತಾನಾಗಿ ಕ್ಷಯಿಸಿ ಹೋಗುವದೆಂತಲೂ ಕರ್ಮಫಲಗಳಿಗೆ ಆಧಾರವಾಗಿ ಸಂಸಾರವೆಂಬ ವೃಕ್ಷವನ್ನು ಬೆಳೆಸುವ ಹೊಲದಂತಿರುವದೆಂತಲೂ ಅರ್ಥ (ಏತತ್) ಈ ಶರೀರವನ್ನು (ಯಃ) ಯಾವನು (ವೇತ್ತಿ) ಉಗುರ ಮೊನೆಯಿಂದ ಕೂದಲ ತುದಿಯವರೆಗೂ ತನ್ನ ಎದುರಿನ ವಸ್ತುವಾಗಿ ಮಾಡಿಕೊಂಡು ತಾನು ಅದಕ್ಕೆ ಬೇರೆಯಾದವನಾಗಿ ನೋಡುವನೊ (ತಂ) ಅವನನ್ನು (ತದ್ವಿದಃ) ಆ ಕ್ಷೇತ್ರ ಕ್ಷೇತ್ರಜ್ಞಸ್ವರೂಪಗಳನ್ನರಿತವರು (ಕ್ಷೇತ್ರಜ್ಞ ಇತಿ) ಕ್ಷೇತ್ರಜ್ಞನೆಂದು ಎಂದರೆ ಶರೀರವನ್ನು ತನಗಿಂತ ಬೇರೆಯಾಗಿ ತಿಳಿಯುವವನೆಂದು (ಪ್ರಾಹುಃ) ಹೇಳುತ್ತಾರೆ.

---

* ಒಂದು ಪ್ರತಿಯಲ್ಲಿ ಈ ಮಾತಿಗೆ ಮೊದಲು ಅರ್ಜುನನು "ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ । ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ॥"—ಶ್ರೀಕೃಷ್ಣನೆ, ಪ್ರಕೃತಿಯೆಂದರೇನು? ಪುರುಷನೆಂದರೇನು? ಕ್ಷೇತ್ರವೆಂದರೇನು? ಕ್ಷೇತ್ರಜ್ಞನೆಂದರೇನು? ಜ್ಞಾನವೆಂದರೇನು? ಜ್ಞೇಯವೆಂದರೇನು? ಇದನ್ನು ತಿಳಿಯಬೇಕೆಂದು ಬಯಸುತ್ತೇನೆ—ಎಂದಿದೆ ಇದನ್ನು ಯಾವ ವ್ಯಾಖ್ಯಾನಕಾರರೂ ಹಿಡಿದಿಲ್ಲ

ಕ್ಷೇತ್ರಕ್ಷೇತ್ರಜ್ಞಸ್ವರೂಪವನ್ನು ಇಷ್ಟು ಮಾತ್ರ ತಿಳಿದರೆ ಸಾಲದು. ಮತ್ತೇನೆಂದರೆ —

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥**
**॥ ೨ ॥**

(ಭಾರತ) ಅರ್ಜುನನೆ, ಕೇಳು (ಸರ್ವಕ್ಷೇತ್ರೇಷು) ಬ್ರಹ್ಮನ ಮೊದಲುಗೊಂಡು ಮೋಟುಮರದವರೆಗಿನ ಎಲ್ಲ ಶರೀರಗಳಲ್ಲಿಯೂ ಇರುವಂಥ (ಕ್ಷೇತ್ರಜ್ಞಂ ಚಾಪಿ) ಕ್ಷೇತ್ರಜ್ಞನನ್ನು (ಮಾಂ) ಹುಟ್ಟುಸಾವುಗಳಿಲ್ಲದ ಬ್ರಹ್ಮಸ್ವರೂಪವಾದ ನನ್ನನ್ನಾಗಿ (ವಿದ್ಧಿ) ತಿಳಿ. ಜಗತ್ತಿನಲ್ಲಿ ಕ್ಷೇತ್ರಕ್ಷೇತ್ರಜ್ಞರನ್ನು ಬಿಟ್ಟು ಇನ್ನೇನೂ ಇಲ್ಲವಾದ್ದರಿಂದ (ಕ್ಷೇತ್ರಕ್ಷೇತ್ರಜ್ಞಯೋಃ) ತಿಳಿಯಬೇಕಾದ ಕ್ಷೇತ್ರ, ಕ್ಷೇತ್ರಜ್ಞ–ಎಂಬೀ ಎರಡರ (ಜ್ಞಾನಂ) ಜ್ಞಾನವೆಂಬುವದು (ಯತ್) ಯಾವದೊ (ತತ್) ಅದು (ಜ್ಞಾನಂ) ಸರಿಯಾದ ಜ್ಞಾನವೆಂದು (ಮಮ) ನನ್ನ (ಮತಂ) ಅಭಿಪ್ರಾಯವು ಎಷ್ಟೋ ಜನರು ವಿಚಾರಕಾಲದಲ್ಲಿ ತಮ್ಮ ಸ್ವರೂಪವು ಶರೀರಕ್ಕಿಂತ ಬೇರೆಯೆಂದು ತಿಳಿಯುವರಾದರೂ ಆ ತಮ್ಮ ಆತ್ಮವು ಆ ಒಂದು ಶರೀರಮಾತ್ರದ ಸ್ವಾಮಿಯೆಂತಲೂ ನಾಶವಾಗುವಂಥದ್ದೆಂತಲೂ ಏನಾದರೂ ಕರ್ಮಗಳನ್ನು ಮಾಡುತ್ತ ಫಲಗಳನ್ನು ಅನುಭವಿಸುತ್ತಿರುವದೆಂತಲೂ ತಿಳಿದಿರುತ್ತಾರೆ ಅದನ್ನು ತಪ್ಪೆಂದೂ ಆ ಆತ್ಮವೆ ಎಲ್ಲ ಶರೀರಗಳ ಸ್ವಾಮಿಯೆಂದೂ ಅದು ನಾಶವಾಗದೆ ಎಂದೆಂದಿಗೂ ಹಾಗೆಯೇ ಇರುವದೆಂದೂ ಅದಕ್ಕೆ ಕರ್ಮಗಳ ಮತ್ತು ಅವುಗಳ ಫಲಗಳ ಸಂಬಂಧವಿಲ್ಲವೆಂದೂ ತಿಳಿಯಬೇಕು.

ಈ ಅಭಿಪ್ರಾಯವು ಹೇಗೆ ಸಮಂಜಸವೆಂಬುದನ್ನು ವಿವರಿಸುತ್ತೇನೆ; ಕೇಳು —

**ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩ ॥**

(ತತ್) ಮೇಲೆ ಹೇಳಿದ (ಕ್ಷೇತ್ರಂ) ಕ್ಷೇತ್ರವೆನ್ನುವದು (ಯಚ್ಚ) ಯಾವ ಸ್ವಭಾವದ್ದು ? (ಯಾದೃಕ್ಚ) ಇಚ್ಛೆ ಮೊದಲಾದ ಯಾವ ಧರ್ಮ ಗಳನ್ನುಳ್ಳದ್ದು ? (ಯದ್ವಿಕಾರಿ) ಇಂದ್ರಿಯ ಮೊದಲಾದ ಯಾವ ವಿಕಾರ ಗಳನ್ನುಳ್ಳದ್ದು ? (ಯತಶ್ಚ) ಯಾವ ಕಾರಣದಿಂದ (ಯತ್) ಯಾವ ಕಾರ್ಯ ? (ಸ ಚ) ಆ ಕ್ಷೇತ್ರಜ್ಞನಾದರೂ (ಯಃ) ಯಾವ ಸ್ವಭಾವದವನು ? (ಯತ್ಪ್ರಭಾವಶ್ಚ) ಏನೇನು ಶಕ್ತಿವಿಶೇಷಗಳುಳ್ಳವನು ? (ತತ್) ಆ ಕ್ಷೇತ್ರ ಕ್ಷೇತ್ರಜ್ಞರ ನಿಜಸ್ಥಿತಿಯನ್ನು (ಸಮಾಸೇನ) ಸಂಕ್ಷೇಪವಾಗಿ ಹೇಳುವ (ಮೇ) ನನ್ನ ಮಾತನ್ನು (ಶೃಣು) ಕೇಳು

ಈ ಕ್ಷೇತ್ರಕ್ಷೇತ್ರಜ್ಞರ ನಿಜಸ್ಥಿತಿಯು ಬಹು ದೊಡ್ಡ ವಿಷಯ ಹೇಗೆಂದರೆ:—

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪ ॥**

(ಋಷಿಭಿಃ) ಯೋಗಶಾಸ್ತ್ರವನ್ನೆತ್ತಿ ಹಿಡಿಯುವ ವಸಿಷ್ಠರೇ ಮೊದಲಾದ ಋಷಿಗಳಿಂದಲೂ (ವಿವಿಧೈಃ) ನಾನಾ ಬಗೆಯಾಗಿರುವ (ಛಂದೋಭಿಃ) ಕರ್ಮ ಕಾಂಡದ ವೇದವಾಕ್ಯಗಳಿಂದಲೂ (ಹೇತುಮದ್ಭಿಃ) ಕಾರಣಗಳನ್ನು ಕೊಡು ವದರಿಂದ (ವಿನಿಶ್ಚಿತೈಃ) ಹೀಗೆಯೇ ಸರಿಯೆಂದು ಗೊತ್ತುಮಾಡಿ ಹೇಳಿರುವ (ಬ್ರಹ್ಮಸೂತ್ರಪದೈಶ್ಚೈವ) ಬ್ರಹ್ಮಸ್ವರೂಪವನ್ನು ಸೂಚಿಸುವ ಮಾತುಗಳಿರುವ ಉಪನಿಷದ್ವಾಕ್ಯಗಳಿಂದಲೂ (ಪೃಥಕ್) ಬೇರೆಬೇರೆಯಾಗಿ (ಬಹುಧಾ) ಅನೇಕ ಬಗೆಯಾಗಿ (ಗೀತಂ) ಹೇಳಲ್ಪಟ್ಟಿರುವದು

ಅದರಲ್ಲಿ ಕ್ಷೇತ್ರಲಕ್ಷಣವನ್ನು ಕೇಳು —

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯಗೋಚರಾಃ ॥ ೫ ॥**

**ಇಚ್ಛಾದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೬ ॥**

(ಮಹಾಭೂತಾನಿ) ಬಿಡಿಬಿಡಿಯಾದ ಎಲ್ಲ ವಸ್ತುಗಳಲ್ಲಿಯೂ ವ್ಯಾಪಿಸಿ ಕೊಂಡಿರುವ ನೆಲ, ಜಲ, ಅಗ್ನಿ, ವಾಯು, ಆಕಾಶ–ಈ ಸೂಕ್ಷ್ಮ ಭೂತಗಳು (ಅಹಂಕಾರಃ) ಆ ಮಹಾಭೂತಗಳಿಗೂ ಕಾರಣವಾಗಿ ಶರೀರದಲ್ಲಿ ನಾನು ನಾನೆಂದು ತೋರಿಕೊಳ್ಳುವಂಥ ಅಹಂಕಾರತತ್ತ್ವವು. (ಬುದ್ಧಿಃ) ಅಹಂಕಾರಕ್ಕೂ ಕಾರಣವಾದ ಮಹತ್ತತ್ತ್ವವು (ಅವ್ಯಕ್ತ ಮೇವ ಚ) ಬುದ್ಧಿಗೆ ಕಾರಣವಾದ ಮಾಯಾಶಕ್ತಿ (ದಶ) ಹತ್ತು (ಇಂದ್ರಿಯಾಣಿ) ಇಂದ್ರಿಯಗಳು–ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು (ಏಕಂ ಚ) ಅಂತಃಕರಣ ಒಂದು (ಇಂದ್ರಿಯ ಗೋಚರಾಃ) ಐದು ಜ್ಞಾನೇಂದ್ರಿಯಗಳಿಗೆ ಸಂಬಂಧಿಸಿದಂಥ (ಪಂಚ ಚ) ಶಬ್ದ, ಸ್ಪರ್ಶ, ರೂಪ, ರಸ, ಗಂಧ–ಎಂಬ ವಿಷಯಗಳು (ಇಚ್ಛಾ) ಹಿಂದೆ ಸುಖವಾಗಿ ಕಂಡದ್ದು ಮತ್ತೆ ದೊರೆಯಲೆಂದು ಬಯಕೆ (ದ್ವೇಷಃ) ಹಿಂದೆ ದುಃಖವಾಗಿ ಕಂಡದ್ದು ಈಗ ತೊಲಗಲೆಂಬ ಹಗೆತನ (ಸುಖಂ) ಮನಸ್ಸಿನ ಪ್ರಸನ್ನತೆಗೆ ಸಾಧನವಾದ ಅನುಕೂಲ (ದುಃಖಂ) ಮನಸ್ಸಿನ ತಳಮಳಕ್ಕೆ ಸಾಧನವಾದ ಅನನುಕೂಲ (ಸಂಘಾತಃ) ದೇಹ, ಇಂದ್ರಿಯ–ಮೊದಲಾದವುಗಳ ಗುಂಪು (ಚೇತನಾ) ಕಾದ ಕಬ್ಬಿಣದಲ್ಲಿ ತೋರುವ ಅಗ್ನಿಯಂತೆ ಆತ್ಮಚೈತನ್ಯದ ನೆರವನ್ನು ಪಡೆದು ದೇಹೇಂದ್ರಿಯಗಳಲ್ಲಿ ಕಾಣಿಸಿಕೊಳ್ಳುವ ಮನಸ್ಸಿನ ವೃತ್ತಿ (ಧೃತಿಃ) ದೇಹೇಂದ್ರಿಯಾದಿಗಳನ್ನು ಹಿಡಿದು ನಿಲ್ಲಿಸಿ ಕೊಳ್ಳುವ ಪ್ರಯತ್ನ (ಏತತ್) ಇದು (ಕ್ಷೇತ್ರಂ) ಕ್ಷೇತ್ರವೆಂದು (ಸಮಾಸೇನ) ಸಂಗ್ರಹವಾಗಿ (ಸವಿಕಾರಂ) ಹುಟ್ಟು, ಸಾವು–ಮೊದಲಾದ ವಿಕಾರಗಳುಳ್ಳ ಎಲ್ಲ ವಸ್ತುಗಳಿಂದ ಕೂಡಿ (ಉದಾಹೃತಂ) ಹೇಳಲ್ಪಟ್ಟಿತು ಇವೆಲ್ಲವೂ ಕ್ಷೇತ್ರಜ್ಞನ ಬೆಳಕಿನಿಂದ ಬೆಳಗುವ ಕಾರಣ ಜಡವಾದ ಇವು ಕ್ಷೇತ್ರ ವೆನಿಸುವವು ಹುಟ್ಟಿಹೋಗುವವುಗಳಾಗಿ ಕ್ಷೇತ್ರಜ್ಞನ ಬೆಳಕಿನಿಂದ ತೋರಿ ಕೊಳ್ಳುವ–ಎಂದರೆ ಕ್ಷೇತ್ರಜ್ಞನಿಗಿಂತ ಬೇರೆಯಾದ–ಜಡವಸ್ತುಗಳೆಲ್ಲ ಕ್ಷೇತ್ರ ವೆಂದಾಯಿತಷ್ಟೆ ಕ್ಷೇತ್ರಜ್ಞನ ವಿಚಾರವನ್ನಿನ್ನು ಹೇಳುತ್ತೇನೆ. ಅದನ್ನು ತಿಳಿದುಕೊಳ್ಳುವದಕ್ಕೇ ಮನಸ್ಸಿಗೊಂದು ಬಗೆಯ ಯೋಗ್ಯತೆ ಬೇಕಾಗುತ್ತದೆ. ಆದ್ದರಿಂದ ಆ ಯೋಗ್ಯತೆಯನ್ನು ತಂದುಕೊಳ್ಳುವದಕ್ಕಾಗಿ ಕೆಲವು ಸಾಧನ ಗಳನ್ನು ಹೇಳುತ್ತೇನೆ ಅವುಗಳನ್ನು ಮೊದಲು ಕೇಳು :—

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೭ ॥**

(ಅಮಾನಿತ್ವಂ) ತಾನೆ ದೊಡ್ಡವನೆಂಬ ಹೆಮ್ಮೆ ಇಲ್ಲದಿರುವದು (ಅದಂಭಿತ್ವಂ) ಜನರ ಮುಂದೆ ತನ್ನ ಧರ್ಮವನ್ನು ತೋರಿಸಿಕೊಳ್ಳದೆ ಇರುವದು (ಅಹಿಂಸಾ) ಯಾವ ಪ್ರಾಣಿಯನ್ನೂ ಪೀಡಿಸದಿರುವದು (ಕ್ಷಾಂತಿಃ) ಬೇರೆಯವರು ತನಗೆ ತಪ್ಪು ಮಾಡಿದರೂ ಸಮಾಧಾನದಿಂದಿರುವದು (ಆರ್ಜವಂ) ಹೊರಗೊಂದು, ಒಳಗೊಂದು-ಇಲ್ಲದಿರುವದು (ಆಚಾರ್ಯೋಪಾಸನಂ) ಹುಟ್ಟುಸಾವುಗಳನ್ನು ಕಳೆಯುವ ಸಾಧನಗಳನ್ನು ಹೇಳುವ ಗುರುವಿನ ಸೇವೆಯನ್ನು ಮಾಡುವದು (ಶೌಚಂ) ಶರೀರಸಿಂದ ಮೈಯ ಕೊಳೆಯನ್ನು ಕಳೆಯುವದು ಮತ್ತು ವಿವೇಕಬುದ್ಧಿಯಿಂದ ಬಯಕೆ, ಹಗೆತನ-ಮೊದಲಾದ ಮನಸ್ಸಿನ ಕೊಳೆಯನ್ನು ಕಳೆಯುವದು (ಸ್ಥೈರ್ಯಂ) ಹುಟ್ಟುಸಾವುಗಳನ್ನು ಕಳೆದುಕೊಳ್ಳುವ ಪ್ರಯತ್ನದಿಂದ ಕದಲದೆ ಇರುವದು (ಆತ್ಮವಿನಿಗ್ರಹಃ) ಕಂಡ ಕಂಡ ಕಡೆಗೆ ಹರಿದಾಡುವದಕ್ಕೆ ಹೋಗುವ ದೇಹ, ಇಂದ್ರಿಯ, ಮನಸ್ಸು-ಇವುಗಳನ್ನೆಲ್ಲ ಒಳ್ಳೇ ದಾರಿಯಲ್ಲಿಯೇ ತಡೆದಿಡುವದು

**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ ೮ ॥**

(ಇಂದ್ರಿಯಾರ್ಥೇಷು) ಇಂದ್ರಿಯಗಳು ತಮ್ಮ ಸುಖಕ್ಕಾಗಿ ಬಯಸಿದ ವಿಷಯಗಳಲ್ಲಿ (ವೈರಾಗ್ಯಂ) ಪ್ರೀತಿಯಿಲ್ಲದಿರುವಿಕೆ (ಅನಹಂಕಾರ ಏವ ಚ) ಗರ್ವವಿಲ್ಲದಿರುವದು. (ಜನ್ಮ ದರ್ಶನಂ) ಹುಟ್ಟುವಿಕೆಯಲ್ಲಿ ಗರ್ಭವಾಸವೇ ಮೊದಲಾದ ದೋಷವಿರುವದೆಂದೂ ಸಾವಿನಲ್ಲಿ ಬಗೆಬಗೆಯಾದ ಸಂಕಟಗಳನ್ನು ಕೊಡುವ ದೋಷವಿರುವದೆಂದೂ ಮುಪ್ಪಿನಲ್ಲಿ ಶರೀರದ ಶಕ್ತಿಯನ್ನೂ ಕಾಂತಿಯನ್ನೂ ಕುಂದಿಸಿ ನೆನಪನ್ನು ಹಾರಿಸುವ ದೋಷವಿರುವದೆಂದೂ ರೋಗದಲ್ಲಿ ವ್ಯಥೆಯನ್ನು ಕೊಡುವ ದೋಷವಿರುವದೆಂದೂ ದುಃಖವಂತು ದೋಷದ ಮೂರ್ತಿಯೇ ಆಗಿರುವದೆಂದೂ ಆಲೋಚಿಸುವದು ಅಥವ ಹುಟ್ಟು, ಸಾವು, ಮುಪ್ಪು, ರೋಗ-

ಇವುಗಳೆಲ್ಲ ದುಃಖಕ್ಕೆ ಕಾರಣವಾಗಿರುವವೆಂಬ ದೋಷವನ್ನು ಮನಸ್ಸಿಗೆ ತಂದುಕೊಳ್ಳುವದು

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವ ಮಿಷ್ಟಾನಿಷ್ಟೋಪಪತ್ತಿಷು ॥ ೯ ॥**

(ಅಸಕ್ತಿಃ) ಸ್ವಭಾವವಾಗಿ ಬೇಕೆನಿಸುವಂಥ ವಿಷಯಗಳಲ್ಲಿ ಪ್ರೀತಿ ಇಲ್ಲದಿರುವದು (ಪುತ್ರದಾರಗೃಹಾದಿಷು) ಮಕ್ಕಳು, ಹೆಂಡತಿ, ಮನೆ-ಮೊದಲಾದವುಗಳಲ್ಲಿ (ಅನಭಿಷ್ವಂಗಃ) ಅವೇ ತಾನೆಂದೂ ಅವಕ್ಕೆ ಹಾನಿಯಾದರೆ ತನ್ನ ಹಾನಿಯಾಯಿತೆಂದು ಅತಿ ಪ್ರೀತಿಯನ್ನಿಟ್ಟುಕೊಳ್ಳದಿರುವದು. (ನಿತ್ಯಂ) ಯಾವಾಗಲೂ (ಇಷ್ಟಾನಿಷ್ಟೋಪಪತ್ತಿಷು) ಬೇಕೆನಿಸಿದ್ದು ದೊರೆತಾಗಲೂ ಬೇಡವೆನಿಸಿದ್ದು ಬಂದು ಗಂಟುಬಿದ್ದಾಗಲೂ (ಸಮಚಿತ್ತತ್ವಂ ಚ) ಹಿಗ್ಗದ ತಗ್ಗದ ಒಂದೇ ರೀತಿಯಲ್ಲಿರುವದು

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೦ ॥**

(ಮಯಿ) ಪರಮೇಶ್ವರನಾದ ನನ್ನಲ್ಲಿ (ಅನನ್ಯಯೋಗೇನ) ನನ್ನನ್ನೇ ಗತಿಯೆಂದು ನಂಬಿರುವಂಥದ್ದಾಗಿ (ಅವ್ಯಭಿಚಾರಿಣೀ) ಹೊಯ್ದಾಡದೆ ಇರುವಂಥ (ಭಕ್ತಿಶ್ಚ) ಭಕ್ತಿಯೂ (ವಿವಿಕ್ತದೇಶಸೇವಿತ್ವಂ) ಶುದ್ಧವಾಗಿಯೂ ಯಾವ ಬಾಧೆಯೂ ಇಲ್ಲದ್ದಾಗಿಯೂ ಮನಸ್ಸಿಗೆ ಉಲ್ಲಾಸವನ್ನುಂಟುಮಾಡುವದಾಗಿಯೂ ಇರುವ ನದೀತೀರ, ಗುಹೆ-ಮೊದಲಾದ ಸ್ಥಲಗಳನ್ನಾಶ್ರಯಿಸುವದು (ಜನಸಂಸದಿ) ಆತ್ಮಜ್ಞಾನದ ಕಡೆಗೆ ಮನಸ್ಸಿನ ಒಲವಿಲ್ಲದೆ ಹೊರಗೇ ಹರಿದಾಡುವ ಮನಸ್ಸುಳ್ಳ ಪಾಮರರಾದ ಜನರ ಗುಂಪಿನಲ್ಲಿ (ಅರತಿಃ) ಹಿತವೆನಿಸದಿರುವದು.

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೧ ॥**

(ಅಧ್ಯಾತ್ಮಜ್ಞಾನನಿತ್ಯತ್ವಂ) ಆತ್ಮವಿಷಯಕವಾದ ಜ್ಞಾನವನ್ನೇ ಯಾವಾಗಲೂ ನೈಗೂಡಿಸಿಕೊಳ್ಳುತ್ತಿರುವದು (ತತ್ತ್ವಜ್ಞಾನಾರ್ಥದರ್ಶನಂ) ಅಮಾನಿತ್ವ ಮೊದಲಾದವುಗಳಿಂದ ಉಂಟಾಗುವ ತತ್ವಜ್ಞಾನದ ಪ್ರಯೋಜನವಾದ ಮೋಕ್ಷದ ವಿಷಯವನ್ನೇ ಆಲೋಚಿಸುತ್ತಿರುವದು (ಏತತ್) ಅಮಾನಿತ್ವ ಮೊದಲುಗೊಂಡು ಈವರೆಗೆ ಹೇಳಿದ್ದೆಲ್ಲ (ಜ್ಞಾನಂ) ಜ್ಞಾನಕ್ಕೆ ಸಾಧನವಾದ್ದರಿಂದ ಜ್ಞಾನವು (ಇತಿ) ಎಂದು (ಪ್ರೋಕ್ತಂ) ಹೇಳಿಸಿಕೊಳ್ಳುವದು (ಯತ್) ಯಾವದು (ಅತಃ) ಈ ಅಮಾನಿತ್ವ ಮೊದಲಾದವುಗಳಿಂದ (ಅನ್ಯಥಾ) ಬೇರೆಯಾಗಿ ಮಾನಿತ್ವ ಮೊದಲಾಗಿರುವವೋ ಅವೆಲ್ಲ (ಅಜ್ಞಾನಂ) ಅಜ್ಞಾನವೆನಿಸುವವು ಏಕೆಂದರೆ ಮಾನಿತ್ವ ಮೊದಲಾದವುಗಳೆಲ್ಲ ಸಂಸಾರವನ್ನು ಮುಂದುವರಿಸುವ ಅಜ್ಞಾನವನ್ನು ಹೆಚ್ಚಿಸುವವು

ಇನ್ನು ತಿಳಿಯಬೇಕಾಗಿ ಉಳಿದಿರುವ ಕ್ಷೇತ್ರಜ್ಞಸ್ವರೂಪವನ್ನು ಹೇಳುತ್ತೇನೆ, ಕೇಳು:—

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿಯಜ್ಜ್ಞಾತ್ವಾಽಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೨ ॥**

(ಯತ್) ತಿಳಿಯಬೇಕಾಗಿರುವ ಯಾವದನ್ನು (ಜ್ಞಾತ್ವಾ) ತಿಳಿದರೆ (ಅಮೃತಂ) ಸಾವಿಲ್ಲದಂಥ ಮೋಕ್ಷವನ್ನು (ಅಶ್ನುತೇ) ಹೊಂದುತ್ತಾನೊ ಅಂಥ (ಜ್ಞೇಯಂ) ತಿಳಿಯಬೇಕಾದ ಆತ್ಮಸ್ವರೂಪವು (ಯತ್) ಯಾವದೋ (ತತ್) ಅದನ್ನು (ಪ್ರವಕ್ಷ್ಯಾಮಿ) ಚೆನ್ನಾಗಿ ಹೇಳುತ್ತೇನೆ. ಅದು ಯಾವದೆಂದರೆ (ಪರಂ ಬ್ರಹ್ಮ) ಲೋಕಗಳನ್ನು ಮಾಡುವ ಹಿರಣ್ಯಗರ್ಭಬ್ರಹ್ಮನಿಗಿಂತ ಮೇಲಿನದಾದ ಶುದ್ಧಬ್ರಹ್ಮ ಅದು ಎಂಥದ್ದೆಂದರೆ (ಅನಾದಿಮತ್) ಆದಿಯಿಲ್ಲದ್ದು–ಎಂದರೆ ಹುಟ್ಟುವಿಕೆಯೆಂಬುದಿಲ್ಲದ್ದು, ಅಥವ ಕಾರ್ಯರೂಪವಲ್ಲದ್ದು ಮತ್ತು (ತತ್) ಅದು (ನ ಸತ್) ಇದೆಯೆಂದು ಹೇಳಿಸಿಕೊಳ್ಳುವಂಥದ್ದಲ್ಲವೆಂದೂ (ನ ಅಸತ್) ಇಲ್ಲದ್ದೆಂದು ಹೇಳಿಸಿಕೊಳ್ಳುವಂಥದ್ದಲ್ಲವೆಂದೂ (ಉಚ್ಯತೇ) ಎನಿಸುವುದು.

ಇಂದ್ರಿಯಗಳಿಗೆ ಗೋಚರವಾಗುವ ವಿಷಯಗಳು 'ಇದೆ' ಎಂದೂ 'ಇಲ್ಲ' ಎಂದೂ ಹೇಳಿಸಿಕೊಳ್ಳುವದಕ್ಕೆ ತಕ್ಕವುಗಳು. ಈ ಆತ್ಮ ವಸ್ತು ಇಂದ್ರಿಯಗಳಿಗೂ ಮನಸ್ಸಿಗೂ ಕೂಡ ಗೋಚರವಾಗತಕ್ಕದ್ದಲ್ಲ ವಾದ್ದರಿಂದ ಇದನ್ನು ಹೀಗೆ ಹೇಳುವದಕ್ಕೂ ಬರುವದಿಲ್ಲ

'ಇದೆ' ಎಂದು ಹೇಳುವದಕ್ಕೆ ಬರದೆ ಹೋದಮೇಲೆ ಅದು ಇಲ್ಲದ್ದೇ ಆಯಿತೆಂದು ತಿಳಿಯಬೇಡ ಅದರ ಇರುವಿಕೆಯನ್ನು ತಿಳಿಯುವ ಒಂದು ಸ್ಥೂಲಮಾರ್ಗವನ್ನು ಕೇಳು —

**ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩ ॥**

ಜಗತ್ತಿನಲ್ಲಿ ಸರ್ವಪ್ರಾಣಿಗಳ ಇರುವಿಕೆಗೂ ಆ ಬ್ರಹ್ಮವಸ್ತುವೇ ಆಧಾರವಾದ್ದರಿಂದ ಅದು (ಸರ್ವತಃ) ಎಲ್ಲ ಕಡೆಯಲ್ಲಿಯೂ (ಪಾಣಿಪಾದಂ) ಕೈಕಾಲುಗಳುಳ್ಳದ್ದು (ತತ್) ಅದು (ಸರ್ವತಃ) ಎಲ್ಲ ಕಡೆಯಲ್ಲಿಯೂ (ಅಕ್ಷಿಶಿರೋಮುಖಂ) ಕಣ್ಣು, ತಲೆ, ಮುಖ–ಇವುಗಳುಳ್ಳದ್ದು (ಸರ್ವತಃ) ಎಲ್ಲ ಕಡೆಗಳಲ್ಲಿಯೂ (ಶ್ರುತಿಮತ್) ಕಿವಿಗಳುಳ್ಳದ್ದು (ಲೋಕೇ) ಜಗತ್ತಿನಲ್ಲಿ (ಸರ್ವಂ) ಎಲ್ಲ ಪ್ರಾಣಿಗಳನ್ನೂ (ಆವೃತ್ಯ) ಮುಸುಕಿಕೊಂಡು (ತಿಷ್ಠತಿ) ಇರುವದು ಎಲ್ಲ ಪ್ರಾಣಿಗಳ ಕೈ, ಕಾಲು–ಮೊದಲಾದ ಅವಯವ ಗಳೆಲ್ಲಾ ಒಳಗಿರುವ ಆತ್ಮನ ಬಲದಿಂದ ಕರ್ಮವನ್ನು ಮಾಡುವದರಿಂದ ಅವೆಲ್ಲ ಆ ಬ್ರಹ್ಮವಸ್ತುವಿನದೇ ಎಂದು ತಿಳಿಯಬೇಕು ಆದರೆ ಈ ಅವಯವಗಳೆಲ್ಲ ಶರೀರಕ್ಕೆ ಸಂಬಂಧಪಟ್ಟವುಗಳೇ ಹೊರತು ಆತ್ಮನಿಗಲ್ಲವಾದ ಕಾರಣ ಆತ್ಮನು ಇರುವವನೆಂದೂ ಇಲ್ಲದವನೆಂದೂ ಹೇಗೂ ಹೇಳುವದಕ್ಕೆ ಬರತಕ್ಕವನಲ್ಲವೆಂದು ಮೊದಲು ಹೇಳಿದ್ದಾಗಿದೆ ಇಲ್ಲಿ ಆತ್ಮನಿಗೆ ಅವಯವ ಗಳನ್ನು ಹೇಳಿರುವದು ಜಗತ್ತಿನಲ್ಲ ಶರೀರದ ಕೈಕಾಲುಗಳನ್ನೇ ನನ್ನ ಕೈಕಾಲುಗಳೆಂದು ಆತ್ಮನಿಗೆ ಸಂಬಂಧಿಸಿಕೊಳ್ಳುವಂತೆ ಉಪಾಧಿಯಾದ ಕ್ಷೇತ್ರವನ್ನೆ ಆತ್ಮನನ್ನಾಗಿ ತಿಳಿದುಕೊಂಡ ದೃಷ್ಟಿಯನ್ನವಲಂಬಿಸಿದ್ದೆಂದು ತಿಳಿಯಬೇಕು

ನಿಜಸ್ಥಿತಿಯೇನೆಂದರೆ —

**ಸರ್ವೇಂದ್ರಿಯಗುಣಾಭಾಸಂ* ಸರ್ವೇಂದ್ರಿಯವಿವರ್ಜಿತಮ್ ।**
**ಅಸಕ್ತಂ† ಸರ್ವಭೃಚ್ಚೈವ ನಿರ್ಗುಣಂ‡ ಗುಣಭೋಕ್ತೃ ಚ ॥ ೧೪ ॥**

(ಸರ್ವೇಂದ್ರಿಯಗುಣಾಭಾಸಂ) ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು, ಅಂತಃಕರಣ–ಈ ಎಲ್ಲ ಬಹಿರಿಂದ್ರಿಯಗಳ ಮತ್ತು ಅಂತರಿಂದ್ರಿಯದ ಗುಣಗಳಿಂದ ಕೂಡಿದಂತೆ ತೋರುವದು ಚನ್ನಾಗಿ ವಿಚಾರದೃಷ್ಟಿಯನ್ನು ಹರಡಿ ನೋಡಿದರೆ (ಸರ್ವೇಂದ್ರಿಯವಿವರ್ಜಿತಂ) ಯಾವ ಇಂದ್ರಿಯಗಳೂ ಇಲ್ಲದಿರುವಂಥದ್ದು (ಅಸಕ್ತಂ) ಹೀಗೆ ಯಾವ ಇಂದ್ರಿಯಗಳೂ ಇಲ್ಲದ್ದರಿಂದಲೆ ಯಾವದರಲ್ಲಿಯೂ ಅತಿಪ್ರೇಮವಿಲ್ಲದ್ದು (ಸರ್ವಭೃಚ್ಚೈವ) 'ಇದು ಇದೆ' ಎಂಬ ರೂಪದಿಂದ ಎಲ್ಲ ವಸ್ತುಗಳಲ್ಲಿಯೂ ವ್ಯಾಪಿಸಿಕೊಂಡಿರುವದರಿಂದ ಎಲ್ಲ ವಸ್ತುಗಳನ್ನೂ ಧರಿಸಿರುವಂಥದ್ದು (ನಿರ್ಗುಣಂ) ಸತ್ತ್ವರಜಸ್ತಮೋಗುಣಗಳ ಗೊಲೆಗೆ ಬೀಳದಿರುವಂಥದ್ದು ಆದರೂ (ಗುಣಭೋಕ್ತೃ ಚ) ಶಬ್ದ, ಸ್ಪರ್ಶ–ಮೊದಲಾದವುಗಳ ಮೂಲಕ ಸುಖ, ದುಃಖ–ಫಲಗಳನ್ನು ಉಣ್ಣುವಂಥದ್ದೂ ಆಗಿರುವದು

---

* "ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ"_ ಅವನು ಕೈಕಾಲಿಲ್ಲದವನು, ಬೇಗ ಓಡುವವನು ಮತ್ತು ತೆಗೆದುಕೊಳ್ಳುವವನು ಅವನು ಕಣ್ಣಿಲ್ಲದೆ ನೋಡುತ್ತಾನೆ ಅವನು ಕಿವಿಯಿಲ್ಲದೆ ಕೇಳುತ್ತಾನೆ —ಶ್ರು

† "ಅಸಂಗೋ ಹ್ಯಯಂ ಪುರುಷಃ, ಅಸಂಗೋ ನ ಹಿ ಸಜ್ಜತೇ" — ಈ ಪುರುಷನು ಅಸಂಗನಾಗಿರುವನು, ಅಸಂಗನಾದ ಇವನು ಯಾವದರೊಡನೆಯೂ ಸಂಬಂಧವನ್ನು ಹೊಂದುವದಿಲ್ಲ —ಶ್ರು

‡ "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" — ಪರಮಾತ್ಮನು ಸಾಕ್ಷಿಯಾಗಿಯೂ, ಚೇತನನಾಗಿಯೂ, ಎರಡನೆಯವನಿಲ್ಲದವನಾಗಿಯೂ, ಗುಣರಹಿತನಾಗಿಯೂ ಇರುವನು.

—ಶ್ರು.

ಮತ್ತು

**ಬಹಿರಂತಶ್ಚ* ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ† ದೂರಸ್ಥಂ ಚಾಂತಿಕೇ ಚ ತತ್ ॥೧೫॥**

ಭ್ರಮೆಯಿಂದ ಕಾಣುವ ಹಾವು, ಕೋಲು–ಮೊದಲಾದವುಗಳ ಒಳಗೂ ಹೊರಗೂ ಹಗ್ಗವೇ ಇರುವಂತೆ ಬ್ರಹ್ಮವು (ಭೂತಾನಾಂ) ಎಲ್ಲ ಪ್ರಾಣಿಗಳ (ಬಹಿಃ) ಶರೀರದ ಹೊರಗೂ (ಅಂತಶ್ಚ) ಶರೀರದ ಒಳಗೂ ವ್ಯಾಪಿಸಿ ಕೊಂಡಿರುವದು ಆದ್ದರಿಂದಲೆ (ಅಚರಂ) ಸ್ಥಾವರರೂಪವಾದ ಮತ್ತು (ಚರಮೇವ ಚ) ಜಂಗಮವಾದ ಎಲ್ಲವೂ ಆ ಬ್ರಹ್ಮವೆ ಇಂಥದ್ದು ಎಲ್ಲರಿಗೂ ಏಕೆ ತಿಳಿಯಲಾಗುವದಿಲ್ಲವೆಂದರೆ (ಸೂಕ್ಷ್ಮತ್ವಾತ್) ಆಕಾಶ ಮೊದಲಾದವು ಗಳಿಗಿಂತ ಸೂಕ್ಷ್ಮವಾದ್ದರಿಂದ (ತತ್) ಆ ಬ್ರಹ್ಮವು (ಅವಿಜ್ಞೇಯಂ) ತಿಳಿಯುವದಕ್ಕಾಗುವದಿಲ್ಲ ಆದ್ದರಿಂದಲೇ (ತತ್) ಅದು (ದೂರಸ್ಥಂ ಚ) ಹೊರಹೊರಗೇ ಹರಿದಾಡುವ ಮನಸ್ಸಿನವರಿಗೆ ಲಕ್ಷಕೋಟಿಯೋಜನ ದೂರದಲ್ಲಿರುವಂತೆಯೂ ಇರುವದು (ಅಂತಿಕೇ ಚ) ವಿವೇಕ, ವೈರಾಗ್ಯ–ಮೊದಲಾದವುಗಳಿರುವವರಿಗೆ ತೀರ ಹತ್ತಿರವಾಗಿ ತಮ್ಮ ಆತ್ಮವೇ ಆಗಿರುವದು

* "ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ"—ಆ ಬ್ರಹ್ಮವೇ ಎಲ್ಲ ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವದು —ಶ್ರು 'ಸರ್ವಂ ಹ್ಯೇತದ್ಬ್ರಹ್ಮ' ಈ ಎಲ್ಲವೂ ಬ್ರಹ್ಮವೆ —ಶ್ರು

† "ಸೂಕ್ಷ್ಮಾತ್ಸೂಕ್ಷ್ಮತರಂ ನಿತ್ಯಂ" ಬ್ರಹ್ಮವು ಆಕಾಶಾದಿಸೂಕ್ಷ್ಮ ಪದಾರ್ಥಗಳಿಗಿಂತಲೂ ಬಹಳ ಸೂಕ್ಷ್ಮವಾದದ್ದು ಮತ್ತು ನಿತ್ಯವಾದದ್ದು —ಶ್ರು "ದೂರಾತ್ಸು ದೂರೇ ತದಿಹಾಂತಿಕೇ ಚ"—ದೂರದಲ್ಲಿರುವ ಎಲ್ಲಕ್ಕಿಂತಲೂ ದೂರನು, ಅವನು ಸಮೀಪದಲ್ಲಿಯೂ ಇರುವನು —ಶ್ರು

ಈ ಆತ್ಮನು ದೇಹದೃಷ್ಟಿಯಿಂದ ಅನೇಕವಾಗಿ ಕಂಡರೂ —

**ಅವಿಭಕ್ತಂ* ಚ ಭೂತೇಷು ವಿಭಕ್ತಮಿವ† ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೬ ॥**

(ಭೂತೇಷು) ಎಲ್ಲ ಪ್ರಾಣಿಗಳಲ್ಲಿಯೂ (ಅವಿಭಕ್ತಂ ಚ) ಬೇರೆಬೇರೆಯಾದವನಾಗಿಲ್ಲದವನು, ಎಂದರೆ ಆಕಾಶದಂತೆ ಒಂದೇ ಆಗಿರುವನು ಆದರ (ವಿಭಕ್ತಮಿವ ಚ) ದೇಹದೃಷ್ಟಿಯಿಂದ ನೋಡುವವರಿಗೆ ಬೇರೆಬೇರೆಯಾಗಿರುವವನಾಗಿಯೂ (ಸ್ಥಿತಂ) ಇರುವನು ಬೇರೆಬೇರೆಯಾಗಿರುವ ಚೇತನನೊಬ್ಬನು ಬೇರೆಯೆಂದೂ ಜಗತ್ಕಾರಣವಾದ ಬ್ರಹ್ಮವು ಬೇರೆಯೆಂದೂ ತಿಳಿಯುವದು ಕೂಡ ತಪ್ಪಾಗುವದು ಏಕೆಂದರೆ ಯಾವದು ಬೇರೆಬೇರೆಯಾಗಿದ್ದಂತೆ ಕಾಣುತ್ತ ನಿಜವಾಗಿ ಒಂದೇ ಆಗಿರುವದೋ (ತತ್) ಆ (ಜ್ಞೇಯಂ) ತಿಳಿಯಬೇಕಾದ ಬ್ರಹ್ಮವು (ಭೂತಭರ್ತೃ ಚ) ಹಾವು, ಕೋಲು–ಮೊದಲಾದವುಗಳನ್ನೆಲ್ಲ 'ಇದು ಇದೆ' ಎಂಬ ರೂಪದಿಂದ ಹಗ್ಗವು ಹೇಗೆ ಧರಿಸಿಕೊಂಡಿರುವದೋ ಹಾಗೆ ಈ ಜಗತ್ತಿಗೆ ಆಧಾರವಾಗಿಯೂ ಇರುವದು ಮತ್ತು ಅದು (ಗ್ರಸಿಷ್ಣು) ಭ್ರಾಂತಿಯ ಹಾವು ಮೊದಲಾದವುಗಳನ್ನೆಲ್ಲ ಹಗ್ಗವು ನುಂಗಿ ನೀರು ಕುಡಿಯುವಂತೆ ಜಗತ್ತನ್ನೆಲ್ಲ ನುಂಗುವಂಥದ್ದೂ ಆಗಿರುವದು (ಪ್ರಭವಿಷ್ಣು ಚ) ಭ್ರಾಂತಿಯ ಹಾವು ಮೊದಲಾದವುಗಳನ್ನೆಲ್ಲ ಹೊರಗೆಡಹುವ ಹಗ್ಗದಂತೆ ಜಗತ್ತನ್ನೆಲ್ಲ ಹೊರಗೆಡಹುವಂಥದ್ದೂ ಆಗಿರುವದು

ಬ್ರಹ್ಮವು ಇದ್ದೂ ಕಾಣದಂಥದ್ದಲ್ಲವಾದರೆ ಅದು ಕತ್ತಲೆಯಾಗಿರಬಹುದೆಂದು ತಿಳಿಯಬೇಡ ಮತ್ತೇನೆಂದರೆ —

---

* "ಏಕೋ ದೇವಃ ಸರ್ವಭೂತೇಷು ಗೂಢಃ"—ಒಬ್ಬ ಆತ್ಮನೆ ಆ ಎಲ್ಲ ಪ್ರಾಣಿಗಳಲ್ಲಿಯೂ ಒಳಗಿರುವನು —ಶ್ರು

† "ದ್ವೈತಮಿವ ಭವತಿ"—ಎರಡನೆಯದರಂತೆ ಆಗುತ್ತದೆ —ಶ್ರು

**ಜ್ಯೋತಿಷಾಮಪಿ* ಯಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥†**
**॥ ೧೭ ॥**

(ತತ್) ಆ ಬ್ರಹ್ಮವು (ಜ್ಯೋತಿಷಾಮಪಿ) ಸೂರ್ಯ, ಚಂದ್ರ, ಅಗ್ನಿ, ವಿದ್ಯುತ್-ಮೊದಲಾದ ಹೊರಗಣ ಬೆಳಕುಗಳಿಗೂ ಮನಸ್ಸು, ಬುದ್ಧಿ-ಮೊದಲಾದ ಒಳಗಣ ಬೆಳಕುಗಳಿಗೂ (ಜ್ಯೋತಿಃ) ಬೆಳಕನ್ನು ಕೊಡುವಂಥದ್ದಾಗಿರುವದು ಹಾಗಾದರೆ ಆ ಬ್ರಹ್ಮವು ಸೂರ್ಯ ಮೊದಲಾದವುಗಳ ಜೊತೆಯ ಜಡವಸ್ತುವಾಗಿರುವದೆಂದರೆ (ತಮಸಃ) ಜಡರೂಪವಾದ ವಸ್ತುಗಳಿಗಿಂತ (ಪರಂ) ಹೆಚ್ಚಿನದು (ಉಚ್ಯತೇ) ಎನಿಸುವದು ಸೂರ್ಯ ಮೊದಲಾದ ವಸ್ತುಗಳೆಲ್ಲ ಸ್ವಸ್ವರೂಪದಿಂದ ಕತ್ತಲೆಯಾಗಿರುವವು ಬ್ರಹ್ಮವು ಅದಕ್ಕಿಂತ ಬೇರೆಯಾಗಿ ತಾನೇ ಬೆಳಕಿನ ಸ್ವರೂಪವೇ ಆಗಿರುವದು ಆ ಬ್ರಹ್ಮವು ನಮಗೆ ಸಿಲುಕದ ಮಾತೆಂದು ನಿರಾಶೆಯಾಗುವ ಹಾಗಿಲ್ಲ. ಏಕೆಂದರೆ ಅದು (ಜ್ಞಾನಂ) ಹಿಂದ ಹೇಳಿದ ಅಮಾನಿತ್ವಾದಿ ಜ್ಞಾನ ಸಾಧನಗಳ ರೂಪವಾಗಿರುವದು ಮತ್ತು (ಜ್ಞೇಯಂ) ತಿಳಿಯಬೇಕಾದದ್ದಾಗಿರುವದು ತಿಳಿಯಬೇಕಾದ ಇದನ್ನು ಎಲ್ಲರೂ ಏಕೆ ತಿಳಿಯುವದಿಲ್ಲವೆಂದರೆ (ಜ್ಞಾನಗಮ್ಯಂ) ಹಿಂದೆ ಹೇಳಿದ ಅಮಾನಿತ್ವ ಮೊದಲಾದ ಜ್ಞಾನಸಾಧನಗಳನ್ನು ಮಾಡಿದವರಿಗೆ ಮಾತ್ರ ತಿಳಿಯಬರುವಂಥದ್ದು ತಿಳಿಯಬರುವಂಥದ್ದಂಬ ಮಾತಿನಿಂದ ದೂರದಲ್ಲಿಯೋ ಇರುವಂಥದ್ದೋ ಅಲ್ಲ (ಸರ್ವಸ್ಯ) ಎಲ್ಲ ಪ್ರಾಣಿಗಳ (ಹೃದಿ) ಬುದ್ಧಿಯಲ್ಲಿ (ವಿಷ್ಠಿತಂ) ಇರುವಂಥದ್ದು ಸೂರ್ಯನ ತೇಜವು ಎಲ್ಲ ಪದಾರ್ಥಗಳ ಸಂಬಂಧದಲ್ಲಿ ಕಂಡರೂ ಕನಡಿ ಮತ್ತು ಸೂರ್ಯಕಾಂತಶಿಲೆ-ಮೊದಲಾದ ಸ್ವಚ್ಛ ಪದಾರ್ಥಗಳಲ್ಲಿ ಅದು ಚೆನ್ನಾಗಿ ಎದ್ದು ಕಾಣಿಸಿಕೊಳ್ಳುವಂತೆ ಬ್ರಹ್ಮವು ಎಲ್ಲ ವಸ್ತುಗಳಲ್ಲಿಯೂ ಇದ್ದರೂ ಬುದ್ಧಿಯಲ್ಲಿ ಅದು ಚೆನ್ನಾಗಿ ಎದ್ದು ಕಾಣಿಸಿಕೊಳ್ಳುವದು

---

* "ತಸ್ಯ ಭಾಸಾ ಸರ್ವಮಿದಂ ವಿಭಾತಿ"—ಅವನ ಬೆಳಕಿನಿಂದ ಇವೆಲ್ಲ ಬೆಳಗುತ್ತವೆ —ಶ್ರು

† 'ಧಿಷ್ಠಿತಮ್' ಎಂದು ಪಾಠಾಂತರ ಅರ್ಥದಲ್ಲೇನೂ ವ್ಯತ್ಯಾಸವಿಲ್ಲ.

ನಿನಗೆ ಇದುವರೆಗೆ ಹೇಳಿದ ಮಹತ್ವದ ವಿಷಯಗಳನ್ನು ಮತ್ತೊಮ್ಮೆ ಮನಸ್ಸಿಗೆ ತಂದುಕೊ ಏಕೆಂದರೆ :—

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮ ॥**

(ಇತಿ) ಹೀಗೆ (ಕ್ಷೇತ್ರಂ) ಮಹಾಭೂತಗ ಮೊದಲುಗೊಂಡು ಧೃತಿಯ ವರೆಗೆ ನಾಶವಾಗುವ ಶರೀರವೆನಿಸಿಕೊಳ್ಳುವದಕ್ಕೆ ತಕ್ಕ ಜಡವರ್ಗವೂ (ತಥಾ) ಮತ್ತು (ಜ್ಞಾನಂ) ಅಮಾನಿತ್ವ ಮೊದಲಾದ ಜ್ಞಾನದ ಸಾಧನ ಗಳೂ (ಜ್ಞೇಯಂ ಚ) ಅನಾದಿಮತ್ ಮೊದಲುಗೊಂಡು ತಿಳಿಯಬೇಕಾದ ಬ್ರಹ್ಮದ ಸ್ವರೂಪವೂ (ಸಮಾಸತಃ) ಸಂಕ್ಷೇಪವಾಗಿ (ಉಕ್ತಂ) ಹೇಳಿದ್ದಾ ಗಿರುವದು ಇದನ್ನು ಯಾರು ತಿಳಯುವರೆಂದರ (ಮದ್ಭಕ್ತಃ) ನೋಡುವವನು, ಕೇಳುವವನು-ಎಲ್ಲ ಪರಮಾತ್ಮನೆ ಎಂದು ತಿಳಿಯುವ ನನ್ನ ಭಕ್ತನು (ಏತತ್) ಇದನ್ನು (ವಿಜ್ಞಾಯ) ತಿಳಿದು (ಮದ್ಭಾವಾಯ) ನನ್ನ ಸ್ವರೂಪ ನಾಗುವದಕ್ಕೆ (ಉಪಪದ್ಯತೇ) ಯೋಗ್ಯನಾಗುತ್ತಾನೆ ಇದರಿಂದ ಕ್ಷೇತ್ರವು ಯಾವ ಸ್ವಭಾವದ್ದೆಂಬ ಮತ್ತು ಯಾವ ಧರ್ಮಗಳುಳ್ಳದ್ದೆಂಬ ಪ್ರಶ್ನೆಯ ಉತ್ತರವಾಯಿತು

ಜಗತ್ತೆಲ್ಲ ಕ್ಷೇತ್ರ, ಕ್ಷೇತ್ರಜ್ಞ-ಎಂಬೀ ಎರಡರಿಂದಾಗಿರುವದೆಂತೆಂದರ —

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೧೯ ॥**

(ಪ್ರಕೃತಿಂ) ಹಿಂದೆ (೭-೪) ಹೇಳಿದ ಎಂಟು ಬಗೆಯ ಅಪರಾ ಪ್ರಕೃತಿಯೆಂಬ ಕ್ಷೇತ್ರವನ್ನೂ (ಪುರುಷಂ ಚೈವ) ಹಿಂದೆ (೭-೫) ಹೇಳಿದ ಜೀವರೂಪವಾದ ಪರಾಪ್ರಕೃತಿಯೆಂಬ ಕ್ಷೇತ್ರಜ್ಞನನ್ನೂ (ಉಭಾವಪಿ) ಎರಡನ್ನೂ (ಅನಾದೀ) ಆದಿಯಿಲ್ಲದವುಗಳೆಂದು ಎಂದರ ಹಿಂದಿನಿಂದಲೂ ಇದ್ದುಕೊಂಡೇ ಬಂದಿರತಕ್ಕವುಗಳೆಂದು (ವಿದ್ಧಿ) ತಿಳಿ ಅಪರಾಪ್ರಕೃತಿಗೆ ಆದಿಯನ್ನು ಹೇಳೋಣವೆಂದರೆ ಅದಕ್ಕೆ ಇನ್ನೊಂದು ಕಾರಣವು ಕಾಣಬಂದಿಲ್ಲ ಇನ್ನು ಜೀವನಿಗೆ ಆದಿಯನ್ನು ಹೇಳಿದರ ಅವನಲ್ಲಿ ತೋರುವ ಧರ್ಮಾಧರ್ಮ

ಸಂಸ್ಕಾರಗಳಿಗೆ ಕಾರಣವಿಲ್ಲದೆ ಹೋಗುತ್ತದೆ ಆದ್ದರಿಂದ ಇವೆರಡಕ್ಕೂ ಆದಿ ಇಲ್ಲ ಇವೆರಡೂ ಈಶ್ವರನ ಪ್ರಕೃತಿಗಳಾದ ಮೇಲೆ ಈಶ್ವರನ ಅನಾದಿತ್ವವು ಇವುಗಳಿಗೂ ಇದ್ದೇ ಇರುವದು (ವಿಕಾರಾಂಶ್ಚ) ಆಕಾಶ ಮೊದಲಾದ ಎಲ್ಲ ಬಿಡಿಬಿಡಿಯಾದ ವಸ್ತುಗಳನ್ನೂ (ಗುಣಾಂಶ್ಚೈವ) ಸುಖ ರೂಪವಾದ ಸತ್ತ್ವ, ದುಃಖರೂಪವಾದ ರಜ, ಮೋಹರೂಪವಾದ ತಮ- ಎಂಬ ಗುಣಗಳನ್ನೂ (ಪ್ರಕೃತಿಸಂಭವಾನ್) ಮಾಯಾರೂಪವಾದ ಪ್ರಕೃತಿ ಯಿಂದ ಹುಟ್ಟಿದವುಗಳೆಂದು (ವಿದ್ಧಿ) ತಿಳಿ

ಪ್ರಕೃತಿಯಿಂದ ಹುಟ್ಟಿದ ವಿಕಾರಗಳೂ ಗುಣಗಳೂ ಯಾವವೆಂದರೆ.—

**ಕಾರ್ಯಕರಣಕರ್ತೃತ್ವೇ* ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦ ॥**

(ಕಾರ್ಯಕರಣಕರ್ತೃತ್ವೇ) ಪಂಚಮಹಾಭೂತಗಳಿಂದಾಗಿರುವ ಶರೀರ ರೂಪವಾದ ಮತ್ತು ಬೇರ ಬೇರೆ ವಿಷಯಗಳ ರೂಪವಾದ ಕಾರ್ಯವೂ ಸುಖ ದುಃಖಮೋಹಾತ್ಮಕವಾದ ಸತ್ತ್ವರಜಸ್ತಮೋಗುಣಗಳಿಗೆ ಆಶ್ರಯವಾಗಿರುವ ಬಾಹ್ಯೇಂದ್ರಿಯ ಮತ್ತು ಅಂತರಿಂದ್ರಿಯ-ಎಂಬ ಕರಣಗಳೂ-ಇವೆರಡನ್ನೂ ಮಾಡಿರುವವಕ್ಕೆ (ಪ್ರಕೃತಿಃ) ಮಾಯಾಶಕ್ತಿಯು (ಹೇತುಃ) ಕಾರಣವು (ಉಚ್ಯತೇ) ಎನಿಸುವದು (ಸುಖದುಃಖಾನಾಂ) ಸುಖದುಃಖಗಳ (ಭೋಕ್ತೃತ್ವೇ) ಅನುಭವಿಸುವ ವಿಷಯದಲ್ಲಿ (ಪುರುಷಃ) ಪರಾಪ್ರಕೃತಿಯಾದ ಜೀವನು (ಹೇತುಃ) ಕಾರಣನು (ಉಚ್ಯತೇ) ಎನಿಸುವನು ಇವೆರಡೂ ಸೇರಿ ಸಂಸಾರಕ್ಕೆ ಕಾರಣವು ಈಗ ಕ್ಷೇತ್ರವು ಯಾವ ವಿಕಾರಗಳುಳ್ಳದ್ದೆಂಬ ಮತ್ತು ಯಾವದರಿಂದ ಯಾವದಾಗುವದೆಂಬ ಪ್ರಶ್ನೆಯ ಉತ್ತರವಾಯಿತು

---

* "ಕಾರ್ಯಕಾರಣಕರ್ತೃತ್ವೇ" ಎಂದು ಪಾಠಾಂತರ ಅರ್ಥದಲ್ಲೇನೂ ವ್ಯತ್ಯಾಸವಿಲ್ಲ.

ಪುರುಷನ ಈ ಸಂಸಾರಕ್ಕೇನು ಕಾರಣವೆಂದರ —

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ಗುಣಾನ್ ।**
**ಕಾರಣಂ* ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೧ ॥**

(ಪುರುಷಃ) ಕ್ಷೇತ್ರಜ್ಞನು (ಪ್ರಕೃತಿಸ್ಥೋ ಹಿ) ತನ್ನ ನಿಜಸ್ವರೂಪವನ್ನು ಮರೆತು ದೇಹ, ಇಂದ್ರಿಯ, ವಿಷಯಗಳು–ಮೊದಲಾದ ರೂಪದಲ್ಲಿ ಹರಡಿ ಕೊಂಡಿರುವ ಮಾಯಾಪ್ರಪಂಚದಲ್ಲಿ ತಾನೆಂಬ ಅಭಿಮಾನವನ್ನು ತಾಳಿದವ ನಾಗಿ (ಪ್ರಕೃತಿಜಾನ್) ಆ ಸತ್ತ್ವರಜಸ್ತಮೋಗುಣಗಳಿಂದ ಕೂಡಿದ ಮಾಯಾ ಶಕ್ತಿಯಿಂದ ಹುಟ್ಟಿದಂಥ (ಗುಣಾನ್) ನಾನು ಸುಖಿ, ನಾನು ದುಃಖಿ, ನಾನು ಮೂಢ–ಮೊದಲಾದ ಗುಣಗಳನ್ನು (ಭುಂಕ್ತೇ) ಪಡೆಯುತ್ತಾನೆ (ಅಸ್ಯ) ಇವನಿಗೆ (ಸದಸದ್ಯೋನಿಜನ್ಮಸು) ಒಳ್ಳೆ ದೇವತೆಗಳ ಹೊಟ್ಟೆಯಲ್ಲಿ ಹುಟ್ಟುವಿಕೆಯೂ ಕೆಟ್ಟ ಪಶುಗಳ ಹೊಟ್ಟೆಯಲ್ಲಿ ಹುಟ್ಟುವಿಕೆಯೂ ಒಳ್ಳೆಯದೂ ಕೆಟ್ಟದ್ದೂ ಬೆರಕೆಯಾದ ಮನುಷ್ಯರ ಹೊಟ್ಟೆಯಲ್ಲಿ ಹುಟ್ಟುವಿಕಯೂ–ಇವುಗಳಿ ಗೆಲ್ಲ (ಕಾರಣಂ) ಕಾರಣವೇನೆಂದರೆ (ಗುಣಸಂಗಃ) ಸುಖ, ದುಃಖ, ಮೋಹ– ಇವುಗಳನ್ನುಂಟುಮಾಡುವಂಥ ಶಬ್ದ, ಸ್ಪರ್ಶ–ಮೊದಲಾದ ವಿಷಯಗಳೆಂಬ ಗುಣಗಳಲ್ಲಿ ನಾನೆಂಬ ಭಾವನೆಯು

ಈ ಹುಟ್ಟುಸಾವುಗಳನ್ನು ಕಳೆಯುವ ಜ್ಞಾನವನ್ನು ಪುಷ್ಟಿಗೊಳಿಸುವ ದಕ್ಕಾಗಿ ಪುರುಷಸ್ವರೂಪವನ್ನು ಮತ್ತೆ ಹೇಳುತ್ತೇನ, ಕೇಳು —

---

* "ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ"—ಯಾವದನ್ನು ಬಯಸುತ್ತಾನೊ ಆದರ ವಿಷಯದಲ್ಲಿ ಮನಸ್ಸು ಹಾಕುತ್ತಾನೆ, ಯಾವ ವಿಷಯದಲ್ಲಿ ಮನಸ್ಸು ಹಾಕುತ್ತಾನೊ ಅದನ್ನು ಪಡೆಯುವದಕ್ಕೆ ಕರ್ಮವನ್ನು ಮಾಡುವನು, ಯಾವದಕ್ಕಾಗಿ ಮಾಡುತ್ತಾನೊ ಅದನ್ನು ಪಡೆಯುತ್ತಾನೆ —ಶ್ರು

**ಉಪದ್ರಷ್ಟಾನುಮಂತಾ* ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥ ೨೨ ॥**

ಆ ಪರಾಪ್ರಕೃತಿಯಾದ ಪುರುಷನು ಮಾಯೆಯ ಪರಿಣಾಮವಾದ ದೇಹದಲ್ಲಿ ಜೀವರೂಪದಿಂದಿದ್ದರೂ ಅವನು ತನ್ನ ನಿಜಸ್ವರೂಪದಲ್ಲಿ ಮಾಯೆಯ ಗುಣಗಳ ಸಂಬಂಧವಿಲ್ಲದ ಅಸಂಸಾರಿಯಾಗಿರುವನು ಏಕೆಂದರೆ ಅವನು (ಉಪದ್ರಷ್ಟಾ) ಯಜ್ಞದಲ್ಲಿ ಒಬ್ಬನು ತಾನು ಏನೂ ಮಾಡದೆ ಇತರರ ಕೆಲಸಗಳ ಗುಣದೋಷಗಳನ್ನು ನೋಡುತ್ತಿರುವಂತೆ ಈ ಕ್ಷೇತ್ರಜ್ಞನು ತಾನು ಏನೂ ಮಾಡದೆ ದೇಹೇಂದ್ರಿಯಾದಿಗಳ ಕೆಲಸಗಳನ್ನು ನೋಡುತ್ತಿರುವನು. ನೋಡುವ ಕೆಲಸದಲ್ಲಿ ದೇಹ, ಕಣ್ಣು, ಮನಸ್ಸು, ಬುದ್ಧಿ, ಆತ್ಮ–ಹೀಗೆ ಐದು ಇದ್ದರೂ ಮೊದಲಿನ ನಾಲ್ಕು ಹೊರಗಿರುವವು 'ಆತ್ಮ' ಎಂಬುವನು ತನಗೆ ತೀರ ಸಮಾಪದ ತಾನೇ ಆದ್ದರಿಂದ ಉಪದ್ರಷ್ಟನು ಉಪದ್ರಷ್ಟ ನೆಂದರೆ ಹತ್ತಿರದಲ್ಲಿದ್ದು ನೋಡುವವನೆಂದರ್ಥ ಇದರಿಂದ ಅವನು ದೇಹೇಂದ್ರಿಯಗಳಿಗಿಂತ ಬೇರೆಯೆಂದೂ ಆಯಿತು (ಅನುಮಂತಾ ಚ) ದೇಹೇಂದ್ರಿಯಾದಿಗಳು ಮಾಡುವ ಕೆಲಸಕ್ಕೆ ಒಪ್ಪಿಗೆಯನ್ನು ಕೊಡುವವನು, ಅಥವಾ ಅವುಗಳಿಗೆ ಬೇಡವೆಂದು ಹೇಳದೆ ಸಾಕ್ಷಿಮಾತ್ರನಾಗಿರುವವನು ಇದರಿಂದಲೂ ಅವನು ದೇಹೇಂದ್ರಿಯಗಳಿಗಿಂತ ಬೇರೆಯೆಂದಾಯಿತು (ಭರ್ತಾ) ದೇಹ, ಇಂದ್ರಿಯ–ಮೊದಲಾದವುಗಳ ವ್ಯಾಪಾರಗಳಿಗೆಲ್ಲ ತನ್ನ ಚೈತನ್ಯದ ನೆರವನ್ನು ಕೊಟ್ಟು ಅವುಗಳನ್ನು ಪೋಷಿಸುವವನು ಇದರಿಂದಲೂ ಅವನು ದೇಹೇಂದ್ರಿಯಗಳಿಗಿಂತ ಬೇರೆಯೆಂದಾಯಿತು .(ಭೋಕ್ತಾ) ಸುಖ, ದುಃಖ, ಮೋಹ–ಮೊದಲಾದ ಬುದ್ಧಿಯ ವೃತ್ತಿಗಳನ್ನು ತನ್ನ ಚೈತನ್ಯದಿಂದ ಬೆಳಗುತ್ತ ತಾನು ಯಾವ ವಿಕಾರವನ್ನೂ ಪಡೆಯದೆ ಅವುಗಳನ್ನು ಭೋಗಿಸುವವನು ಇದರಿಂದ ಅವನು ಬುದ್ಧಿಗಿಂತ ಬೇರೆಯೆಂದಾಯಿತು (ಮಹೇಶ್ವರಃ) ಸರ್ವಕ್ಕೂ ಆತ್ಮವಾಗಿ ಸ್ವತಂತ್ರನಾಗಿರುವವನು ಅಥವಾ ಚುಂಬಕಶಿಲೆಯು

---

* "ಅನುಮಂತಾ ಸಾಕ್ಷೀ ಚ ಉಪದ್ರಷ್ಟಾನುದ್ರಷ್ಟಾನುಮಂತ್ರೈಷ ಆತ್ಮಾ"—ಈ ಆತ್ಮನು ಅನುದ್ರಷ್ಟನು, ಸಾಕ್ಷಿ, ಉಪದ್ರಷ್ಟಾ, ಅನುಮಂತಾ.—ಶ್ರು

ತನ್ನ ಸಾನ್ನಿಧ್ಯದಿಂದ ಕಬ್ಬಿಣದಲ್ಲಿ ಕ್ರಿಯೆಯನ್ನು ಹುಟ್ಟಿಸುವಂತೆ ತನ್ನ ಸಾನ್ನಿಧ್ಯದಿಂದ ದೇಹೇಂದ್ರಿಯಾದಿಗಳ ಕ್ರಿಯೆಗಳಿಗೆಲ್ಲ ಈಶ್ವರನು ಇದರಿಂದ ಆತ್ಮನು ಪ್ರಕೃತಿಗಿಂತಲೂ ಅದರ ಕಾರ್ಯಕ್ಕಿಂತಲೂ ಬೇರೆಯೆಂದಾಯಿತು (ಪರಮಾತ್ಮಾ) ಆತ್ಮನೆಂದು ಕಲ್ಪಿಸಿಕೊಳ್ಳುವ ದೇಹವನ್ನು ಮೊದಲುಮಾಡಿ ಕೊಂಡು ಬುದ್ಧಿಯವರೆಗಿನವುಗಳಿಗಿಂತ ಉತ್ಕೃಷ್ಟನಾದವನು ಹೀಗೆ ಅವನು ದೇಹ, ಇಂದ್ರಿಯ, ಬುದ್ಧಿ, ಮಾಯಾಶಕ್ತಿ–ಇವೆಲ್ಲಕ್ಕಿಂತ ಬೇರೆಯಾದವನು (ಇತಿ ಚಾಪಿ) ಹೀಗೂ ಕೂಡ (ಅಸ್ಮಿನ್) ಈ (ದೇಹೇ) ಶರೀರದಲ್ಲಿರುವ (ಪರಃ) ಹಚ್ಚಿನವನಾದ (ಪುರುಷಃ) ಸಾಕ್ಷಿ ಚೇತನನು (ಉಕ್ತಃ) ಹೇಳ ಲ್ಪಟ್ಟಿರುವನು ಇದರಿಂದ ಕ್ಷೇತ್ರಜ್ಞನ ಸ್ವಭಾವವೂ ಪ್ರಭಾವವೂ ಏನೆಂಬ ಪ್ರಶ್ನೆಗೆ ಉತ್ತರವಾಯಿತು

ಇದನ್ನು ತಿಳಿಯುವದರಿಂದಾಗುವದೇನೆಂದರೆ —

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥ ೨೩ ॥**

(ಯಃ) ಯಾವನು (ಪುರುಷಂ) ಕ್ಷೇತ್ರಜ್ಞನಾದ ಪುರುಷನನ್ನೂ (ಗುಣೈಃ ಸಹ) ಸತ್ತ್ವರಜಸ್ತಮೋಗುಣಗಳಿಂದ ಕೂಡಿದ (ಪ್ರಕೃತಿಂ ಚ) ಮಾಯಾಶಕ್ತಿ ಯನ್ನೂ (ಏವಂ) ಹೀಗೆ–ಎಂದರೆ ತಾನು ಸರ್ವ ಕ್ಷೇತ್ರಜ್ಞ ಸ್ವರೂಪನೆಂದೂ ಮಾಯಾಕಾರ್ಯವಾದ ಪ್ರಪಂಚವೆಲ್ಲ ಹಗ್ಗದಲ್ಲಿ ಕಂಡ ಹಾವು ಮೊದಲಾದವು ಗಳಂತೆ ಅಥವಾ ಕನಸಿನಲ್ಲಿ ಕಾಣುವ ಬಗೆಬಗೆಯ ವಸ್ತುಗಳಂತೆ ಬರೀ ತೋರಿಕೆಯದೆಂದೂ (ವೇತ್ತಿ) ತಿಳಿಯುತ್ತಾನೊ (ಸಃ) ಅವನು (ಸರ್ವಥಾ) ಯಾವ ಯಾವ ಬಗೆಯಲ್ಲಿ (ವರ್ತಮಾನೋಽಪಿ) ಇದ್ದರೂ–ಎಂದರೆ ಶಾಸ್ತ್ರದ ಕಟ್ಟಳೆಯನ್ನು ಮೀರಿ ನಡೆಯುತ್ತಿದ್ದರೂ (ಭೂಯಃ) ಯಾವ ಶರೀರ ದಲ್ಲಿರುವಾಗ ಆತ್ಮಜ್ಞಾನವಾಗಿರುವದೊ ಆ ಶರೀರವು ಬಿದ್ದುಹೋದ ಮೇಲೆ ಮತ್ತೆ (ನ ಅಭಿಜಾಯತೇ) ಹುಟ್ಟುವದಿಲ್ಲ ಶರೀರದಲ್ಲಿರುವಾಗಲೆ ಅವನು ಅಜ್ಞಾನವನ್ನು ಕಳೆದುಕೊಂಡು ಹುಟ್ಟುಸಾವುಗಳ ಗಂಟನ್ನು ಹರಿದುಹಾಕಿ ಕೊಂಡಿರುವವನರಿಂದ ಅವನು ಮತ್ತೆ ಹುಟ್ಟುವದಿಲ್ಲ ಹುಟ್ಟುಸಾವುಗಳೆಲ್ಲ

ಕರ್ಮದ ಫಲಗಳು ಕರ್ಮದ ಫಲಗಳನ್ನು ಅನುಭವಿಸುವದಕ್ಕಲ್ಲವೆ ಮತ್ತೆ ಮತ್ತೆ ಹುಟ್ಟಬೇಕು, ಮತ್ತೆ ಮತ್ತೆ ಸಾಯಬೇಕು? ಕರ್ಮಗಳೆಲ್ಲ ಕ್ಷೇತ್ರಕ್ಕೆ ಸಂಬಂಧಿಸಿದವೆಂದೂ ತಾನು ಕರ್ಮಸಂಬಂಧವಿಲ್ಲದ ಸರ್ವಕ್ಷೇತ್ರಜ್ಞ ಸ್ವರೂಪನೆಂದೂ ಅವನು ತಿಳಿದುಕೊಂಡಿರುವದರಿಂದ ಅವನ ಹಿಂದಿನ ಕರ್ಮಗಳು, ಮುಂದಿನ ಕರ್ಮಗಳು–ಎಲ್ಲ ಸುಟ್ಟು ಬೂದಿಯಾಗುತ್ತವೆ. ಪ್ರಾರಬ್ಧದಿಂದ ಅವನಿಗೆ ಶರೀರವಿರುವಂತೆ • ಕಂಡರೂ ಆ ಶರೀರವು ಅವನಿಗೆ ಅಜ್ಞರಾದ ಇತರರ ದೃಷ್ಟಿಯಿಂದ ಇರುವದೇ ಹೊರತು ಅವನು ತಾನು ದೇಹವೆಂದಾಗಲಿ ಅಥವಾ ದೇಹವು ತನ್ನದೆಂದಾಗಲಿ ಅಭಿಮಾನವನ್ನಿಟ್ಟುಕೊಂಡಿರುವದಿಲ್ಲವಾದ್ದರಿಂದ ಅವನಿಗೆ ಆ ದೇಹದ ಕರ್ಮಗಳ ಸಂಬಂಧವೇನೇನೂ ಇರುವದಿಲ್ಲ. ಅವನು ಆಗಲೇ ಮುಕ್ತನು. ದೇಹಾತ್ಮಬುದ್ಧಿಯುಳ್ಳ ಜನರು ಅವನ ಆ ಸ್ಥಿತಿಯನ್ನು ತಿಳಿಯಲಾರದೆ ಅವನ ದೇಹವು ಬಿದ್ದುಹೋದ ಮೇಲೆ ಮುಕ್ತನಾಗುವ ನೆನ್ನುವರು. ದೇಹದಲ್ಲಿನ್ನೂ ಇರುವಾಗಲೇ ಆ ಜ್ಞಾನವನ್ನು ಪಡೆದವನ ಕ್ಷೇತ್ರದಿಂದ ಶಾಸ್ತ್ರದ ಕಟ್ಟಳೆಯನ್ನು ಮೀರಿದ ಕೆಲಸಗಳಾದರೂ ಅವನು ತಾನು ಅದರ ಕರ್ತನಲ್ಲವೆಂದು ತಿಳಿದಿರುವದರಿಂದ ಆ ಕರ್ಮವು ಅವನ ಸೆರಗಿಗೆ ದೋಷವನ್ನು ಗಂಟುಹಾಕಲಾರದು. ಶಾಸ್ತ್ರದ ಕಟ್ಟಳೆಯನ್ನು ಮೀರಿದವನಿಗೇ ಹೀಗಾದರೆ ಶಾಸ್ತ್ರದಂತೆ ನಡೆಯುವವನು ಮತ್ತೆ ಹುಟ್ಟುವದಿಲ್ಲವೆಂದು ಹೇಳಬೇಕಾದ್ದೇ ಇಲ್ಲ.

ಆ ಆತ್ಮಜ್ಞಾನದ ಸಾಧನಗಳನ್ನು ಹೇಳುತ್ತೇನೆ, ಕೇಳು:—

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇಣ ಚಾಪರೇ ॥ ೨೪ ॥**

(ಕೇಚಿತ್) ಉತ್ತಮಾಧಿಕಾರಿಗಳಾದ ಕೆಲವರು (ಧ್ಯಾನೇನ) ಮನಸ್ಸನ್ನು ವಿಷಯಗಳಿಂದ ಹಿಮ್ಮೆಟ್ಟಿಸಿ ತಂದು ಆತ್ಮಸ್ವರೂಪದಲ್ಲಿ ನೆಲೆಗೊಳಿಸಿ ಅದನ್ನೇ ಎಡೆಬಿಡದೆ ಚಿಂತಿಸುವದರಿಂದಲೂ (ಅನ್ಯೇ) ಮಧ್ಯಮಾಧಿಕಾರಿಗಳಾದ ಇನ್ನು ಕೆಲವರು (ಸಾಂಖ್ಯೇನ) ಆ ಧ್ಯಾನಕ್ಕೆ ಸಾಧನವಾಗಿ ಪ್ರಪಂಚಕ್ಕೆ ಕಾರಣವಾದ ಸತ್ತ್ವರಜಸ್ತಮೋಗುಣಗಳೆಲ್ಲ ತಮ್ಮ ಎದುರಿಗಿರುವವುಗಳಾದ್ದ

ರಿಂದ ಅವುಗಳಿಗೆ ಸಾಕ್ಷಿಯಾಗಿ ಅವುಗಳಿಗಿಂತ ಬೇರೆಯಾಗಿರುವ ತಾವು ನಿತ್ಯಾತ್ಮಸ್ವರೂಪರೆಂದು ಬಿಡಿಸಿ ತಿಳಿಯುವದೆಂಬ (ಯೋಗೇನ) ಆತ್ಮಾನಾತ್ಮ ವಿವೇಕ ಮಾರ್ಗದಿಂದಲೂ (ಅಪರೇ) ಮನಸ್ಸನ್ನು ಆ ವಿಚಾರಕ್ಕೆ ತಕ್ಕದ್ದಾಗುವ ಹಾಗೆ ಮಾಡುವ ಮತ್ತೆ ಕೆಲವರು ಮಂದಾಧಿಕಾರಿಗಳು (ಕರ್ಮಯೋಗೇಣ ಚ) ಚಿತ್ತಶುದ್ಧಿಗೂ ಜ್ಞಾನಕ್ಕೂ ಸಾಧನವಾಗಿ ಈಶ್ವರನಿಗೆ ಪ್ರೀತಿಯಾಗಲೆಂದು ಕರ್ಮವನ್ನು ಮಾಡುವದರ ಮೂಲಕವೂ (ಆತ್ಮನಿ) ಬುದ್ಧಿಯಲ್ಲಿ (ಆತ್ಮನಾ) ಆ ಧ್ಯಾನದಿಂದ ಶುದ್ಧವಾದ ಅಂತಃಕರಣದಿಂದ (ಆತ್ಮಾನಂ) ಕ್ಷೇತ್ರಜ್ಞನಾದ ತಮ್ಮ ಅಂತರಾತ್ಮನನ್ನು (ಪಶ್ಯಂತಿ) ನೋಡುತ್ತಾರೆ

**ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೫ ॥**

(ಅನ್ಯೇ ತು) ಇನ್ನೂ ಮಂದರಾದ ಬೇರೆ ಕೆಲವರು (ಏವಂ) ಧ್ಯಾನ ದಿಂದ, ಸಾಂಖ್ಯದಿಂದ ಅಥವಾ ಕರ್ಮದಿಂದ (ಅಜಾನಂತಃ) ತಿಳಿಯಲಾರ ದವರಾಗಿ (ಅನ್ಯೇಭ್ಯಃ) ಬೇರೆ ಸಾಧುವೃತ್ತಿಯಲ್ಲಿ ಉತ್ತಮರೆಂದು ತಾವು ಮನಗಂಡ ಗುರುಗಳಿಂದ (ಶ್ರುತ್ವಾ) ಏನು ಮಾಡಿದರೆ ತಮ್ಮ ಉದ್ಧಾರವಾಗು ವದೆಂದು ಕೇಳಿ (ಉಪಾಸತೇ) ಅವರು ಏನನ್ನು ಹೇಗೆ ಚಿಂತಿಸೆಂದು ಹೇಳು ತ್ತಾರೊ ಅದರಲ್ಲಿ ನಂಬಿಕೆಯನ್ನಿಟ್ಟು ಅವರು ಹೇಳಿದಂತೆ ಉಪಾಸನೆ ಮಾಡು ತ್ತಾರೆ (ಶ್ರುತಿಪರಾಯಣಾಃ) ಮತ್ತೊಬ್ಬರ ಬಾಯಿಂದ ಕೇಳಿದ್ದರಲ್ಲಿಯೇ ಹೆಚ್ಚಿನ ಭರವಸವುಳ್ಳ (ತೇಽಪಿ ಚ) ಅವರು ಕೂಡ (ಮೃತ್ಯುಂ) ಸಾವನ್ನು–ಎಂದರೆ ಹುಟ್ಟುಸಾವುಗಳನ್ನು (ಅತಿತರಂತ್ಯೇವ) ದಾಟಿಯೇ ದಾಟುತ್ತಾರೆ ಅವರ ಉಪಾಸನೆಯಿಂದ ಚಿತ್ತಶುದ್ಧಿಯೂ ಜ್ಞಾನವೂ ಆಗಿ ಅವರಿಗೆ ಆತ್ಮ ಸಾಕ್ಷಾತ್ಕಾರವಾಗಿಯೇ ಆಗುತ್ತದೆ ತಮಗೆ ಸ್ವತಂತ್ರವಾದ ವಿವೇಕವಿಲ್ಲದೆ ಬೇರೆಯವರ ಮಾತಿನಲ್ಲಿ ಭರವಸೆಯನ್ನಿಟ್ಟರೇ ಹೀಗಾಗುವಾಗ ತಮ್ಮ ಸ್ವಂತ ವಿವೇಕದಿಂದಲೇ ಸಾಧನವನ್ನು ನಿರ್ಧರಿಸಿಕೊಂಡು ಹೊರಟವರ ಉದ್ಧಾರ ವಾಗುವದರಲ್ಲಿ ಸಂಶಯಕ್ಕೆ ಕಾರಣವೇ ಇಲ್ಲ

ಈ ಸಾಧನವನ್ನು ಮಾಡಿ ಪಡೆದ ಆತ್ಮಜ್ಞಾನದಿಂದ ಮೋಕ್ಷವಾಗುವದು ಹೇಗೆಂದರೆ .—

**ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೬ ॥**

(ಭರತರ್ಷಭ) ಭರತಕುಲದಲ್ಲಿ ಶ್ರೇಷ್ಠನಾದ ಅರ್ಜುನನೆ, ಕೇಳು. (ಸ್ಥಾವರಜಂಗಮಂ) ಚೇತನವಾದ ಮತ್ತು ಜಡವಾದ (ಯಾವತ್ಕಿಂಚಿತ್) ಯಾವದು ಎಷ್ಟು ಮಾತ್ರವಾದರೂ (ಸತ್ತ್ವಂ) ವಸ್ತು (ಸಂಜಾಯತೇ) ಹುಟ್ಟುತ್ತದೋ (ತತ್) ಅದು (ಕ್ಷೇತ್ರಕ್ಷೇತ್ರಜ್ಞಸಂಯೋಗಾತ್) ಕ್ಷೇತ್ರ, ಕ್ಷೇತ್ರಜ್ಞ–ಇವರಿಬ್ಬರ ಸಂಯೋಗದಿಂದ ಆದದ್ದೆಂದು (ವಿದ್ಧಿ) ತಿಳಿ ಕ್ಷೇತ್ರ ವೆಂಬುದೆಲ್ಲ ಜಡಸಮೂಹವೆಂದೂ ಕ್ಷೇತ್ರಜ್ಞನು ಚೇತನನೆಂದೂ ಮೊದಲೇ ಹೇಳಿದ್ದೇನಷ್ಟೆ ಭಿನ್ನಜಾತಿಯವುಗಳಾದ ಇವೆರಡೂ ಕೂಡುವದೆಂಬುದೇ ಹೊಂದುವ ಮಾತಲ್ಲ ಆದ್ದರಿಂದ ಇಲ್ಲಿ ಸಂಯೋಗವೆಂದರೆ ಒಂದರ ಧರ್ಮವನ್ನೊಂದು ಮೈಮೇಲೆ ಹಾಕಿಕೊಳ್ಳುವದು ಹೇಗೆಂದರೆ–'ನಾನು ಸುಂದರನು' ಎನ್ನುವಾಗ ಕ್ಷೇತ್ರದ ಧರ್ಮವಾದ ಸೌಂದರ್ಯವನ್ನು ಕ್ಷೇತ್ರಜ್ಞನು ತನ್ನ ಮೈಮೇಲೆ ಹಾಕಿಕೊಂಡಂತಾಯಿತು 'ಅಲ್ಲಿ ಅನೇಕ ವಸ್ತುಗಳು ಇವೆ' ಎನ್ನುವಾಗ ವಸ್ತುಗಳು ನಿಜವಾಗಿಲ್ಲದವುಗಳು ಏಕೆಂದರೆ ಅವು ಒಂದವಸ್ಥೆ ಯಲ್ಲಿ ಮಾತ್ರ ಕಾಣುವವು. ಆದ್ದರಿಂದ ಅವುಗಳು 'ಇವೆ' ಎಂದು ಹೇಳಿಸಿ ಕೊಳ್ಳುವದಕ್ಕೆ ಯೋಗ್ಯವಲ್ಲ ಮೂರವಸ್ಥೆಗಳಲ್ಲಿಯೂ ಇರುವ ಆತ್ಮನೊಬ್ಬನೆ ಇರತಕ್ಕವನು. ಅವನ ಆಧಾರದ ಮೇಲೆ ಬಗೆ ಬಗೆಯಾದ ವಸ್ತುಗಳು ಭ್ರಾಂತಿಯಿಂದ ಇದ್ದ ಹಾಗೆ ಕಾಣುವವು ಆದ್ದರಿಂದ 'ಅಲ್ಲಿ ಅನೇಕ ವಸ್ತುಗಳಿವೆ' ಎನ್ನುವಾಗ ಕ್ಷೇತ್ರಜ್ಞನ ಧರ್ಮವಾದ ಇರುವಿಕೆಯನ್ನು ಕ್ಷೇತ್ರ ವಾದ ವಸ್ತುಗಳ ಮೈಮೇಲೆ ಹಾಕಿದಂತಾಗುತ್ತದೆ ಈ ಬಗೆಯ ಸಂಯೋಗ ದಿಂದಲೆ ಹೊರಗೆ ಕಾಣುವ ಜಗತ್ತೆಲ್ಲ ಆಗಿರುವದು

ಹುಟ್ಟುಸಾವುಗಳಿಗೆ ಕಾರಣವಾದ ಆ ಕ್ಷೇತ್ರ ಕ್ಷೇತ್ರಜ್ಞ ಸಂಯೋಗವನ್ನು ಹೋಗಲಾಡಿಸುವ ಜ್ಞಾನ ಸ್ವರೂಪವನ್ನು ಇನ್ನೂ ಕೇಳು ;—

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ* ಯಃ ಪಶ್ಯತಿ ಸ ಪಶ್ಯತಿ ॥ ೨೭ ॥**

(ಸರ್ವೇಷು) ಚತುರ್ಮುಖಬ್ರಹ್ಮನನ್ನು ಮೊದಲುಮಾಡಿಕೊಂಡು ಒಂದು ಮೋಟುಮರದವರೆಗೆ ಇರುವ ಎಲ್ಲ (ಭೂತೇಷು) ಪ್ರಾಣಿಗಳಲ್ಲಿ (ಸಮಂ) ಯಾವ ಹೆಚ್ಚು ಕಡಿಮೆಯೂ ಇಲ್ಲದೆ (ತಿಷ್ಠಂತಂ) ಇರುವಂಥ (ಪರಮೇಶ್ವರಂ) ದೇಹೇಂದ್ರಿಯಗಳಿಗೆಲ್ಲ ಬೆಂಬಲವಾಗಿ ಸರ್ವಸ್ವಾಮಿಯಾಗಿರುವಂಥವನನ್ನು ಮತ್ತು (ವಿನಶ್ಯತ್ಸು) ಹಗ್ಗದ ಹಾವು, ಕನಸಿನ ಜಗತ್ತು-ಮೊದಲಾದವುಗಳಂತೆ ಪ್ರಪಂಚವೆಲ್ಲ ಹೋದರೂ (ಅವಿನಶ್ಯಂತಂ) ಹಗ್ಗ ಮತ್ತು ಕನಸುಗಾಣುವವನಂತೆ ನಾಶವಾಗದಿರುವವನನ್ನು (ಯಃ) ಯಾವನು (ಪಶ್ಯತಿ) ನೋಡುತ್ತಾನೋ (ಸಃ) ಅವನು (ಪಶ್ಯತಿ) ನೋಡುತ್ತಾನೆ ಹಗ್ಗದ ಹಾವನ್ನೂ ಕನಸಿನ ಜಗತ್ತನ್ನೂ ನೋಡುವದು ಸರಿಯಾದ ದೃಷ್ಟಿಯಲ್ಲ, ಭ್ರಮೆ ಏಕೆಂದರೆ ಆಗ ಹಗ್ಗದ ಮತ್ತು ಕನಸುಗಾಣುವವನ ನಿಜಸ್ಥಿತಿ ಗೊತ್ತಿರುವದಿಲ್ಲ ಆದ್ದರಿಂದ ಹಾವಿನಿಂದಲೂ ಜಗತ್ತಿನಿಂದಲೂ ಬೇರ್ಪಡಿಸಿ ಹಗ್ಗವನ್ನೂ ಕನಸುಗಾಣುವವನನ್ನೂ ತಿಳಿಯುವದೇ ಸರಿಯಾದ ದೃಷ್ಟಿ ಅದರಂತೆ ಸಮಸ್ತ ಜಗತ್ತಿನಿಂದಲೂ ಆತ್ಮನನ್ನು ಬೇರೆಮಾಡಿ ತಿಳಿದರೇನೆ ಸರಿಯಾಗಿ ನೋಡಿದಂತಾಯಿತು

ಆ ಜ್ಞಾನದ ಹೆಚ್ಚುಗಾರಿಕೆಯನ್ನು ಹೇಳುತ್ತೇನೆ, ಕೇಳು —

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ ೨೮ ॥**

(ಸರ್ವತ್ರ) ಎಲ್ಲ ಪ್ರಾಣಿಗಳಲ್ಲಿಯೂ (ಸಮಂ) ಹೆಚ್ಚುಕಡಿಮೆ ಇಲ್ಲದೆ (ಸಮವಸ್ಥಿತಂ) ಇರುವಂಥ (ಈಶ್ವರಂ) ಸರ್ವಜಗತ್ಸಾಕ್ಷಿಯಾದ ಪರಮಾತ್ಮನನ್ನು (ಪಶ್ಯನ್ ಹಿ) ನೋಡಿದವನಾದರೆ ಅವನು (ಆತ್ಮನಾ) ತನ್ನಿಂದ (ಆತ್ಮಾನಂ) ತನ್ನನ್ನು (ನ ಹಿನಸ್ತಿ) ಹಿಂಸೆಯನ್ನು ಮಾಡಿದವನಾಗುವದಿಲ್ಲ

---

* "ಅವಿನಾಶೀ ವಾ ಅರೇಽಯಮಾತ್ಮಾ" ಈ ಆತ್ಮನು ನಾಶರಹಿತನು.—ಶ್ರು

ಜಗತ್ತಿನಲ್ಲಿ ಯಾರೂ ತನ್ನನ್ನು ತಾನು ಹಿಂಸೆ ಮಾಡುವದಿಲ್ಲವೆಂದು ಹೇಳಿದರೂ ಈ ದೋಷವು ಅಜ್ಞರಲ್ಲಿರುತ್ತದೆ. ಹೇಗೆಂದರೆ ಅತ್ಯಂತ ಪ್ರಸಿದ್ಧನಾದ ಸರ್ವೇಶ್ವರನಾದ ಆತ್ಮನು ತನ್ನೊಳಗಿದ್ದರೂ ಅವನ ಕಡೆಗೆ ಕಡೆಗಣ್ಣನ್ನೂ ಹಾಕದೆ ದೇಹ ಮೊದಲಾದವುಗಳನ್ನೆ ಆತ್ಮವೆಂದು ತಿಳಿದು ಅವುಗಳಿಂದ ಧರ್ಮಾಧರ್ಮಗಳನ್ನು ಮಾಡುತ್ತ ಅವುಗಳ ಫಲವಾಗಿ ಒಂದು ಸಲ ಬಂದ ದೇಹಾದಿ ರೂಪವಾದ ಆತ್ಮನನ್ನು ಕೊಂದು ಮತ್ತೊಂದು ಅಂಥ ಆತ್ಮನನ್ನೆ ಪಡೆಯುತ್ತ ನಿಜವಾದ ಆತ್ಮನನ್ನು ಇದ್ದೂ ಇಲ್ಲದಂತೆ ಮಾಡುವದರಿಂದ ಅಜ್ಞಾನಿಯು ತನ್ನನ್ನು ತಾನು ಕೊಂದಂತಾಗುವದು ಜ್ಞಾನಿ ಮಾತ್ರ ಆ ಆತ್ಮನನ್ನು ಗುರ್ತು ಹಿಡಿದು ಗೌರವಿಸುವದರಿಂದ (ತತಃ) ಅದರಿಂದ (ಪರಾಂಗತಿಂ) ಹೆಚ್ಚಿನ ಗತಿಯಾದ ಮೋಕ್ಷವನ್ನು (ಯಾತಿ) ಹೊಂದುತ್ತಾನೆ

ಒಬ್ಬೊಬ್ಬರು ಒಂದೊಂದು ಬಗೆಯ ಗುಣದವರೂ ಒಂದೊಂದು ಬಗೆಯ ಕರ್ಮದವರೂ ಆಗಿರುವಾಗ ಎಲ್ಲರ ಅಂತರ್ಯಾಮಿಯನ್ನೂ ಒಂದು ಬಗೆಯಾಗಿ ನೋಡಲಾಗಲಾರದೆಂದರೆ —

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ೨೯ ॥**

(ಯಃ) ಯಾವನು (ಕರ್ಮಾಣಿ) ಶರೀರ ಮೊದಲಾದವುಗಳಿಂದಾಗುವ ಕರ್ಮಗಳನ್ನು (ಸರ್ವಶಃ) ಎಲ್ಲ ರೀತಿಯಿಂದಲೂ (ಪ್ರಕೃತ್ಯೈವ ಚ) ಆ ಶರೀರಾದಿಗಳಿಗೆ ಕಾರಣವಾದ ತ್ರಿಗುಣಾತ್ಮಕವಾದ ಮಾಯಾಶಕ್ತಿಯಿಂದಲೇ (ಕ್ರಿಯಮಾಣಾನಿ) ಮಾಡಲ್ಪಡುವವೆಂದೂ (ತಥಾ) ಮತ್ತು (ಆತ್ಮಾನಂ) ತನ್ನ ಅಂತರಾತ್ಮನನ್ನು (ಅಕರ್ತಾರಂ) ಏನೂ ಮಾಡುವವನಲ್ಲವೆಂದೂ (ಪಶ್ಯತಿ) ನೋಡುತ್ತಾನೋ (ಸಃ) ಅವನು (ಪಶ್ಯತಿ) ಸರಿಯಾಗಿ ನೋಡುತ್ತಾನೆ.

ಆ ಜ್ಞಾನದ ಹೆಚ್ಚುಗಾರಿಕೆ ಇನ್ನೂ ಏನೆಂದರೆ —

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥**

(ಯದಾ) ಯಾವಾಗ (ಭೂತಪೃಥಗ್ಭಾವಂ) ಸ್ಥಾವರಜಂಗಮಾತ್ಮಕವಾಗಿ ಬಿಡಿಬಿಡಿಯಾಗಿರುವವುಗಳೆಲ್ಲ (ಏಕಸ್ಥಂ) ಒಬ್ಬ ಆತ್ಮನಲ್ಲಿಯೇ ತೋರುತ್ತಿರುವವುಗಳೆಂದೂ (ತತ ಏವ ಚ) ಆ ಆತ್ಮನಿಂದಲೆ (ವಿಸ್ತಾರಂ) ಮಲಗಿರುವವನೊಬ್ಬನಿಂದಲೇ ಕನಸಿನ ವಿಸ್ತಾರಗಳೆಲ್ಲ ಕಾಣುವಂತೆ ಜಗದ್ರೂಪವಾದ ವಿಸ್ತಾರವು ಕಾಣುವದೆಂದೂ (ಅನುಪಶ್ಯತಿ) ಸಾಮಾನ್ಯದೃಷ್ಟಿಗಂತು ಗೋಚರವಾಗುವದಿಲ್ಲವಾದ್ದರಿಂದ ಶಾಸ್ತ್ರದಿಂದಲೂ ಗುರುಗಳ ಉಪದೇಶದಿಂದಲೂ ಆತ್ಮವೇ ಸರ್ವವೆಂದೂ ತಿಳಿದು ಆ ಆತ್ಮವೇ ತಾನೆಂದು ಪ್ರತ್ಯಕ್ಷವಾಗಿ ಕಾಣುತ್ತಾನೊ (ತದಾ) ಆಗ (ಬ್ರಹ್ಮ) ಬ್ರಹ್ಮಸ್ವರೂಪವನ್ನು (ಸಂಪದ್ಯತೇ) ಪಡೆಯುತ್ತಾನೆ

ಒಬ್ಬ ಆತ್ಮನೇ ಎಲ್ಲರ ದೇಹದಲ್ಲಿರುವನಾದರೆ ಅವನಿಗೆ ಆ ದೇಹದ ದೋಷಗಳೆಲ್ಲ ಬರಬೇಕಾಗುವದೆಂದರೆ —

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೧ ॥**

(ಕೌಂತೇಯ) ಅರ್ಜುನನೆ, ಕೇಳು (ಅಯಂ) ಈ (ಪರಮಾತ್ಮಾ) ಸರ್ವಾಂತರಾತ್ಮನು (ಅನಾದಿತ್ವಾತ್) ಆದಿಯೆಂಬುದಿಲ್ಲದೆ ಎಷ್ಟು ಹಿಂದಿನಿಂದಲಾದರೂ ಇದ್ದೇ ಇರುವವನಾದ್ದರಿಂದಲೂ (ನಿರ್ಗುಣತ್ವಾತ್) ಸತ್ತ್ವರಜಸ್ತಮೋಗುಣಗಳ ಸಂಬಂಧವಿಲ್ಲದವನಾದ್ದರಿಂದಲೂ (ಅವ್ಯಯಃ) ಹುಟ್ಟುಸಾವುಗಳೆಂಬ ನಾಶವನ್ನು ಪಡೆಯದಿರುವನು ಹುಟ್ಟುವದೆಂಬ ವಿಕಾರವನ್ನು

* "ಆತ್ಮತಃ ಪ್ರಾಣ ಆತ್ಮತ ಆಶಾ ಆತ್ಮತಃ ಸ್ಮರ ಆತ್ಮತ ಆಕಾಶ ಆತ್ಮತಸ್ತೇಜ"— ಆತ್ಮನಿಂದಲೆ ಪ್ರಾಣ, ಆತ್ಮನಿಂದಲೆ ಆಶೆ, ಆತ್ಮನಿಂದಲೆ ಸ್ಮರಣೆ, ಆತ್ಮನಿಂದಲೆ ಮನಸ್ಸು, ಆತ್ಮನಿಂದಲೆ ಬುದ್ಧಿ —ಶ್ರು

ಪಡೆದರಲ್ಲವೆ ಸಾಯುವದು? ಇವನಿಗೆ ಹುಟ್ಟೇ ಇಲ್ಲದ್ದರಿಂದ ಸಾವಿಲ್ಲ ಇನ್ನೊಂದೇನೆಂದರೆ ಗುಣವುಳ್ಳ ವಸ್ತು ಗುಣವು ಹೋಗುತ್ತ ಬಂದ ಹಾಗೆಲ್ಲ ಅದರೊಂದಿಗೆ ನಾಶವಾದೀತು ಪರಮಾತ್ಮನು ಗುಣರಹಿತನಾದ್ದರಿಂದಲೂ ಅವನಿಗೆ ನಾಶವಿಲ್ಲ ಇಂಥ ಆತ್ಮನು (ಶರೀರಸ್ಥೋಽಪಿ) ಶರೀರದಲ್ಲಿ ಕಾಣ ಬರುವದರಿಂದ ಶರೀರದಲ್ಲಿರುವನೆಂದು ಕಂಡರೂ (ನ ಕರೋತಿ) ನೀರಿನಲ್ಲಿ ಪ್ರತಿಬಿಂಬಿಸಿದ ಸೂರ್ಯನು ನೀರು ಅಲ್ಲಾಡಿದಾಗ ಅಜ್ಞರಿಗೆ ತಾನೂ ಅಲ್ಲಾಡಿದಂತೆ ಕಾಣುವನೆ ಹೊರತು ನಿಜವಾಗಿ ಹೇಗೆ ತಾನು ಅಲ್ಲಾಡುವ ದಿಲ್ಲವೊ ಹಾಗೆ ಏನನ್ನೂ ಮಾಡುವದಿಲ್ಲ ಆದ್ದರಿಂದಲೆ (ನ ಲಿಪ್ಯತೇ) ಅದರ ಫಲಕ್ಕೆ ಭಾಗಿಯಾಗುವದಿಲ್ಲ ಮಾಡಿದವನು ಫಲಕ್ಕೆ ಭಾಗಿಯಾದಾನು ಮಾಡದೆ ಇರುವವನಿಗೆ ಫಲವು ಹೇಗೆ ಅಂಟೀತು? ಆದ್ದರಿಂದ ಆತ್ಮನು ಎಲ್ಲರ ದೇಹದಲ್ಲಿಯೂ ಇದ್ದರೂ ಯಾರ ದೇಹಾದಿಗಳ ಕ್ರಿಯೆಯ ಲೇಪವೂ ಇಲ್ಲದವನಾಗಿರುವನು

ಅದಕ್ಕೆ ದೃಷ್ಟಾಂತವೇನೆಂದರೆ —

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥ ೩೨ ॥**

(ಸರ್ವಗತಂ) ಎಲ್ಲೆಲ್ಲಿಯೂ ತುಂಬಿಕೊಂಡಿರುವ (ಆಕಾಶಂ) ಆಕಾಶವು (ಸೌಕ್ಷ್ಮ್ಯಾತ್) ಸೂಕ್ಷ್ಮವಾಗಿರುವ ಕಾರಣದಿಂದ (ಯಥಾ) ಹೇಗೆ, (ನೋಪ ಲಿಪ್ಯತೇ) ಸಂಬಂಧವನ್ನು ಪಡೆಯುವದಿಲ್ಲವೊ (ತಥಾ) ಹಾಗೆ ಎಂದರೆ ಎಲ್ಲ ಗಡಿಗೆಗಳಲ್ಲಿಯೂ ಆಕಾಶವು ತುಂಬಿದ್ದರೂ ಅದಕ್ಕೆ ಬೇರೆ ಬೇರೆ ಗಡಿಗೆ ಗಳಲ್ಲಿರುವ ಸುಗಂಧ, ದುರ್ಗಂಧ, ಹೊಗೆ, ಧೂಳಿ-ಮೊದಲಾದ ಗುಣ ದೋಷಗಳ ಲೇಪವಾಗದಿರುವಂತೆ (ದೇಹೇ) ದೇಹದಲ್ಲಿ (ಸರ್ವತ್ರಾವಸ್ಥಿತಃ) ದೇವ, ಮನುಷ್ಯ, ಪಶು-ಮೊದಲಾದ ಉಚ್ಚನೀಚದೇಹಗಳಲ್ಲೆಲ್ಲ ಇರುವವ ನಾದರೂ (ಆತ್ಮಾ) ಆತ್ಮನು (ನೋಪಲಿಪ್ಯತೇ) ಆ ದೇಹಾದಿಗಳಿಂದಾಗುವ ಕರ್ಮಗಳಿಗೆ ಭಾಗಿಯಾಗುವದಿಲ್ಲ

ಮತ್ತೇನೆಂದರೆ —

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।***
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩ ॥**

(ಭಾರತ) ಅರ್ಜುನನೆ, ಕೇಳು (ಏಕಃ) ಒಬ್ಬನೇ ಆದ (ರವಿಃ) ಸೂರ್ಯನು (ಯಥಾ) ಹೇಗ (ಇಮಂ) ಈ (ಕೃತ್ಸ್ನಂ) ಸಮಸ್ತವಾದ (ಲೋಕಂ) ಜಗತ್ತನ್ನು (ಪ್ರಕಾಶಯತಿ) ಬೆಳಗುತ್ತಾನೊ (ಕ್ಷೇತ್ರೀ) ಸರ್ವ ಕ್ಷೇತ್ರಜ್ಞಸ್ವರೂಪನಾದ ಪರಮಾತ್ಮನು (ತಥಾ) ಹಾಗೆ (ಕೃತ್ಸ್ನಂ) ಸಮಸ್ತ ವಾದ (ಕ್ಷೇತ್ರಂ) ಮಹಾಭೂತಗಳನ್ನು ಮೊದಲುಗೊಂಡು ಧೃತಿಯವರೆಗಿನ ಕ್ಷೇತ್ರವನ್ನೆಲ್ಲ (ಪ್ರಕಾಶಯತಿ) ಬೆಳಗುತ್ತಾನೆ ಜಗತ್ತನ್ನಲ್ಲ ಬೆಳಗುವವನು ಸೂರ್ಯನೊಬ್ಬನೆ ಹೇಗೋ ಕ್ಷೇತ್ರಗಳನ್ನೆಲ್ಲಿ ಬೆಳಗುವವನು ಕ್ಷೇತ್ರಜ್ಞ ನೊಬ್ಬನೆ ಸೂರ್ಯನಿಗೆ ಹೇಗೆ ತಾನು ಬಳಗುವ ವಸ್ತುಗಳ ಗುಣ ದೋಷಗಳು ಅಂಟುವದಿಲ್ಲವೊ ಆತ್ಮನಿಗೆ ಹಾಗೆ ತಾನು ಬಳಗುವ ದೇಹಾದಿಗಳ ಕರ್ಮಗಳ ಲೇಪವಿಲ್ಲ

ಮುಖ್ಯವಾಗಿ ತಿಳಿದಿರಬೇಕಾದದ್ದೇನೆಂದರೆ.—

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥ ೩೪ ॥**

(ಕ್ಷೇತ್ರಕ್ಷೇತ್ರಜ್ಞಯೋಃ) ಕ್ಷೇತ್ರ, ಕ್ಷೇತ್ರಜ್ಞ–ಇವೆರಡರ (ಏವಂ) ಈ ಬಗೆಯಾದ (ಅಂತರಂ) ಭೇದವನ್ನೂ ಎಂದರೆ ಕ್ಷೇತ್ರವು ಜಡವೆಂದೂ ಕರ್ತೃವೆಂದೂ ವಿಕಾರಿಯೆಂದೂ ಪರಿಚ್ಛಿನ್ನವೆಂದೂ ಕ್ಷೇತ್ರಜ್ಞನು ಚೇತನ

---

* "ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯ ದೋಷೈಃ । ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ— ಲೋಕಕ್ಕೆಲ್ಲ ಕಣ್ಣಾದ ಸೂರ್ಯನು ಕಣ್ಣು ನೋಡುವಂಥ ಹೊರಗಣ ವಸ್ತುಗಳ ದೋಷಗಳ ಸಂಬಂಧವನ್ನು ಹೇಗೆ ಪಡೆಯುವದಿಲ್ಲವೊ ಹಾಗೆ ಎಲ್ಲರ ಅಂತರಾತ್ಮನಾದ ಅದ್ವಿತೀಯನಾದ ಅತ್ಮನು ಹೊರಗಣ ದೇಹಾದಿಗಳ ದುಃಖಗಳ ಸಂಬಂಧವನ್ನು ಪಡೆಯುವದಿಲ್ಲ —ಶ್ರು

ನೆಂದೂ ಅಕರ್ತನೆಂದೂ ಅವಿಕಾರಿಯೆಂದೂ ಅಪರಿಚ್ಛಿನ್ನನೆಂದೂ ಇವೆರಡರ ಭೇದವನ್ನೂ ಮತ್ತು (ಭೂತಪ್ರಕೃತಿಮೋಕ್ಷಂ ಚ) ಆ ಜ್ಞಾನದಿಂದ ಚರಾಚರ ಜಗತ್ತಿಗೆಲ್ಲ ಮೂಲಕಾರಣವಾದ ಮಾಯಾಶಕ್ತಿಯ ಬಿಡುಗಡೆಯಾಗುವದನ್ನೂ (ಜ್ಞಾನ ಚಕ್ಷುಷಾ) ಶಾಸ್ತ್ರದಿಂದಲೂ ಗುರುಗಳ ಅನುಗ್ರಹದಿಂದಲೂ ಉಂಟಾದ ಜ್ಞಾನವೆಂಬ ಒಳಗಣ್ಣಿನಿಂದ (ಯೇ) ಯಾರು (ವಿದುಃ) ತಿಳಿಯುತ್ತಾರೊ (ತೇ) ಅವರು (ಪರಂ) ಪರಬ್ರಹ್ಮಸ್ವರೂಪವನ್ನು (ಯಾಂತಿ) ಹೊಂದುತ್ತಾರೆ ಅವರು ಮತ್ತೆ ಹುಟ್ಟುವದಿಲ್ಲ

ಇಲ್ಲಿಗೆ **ಕ್ಷೇತ್ರಕ್ಷೇತ್ರಜ್ಞಯೋಗವೆಂಬ**
ಹದಿಮೂರನ ಅಧ್ಯಾಯವು ಮುಗಿಯಿತು



# ಹದಿನಾಲ್ಕನೆ ಅಧ್ಯಾಯ

ಜಗತ್ತು ಹುಟ್ಟುವದಕ್ಕೆ ಕಾರಣವಾದ ಕ್ಷೇತ್ರಕ್ಷೇತ್ರಜ್ಞ ಸಂಯೋಗವು ಈಶ್ವರನ ಇಚ್ಛೆಗೆ ಅಧೀನವಾಗಿರುವದನ್ನು ಹೇಳಬೇಕೆಂದೂ ಜೀವರ ಉಚ್ಚ ನೀಚ ಜನ್ಮಗಳಿಗೆ ಕಾರಣವಾದ ಗುಣಸಂಗವನ್ನು ವಿವರಿಸಬೇಕೆಂದೂ ಗುಣ ದಿಂದ ಮುಕ್ತನಾದವನ ಲಕ್ಷಣವನ್ನು ಸೂಚಿಸಬೇಕೆಂದೂ ಹೊರಟು—

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು :—

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥೧॥**

(ಯತ್) ಯಾವ ಜ್ಞಾನಸಾಧನವನ್ನು (ಜ್ಞಾತ್ವಾ) ತಿಳಿದುಕೊಂಡು ಅದರಂತೆ ನಡೆದು (ಸರ್ವೇ) ಎಲ್ಲ (ಮುನಯಃ) ಋಷಿಗಳು (ಇತಃ) ಈ ದೇಹದ ಕಟ್ಟಸಿಂದ ಹೂರಗೆ (ಪರಾಂ) ಉತ್ಕೃಷ್ಟವಾದ (ಸಿದ್ಧಿಂ) ಮೋಕ್ಷ ವೆಂಬ ಫಲವನ್ನು (ಗತಾಃ) ಪಡೆದರೊ ಅಂಥ (ಜ್ಞಾನಾನಾಂ) ಅಂತರಂಗ ಸಾಧನವಾದ ಅಮಾನಿತ್ವ ಮೊದಲಾದ ಸಾಧನಗಳ ಹೊರತು ಯಜ್ಞ, ದಾನ, ತಪಸ್ಸು–ಮೊದಲಾದ ಹೊರಗಣ ಸಾಧನಗಳೊಳಗೆಲ್ಲ (ಉತ್ತಮಂ) ಉತ್ತಮವಾದ (ಪರಂ) ಶ್ರೇಷ್ಟವಾದ (ಜ್ಞಾನಂ) ಜ್ಞಾನ ಸಾಧನವನ್ನು (ಭೂಯಃ) ಮತ್ತೆ (ಪ್ರವಕ್ಷ್ಯಾಮಿ) ಹೇಳುತ್ತೇನೆ ಹಿಂದೆ ಹೇಳಿದ್ದರೂ ಈಗ ಮನಸ್ಸಿಗೆ ಚೆನ್ನಾಗಿ ನಾಟಲೆಂದು ಬೇರೊಂದು ರೀತಿಯಿಂದ ಹೇಳುತ್ತೇನೆ

ಈ ಸಾಧನಗಳ ಫಲವೇನೆಂದರೆ —

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೨ ॥**

(ಇದಂ) ಈ (ಜ್ಞಾನಂ) ಜ್ಞಾನದ ಸಾಧನವನ್ನು (ಉಪಾಶ್ರಿತ್ಯ) ಅವಲಂಬಿಸಿ ನಡೆದು (ಮಮ) ನನ್ನ (ಸಾಧರ್ಮ್ಯಂ) ಸ್ವರೂಪವನ್ನು (ಆಗತಾಃ) ಪಡೆದವರು ಎಂದರೆ ಈಶ್ವರ ಚೈತನ್ಯವೂ ತಮ್ಮ ಚೈತನ್ಯವೂ ಒಂದೇ ಎಂದು ತಿಳಿದವರು (ಸರ್ಗೇಽಪಿ) ಸೃಷ್ಟಿಕಾಲದಲ್ಲಿಯೂ (ನೋಪಜಾಯಂತೇ) ಹುಟ್ಟುವದಿಲ್ಲ, (ಪ್ರಲಯೇ) ಬ್ರಹ್ಮನು ನಾಶವಾಗುವ ಕಾಲದಲ್ಲಿಯೂ (ನ ವ್ಯಥಂತಿ ಚ) ವ್ಯಥೆಯನ್ನು ಹೊಂದುವದಿಲ್ಲ

ಜಗತ್ತಿಗೆ ಕಾರಣವಾದ ಕ್ಷೇತ್ರಕ್ಷೇತ್ರಜ್ಞ ಸಂಯೋಗವು ಹೇಗಿರುವದೆಂದರೆ.—

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಂ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ ೩ ॥**

(ಭಾರತ) ಅರ್ಜುನನೆ, ಕೇಳು (ಮಮ) ನನ್ನ (ಯೋನಿಃ) ಗರ್ಭವನ್ನಿಡುವ ಸ್ಥಾನವು ಯಾವದೆಂದರೆ (ಮಹದ್ಬ್ರಹ್ಮ) ಎಲ್ಲಿಕ್ಕಿಂತ ದೊಡ್ಡದಾದ

ಮಾಯಾಶಕ್ತಿ (ತಸ್ಮಿನ್) ಅದರಲ್ಲಿ (ಅಹಂ) ನಾನು (ಗರ್ಭಂ) ಎಲ್ಲ ಭೂತಗಳ ಉತ್ಪತ್ತಿಗೆ ಕಾರಣನಾದಂಥ ಹಿರಣ್ಯಗರ್ಭ ಬ್ರಹ್ಮನ ಬೀಜವನ್ನು (ದಧಾಮಿ) ಇಡುತ್ತೇನೆ ಇದೇ ಕ್ಷೇತ್ರಕ್ಷೇತ್ರಜ್ಞಸಂಯೋಗವು (ತತಃ) ಆ ಹಿರಣ್ಯಗರ್ಭನಿಂದ (ಸರ್ವಭೂತಾನಾಂ) ಎಲ್ಲ ವಸ್ತುಗಳ (ಸಂಭವಃ) ಉತ್ಪತ್ತಿಯು (ಭವತಿ) ಆಗುತ್ತದೆ

**ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪ ॥**

(ಕೌಂತೇಯ) ಅರ್ಜುನನೆ, ಕೇಳು (ಸರ್ವಯೋನಿಷು) ದೇವ, ಪಿತೃ, ಮನುಷ್ಯ, ಪಶು–ಮೊದಲಾದ ಎಲ್ಲ ಉತ್ಪತ್ತಿಸ್ಥಾನಗಳಲ್ಲಿಯೂ (ಯಾಃ) ಯಾವ (ಮೂರ್ತಯಃ) ಅವಯವಗಳುಳ್ಳ ದೇಹೇಂದ್ರಿಯಗಳ ಗುಂಪುಗಳು (ಸಂಭವಂತಿ) ಹುಟ್ಟುವವೊ (ತಾಸಾಂ) ಅವುಗಳಿಗೆ (ಮಹತ್) ಎಲ್ಲಕ್ಕಿಂತ ದೊಡ್ಡ (ಬ್ರಹ್ಮ) ತ್ರಿಗುಣಾತ್ಮಕವಾದ ಮಾಯಾಶಕ್ತಿಯು (ಯೋನಿಃ) ತಾಯ ಸ್ಥಾನವು (ಅಹಂ) ನಾನು (ಬೀಜಪ್ರದಃ) ಬೀಜವನ್ನು ಗರ್ಭದಲ್ಲಿಡುವಂಥ (ಪಿತಾ) ತಂದೆಯು

ಯಾವ ಯಾವ ಗುಣಗಳು ಹೇಗೆ ಹೇಗೆ ಕಟ್ಟಿಗೊಳಪಡಿಸುವವೆಂದರೆ.—

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ ೫ ॥**

(ಮಹಾಬಾಹೊ) ಅರ್ಜುನನೆ, ಕೇಳು (ಸತ್ತ್ವಂ) ಸತ್ತ್ವಗುಣವೆಂದೂ (ರಜಃ) ರಜೋಗುಣವೆಂದೂ (ತಮಃ) ತಮೋಗುಣವೆಂದೂ (ಇತಿ) ಈ ಮೂರೂ (ಗುಣಾಃ) ಗುಣಗಳು (ಪ್ರಕೃತಿಸಂಭವಾಃ) ಮಾಯಾಶಕ್ತಿಯಿಂದ ಹೊರಹೊಮ್ಮಿದವುಗಳು ಮಾಯಾಶಕ್ತಿಯೆಂಬುದರಲ್ಲಿ ಮೂರು ಗುಣಗಳೂ ಸಮಪ್ರಮಾಣದಿಂದಿರುವವು ಅವು ಈಶ್ವರನ ಸಾನ್ನಿಧ್ಯಬಲದಿಂದ ಒಮ್ಮೊಮ್ಮೆ ಹೆಚ್ಚು ಕಡಿಮೆಯನ್ನು ಹೊಂದಿ ಒಂದೊಂದು ಗುಣವು

ಎದ್ದು ಕಾಣುವದು ಅದನ್ನೇ ಇಲ್ಲಿ ಹೊರಹೊಮ್ಮಿದವುಗಳೆಂದು ಹೇಳಿರುವದು. ಗುಣಗಳೆಂದರೆ ಸತ್ತ್ವ, ರಜ, ತಮ–ಎಂಬ ಪ್ರಕೃತಿಯ ಅಂಶಗಳಿಗೆ ಹೆಸರೇ ಹೊರತು ಸಿಹಿಯೆಂಬ ಗುಣವು ಸಕ್ಕರೆಯನ್ನು ಆಶ್ರಯಿಸಿಕೊಂಡಿರುವಂತೆ ಒಂದೊಂದು ದ್ರವ್ಯವನ್ನು ಆಶ್ರಯಿಸಿಕೊಂಡಿರತಕ್ಕ ಗುಣಗಳಲ್ಲ ಈ ಮೂರು ಗುಣಗಳು (ಅವ್ಯಯಂ) ಹುಟ್ಟು, ಸಾವು–ಮೊದಲಾದ ವಿಕಾರಗಳಿಲ್ಲದಂಥ (ದೇಹಿನಂ) ದೇಹಾಭಿಮಾನಿಯಾದ ಆತ್ಮನನ್ನು (ದೇಹೇ) ದೇಹದಲ್ಲಿ (ನಿಬಧ್ನಂತಿ) ದೇಹದ ವಿಕಾರಗಳಿಂದ ಕೂಡಿದವನ ಹಾಗೆ ಮಾಡಿ ಕಟ್ಟಿ ಹಾಕುವವು ಪಾತ್ರೆಯಲ್ಲಿರುವ ನೀರು ಆಕಾಶದಲ್ಲಿರುವ ಸೂರ್ಯನಿಗೆ ಪ್ರತಿಬಿಂಬವನ್ನುಂಟುಮಾಡಿ ತನ್ನ ನಡುಗುವಿಕೆ ಮೊದಲಾದವುಗಳಿಂದ ಸೂರ್ಯನೇ ನಡುಗುತ್ತಿರುವಂತೆ ತೋರಿಸುವ ಹಾಗೆ ದೇಹದಲ್ಲಿರುವ ಈ ಗುಣಗಳು ಆತ್ಮನಿಗೆ ತಮ್ಮಲ್ಲಿ ಧರ್ಮಾಧ್ಯಾಸವನ್ನು ಮಾಡಿ ತಮ್ಮ ವಿಕಾರಗಳಿಂದ ಆತ್ಮನೇ ವಿಕಾರವನ್ನು ಪಡೆಯುತ್ತಿರುವಂತೆ ತೋರಿಸುವವು

ಆ ಸತ್ತ್ವ ಮೊದಲಾದವುಗಳ ಲಕ್ಷಣವೇನೆಂದರೆ —

**ತತ್ರ ಸತ್ತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬ ॥**

(ಅನಘ) ಪಾಪರಹಿತನಾದ ಅರ್ಜುನನೆ, ಕೇಳು (ತತ್ರ) ಆ ಮೂರು ಗುಣಗಳಲ್ಲಿ (ಸತ್ತ್ವಂ) ಸತ್ತ್ವಗುಣವು (ನಿರ್ಮಲತ್ವಾತ್) ಕೊಳೆ ಇಲ್ಲದ್ದಾದ್ದರಿಂದ (ಪ್ರಕಾಶಕಂ) ತಿಳಿಯುವದಿಲ್ಲವೆಂಬ ಮನಸ್ಸಿನ ಜಡತ್ವವನ್ನು ಕಳೆದು ತಿಳಿಯುವಂತೆ ಮಾಡುವದು ಮತ್ತು (ಅನಾಮಯಂ) ದುಃಖವನ್ನು ಬರಗೊಡದಂಥದ್ದಾಗಿರುವದು ಇಂಥ ಸತ್ತ್ವಗುಣವು (ಜ್ಞಾನಸಂಗೇನ) ನನಗೆ ಇದು ತಿಳಿಯಿತೆಂಬ ಮೂಲಕ ವಿಷಯಜ್ಞಾನದ ಸಂಬಂಧದಿಂದಲೂ (ಸುಖಸಂಗೇನ ಚ) ನಾನು ಸುಖಿಯಾಗಿದ್ದೇನೆಂಬ ಮೂಲಕ ಸುಖದ ಸಂಬಂಧದಿಂದಲೂ (ಬಧ್ನಾತಿ) ಕಟ್ಟಿಹಾಕುವದು–ಎಂದರೆ ತನ್ನ ವಶಮಾಡಿಕೊಳ್ಳುವದು.

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ ೭ ॥**

(ಕೌಂತೇಯ) ಅರ್ಜುನನೆ, ಕೇಳು (ರಜಃ) ರಜೋಗುಣವು (ತೃಷ್ಣಾ + ಆಸಂಗ + ಸಮುದ್ಭವಂ) ತನಗಿಲ್ಲದಿರುವದು ಬೇಕೆಂಬ ಬಯಕೆಯೂ ದೊರೆತ ವಿಷಯದಲ್ಲಿ ಅತಿಪ್ರೀತಿಯೂ ಇವುಗಳಿಂದ ಹುಟ್ಟಿದ (ರಾಗಾತ್ಮಕಂ) ಅನುರಾಗದ ರೂಪವಾಗಿರುವದೆಂದು (ವಿದ್ಧಿ) ತಿಳಿ (ತತ್) ಅದು (ದೇಹಿನಂ) ದೇಹಾಭಿಮಾನಿಯಾದ ಆತ್ಮನನ್ನು (ಕರ್ಮಸಂಗೇನ) ನಾನು ಈ ಕರ್ಮವನ್ನು ಮಾಡಿ ಈ ಫಲವನ್ನು ಪಡೆಯುವೆನೆಂಬ ಸಂಬಂಧದಿಂದ (ನಿಬಧ್ನಾತಿ) ಕಟ್ಟಿಹಾಕುವದು

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ ೮ ॥**

(ಭಾರತ) ಅರ್ಜುನನೆ, ಕೇಳು (ಸರ್ವದೇಹಿನಾಂ) ಎಲ್ಲ ಪ್ರಾಣಿಗಳಿಗೂ (ಮೋಹನಂ) ಅವಿವೇಕವನ್ನುಂಟುಮಾಡುವಂಥ (ತಮಸ್ತು) ತಮೋಗುಣವಾದರೊ (ಅಜ್ಞಾನಜಂ) ಆತ್ಮಸ್ವರೂಪದ ಜ್ಞಾನವಿಲ್ಲದ್ದರಿಂದ ಹುಟ್ಟಿದ್ದನ್ನಾಗಿ (ವಿದ್ಧಿ) ತಿಳಿ (ತತ್) ಅದು (ಪ್ರಮಾದಾಲಸ್ಯನಿದ್ರಾಭಿಃ) ಸತ್ತ್ವಗುಣದ ಪ್ರಭಾವವಾದ ವಿವೇಕವನ್ನು ಮರೆಮಾಡುವಿಕೆ, ರಜೋಗುಣದ ಪ್ರಭಾವವಾದ ಉದ್ಯೋಗಕ್ಕೆ ಹಿಂಜರಿಯುವಿಕೆ ಮತ್ತು ತಮೋಗುಣದ ಪ್ರಭಾವವಾಧ ನಿದ್ರೆ–ಇವುಗಳಿಂದ (ನಿಬಧ್ನಾತಿ) ಕಟ್ಟಿಹಾಕುವದು

ಅವುಗಳ ವ್ಯಾಪಾರವೇನೆಂದರೆ —

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯ ॥**

(ಭಾರತ) ಅರ್ಜುನನೆ, ಕೇಳು (ಸತ್ತ್ವಂ) ಸತ್ತ್ವಗುಣವು (ಸುಖೇ) ಸುಖದಲ್ಲಿಯೂ (ರಜಃ) ರಜೋಗುಣವು (ಕರ್ಮಣಿ) ಕರ್ಮವನ್ನು ಮಾಡುವದರಲ್ಲಿಯೂ (ಸಂಜಯತಿ) ಅತಿಪ್ರೀತಿಯನ್ನುಂಟುಮಾಡುವದು (ಉತ)

ಮತ್ತೇನೆಂದರೆ (ತಮಃ ತು) ತಮೋಗುಣವಾದರೊ (ಜ್ಞಾನಂ) ಸತ್ತ್ವ ಗುಣದಿಂದಾದ ವಿವೇಕವನ್ನು (ಆವೃತ್ಯ) ಮುಸುಕಿಕೊಂಡು ಮರೆ ಮಾಡಿ (ಪ್ರಮಾದೇ) - ಮಾಡಬೇಕಾದ್ದನ್ನು ಮಾಡದಿರುವದರಲ್ಲಿ (ಸಂಜ ಯತಿ) ಸಿಕ್ಕಿಸುತ್ತದೆ

ಈ ಕೆಲಸವನ್ನು ಅವು ಯಾವಾಗ ಮಾಡುವವೆಂದರೆ —

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ ೧೦ ॥**

(ಭಾರತ) ಅರ್ಜುನನೆ, ಕೇಳು (ರಜಃ) ರಜೋಗುಣವನ್ನೂ (ತಮಶ್ಚ) ತಮೋಗುಣವನ್ನೂ (ಅಭಿಭೂಯ) ಹಿಮ್ಮೆಟ್ಟಿಸಿ (ಸತ್ತ್ವಂ) ಸತ್ತ್ವಗುಣವು (ಭವತಿ) ಯಾವಾಗ ಮುಂದೆ ಬರುವದೊ (ತಥಾ) ಹಾಗೆಯೇ (ರಜಃ) ರಜೋಗುಣವನ್ನೂ (ಸತ್ತ್ವಂ) ಸತ್ತ್ವಗುಣವನ್ನೂ ಕಳೆಗುಂದಿಸಿ (ತಮಶ್ಚೈವ) ತಮೋಗುಣವು ಯಾವಾಗ ತಲೇ ಎತ್ತುವದೋ ಮತ್ತು (ತಮಃ) ತಮೋಗುಣವನ್ನೂ (ಸತ್ತ್ವಂ) ಸತ್ತ್ವಗುಣವನ್ನೂ ಮಂಕುಮಾಡಿ (ರಜಃ) ರಜೋಗುಣವು ಯಾವಾಗ ಎದ್ದು ಕಾಣುವದೋ ಆಗ ಆ ಸತ್ತ್ವಾದಿ ಗುಣಗಳು ತಮ್ಮ ಕಾರ್ಯವನ್ನು ಮಾಡುವವು

ಆಯಾ ಗುಣಗಳು ಎದ್ದು ಕಾಣುವದರ ಗುರ್ತೇನೆಂದರೆ —

**ಸರ್ವದ್ವಾರೇಷು ದೇಹೇಽಸ್ಮಿನ್ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ ೧೧ ॥**

(ಯದಾ) ಯಾವಾಗ (ಅಸ್ಮಿನ್) ಈ (ದೇಹೇ) ದೇಹದಲ್ಲಿ (ಸರ್ವ ದ್ವಾರೇಷು) ವಿಷಯಗಳನ್ನು ತಿಳಿಯುವ ಕಣ್ಣು, ಕಿವಿ–ಮೊದಲಾದ ಎಲ್ಲ ಬಾಗಿಲುಗಳಲ್ಲಿ (ಪ್ರಕಾಶಃ) ವಿಷಯಗಳನ್ನು ಬೆಳಗುವಂಥ (ಜ್ಞಾನಂ) ಜ್ಞಾನವು (ಉಪಜಾಯತೇ) ಹುಟ್ಟುವದೊ (ತದಾ) ಆಗ (ಸತ್ತ್ವಂ ಇತಿ ಉತ) ಸತ್ತ್ವಗುಣವು (ವಿವೃದ್ಧಂ) ಮೇಲಕ್ಕೆದ್ದಿತೆಂದು (ವಿದ್ಯಾತ್) ತಿಳಿಯಬೇಕು.

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨ ॥**

(ಭರತರ್ಷಭ) ಅರ್ಜುನನೆ, ಕೇಳು (ರಜಸಿ) ರಜೋಗುಣವು (ವಿವೃದ್ಧೇ) ತಲೇ ಎತ್ತಿದರೆ (ಲೋಭಃ) ಮತ್ತೊಬ್ಬರ ಹಣವನ್ನು ಬಯಸುವದು (ಪ್ರವೃತ್ತಿಃ) ಏನಾದರೂ ಮಾಡುವದಕ್ಕೆ ಮನಸು ಮಾಡುವದು (ಆರಂಭಃ) ಅದರಂತೆ ಕೆಲಸವನ್ನು ಮಾಡುವದು (ಕರ್ಮಣಾಂ) ಕರ್ಮಗಳ (ಅಶಮಃ) ಗೊಡವೆ ಸಾಕೆನಿಸದಿರುವದು (ಸ್ಪೃಹಾ) ಸಾಮಾನ್ಯವಸ್ತುಗಳ ಬಯಕೆ-(ಏತಾನಿ) ಈ ಗುರ್ತುಗಳು (ಜಾಯಂತೇ) ಹುಟ್ಟುತ್ತವೆ

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ ೧೩ ॥**

(ಕುರುನಂದನ) ಅರ್ಜುನನೆ, ಕೇಳು (ತಮಸಿ) ತಮೋಗುಣವು (ವಿವೃದ್ಧೇ) ಮೇಲಕ್ಕೆ ಬಂದರೆ (ಅಪ್ರಕಾಶಃ) ಗುರುವೂ ಶಾಸ್ತ್ರವೂ ಹೇಳಿದರೂ ತಿಳಿಯದಿರುವದೂ (ಅಪ್ರವೃತ್ತಿಶ್ಚ) ತಾನು ಮಾಡಬೇಕಾದ ಕರ್ಮದಲ್ಲಿ ತೊಡಗದಿರುವದೂ (ಪ್ರಮಾದಃ) ಯಾವ ಕಾಲದಲ್ಲಿ ತಾನು ಏನುಮಾಡಬೇಕೆಂಬ ನೆನಪೇ ಹಾರಿ ಹೋಗುವದೂ (ಮೋಹ ಏವ ಚ) ಅವಿವೇಕವೂ (ಏತಾನಿ) ಈ ಗುರ್ತುಗಳು (ಜಾಯಂತೇ) ಹುಟ್ಟುತ್ತವೆ

ಮರಣದ ಮೂಲಕವಾಗಿ ಆಗುವ ಫಲಕ್ಕೂ ಈ ಗುಣಗಳು ಕಾರಣವಾಗಿರುವದು ಹೇಗೆಂದರೆ —

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ ॥ ೧೪ ॥**

(ಯದಾ) ಯಾವಾಗ (ಸತ್ತ್ವೇ) ಸತ್ತ್ವಗುಣವು (ಪ್ರವೃದ್ಧೇತು) ಹೆಚ್ಚಲಾಗಿ (ದೇಹಭೃತ್) ದೇಹಾಭಿಮಾನವುಳ್ಳ ಜೀವನು (ಪ್ರಲಯಂ) ಸಾವನ್ನು (ಯಾತಿ) ಪಡೆಯುತ್ತಾನೊ (ತದಾ) ಆಗ (ಉತ್ತಮವಿದಾಂ) ಹಿರಣ್ಯಗರ್ಭನೆ ಮೊದಲಾದ ಉತ್ತಮರಿಗೆ ದೊರೆಯುವಂಥ (ಅಮಲಾನ್)

ಪಾಪರಹಿತವಾದ (ಲೋಕಾನ್) ಲೋಕಗಳನ್ನು (ಪ್ರತಿಪದ್ಯತೇ) ಪಡೆಯುತ್ತಾನೆ.

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫ ॥**

(ರಜಸಿ) ರಜೋಗುಣವು ಹೆಚ್ಚಾಗಿರುವ ಕಾಲದಲ್ಲಿ (ಪ್ರಲಯಂ) ಸಾವನ್ನು (ಗತ್ವಾ) ಪಡೆದು (ಕರ್ಮಸಂಗಿಷು) ಕರ್ಮವನ್ನು ಮಾಡುವ ಆಸಕ್ತಿಯುಳ್ಳ ಮನುಷ್ಯರಲ್ಲಿ (ಜಾಯತೇ) ಹುಟ್ಟುತ್ತಾನೆ (ತಥಾ) ಹಾಗೆಯೇ (ತಮಸಿ) ತಮೋಗುಣವು ಹೆಚ್ಚಾದ ಕಾಲದಲ್ಲಿ (ಪ್ರಲೀನಃ) ಸತ್ತವನು (ಮೂಢಯೋನಿಷು) ವಿವೇಕವಿಲ್ಲದ ಪಶು ಮೊದಲಾದವುಗಳ ಹೊಟ್ಟೆಯಲ್ಲಿ (ಜಾಯತೇ) ಹುಟ್ಟುತ್ತಾನೆ

ಒಟ್ಟು ತಾತ್ಪರ್ಯವೇನೆಂದರೆ —

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ ೧೬ ॥**

(ಸುಕೃತಸ್ಯ) ಚೆನ್ನಾಗಿ ಮಾಡಿದಂಥ ಸತ್ತ್ವಗುಣದ (ಕರ್ಮಣಃ) ಪುಣ್ಯಕರ್ಮಗಳಿಗೆ (ಸಾತ್ತ್ವಿಕಂ) ಸತ್ತ್ವಗುಣದ ಸಂಬಂಧವಾದ (ನಿರ್ಮಲಂ) ಪಾಪವೆಂಬ ಕೊಳೆಯಿಲ್ಲದಂಥ (ಫಲಂ) ಫಲವೆಂದೂ (ರಜಸಸ್ತು) ಪುಣ್ಯಪಾಪಮಿಶ್ರವಾದ ರಜೋಗುಣದ ಕರ್ಮಗಳಿಗಾದರೊ (ದುಃಖಂ) ದುಃಖವು (ಫಲಂ) ಫಲವೆಂದೂ (ತಮಸಃ) ತಮೋಗುಣದ ಕರ್ಮಗಳಾದ ಪಾಪಗಳಿಗಾದರೊ (ಅಜ್ಞಾನಂ) ಅಜ್ಞಾನವು (ಫಲಂ) ಫಲವೆಂದೂ (ಆಹುಃ) ಶಿಷ್ಟರು ಹೇಳುವರು.

ಗುಣಗಳಿಂದ ಇನ್ನೂ ಆಗುವದೇನೆಂದರೆ:—

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥ ೧೭ ॥**

(ಸತ್ತ್ವಾತ್) ಸತ್ತ್ವಗುಣದಿಂದ (ಜ್ಞಾನಂ) ವಿಷಯಗಳ ಜ್ಞಾನವು (ಸಂಜಾಯತೇ) ಹುಟ್ಟುತ್ತದೆ. (ರಜಸಃ) ರಜೋಗುಣದಿಂದ (ಲೋಭ ಏವ ಚ) ಎಷ್ಟು ಬಂದರೂ ಸಾಕೆನಿಸದಿರುವ ಆಸೆಯು ಹುಟ್ಟುತ್ತದೆ. (ತಮಸಃ) ತಮೋಗುಣದಿಂದ (ಪ್ರಮಾದಮೋಹೌ) ಮರೆವೂ ಅವಿವೇಕವೂ (ಭವತಃ) ಆಗುತ್ತವೆ ಮತ್ತು (ಅಜ್ಞಾನಮೇವ ಚ) ಯಾವದೂ ತಿಳಿಯ ದಂತಾಗುವ ಸ್ಥಿತಿಯೂ ಉಂಟಾಗುತ್ತದೆ

ಮತ್ತೇನೆಂದರೆ —

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾಃ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಸ್ಥಾಃ ಅಧೋ ಗಚ್ಛಂತಿ ತಾಮಸಾಃ* ॥ ೧೮ ॥**

(ಸತ್ತ್ವಸ್ಥಾಃ) ಸಾತ್ತ್ವಿಕವಾದ ನಡೆವಳಿಕೆಯಲ್ಲಿರುವವರು (ಊರ್ಧ್ವಂ) ಸುಖಪ್ರಧಾನವಾದ ದೇವಾದಿಲೋಕಗಳನ್ನು ಕುರಿತು (ಗಚ್ಛಂತಿ) ಮೇಲಕ್ಕೆ ಹೋಗುತ್ತಾರೆ (ರಾಜಸಾಃ) ರಾಜಸವಾದ ನಡೆವಳಿಕೆಯವರು (ಮಧ್ಯೇ) ಸುಖದುಃಖಗಳೆರಡೂ ಪ್ರಧಾನವಾದ ಮನುಷ್ಯಲೋಕದಲ್ಲಿಯೇ (ತಿಷ್ಠಂತಿ) ಇರುತ್ತಾರೆ (ತಾಮಸಾಃ) ತಾಮಸವಾದ ನಡೆವಳಿಕೆಯವರು (ಜಘನ್ಯ ಗುಣವೃತ್ತಸ್ಥಾಃ) ನಿಕೃಷ್ಟವಾದ ನಿದ್ರೆ, ಸೋಮಾರಿತನ–ಮೊದಲಾದವುಗಳಿಂದ ಕೂಡಿದವರಾಗಿ (ಅಧಃ) ದುಃಖಪ್ರಧಾನವಾದ ಪಶು ಮೊದಲಾದವುಗಳ ಹೊಟ್ಟೆಯೊಳಗೆ ಸೇರಿ ಕೆಳಗಿನ ಮೆಟ್ಟಲಿಗೆ (ಗಚ್ಛಂತಿ) ಹೋಗುತ್ತಾರೆ.

ಈ ಗುಣಗಳ ಕುಣಿಕೆಯಿಂದ ಕಳಚಿಕೊಳ್ಳುವದು ಹೇಗೆಂದರೆ:—

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥**

(ಯದಾ) ಯಾವಾಗ (ದ್ರಷ್ಟಾ) ದೇಹೇಂದ್ರಿಯಗಳ ವ್ಯಾಪಾರಗಳಿಗೆಲ್ಲ ಸಾಕ್ಷಿಯಾಗಿರುವ ಆತ್ಮನು (ಗುಣೇಭ್ಯಃ) ದೇಹೇಂದ್ರಿಯಗಳ ರೂಪವಾಗಿ

* ಜಘನ್ಯಗುಣವೃತ್ತಿಸ್ಥಾಃ ಎಂದು ಪಾಠಾಂತರ. ಅರ್ಥದಲ್ಲೇನೂ ವ್ಯತ್ಯಾಸವಿಲ್ಲ.

ಹರಡಿಕೊಂಡಿರುವ ಗುಣಗಳಿಗಿಂತ (ಅನ್ಯಂ) ಬೇರೆ ಯಾವದನ್ನೂ (ಕರ್ತಾರಂ) ಕರ್ತೃವನ್ನಾಗಿ (ನ ಅನುಪಶ್ಯತಿ) ನೋಡುವದಿಲ್ಲವೊ ಎಂದರೆ ಕರ್ಮವೆಂಬುದೆಲ್ಲ ಈ ಗುಣಗಳಿಗೇ ಸಂಬಂಧಿಸಿದ್ದೆಂದು ನೋಡುತ್ತಾನೋ ಮತ್ತು (ಗುಣೇಭ್ಯಶ್ಚ) ದೇಹೇಂದ್ರಿಯ ರೂಪವಾದ ಗುಣಗಳಿಗಿಂತಲೂ (ಪರಂ) ಬೇರೆಯಾಗಿ ಗುಣಗಳ ವ್ಯಾಪಾರಕ್ಕೆ ಸಾಕ್ಷಿಯಾಗಿರುವವನನ್ನು (ವೇತ್ತಿ) ತಿಳಿಯುತ್ತಾನೋ ಆಗ (ಸಃ) ಅವನು (ಮದ್ಭಾವಂ) ನನ್ನ ಸ್ವರೂಪವನ್ನು ಎಂದರೆ ನನ್ನೊಡನೆ ಭೇದವಿಲ್ಲದಿರುವಿಕೆಯನ್ನು (ಅಧಿಗಚ್ಛತಿ) ಹೊಂದುತ್ತಾನೆ.

ಹೇಗೆ ಹೊಂದುತ್ತಾನೆಂದರೆ :—

**ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥**

(ದೇಹೀ) ದೇಹದಲ್ಲಿ ಅಂತರ್ಯಾಮಿಯಾಗಿರುವ ಆತ್ಮನು (ಏತಾನ್) ಈ ಮೇಲೆ ಹೇಳಿದಂಥ (ದೇಹಸಮುದ್ಭವಾನ್) ದೇಹದ ಹುಟ್ಟುವಿಕೆಗೆ ಬೀಜ ಭೂತಗಳಾದಂಥ (ತ್ರೀನ್) ಮೂರು (ಗುಣಾನ್) ಗುಣಗಳನ್ನು (ಅತೀತ್ಯ) ಬದುಕಿರುವಾಗಲೇ ಮೀರಿ–ಎಂದರೆ ಅವುಗಳ ಅಧೀನವಾಗಿರುವದನ್ನು ತಪ್ಪಿಸಿ ಕೊಂಡು (ಜನ್ಮಮೃತ್ಯುಜರಾದುಃಖೈಃ) ಹುಟ್ಟು, ಸಾವು, ಮುಪ್ಪು–ಇವುಗಳ ದುಃಖಗಳಿಂದ (ವಿಮುಕ್ತಃ) ಬಿಡುಗಡೆಯನ್ನು ಹೊಂದಿ (ಅಮೃತಂ) ಸಾವಿನ ಭಯವಿಲ್ಲದಿರುವ ಮೋಕ್ಷವನ್ನು (ಅಶ್ನುತೇ) ಪಡೆಯುತ್ತಾನೆ

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು :—

**ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ ॥ ೨೧ ॥**

(ಪ್ರಭೋ) ಶ್ರೀಕೃಷ್ಣನೆ, ಕೇಳು, ಅವನು ಬದುಕಿರುವಾಗಲೇ (ಕೈಃ) ಯಾವ (ಲಿಂಗೈಃ) ಗುರ್ತುಗಳಿಂದ (ಏತಾನ್) ಈ ಮೇಲೆ ಹೇಳಿದಂಥ (ತ್ರೀನ್) ಮೂರು (ಗುಣಾನ್) ಗುಣಗಳನ್ನು (ಅತೀತಃ) ಮೀರಿದವನು (ಭವತಿ) ಏನಾಗುತ್ತಾನೆ? (ಕಿಮಾಚಾರಃ) ಅವನ ಆಚಾರವೇನು?

(ಕಥಂ ಚ) ಹೇಗೆ (ಏತಾನ್) ಈ (ತ್ರೀನ್) ಮೂರು (ಗುಣಾನ್) ಗುಣಗಳನ್ನು (ಅತಿವರ್ತತೇ) ಮೀರಿರುತ್ತಾನೆ?

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು.—

ಅವನ ಗುಣಗಳೇನೆಂದರೆ —

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥**

(ಪಾಂಡವ) ಅರ್ಜುನನೆ, ಕೇಳು (ಪ್ರಕಾಶಂ ಚ) ಸತ್ತ್ವಗುಣದ ಕಾರ್ಯವಾದ ತಿಳಿವಳಿಕೆಯನ್ನೂ (ಪ್ರವೃತ್ತಿಂ ಚ) ರಜೋಗುಣದ ಕಾರ್ಯವಾದ ಕರ್ಮದಲ್ಲಿ ತೊಡಗುವಿಕೆಯನ್ನೂ (ಮೋಹಮೇವ ಚ) ತಮೋಗುಣದ ಕಾರ್ಯವಾದ ಮರೆವು, ನಿದ್ರೆ-ಮೊದಲಾದವುಗಳನ್ನೂ (ಸಂಪ್ರವೃತ್ತಾನಿ) ಬಂದು ಗಂಟು ಬಿತ್ತೆಂದು ಎಂದರೆ ಸತ್ತ್ವಗುಣದ ಸುಖವು ನನ್ನನ್ನು ಸೆಳೆಯುತ್ತಿರುವದೆಂದಾಗಲಿ, ರಜೋಗುಣದ ಕರ್ಮವು ಗಂಟುಬಿದ್ದು ನನ್ನ ಮನಸ್ಸಿನ ಏಕಾಗ್ರತೆಯನ್ನು ತಪ್ಪಿಸಿತೆಂದಾಗಲಿ, ತಮೋಗುಣದ ಆಲಸ್ಯವು ತಲೆದೋರಿ ನನಗೆ ಏನೂ ತಿಳಿಯದಂತೆ ಮಾಡಿತೆಂದಾಗಲಿ (ನ ದ್ವೇಷ್ಟಿ) ಅವುಗಳ ಮೇಲೆ ಹಗೆತನವಿಲ್ಲ (ನಿವೃತ್ತಾನಿ) ಅವು ಹಿಂದಿರುಗಿದರೆ (ನ ಕಾಂಕ್ಷತಿ) ಅವುಗಳನ್ನು ಮತ್ತೆ ಬಯಸುವದಿಲ್ಲ ಏಕೆಂದರೆ ಇದೆಲ್ಲ ಮಾಯೆಯೆಂದು ಅವನಿಗೆ ಗೊತ್ತು. ಈ ಗುಣಗಳು ಇತರರಿಗೆ ಕಾಣುವವುಗಳಲ್ಲ, ತನ್ನಲ್ಲಿ ತಾನೆ ನೋಡಿಕೊಳ್ಳತಕ್ಕವುಗಳು

ಅವನ ಆಚಾರವೇನೆಂದರೆ —

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ ೨೩ ॥**

(ಯಃ) ಯಾವನು (ಉದಾಸೀನವತ್) ಇಬ್ಬರ ಜಗಳದಲ್ಲಿ ಯಾರ ಕಡೆಗೂ ಒಲವಿಲ್ಲದ ನಡುವೆಯವನು ಸುಮ್ಮನೆ ನೋಡುತ್ತಿರುವಂತೆ (ಆಸೀನಃ)

ಇರುವವನಾಗಿ (ಗುಣೈಃ) ಆ ಗುಣಗಳಿಂದ (ನ ವಿಚಾಲ್ಯತೇ) ತನ್ನ ಉದಾಸೀನ ಸ್ಥಿತಿಯನ್ನು ಬಿಟ್ಟು ಕದಲುವದಿಲ್ಲವೊ ಮತ್ತು (ಗುಣಾಃ) ದೇಹೇಂದ್ರಿಯಾದಿಗಳ ರೂಪವಾಗಿ ಹರಡಿಕೊಂಡಿರುವ ಗುಣಗಳೆ (ವರ್ತಂತೇ) ವಿಷಯರೂಪವಾಗಿರುವ ಗುಣಗಳಲ್ಲಿ ಪ್ರವರ್ತಿಸುತ್ತವೆ (ಇತ್ಯೇವ) ಎಂದೇ (ಯಃ) ಯಾವನು (ಅವತಿಷ್ಠತಿ) ಇರುತ್ತಾನೊ (ನೇಂಗತೇ) ಆ ಸ್ಥಿತಿಯನ್ನು ಬಿಟ್ಟು ಕದಲುವ ದಿಲ್ಲವೊ ಅವನು ಗುಣಾತೀತನು

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥**

(ಸಮದುಃಖಸುಖಃ) ಸುಖವೂ ದುಃಖವೂ ಮಾಯಾಮಯವಾದ ಮನಸ್ಸಿನದೆಂದು ತಿಳಿದು ಅವುಗಳೆರಡನ್ನೂ ಸಮವಾಗಿ ಕಾಣುವನು ಅವನ ಆ ಶಾಂತಿಗೆ ಕಾರಣವೇನೆಂದರೆ (ಸ್ವಸ್ಥಃ) ಅವನು ಯಾವಾಗಲೂ ತನ್ನ ಆತ್ಮಸ್ವರೂಪದ ಕಡೆ ಒಳಮುಖನಾಗಿರುವನು ಆತ್ಮನಲ್ಲಿಯೇ ಏಕಿರುವ ನೆಂದರೆ (ಸಮಲೋಷ್ಟಾಶ್ಮಕಾಂಚನಃ) ಹೊರಗಣ ಮಣ್ಣುಹೆಂಟೆ, ಕಲ್ಲು, ಬಂಗಾರ–ಎಲ್ಲವೂ ವ್ಯವಹಾರದಲ್ಲಿ ಬೇರೆ ಬೇರೆ ಬೆಲೆಯವುಗಳಾದರೂ ಮಾಯಾಮಯವಾದ್ದರಿಂದ ಪರಮಾರ್ಥ ದೃಷ್ಟಿಯಲ್ಲಿ ಅವೆಲ್ಲ ಅವನಿಗೆ ಸಮವೆ. ಆದ್ದರಿಂದಲೆ (ತುಲ್ಯಪ್ರಿಯಾಪ್ರಿಯಃ) ತನಗೆ ಬೇಕೆನಿಸಿದ್ದು ಬಂದರೂ ಬೇಡವಾದದ್ದು ಬಂದರೂ ಸಮವಾಗಿ ನೋಡುವನು (ಧೀರಃ) ಹೀಗೆ ನಿಜ ವನ್ನು ತಿಳಿದುಕೊಂಡಿರುವದರಿಂದ ಅವನೇ ಬುದ್ಧಿಶಾಲಿಯು ಮತ್ತು (ತುಲ್ಯ ನಿಂದಾತ್ಮಸಂಸ್ತುತಿಃ) ಯಾರಾದರೂ ತನ್ನನ್ನು ಜರಿದರೂ ಹೊಗಳಿದರೂ ಅವನಿಗೆ ಅವು ಸಮಾನವಾಗಿರುವವು

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫ ॥**

(ಮಾನಾಪಮಾನಯೋಃ) ಯಾರಾದರೂ ತನ್ನನ್ನು ಗೌರವಿಸಿದರೆ ಅಥವಾ ಕೀಳಾಗಿ ಕಂಡರೆ ಎರಡರಲ್ಲಿಯೂ ಅವನು (ತುಲ್ಯಃ) ಸಮ

ವಾಗಿರುವನು. (ಮಿತ್ರಾರಿಪಕ್ಷಯೋಃ) ಗೆಳೆಯರ ಕಡೆಗೂ ಹಗೆಗಳ ಕಡೆಗೂ (ತುಲ್ಯಃ) ಸಮವಾಗಿರುವನು (ಸರ್ವಾರಂಭಪರಿತ್ಯಾಗೀ) ತನ್ನ ದೇಹೇಂದ್ರಿಯಗಳ ಸುಖಕ್ಕಾಗಿ ಯಾವ ಉದ್ಯೋಗವನ್ನೂ ಹಿಡಿಯ್ಯದಿರುವನು. (ಸಃ) ಅವನು (ಗುಣಾತೀತಃ) ಗುಣಗಳನ್ನು ಮೀರಿದವನು (ಉಚ್ಯತೇ) ಎನಿಸುವನು.

ಗುಣಾತೀತನಾಗುವದು ಹೇಗೆಂದರೆ —

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥**

(ಯಃ) ಯಾವನು (ಮಾಂ ಚ) ಅಖಂಡಸ್ವರೂಪನಾಗಿದ್ದೂ ಮಾಯಾಶಕ್ತಿಯಿಂದ ಕ್ಷೇತ್ರಜ್ಞಭಾವವನ್ನು ಹೊಂದಿರುವ ನನ್ನನ್ನು (ಅವ್ಯಭಿಚಾರೇಣ) ಇನ್ನೊಂದು ವಿಷಯಕ್ಕೆ ಎರಗದೆ (ಭಕ್ತಿಯೋಗೇನ) ಎಡೆಬಿಡದೆ ಧ್ಯಾನಿಸುವಂಥ ಭಕ್ತಿಯೋಗದಿಂದ (ಸೇವತೇ) ಸೇವೆ ಮಾಡುತ್ತಾನೊ (ಸಃ) ಅವನು (ಏತಾನ್) ಈ (ಗುಣಾನ್) ಮೂರು ಗುಣಗಳನ್ನೂ (ಸಮತೀತ್ಯ) ದಾಟಿ— ಎಂದರೆ ಅವುಗಳ ಸೆಳಿತದಿಂದ ಕೊಸರಿಕೊಂಡು ಬೇರೆಯಾಗಿ (ಬ್ರಹ್ಮಭೂಯಾಯ) ಬ್ರಹ್ಮ ಸ್ವರೂಪವಾದ ಮೋಕ್ಷಕ್ಕೆ (ಕಲ್ಪತೇ) ಸಮರ್ಥನಾಗುತ್ತಾನೆ

ಏಕೆಂದರೆ —

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥**

(ಅಹಂ) ಚೈತನ್ಯಸ್ವರೂಪನಾದ ನಾನು (ಅಮೃತಸ್ಯ) ಸಾವಿಲ್ಲದಿರುವಂಥದ್ದೂ (ಅವ್ಯಯಸ್ಯ ಚ) ಯಾವ ವಿಕಾರವನ್ನೂ ಹೊಂದದಿರುವಂಥದ್ದೂ (ಶಾಶ್ವತಸ್ಯ ಚ) ಎಂದೆಂದಿಗೂ ಇರುವಂಥದ್ದೂ (ಧರ್ಮಸ್ಯ) ಧರ್ಮದಿಂದ ಪಡೆಯುವದಕ್ಕಾಗುವಂಥದ್ದೂ (ಏಕಾಂತಿಕಸ್ಯ) ಎಂದೆಂದೂ ಮುಕ್ಕಾಗದಿರುವಂಥ

(ಸುಖಸ್ಯ ಚ) ಆನಂದರೂಪವಾದಂಥದ್ದೂ ಆದ (ಬ್ರಹ್ಮಣಃ) ಪರಮಾತ್ಮನ (ಪ್ರತಿಷ್ಠಾ ಹಿ) ಆಶ್ರಯಸ್ಥಾನವು ಅಥವಾ (ಅಹಂ) ನಿರ್ಗುಣಬ್ರಹ್ಮ ಸ್ವರೂಪನ್ನಾದ ನಾನು ಅಮೃತ ಮೊದಲಾದ ವಿಶೇಷಣಗಳಿಂದ ಕೂಡಿದ (ಬ್ರಹ್ಮಣಃ) ಹಿರಣ್ಯಗರ್ಭರೂಪಬ್ರಹ್ಮನ (ಪ್ರತಿಷ್ಠಾ ಹಿ) ಆಶ್ರಯಸ್ಥಾನವು

ಇಲ್ಲಿಗೆ **ಗುಣತ್ರಯವಿಭಾಗಯೋಗ** ವೆಂಬ
ಹದಿನಾಲ್ಕನೆ ಅಧ್ಯಾಯವು ಮುಗಿಯಿತು



# ಹದಿನೈದನೆ ಅಧ್ಯಾಯ

ನಿನ್ನನ್ನು ಭಕ್ತಿಯೋಗದಿಂದ ಆಶ್ರಯಿಸಿದವರು ಕೂಡ ಜ್ಞಾನವನ್ನು ಹೊಂದಿ ಗುಣಾತೀತರಾಗುವರೆಂದ ಮೇಲೆ ಆತ್ಮಜ್ಞಾನವನ್ನೆ ತಿಳಿದುಕೊಂಡವರ ಮೋಕ್ಷದ ವಿಷಯಕ್ಕೆ ಸಂಶಯವೇ ಇಲ್ಲವೆಂಬದನ್ನು ಸೂಚಿಸಿ ಆ ಆತ್ಮ ಜ್ಞಾನವನ್ನು ತಿಳಿಸುವದಕ್ಕಾಗಿ ತಾನಾಗಿ

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।***
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥**

ಅರ್ಜುನನೆ, ಕೇಳು ಈ ಜಗತ್ತೆಂಬ ಸಂಸಾರವೃಕ್ಷವು ಸುಖಕ್ಕಾಗಿ ಆಶ್ರಯಿಸುವದಕ್ಕೆ ತಕ್ಕದ್ದಾಗಿಲ್ಲ ಗಂಗಾನದಿಯ ದಡದಲ್ಲಿರುವ ಒಂದು ದೊಡ್ಡ

---

* "ಊರ್ಧ್ವಮೂಲೋಽವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ"— ಈ ಬಹು ಕಾಲದಿಂದಿರುವ ಅಶ್ವತ್ಥವೃಕ್ಷದ ಬುಡವು ಮೇಲೆಯೂ ಕೊಂಬೆಗಳು ಕೆಳಗಡೆಗೂ ಇರುವವು.—ಶ್ರು

ಅರಳೀಮರವು ನದಿಯ ಬಲವಾದ ಅಲೆಗಳ ಹೊಡೆತದಿಂದ ಅರ್ಧ ಬೇರು ಕಳಚಿ ಬಿರುಗಾಳಿಯಿಂದ ಬುಡಮೇಲಾಗಿ ಉರುಳಿದ್ದರೆ ಅದನ್ನು ಯಾರು ಆಶ್ರಯಿಸುತ್ತಾರೆ? ಸಂಸಾರವೆಂಬ ವೃಕ್ಷವು ಅಂಥದ್ದು ಹೇಗೆಂದರೆ (ಊರ್ಧ್ವಮೂಲಂ) ಉರುಳಿದ ಮರದ ಬೇರು ಮೇಲುಗಡೆಗಿರುವದಷ್ಟೆ ಜಗದ್ರೂಪವಾದ ಸಂಸಾರದ ಮೂಲಕಾರಣವಾದ ಬ್ರಹ್ಮವು ಮೇಲೆ ಇರುವದು ಬ್ರಹ್ಮವು ಎಲ್ಲೆಲ್ಲಿಯೂ ಇರುವದಾದರೂ ಅದು ತಾನೇ ಬಳಕಿನ ರೂಪ ವಾದದ್ದೂ ಯಾವಾಗಲೂ ಇರುವಂಥದ್ದೂ ಸೂಕ್ಷ್ಮವಾದದ್ದೂ ಮತ್ತು ಎಲ್ಲಕ್ಕಿಂತ ಹೆಚ್ಚಿನದೂ ಆದ್ದರಿಂದ ಅದು ಮೇಲೆಸಿಸಿಕೊಳ್ಳುವದು ಬ್ರಹ್ಮ ಶಬ್ದಕ್ಕೆ ಪರಬ್ರಹ್ಮವಾದರೆ ಈ ಅರ್ಥ ಇನ್ನ ಬ್ರಹ್ಮಶಬ್ದಕ್ಕೆ ಅರ್ಥವಾಗಿ ಸರ್ವಲೋಕಗಳ ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನನ್ನು ತೆಗೆದುಕೊಂಡರೆ ಅವನ ಸತ್ಯಲೋಕವು ಬಹಳ ಮೇಲೆ ಇರುವದರಿಂದ ಜಗತ್ತಿನ ಬುಡವು ಮೇಲೆ ಇರುವಂಥದ್ದೆಂದಾಯಿತು ಇದಲ್ಲದೆ ಅದು (ಅಧಃಶಾಖಂ) ಉರುಳಿದ ಮರದ ಕೊಂಬೆಗಳು ಬೇರಿನ ಕೆಳಗಣಿಂದಲೆ ಮೇಲಕ್ಕೂ ಕೆಳಕ್ಕೂ ಹರಡಿ ಕೊಂಡಿರುವವಷ್ಟೆ ಜಗದ್ರೂಪವಾದ ಸಂಸಾರವೆಂಬ ವೃಕ್ಷಕ್ಕೆ ಕೊಂಬೆ ಗಳೆಂದರೆ ಹಿರಣ್ಯಗರ್ಭನೇ ಮೊದಲಾದ ಜೀವರು ಇವರೆಲ್ಲರೂ ಪರಬ್ರಹ್ಮದ ಅಥವಾ ಸಗುಣಬ್ರಹ್ಮದ ಕೆಳಗಿನವರಾಗಿ ಮೇಲಕ್ಕೂ ಕೆಳಕ್ಕೂ ಹರಡಿಕೊಂ ಡಿರುವರು ಜೀವರು ಮೇಲಕ್ಕೂ ಕೆಳಕ್ಕೂ ಹರಡಿಕೊಂಡಿರುವರೆಂದರೆ ಅವರು ತಮ್ಮ ಉಚ್ಚ ನೀಚ ಕರ್ಮಗಳಿಂದ ಊರ್ಧ್ವಲೋಕಗಳನ್ನೂ ಅಧೋ ಲೋಕಗಳನ್ನೂ ಪಡೆದಿರುವರೆಂದರ್ಥ ಇದೂ• ಅಲ್ಲದೆ (ಛಂದಾಂಸಿ) ಅನೇಕ ಕರ್ಮಗಳನ್ನೂ ಕರ್ಮಫಲಗಳನ್ನೂ ಹೊಗಳುವ ವೇದವಾಕ್ಯಗಳೇ (ಯಸ್ಯ) ಯಾವದರ (ಪರ್ಣಾನಿ) ಎಲೆಗಳೂ–ಎಂದರೆ ಎಲೆಗಳು ಹಣ್ಣನ್ನು ಮರೆಮಾಡಿ ಮರವನ್ನು ಕಾಪಾಡುವಂತೆ ಕರ್ಮಕಾಂಡದ ವೇದವಾಕ್ಯಗಳು ಆತ್ಮಸ್ವರೂಪ ವನ್ನು ಮರೆಮಾಡಿ ಸಂಸಾರವೆಂಬ ಮರವನ್ನು ಕಾಪಾಡುವವು ಆ ಕಾಮ್ಯ ಕರ್ಮಗಳನ್ನು ಮಾಡುವದರಿಂದಲೆ ಜೀವರು ಮೇಲಿನ ಲೋಕಕ್ಕೆ ಏರುತ್ತಲೂ

ಕೆಳಗಿನ ಲೋಕಕ್ಕೆ ಇಳಿಯುತ್ತಲೂ ಇರುವರು—ಇಂಥ (ಅವ್ಯಯಂ) ಎಂದಿಗೂ ಹೋಗದಂಥದ್ದೆನಿಸಿರುವ (ಅಶ್ವತ್ಥಂ) ನಾಳೆಗೂ ಕೂಡ ಇದ್ದೀತೋ ಇಲ್ಲವೋ ಎಂದು ಸಂಶಯಗೊಳ್ಳಬೇಕಾಗಿರುವಂಥ ಅರಳಿಯ ಮರವನ್ನಾಗಿ (ಪ್ರಾಹುಃ) ಜ್ಞಾನಿಗಳು ಹೇಳುತ್ತಾರೆ (ತಂ) ಅದನ್ನು (ಯಃ) ಯಾವನು (ವೇದ) ಮೇಲೆ ಹೇಳಿದ ರೀತಿಯಲ್ಲಿ ತಿಳಿಯುತ್ತಾನೊ (ಸಃ) ಅವನು (ವೇದವಿತ್) ವೇದವನ್ನೆಲ್ಲ ತಿಳಿದವನಾಗುವನು

ಈ ಸಂಸಾರವೃಕ್ಷಕ್ಕೆ ಇನ್ನೊಂದು ಬಗೆಯ ಅವಯವಕಲ್ಪನೆ ಯೇನೆಂದರೆ :—

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬಂಧೀನಿ ಮನುಷ್ಯಲೋಕೇ** ॥ ೨ ॥

(ತಸ್ಯ) ಆ ಸಂಸಾರವೆಂಬ ವೃಕ್ಷದ (ಶಾಖಾಃ) ಕೊಂಬೆಗಳು (ಅಧಶ್ಚ) ಕೆಳಕ್ಕೂ (ಊರ್ಧ್ವಂ) ಮೇಲಕ್ಕೂ (ಪ್ರಸೃತಾಃ) ಹರಡಿಕೊಂಡಿರುವವು-ಎಂದರೆ ಒಳ್ಳೆ ಕರ್ಮಗಳನ್ನು ಮಾಡಿದ ಜೀವರು ಮೇಲಿನ ಲೋಕಗಳಿಗೆ ಏರುವರು, ಕೆಟ್ಟ ಕರ್ಮಗಳನ್ನು ಮಾಡಿದ ಜೀವರು ಪಶು, ಪಕ್ಷಿ-ಮೊದಲಾದ ಕೆಳಗಣ ಮೆಟ್ಟಲಿಗೆ ಇಳಿಯುವರು. ಇದಲ್ಲದೆ (ಗುಣಪ್ರವೃದ್ಧಾಃ) ಮರದ ಕೊಂಬೆಗಳು ನೀರಿನಿಂದ ಮೈದುಂಬಿಕೊಳ್ಳುವಂತೆ ಸಂಸಾರದ ಕೊಂಬೆಗಳಾದ ಜೀವರು ಸತ್ತ್ವರಜಸ್ತಮೋಗುಣಗಳಿಂದ ಮೈದುಂಬಿಕೊಳ್ಳುವರು ಮತ್ತೇನೆಂದರೆ (ವಿಷಯಪ್ರವಾಲಾಃ) ಮರದ ಕೊಂಬೆಗಳ ಮುಂಗಡೆ ಎಳೇ ಚಿಗುರುಗಳಿರುವಂತೆ ಈ ಸಂಸಾರವೃಕ್ಷದ ಕೊಂಬೆಗಳ ಮುಂಗಡೆ ಶಬ್ದ, ಸ್ಪರ್ಶ-ಮೊದಲಾದ ವಿಷಯಗಳೇ ಚಿಗರುಗಳು ಇನ್ನೊಂದು ವಿಶೇಷವೇನೆಂದರೆ-ಈ ಸಂಸಾರವೃಕ್ಷಕ್ಕೆ ಪರಬ್ರಹ್ಮ ಅಥವಾ ಚತುರ್ಮುಖಬ್ರಹ್ಮನು ತಾಯಿಬೇರೆಂದು ಮೇಲೆ ಹೇಳಿದ್ದಾಗಿದೆಯಷ್ಟೆ. ಅದೂ ಅಲ್ಲದೆ (ಮನುಷ್ಯಲೋಕೇ)

ಭೂಲೋಕದಲ್ಲಿ (ಕರ್ಮಾನುಬಂಧೀನಿ) ಮುಂದೆ ಪುಣ್ಯಪಾಪಕರ್ಮಗಳನ್ನು ಗಂಟುಬೀಳಿಸುವಂಥ (ಮೂಲಾನಿ) ಪ್ರೀತಿ, ಹಗೆತನ–ಮೊದಲಾದ ಒಳ ಬೇರುಗಳು (ಅಧಶ್ಚ) ಕೆಳಕ್ಕೂ ಕೂಡ–ಎಂದರೆ ಕೆಳಕ್ಕೂ ಮೇಲಕ್ಕೂ (ಅನುಸಂತತಾನಿ) ಒಂದರ ಹಿಂದೊಂದು ಇದ್ದುಕೊಂಡೇ ಇರುವವು

ಇದರ ಅಪಾಯವು ತಪ್ಪುವದಕ್ಕೇನು ಗತಿಯೆಂದರೆ —

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**
**ಅಶ್ವತ್ಥಮೇನಂ ಸುವಿರೂಢಮೂಲ–**
**ಮಸಂಗಶಸ್ತ್ರೇಣ ದೃಢೇನ ಛಿತ್ವಾ** ॥ ೩ ॥

(ಅಸ್ಯ) ಈ ಸಂಸಾರವೃಕ್ಷದ (ರೂಪಂ) ರೂಪವು (ತಥಾ) ಮೇಲೆ ಹೇಳಿದಂತೆ ಮೇಲೆ ಬುಡವೂ ಕೆಳಗೆ ಕೊಂಬೆಯೂ ಮೊದಲಾದ ರೀತಿಯಲ್ಲಿ (ಇಹ) ಈ ಸಂಸಾರವಲ್ಲಿ (ನ ಉಪಲಭ್ಯತೇ) ತಿಳಿಯುವದಿಲ್ಲ ಮತ್ತು ಅದು ಕನಸಿನ ಜಗತ್ತಿನಂತೆಯೂ ಬಿಸಿಲಗುದುರೆಯ ಕೆರೆಯಂತೆಯೂ ಮಾಯೆಯ ಗಂಧರ್ವನಗರದಂತೆಯೂ ತೋರಿ ಅಡಗುವದಾದ್ದರಿಂದ (ಅಂತಃ) ಯಾವಾಗ ಹೋದೀತೆಂಬ ಅದರ ಕೊನೆಯೂ (ನ) ತಿಳಿಯುವದಿಲ್ಲ (ಆದಿಃ ಚ) ಯಾವಾಗ ಪ್ರಾರಂಭವಾಯಿತೆಂಬ ಅದರ ಮೊದಲೂ (ನ) ತಿಳಿಯುವದಿಲ್ಲ (ಸಂಪ್ರತಿಷ್ಠಾ ಚ) ಅದರ ಇರುವಿಕೆಯೂ (ನ) ತಿಳಿಯುವದಿಲ್ಲ ಹೀಗಿದ್ದರೂ (ಸುವಿರೂಢಮೂಲಂ) ಚೆನ್ನಾಗಿ ಇಳಿದುಕೊಂಡಿರುವ ಬೇರುಗಳುಳ್ಳಂಥ (ಏನಂ) ಈ (ಅಶ್ವತ್ಥಂ) ಸಂಸಾರವೆಂಬ ಅರಳೀಮರವನ್ನು (ದೃಢೇನ) ಪರಮಾತ್ಮ ಜ್ಞಾನದ ಕಡೆಗೆ ತಿರುಗಿಯೇ ತಿರುಗುತ್ತೇನೆಂಬ ನಿಶ್ಚಯದಿಂದ ಗಟ್ಟಿಗೊಳಿಸಿದ್ದಾದ (ಅಸಂಗಶಸ್ತ್ರೇಣ) ಹೆಂಡತಿ, ಮಕ್ಕಳು–ಮೊದಲಾದವರ ಮೇಲಿನ ಅತಿ ಪ್ರೇಮವನ್ನು ತೊರೆಯುವಿಕೆಯೆಂಬ ಶಸ್ತ್ರದಿಂದ (ಛಿತ್ವಾ) ಕತ್ತರಿಸಿ

ಮುಂದೇನು ಮಾಡಬೇಕೆಂದರೆ .—

**ತತಃ* ಪದಂ ತತ್ಪರಿಮಾರ್ಗಿತವ್ಯಂ†**
**ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।**
**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ** ॥ ೪ ॥

(ತತಃ) ಆಮೇಲೆ (ಯಸ್ಮಿನ್) ಯಾವ ಪದವಿಯಲ್ಲಿ (ಗತಾಃ) ಒಂದಾಗಿ ಕೂಡಿ ಹೋದವರು (ಭೂಯಃ) ಮತ್ತೆ (ನ ನಿವರ್ತಂತಿ) ಹಿಂದಿರುಗುವ ದಿಲ್ಲವೊ ಮತ್ತು (ಯತಃ) ಯಾವ ಪುರುಷನಿಂದ (ಪುರಾಣೀ) ಎಷ್ಟೋ ಹಿಂದಿನಿಂದ (ಪ್ರವೃತ್ತಿಃ) ಸಂಸಾರವೆಂಬ ಮಾಯಾವೃಕ್ಷದ ಬೆಳವಳಿಗೆಯು (ಪ್ರಸೃತಾ) ಮಾಯಗಾರನಿಂದ ಮಾಯೆ ಹೂರಟಂತೆ ಹೊರಟಿತೊ (ಆದ್ಯಂ) ಸೃಷ್ಟಿಗಿಂತ ಮೊದಲನೆಯವನಾದ (ತಮೇವ ಪುರುಷಂ) ಆ ಪುರುಷನನ್ನೆ (ಪ್ರಪದ್ಯೇ) ಮರೆಹೋಗುತ್ತೇನೆ, ಎಂದು (ತತ್) ಬ್ರಹ್ಮಸ್ವರೂಪದ (ಪದಂ) ಪದವಿಯು (ಪರಿಮಾರ್ಗಿತವ್ಯಂ) ಹುಡುಕತಕ್ಕದ್ದಾಗಿರುವದು

ಎಂಥವರು ಆ ಪದವಿಯನ್ನು ಪಡೆಯುತ್ತಾರೆಂದರೆ —

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ–**
**ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್** ॥ ೫ ॥

(ನಿರ್ಮಾನಮೋಹಾಃ) ತಾನು ದೊಡ್ಡವನೆಂಬ ಹೆಮ್ಮೆಯೂ ಅವಿವೇಕವೂ ಹೋಗಿರುವಂಥವರೂ (ಜಿತಸಂಗದೋಷಾಃ) ವಿಷಯಗಳ ಮೇಲಿರುವ

---

* "ತದ್ವಿಷ್ಣೋಃ ಪರಮಂ ಪದಂ" ಅದು ವಿಷ್ಣುವಿನ ಉತ್ಕೃಷ್ಟಸ್ಥಾನವು —ಶ್ರು

† "ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" ಅವನನ್ನು ಹುಡುಕಬೇಕು, ಅವನನ್ನು ತಿಳಿಯಬೇಕು.—ಶ್ರು

ಅತಿಪ್ರೇಮದಿಂದಾಗುವ ಅನರ್ಥಗಳನ್ನು ಗೆದ್ದಿರುವವರೂ (ಅಧ್ಯಾತ್ಮನಿತ್ಯಾಃ) ಯಾವಾಗಲೂ ಪರಮಾತ್ಮ ಸ್ವರೂಪದ ಆಲೋಚನೆಯಲ್ಲಿಯೇ ಇರುವವರೂ (ವಿನಿವೃತ್ತಕಾಮಾಃ) ವಿವೇಕದಿಂದಲೂ ವೈರಾಗ್ಯದಿಂದಲೂ ಬಯಕೆಗಳನ್ನೆಲ್ಲ ಹಿಮ್ಮೆಟ್ಟಿಸಿದವರೂ (ಸುಖದುಃಖಸಂಜ್ಞೈಃ) ಸುಖ, ದುಃಖ–ಎಂಬ ಹೆಸರುಳ್ಳ ಶೀತೋಷ್ಣ, ಹಸಿವು ಬಾಯಾರಿಕೆ–ಮೊದಲಾದ (ದ್ವಂದ್ವೈಃ) ಜೋಡಿಗಳಿಂದ (ವಿಮುಕ್ತಾಃ) ಕಳಚಿಕೊಂಡರುವವರೂ ಇಂಥ (ಅಮೂಢಾಃ) ಅವಿವೇಕವನ್ನು ಕಳೆದುಕೊಂಡಂಥವರು (ತತ್) ಆ (ಅವ್ಯಯಂ) ನಾಶರಹಿತವಾದ (ಪದಂ) ಬ್ರಹ್ಮಸ್ವರೂಪವಾದ ಮೋಕ್ಷವನ್ನು (ಗಚ್ಛಂತಿ) ಪಡೆಯುತ್ತಾರೆ

ಆ ಪದವಿಯು ಎಂಥದ್ದೆಂದರೆ —

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।***
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೬ ॥**

(ಯತ್) ಯಾವ ಸ್ಥಾನವನ್ನು (ಗತ್ವಾ) ಪಡೆದಮೇಲೆ (ನ ನಿವರ್ತಂತೇ) ಹಿಂದಕ್ಕೆ ಬರೋಣವೆಂಬುದಿಲ್ಲವೊ (ತತ್) ಆ ನನ್ನ ಪದವಿಯನ್ನು (ಸೂರ್ಯಃ) ಸೂರ್ಯನು (ನ ಭಾಸಯತೇ) ಬೆಳಗುವದಿಲ್ಲ, (ಶಶಾಂಕಃ) ಚಂದ್ರನು (ನ) ಬೆಳಗುವದಿಲ್ಲ, (ಪಾವಕಃ) ಅಗ್ನಿಯು (ನ) ಬೆಳಗುವದಿಲ್ಲ. ಸೂರ್ಯನಿಂದ ಬೆಳಗುವ ಗಡಿಗೆ ಮೊದಲಾದವು ಸೂರ್ಯನನ್ನೆ ಹೇಗೆ ಬೆಳಗಲಾರವೊ ಹಾಗೆ ಬ್ರಹ್ಮದಿಂದ ಬೆಳಗುವ ಸೂರ್ಯ ಮೊದಲಾದವರು ಬ್ರಹ್ಮವನ್ನೆ ಬೆಳಗಲಾರರು (ತತ್) ಅದೇ (ಮಮ) ನನ್ನ (ಪರಮಂ) ಸರ್ವಶ್ರೇಷ್ಠವಾದ (ಧಾಮ) ಸ್ಥಾನವು.

---

* "ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ" ಪರಬ್ರಹ್ಮವನ್ನು ಸೂರ್ಯನೂ ಬೆಳಗಲಾರನು, ಚಂದ್ರ ನಕ್ಷತ್ರಗಳೂ ಬೆಳಗಲಾರವು, ಮಿಂಚುಗಳೂ ಬೆಳಗಲಾರವು. ಇನ್ನು ಅಗ್ನಿಯ ಮಾತೇನು ?—ಶ್ರು

ಹೋಗುವಿಕೆ ಇದ್ದ ಕಡೆ ಬರುವಿಕೆ ಇರಲೇ ಬೇಕಲ್ಲ' ಬ್ರಹ್ಮಸ್ವರೂಪಕ್ಕೆ ಹೋದವರಿಗೆ ಬರುವಿಕೆ ಏಕಿಲ್ಲವೆಂದರೆ :—

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥**

(ಜೀವಲೋಕೇ) ಜೀವರ ಲೋಕವಾದ ಈ ಸಂಸಾರದಲ್ಲಿ (ಸನಾತನಃ) ಬಹು ಹಿಂದಿನಿಂದಲೂ ಇರುವಂಥ (ಜೀವಭೂತಃ) ನಾನು ಮಾಡುತ್ತೇನೆ, ನಾನು ಉಣ್ಣುತ್ತೇನೆ ಎಂಬ ಜೀವರೂಪವು (ಮಮೈವ) ನನ್ನದೇ (ಅಂಶಃ) ಅಂಶವು ಆದ್ದರಿಂದ ನೀರಿನಲ್ಲಿರುವ ಸೂರ್ಯನ ಪ್ರತಿಬಿಂಬವು ಸೂರ್ಯನ ಅಂಶವೇ ಆಗಿದ್ದು ಪ್ರತಿಬಿಂಬಕ್ಕೆ ಕಾರಣವಾದ ನೀರು ಹೋಗುತ್ತಲೆ ಸೂರ್ಯನನ್ನೆ ಸೇರಿ ಮತ್ತೆ ಹೇಗೆ ಹಿಂದಿರುಗುವದಿಲ್ಲವೊ ಹಾಗೆ ಅಥವಾ ಗಡಿಗೆ ಮೊದಲಾದವುಗಳಲ್ಲಿರುವ ಬಿಡಿಬಿಡಿಯಾದಾಕಾಶವು ದೊಡ್ಡ ಆಕಾಶದ ಅಂಶವೇ ಆಗಿದ್ದು ಆ ಅಂಶತ್ವಕ್ಕೆ ಕಾರಣವಾದ ಗಡಿಗೆ ಮೊದಲಾದವು ಒಡೆದು ಹೋಗುತ್ತಲೆ ದೊಡ್ಡ ಆಕಾಶಕ್ಕೇ ಸೇರಿ ಮತ್ತೆ ಹೇಗೆ ಹಿಂದಿರುಗುವದಿಲ್ಲವೋ ಹಾಗೆ ಬ್ರಹ್ಮನನ್ನು ಪಡೆದ ಜೀವನು ಹಿಂದಿರುಗುವದಿಲ್ಲ ಅವಯವಗಳಿಲ್ಲದ ಬ್ರಹ್ಮಕ್ಕೆ ಅಂಶವೆಂಬ ಮಾತು ಹೇಗೆ ಹೊಂದೀತೆಂದರೂ ಬ್ರಹ್ಮಕ್ಕ ಅಂಶವೆಂಬುವದು ನಿಜವಾದದ್ದಲ್ಲ, ಮಾಯಾಕಲ್ಪಿತವಾದ ದೇಹ ಮೊದಲಾದವುಗಳ ಸಂಬಂಧದಿಂದ ಹೇಳುವ ಮಾತು. ಈ ಆತ್ಮನನ್ನು ತಿಳಿಯುವ ದಾರಿ ಯಾವದೆಂದರೆ ಆ ಜೀವನು ಹೋಗುವಾಗಲೂ ಬರುವಾಗಲೂ (ಪ್ರಕೃತಿಸ್ಥಾನಿ) ದೇಹದಲ್ಲಿ ಕಣ್ಣು, ಕಿವಿ–ಮೊದಲಾದ ಬೇರೆ ಬೇರೆ ತಮ್ಮ ಸ್ಥಾನಗಳಲ್ಲಿರುವಂಥ (ಮನಃಷಷ್ಠಾನಿ) ಮನಸ್ಸೇ ಆರನೆಯದಾಗಿರುವ (ಇಂದ್ರಿಯಾಣಿ) ಐದು ಜ್ಞಾನೇಂದ್ರಿಯಗಳನ್ನು (ಕರ್ಷತಿ) ಸೆಳೆಯುತ್ತಾನೆ ಕರ್ಮೇಂದ್ರಿಯಗಳೂ ಇವುಗಳ ಬೆನ್ನು ಹತ್ತಿಯೇ ಹೋಗುತ್ತವೆ

ಹೇಗೆ ಸೆಳೆದುಕೊಂಡು ಹೋಗುವನೆಂದರೆ —

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮ ॥**

(ಈಶ್ವರಃ) ದೇಹಸ್ವಾಮಿಯಾದ ಆ ಜೀವನು (ಯತ್) ಯಾವಾಗ (ಶರೀರಂ) ಒಂದು ದೇಹದಿಂದ ಬಂದು ಇನ್ನೊಂದು ದೇಹವನ್ನು (ಅವಾಪ್ನೋತಿ) ಪಡೆಯುತ್ತಾನೊ ಮತ್ತು (ಯಚ್ಚಾಪಿ) ಯಾವಾಗ (ಉತ್ಕ್ರಾಮತಿ) ಒಂದು ದೇಹವನ್ನು ಬಿಟ್ಟು ಹೊರಡುತ್ತಾನೊ ಆಗ (ವಾಯುಃ) ಗಾಳಿಯು (ಆಶಯಾತ್) ಸುವಾಸನೆಯ ಆಶ್ರಯಸ್ಥಾನವಾದ ಹೂ ಮೊದಲಾದವುಗಳಿಂದ (ಗಂಧಾನಿವ) ಗಂಧಗಳನ್ನು ಹೇಗೆ ಸೆಳೆದುಕೊಂಡು ಹೋಗುತ್ತದೊ ಹಾಗೆ (ಏತಾನಿ) ಈ ಇಂದ್ರಿಯಗಳನ್ನೂ ಮನಸ್ಸನ್ನೂ (ಗೃಹೀತ್ವಾ) ಸೆಳೆದುಕೊಂಡೇ (ಸಂಯಾತಿ) ಹೊರಡುತ್ತಾನೆ

ಆ ಇಂದ್ರಿಯಗಳು ಯಾವವೆಂದರೆ —

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯ ॥**

(ಶ್ರೋತ್ರಂ) ಕೇಳುವ ಇಂದ್ರಿಯ, (ಚಕ್ಷುಃ) ನೋಡುವ ಇಂದ್ರಿಯ, (ಸ್ಪರ್ಶನಂ ಚ) ಮುಟ್ಟುವ ಇಂದ್ರಿಯ, (ರಸನಂ) ರುಚಿನೋಡುವ ಇಂದ್ರಿಯ, (ಘ್ರಾಣಮೇವ ಚ) ಮೂಸುವ ಇಂದ್ರಿಯ–ಈ ಪ್ರತಿಯೊಂದನ್ನೂ (ಅಧಿಷ್ಠಾಯ) ಆಶ್ರಯಿಸಿಕೊಂಡು (ಅಯಂ) ಈ (ಮನಶ್ಚ) ಮನಸ್ಸು (ವಿಷಯಾನ್) ಶಬ್ದ, ಸ್ಪರ್ಶ–ಮೊದಲಾದ ವಿಷಯಗಳನ್ನು (ಉಪಸೇವತೇ) ಭೋಗಿಸುತ್ತದೆ

ಹೀಗೆ ಹೋಗಿ ಬರುವ ಜೀವನನ್ನು ಎಲ್ಲರೂ ಏಕೆ ತಿಳಿಯುವದಿಲ್ಲವೆಂದರೆ.—

**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦ ॥**

(ಉತ್ಕ್ರಾಮಂತಂ) ಮೊದಲು ಪಡೆದಿರುವ ದೇಹವನ್ನು ಬಿಡುತ್ತಿದ್ದರೂ (ಸ್ಥಿತಂ ವಾಪಿ) ಆ ದೇಹದಲ್ಲಿಯೇ ಇರುತ್ತಿದ್ದರೂ (ಭುಂಜಾನಂ ವಾ) ಶಬ್ದ, ಸ್ಪರ್ಶ–ಮೊದಲಾದ ವಿಷಯಗಳನ್ನು ಭೋಗಿಸುತ್ತಿದ್ದರೂ (ಗುಣಾನ್ವಿತಂ)

ಸುಖ, ದುಃಖ, ಮೋಹ–ಮೊದಲಾದ ಗುಣಗಳಿಂದ ಕೂಡಿದ್ದರೂ ಅವನನ್ನು (ವಿಮೂಢಾಃ) ವಿಷಯಸುಖಕ್ಕೆ ಮನಸ್ಸನ್ನು ಸೂರೆಗೊಟ್ಟು ಆತ್ಮನನ್ನು ಬಿಡಿಸಿ ತಿಳಿಯುವ ಯೋಗ್ಯತೆಯನ್ನು ಕಳೆದುಕೊಂಡಿರುವ ಅವಿವೇಕಿಗಳು (ನ ಅನುಪಶ್ಯಂತಿ) ಯಾವದೊಂದವಸ್ಥೆಯಲ್ಲಿಯೂ ನೋಡುವದಿಲ್ಲ, (ಜ್ಞಾನ ಚಕ್ಷುಷಃ) ತಿಳಿವಳಿಕೆಯೆಂಬ ಒಳಗಣ್ಣನ್ನು ಪಡೆದವರು (ಪಶ್ಯಂತಿ) ಎಲ್ಲ ಅವಸ್ಥೆಗಳಲ್ಲಿಯೂ ಅವನನ್ನು ನೋಡುತ್ತಾರೆ

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ ೧೧ ॥**

(ಯತಂತಃ) ಧ್ಯಾನ ಮೊದಲಾದ ಉಪಾಯಗಳಿಂದ ಪ್ರಯತ್ನವನ್ನು ಮಾಡುವಂಥ (ಯೋಗಿನಶ್ಚ) ಚಿತ್ತಶುದ್ಧಿಯನ್ನು ಪಡೆದ ಯೋಗಿಗಳು (ಆತ್ಮನಿ) ತಮ್ಮ ಬುದ್ಧಿಯಲ್ಲಿ (ಅವಸ್ಥಿತಂ) ಇರುವಂಥ (ಏನಂ) ಈ ಆತ್ಮನನ್ನು (ಪಶ್ಯಂತಿ) ತಮ್ಮ ಸ್ವರೂಪವೆಂದು ತಿಳಿಯುತ್ತಾರೆ (ಯತಂತೋಽಪಿ) ಪ್ರಯತ್ನಮಾಡುತ್ತಿದ್ದರೂ (ಅಕೃತಾತ್ಮಾನಃ) ಚಿತ್ತಶುದ್ಧಿಯಾಗಿಲ್ಲದಂಥ (ಅಚೇತಸಃ) ಅವಿವೇಕಿಗಳು (ಏನಂ) ಈ ಆತ್ಮನನ್ನು (ನ ಪಶ್ಯಂತಿ) ನೋಡುವದಿಲ್ಲ.

ಈ ಆತ್ಮನ ವಿಭೂತಿವಿಶೇಷವನ್ನು ಹೇಳುತ್ತೇನೆ, ಕೇಳು —

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।***
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥**
**॥ ೧೨ ॥**

(ಆದಿತ್ಯಗತಂ) ಸೂರ್ಯನನ್ನು ಆಶ್ರಯಿಸಿಕೊಂಡಿರುವಂಥ (ಯತ್) ಯಾವ (ತೇಜಃ) ಬೆಳಕು (ಅಖಿಲಂ) ಎಲ್ಲ (ಜಗತ್) ಜಗತ್ತನ್ನು (ಭಾಸ

---

* "ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ" ಆ ಆತ್ಮನು ಬೆಳಗುತ್ತಿರಲಾಗಿ ಅದರ ಬಲದಿಂದ ಎಲ್ಲವೂ ಬೆಳಗುವವು ಅವನ ಬೆಳಕಿನಿಂದಲೆ ಇವೆಲ್ಲ ಬೆಳಗುತ್ತವೆ.—ಶ್ರು.

ಯತೇ) ಬೆಳಗುವದೊ (ಚಂದ್ರಮಸಿ) ಚಂದ್ರನಲ್ಲಿ (ಯತ್) ಯಾವ ಬೆಳಕಿದೆಯೊ (ಅಗ್ನೌ) ಅಗ್ನಿಯಲ್ಲಿ (ಯಚ್ಚ) ಯಾವ ಬೆಳಕಿದೆಯೊ (ತತ್) ಆ (ತೇಜಃ) ಬೆಳಕು (ಮಾಮಕಂ) ನನ್ನ ಬೆಳಕೆಂದು (ವಿದ್ಧಿ) ತಿಳಿ ಎಲ್ಲ ವಸ್ತುಗಳೂ ನನ್ನಿಂದಲೇ ಬೆಳಗುವಂಥವುಗಳಾದ ಮೇಲೆ ಸೂರ್ಯ ಮೊದಲಾದವರ ಬೆಳಕಿನಲ್ಲಿ ವಿಶೇಷವೇನೆಂದರೆ ನಮ್ಮ ಮುಖವು ಗೋಡೆಯೆದುರಿಗೂ ಕನ್ನಡಿಯೆದುರಿಗೂ ಇದ್ದರೂ ಕನ್ನಡಿಯಲ್ಲಿ ಸ್ವಚ್ಛತ್ವವಿರುವದರಿಂದ ಪ್ರತಿಬಿಂಬಿಸುವಂತೆ ಸೂರ್ಯಾದಿಗಳಲ್ಲಿ ಸತ್ತ್ವಾಧಿಕ್ಯವಿರುವದರಿಂದ ಅದರಲ್ಲಿ ಹೆಚ್ಚುಗಾರಿಕೆ ತೋರುವದು

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ |***
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ||**
**|| ೧೩ ||**

(ಅಹಂ) ಪರಮೇಶ್ವರನಾದ ನಾನು (ಗಾಂ) ಭೂಮಿಯನ್ನು (ಆವಿಶ್ಯ ಚ) ಒಳಹೊಕ್ಕು (ಓಜಸಾ) ನನ್ನ ಬಲದಿಂದ (ಭೂತಾನಿ) ಸ್ಥಾವರ ಜಂಗಮವಾದ ಭೂತಗಳನ್ನೆಲ್ಲ (ಧಾರಯಾಮಿ) ಹಿಡಿದು ನಿಲ್ಲಿಸಿಕೊಂಡಿರುವೆನು ನಾನು ಈ ಭೂಮಿಯನ್ನು ನನ್ನ ಶಕ್ತಿಯಿಂದ ಗಟ್ಟಿಗೊಳಿಸದೆ ಇದ್ದರೆ ಈ ಭೂತಗಳು ಭಾರದಿಂದ ಕಳಲಿ ಮರಳಿನಂತೆ ಪುಡಿಪುಡಿಯಾದಾವು, ಅಥವಾ ಕೆಳಕ್ಕೆ ಕುಸಿದು ಹೋದಾವು (ರಸಾತ್ಮಕಃ) ರಸಸ್ವಭಾವನಾದ (ಸೋಮಃ) ಚಂದ್ರನು (ಭೂತ್ವಾ) ಆಗಿ (ಸರ್ವಾಃ) ಎಲ್ಲ (ಓಷಧೀಃ) ಬತ್ತ, ಗೋಧಿ-ಮೊದಲಾದ ಸಸ್ಯಗಳನ್ನು (ಪುಷ್ಣಾಮಿ ಚ) ನನ್ನ ರಸವನ್ನು ಅವಕ್ಕೆ ಕೊಟ್ಟು ಬಲಿಸುತ್ತೇನೆ ಮತ್ತು ಸ್ವಾದುರಸವುಳ್ಳವುಗಳನ್ನಾಗಿ ಮಾಡುತ್ತೇನೆ.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ |†**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ || ೧೪ ||**

---

* "ಸ ದಾಧಾರ ಪೃಥಿವೀಮ್" ಆ ಪುರುಷನು ಭೂಮಿಯನ್ನು ಧರಿಸಿರುವನು

† "ಅಯಮಗ್ನಿರ್ವೈಶ್ವಾನರೋ ಯೋऽಯಮಂತಃ ಪುರುಷೇ ಯೇನೇದಮನ್ನಂ ಪಚ್ಯತೇ" ಯಾರು ಪುರುಷನೊಳಗಿದ್ದುಕೊಂಡು ಅನ್ನವನ್ನು ಅರಗಿಸುವನೊ ಆ ಈ ಅಗ್ನಿಯು ವೈಶ್ವಾನರನೆಂಬ ಜಠರಾಗ್ನಿಯು.—ಶ್ರು

(ಅಹಂ) ನಾನು (ಪ್ರಾಣಿನಾಂ) ಎಲ್ಲ ಪ್ರಾಣಿಗಳ (ದೇಹಂ) ಶರೀರವನ್ನು (ಆಶ್ರಿತಃ) ಒಳಹೊಕ್ಕಿರುವವನಾಗಿ (ವೈಶ್ವಾನರಃ) ಜಠರಾಗ್ನಿಯು (ಭೂತ್ವಾ) ಆಗಿ (ಪ್ರಾಣಾಪಾನಸಮಾಯುಕ್ತಃ) ಪ್ರಾಣ, ಅಪಾನ-ಎಂಬ ವಾಯುಗಳಿಂದ ಕೂಡಿ (ಚತುರ್ವಿಧಂ) ನೆಮಲಿ ನುಂಗುವ ಅನ್ನ ಮೊದಲಾದದ್ದು, ಅಗಿದು ತಿನ್ನುವ ಭಕ್ಷ್ಯ ಮೊದಲಾದದ್ದು, ಹಲ್ಲಗಳಿಂದ ಕಚ್ಚಿ ಹೀರಿಕೊಳ್ಳುವ ಉಪ್ಪಿನ ಕಾಯಿ ಮೊದಲಾದದ್ದು, ನಾಲಿಗೆಗೆ ತಾಕುತ್ತಲೆ ಒಳಕ್ಕೆ ಹೋಗುವ ಸೀಕರಣೆ ಮೊದಲಾದದ್ದು-ಈ ನಾಲ್ಕು ಬಗೆಯ (ಅನ್ನಂ) ಆಹಾರವನ್ನು (ಪಚಾಮಿ) ಅರಗಿಸುತ್ತೇನೆ ಉಣ್ಣುವವನನ್ನು ವೈಶ್ವಾನರನೆಂಬ ಅಗ್ನಿಯೆಂದೂ ಉಣ್ಣುವ ಅನ್ನವನ್ನು ಸೋಮವೆಂದೂ ತಿಳಿದು ಉಣ್ಣುವವನಿಗೆ ಅನ್ನ ದೋಷವಿಲ್ಲ

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ***
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ†**
**ವೇದಾಂತಕೃದ್ವೇದವಿದೇವ ಚಾಹಮ್‡ ॥ ೧೫ ॥**

(ಅಹಂ) ನಾನು (ಸರ್ವಸ್ಯ ಚ) ಎಲ್ಲರ (ಹೃದಿ) ಬುದ್ಧಿಯಲ್ಲಿ (ಸನ್ನಿವಿಷ್ಟಃ) ಜೀವಾತ್ಮರೂಪನಾಗಿ ಪ್ರವೇಶಿಸಿರುವೆನು (ಸ್ಮೃತಿಃ) ನೆನಪೂ (ಜ್ಞಾನಂ) ತಿಳಿವಳಿಕೆಯೂ (ಅಪೋಹನಂ ಚ) ಕಾಮ, ಕ್ರೋಧ, ಮೋಹ-ಮೊದಲಾದವುಗಳಿಂದ ಆ ನೆನಪೂ ಜ್ಞಾನವೂ ಹಾರಿಹೋಗುವದೂ (ಮತ್ತಃ)

---

* "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" ಈ ಜೀವರೂಪದಿಂದ ಪ್ರವೇಶಮಾಡಿ ನಾಮರೂಪಗಳನ್ನು ಸ್ಪಷ್ಟಮಾಡುವೆನು.—ಶ್ರು

† "ಸರ್ವೇ ವೇದಾ ಯತ್ಪದಮಾಮನಂತಿ" ವೇದಗಳೆಲ್ಲ ಯಾವ ಪದವನ್ನು ಬೋಧಿಸುವವೊ.—ಶ್ರು

‡ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಗ್‍ಂಶ್ಚ ಪ್ರಹಿಣೋತಿ ತಸ್ಮೈ" ಯಾವನು ಮೊದಲು ಬ್ರಹ್ಮನನ್ನು ಮಾಡಿ ಅವನಿಗೆ ವೇದಗಳನ್ನು ಅನುಗ್ರಹಿಸಿದನೊ.—ಶ್ರು

ನನ್ನಿಂದಲೆ. ಪುಣ್ಯಕರ್ಮವನ್ನು ಮಾಡಿದವರಿಗೆ ಅದರ ಫಲವಾಗಿ ಸ್ಮೃತಿ ಜ್ಞಾನಗಳು ಬರುವವು ಪಾಪಕರ್ಮವನ್ನು ಮಾಡಿದವರಿಗೆ ಅದರ ಫಲವಾಗಿ ಅವು ಹೋಗುವವು ಹೃದಯದಲ್ಲಿರುವ ನನ್ನ ಸಾನ್ನಿಧ್ಯದ ಬಲದಿಂದ ಮನುಷ್ಯನು ಕರ್ಮಗಳನ್ನು ಮಾಡುವನು ಆದ್ದರಿಂದ ಸ್ಮೃತಿಜ್ಞಾನಗಳು ಬರುವದೂ ಹೋಗುವದೂ ನನ್ನಿಂದಲೆ (ಅಹಮೇವ) ಈ ಜೀವರೂಪನಾಗಿರುವ ನಾನೆ (ಸರ್ವೈಃ) ಎಲ್ಲ (ವೇದೈಶ್ಚ) ವೇದಗಳಿಂದಲೂ (ವೇದ್ಯಃ) ತಿಳಿಯಬೇಕಾದವನು (ವೇದಾಂತಕೃತ್) ಉಪನಿಷತ್ತಿನ ಸಂಪ್ರದಾಯವನ್ನು ಆರಂಭಿಸಿದವನು. (ಅಹಂ) ನಾನು (ವೇದವಿದೇವ ಚ) ವೇದಾರ್ಥವನ್ನೆಲ್ಲ ತಿಳಿದವನೂ ಆಗಿರುವೆನು.

ಸಾರಾಂಶವೇನೆಂದರೆ —

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**

(ಲೋಕೇ) ಜಗದ್ರೂಪವಾದ ಸಂಸಾರದಲ್ಲಿ (ಕ್ಷರಶ್ಚ) ನಾಶವಾಗುವಂಥದ್ದೆಂಬ ಒಂದು ಗುಂಪು (ಅಕ್ಷರ ಏವ ಚ) ನಾಶವಾಗುವವುಗಳ ಉತ್ಪತ್ತಿಗೆ ಕಾರಣವಾಗಿ ನಾಶವಾಗದಿರುವ ಮಾಯಾಶಕ್ತಿಯೆಂಬ ಒಂದು ಗುಂಪು (ಇಮೌ) ಈ (ದ್ವೌ) ಇಬ್ಬರು (ಪುರುಷೌ) ಪುರುಷರು ಈ ಇಬ್ಬರು ಪುರುಷರು ಯಾರೆಂದರೆ (ಸರ್ವಾಣಿ) ಎಲ್ಲ (ಭೂತಾನಿ) ಸ್ಥಾವರಜಂಗಮಗಳು (ಕ್ಷರಃ) ನಾಶವಾಗುವಂಥದ್ದೆಂಬ ಗುಂಪು, (ಕೂಟಸ್ಥಃ) ಎಷ್ಟು ದಿನವಾದರೂ ಮುಗಿಯದ ಸಂಸಾರಕ್ಕೆ ಕಾರಣವಾಗಿ ಯಾವಾಗಲೂ ವಂಚನಾರೂಪದಿಂದಿರುವ ಮಾಯಾಶಕ್ತಿಯು (ಅಕ್ಷರಃ) ನಾಶವಿಲ್ಲದ್ದೆಂದು (ಉಚ್ಯತೇ) ಹೇಳಲ್ಪಡುತ್ತದೆ

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।***
**ಯೋ ಲೋಕತ್ರಯಮಾವಿಶ್ಯ† ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**

---

* "ಸ ಉತ್ತಮಃ ಪುರುಷಃ" ಆ ಪರಮಾತ್ಮನೇ ಉತ್ತಮಪುರುಷನು.—ಶ್ರು.

† "ವ್ಯಕ್ತಾವ್ಯಕ್ತಂ ಭರತೇ ವಿಶ್ವಮೀಶಃ" ಕಾರ್ಯಕಾರಣರೂಪವಾದ ಸಕಲ ಜಗತ್ತನ್ನೂ ಪರಮೇಶ್ವರನು ಧರಿಸಿರುವನು —ಶ್ರು.

(ಯಃ) ಯಾವನು (ಲೋಕತ್ರಯಂ) ಮೂರು ಲೋಕಗಳನ್ನೂ (ಆವಿಶ್ಯ) ತನ್ನ ಚೈತನ್ಯಸ್ವರೂಪದಿಂದ ಒಳಹೊಕ್ಕು (ಬಿಭರ್ತಿ) ಧಾರಣಮಾಡಿ ಕೊಂಡಿದ್ದಾನೊ ಅಂಥ (ಅವ್ಯಯಃ) ನಾಶರಹಿತನಾದಂಥ (ಈಶ್ವರಃ) ಜಗತ್ತಿಗೆಲ್ಲ ಒಡೆಯನಾದಂಥ (ಅನ್ಯಃ) ಈ ಕ್ಷರ ಅಕ್ಷರ-ಇಬ್ಬರಿಗಿಂತ ಬೇರೆಯಾಗಿರುವ (ಉತ್ತಮಃ) ಉತ್ಕೃಷ್ಟನಾದ (ಪುರುಷಃ) ಪುರುಷನು (ಪರಮಾತ್ಮಾ) ಪರಮಾತ್ಮನು (ಇತಿ) ಎಂದು (ಉದಾಹೃತಃ) ಉಪನಿಷತ್ತುಗಳಲ್ಲಿ ಹೇಳಿರುವರು ಜನರು ದೇಹ ಮೊದಲಾದವುಗಳನ್ನೆಲ್ಲ ಆತ್ಮನೆಂದು ತಿಳಿದುಕೊಳ್ಳುತ್ತಾರಷ್ಟೆ ಅಂಥ ಆತ್ಮರಿಗಿಂತ ಶ್ರೇಷ್ಠನಾದವನಾದ್ದರಿಂದಲೂ ಎಲ್ಲ ಪ್ರಾಣಿಗಳಲ್ಲಿಯೂ ಅಂತರಾತ್ಮನಾಗಿರುವನಾದ್ದರಿಂದಲೂ ಅವನಿಗೆ ಪರಮಾತ್ಮನೆಂದು ಹೆಸರು

ಇದರಿಂದ ನನಗೆ ಹೆಸರು ಬಂದಿರುವದೇನೆಂದರೆ —

**ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ* ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೧೮ ॥**

(ಅಹಂ) ನಾನು (ಯಸ್ಮಾತ್) ಯಾವ ಕಾರಣದಿಂದ (ಕ್ಷರಂ) ಮಾಯಾವೃಕ್ಷವಾದ ಸಂಸಾರವೆಂಬ ಅರಳೀಮರವನ್ನು (ಅತೀತಃ) ದಾಟಿರುವನೊ ಮತ್ತು (ಅಕ್ಷರಾದಪಿ ಚ) ಮಾಯಾವೃಕ್ಷವಾದ ಸಂಸಾರಕ್ಕೆ ಬೀಜವಾದ ಮಾಯಾಶಕ್ತಿಗಿಂತಲೂ (ಉತ್ತಮಃ) ಮೇಲಿನ ತರಗತಿಯವನೂ (ಅತಃ) ಆದ್ದರಿಂದ (ಲೋಕೇ) ಜಗತ್ತಿನಲ್ಲಿಯೂ (ವೇದೇ ಚ) ವೇದದಲ್ಲಿಯೂ ಕೂಡ (ಪುರುಷೋತ್ತಮಃ) ಪುರುಷೋತ್ತಮನೆಂಬ ಹೆಸರಿನಿಂದ (ಪ್ರಥಿತಃ) ಪ್ರಸಿದ್ಧನಾಗಿ (ಅಸ್ಮಿ) ಇದ್ದೇನೆ

ಈ ಅರ್ಥವನ್ನು ತಿಳಿಯುವದರ ಲಾಭವೇನೆಂದರೆ.—

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**

* "ಅಕ್ಷರಾತ್ಪರತಃ ಪರಃ" ಮಾಯೆಯೆಂಬ ಅಕ್ಷರಕ್ಕಿಂತಲೂ ಉತ್ತಮನು.

(ಭಾರತ) ಅರ್ಜುನನೆ, ಕೇಳು (ಯಃ) ಯಾವನು (ಅಸಂಮೂಢಃ) ನನ್ನನ್ನು ಯಾವನೋ ಒಬ್ಬ ಸಾಮಾನ್ಯಮನುಷ್ಯನೆಂಬ ತಪ್ಪು ತಿಳಿವಳಿಕೆಯಿಲ್ಲದವನಾಗಿ (ಮಾಂ) ಈಶ್ವರನಾದ ನನ್ನನ್ನು (ಪುರುಷೋತ್ತಮಂ) ಜಗದ್ರೂಪ ಪುರುಷನಿಗಿಂತಲೂ ಮಾಯಾಶಕ್ತಿರೂಪ ಪುರುಷನಿಗಿಂತಲೂ ಮಿಗಿಲಾದ ಪುರುಷೋತ್ತಮನೆಂದು (ಏವಂ) ಹೀಗೆ (ಜಾನಾತಿ) ತಿಳಿಯುತ್ತಾನೊ (ಸರ್ವವಿತ್) ಸರ್ವಜ್ಞನಾದ (ಸಃ) ಅವನು (ಸರ್ವಭಾವೇನ) ಎಲ್ಲ ವಿಧದಿಂದಲೂ (ಮಾಂ) ಸರ್ವಾಂತರ್ಯಾಮಿಯಾದ ನನ್ನನ್ನೆ (ಭಜತಿ) ಆಶ್ರಯಿಸುತ್ತಾನೆ.

ಈ ವಿಚಾರದ ಶ್ರೇಷ್ಠತೆಯನ್ನು ಹೇಳುತ್ತೇನೆ, ಕೇಳು.—

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚ ಭಾರತ ॥ ೨೦ ॥**

(ಅನಘ) ಪಾಪರಹಿತನೆ, (ಭಾರತ) ಅರ್ಜುನನೆ, ಕೇಳು (ಇತಿ) ಹೀಗೆ (ಇದಂ) ಈ (ಗುಹ್ಯತಮಂ) ಯೋಗ್ಯರಿಗೆ ಮಾತ್ರ ಹೇಳುವಷ್ಟು ಅತ್ಯಂತ ರಹಸ್ಯವಾದಂಥ (ಶಾಸ್ತ್ರಂ) ಶಾಸ್ತ್ರವು (ಮಯಾ) ನನ್ನಿಂದ (ಉಕ್ತಂ) ಹೇಳಲ್ಪಟ್ಟಿತು. ನನ್ನ ಉಪದೇಶದ ಸರ್ವಸಾರವೂ ಇದರಲ್ಲಿಳಿದು ಬಂದಿರುವದರಿಂದ ಈ ವಿಚಾರವು ಶಾಸ್ತ್ರವೆನಿಸುವದು (ಏತತ್) ಇದನ್ನು (ಬುದ್ಧ್ವಾ) ತಿಳಿದವನು (ಬುದ್ಧಿಮಾನ್ ಸ್ಯಾತ್) ಬುದ್ಧಿವಂತನಾಗುವನು–ಎಂದರೆ ಅವನಿಗೆ ಬುದ್ಧಿಯುಂಟಾದದ್ದಕ್ಕೆ ಸಾರ್ಥಕವಾಗುವದು. ಇಷ್ಟೇ ಅಲ್ಲ, (ಕೃತಕೃತ್ಯಶ್ಚ) ಮಾಡಬೇಕಾದ್ದನ್ನೆಲ್ಲ ಮಾಡಿದವನೂ ಆಗುತ್ತಾನೆ. ಅವನು ಮಾಡಬೇಕಾದ್ದಿನ್ನೇನೂ ಇರುವದಿಲ್ಲ

ಇಲ್ಲಿಗೆ **ಪುರುಷೋತ್ತಮಯೋಗವೆಂಬ**

ಹದಿನೈದನೆ ಅಧ್ಯಾಯವು ಮುಗಿಯಿತು.



# ಹದಿನಾರನೆ ಅಧ್ಯಾಯ

ಜಗದ್ರೂಪವಾದ ಸಂಸಾರವೆಂಬ ವೃಕ್ಷಕ್ಕೆ ವಾಸನೆಗಳೆಂಬ ಬೇರುಗಳು ಬೇರೆ ಮೇಲಕ್ಕೂ ಕೆಳಕ್ಕೂ ಹೋಗಿರುವವೆಂದು ಹೇಳಿದೆನಷ್ಟೆ ಈ ವಾಸನೆ ಗಳನ್ನೇ ದೈವೀ, ಆಸುರೀ, ರಾಕ್ಷಸೀ–ಎಂಬ ಮೂರು ಬಗೆಯ ಪ್ರಕೃತಿಯೆಂಬ ಹೆಸರಿನಿಂದ ಕರೆದಿದ್ದೇನು ಇವುಗಳಲ್ಲಿ ಆಸುರಿಯದಕ್ಕೂ ರಾಕ್ಷಸಿಯದಕ್ಕೂ ಹತ್ತಿರದ ಸಂಬಂಧವಿರುವದರಿಂದ ಅವೆರಡನ್ನೂ ಕೂಡಿಸಿ ಆಸುರಿಯೆಂಬ ಹೆಸರಿಟ್ಟು ಅದರ ವಿವರಣೆಯನ್ನೂ ದೈವೀಪ್ರಕೃತಿಯ ವಿವರಣೆಯನ್ನೂ ಮಾಡುತ್ತೇನೆ ಪುರುಷೋತ್ತಮಯೋಗದ ಜ್ಞಾನವಾಗಬೇಕಾದರೆ ಆಸುರೀ ಪ್ರಕೃತಿಯ ಸೆಲೆಯಡಗಿ ದೈವೀಪ್ರಕೃತಿಯು ಮೈದುಂಬಿಕೊಂಡಿರಬೇಕಾಗು ವದರಿಂದ ಸಾವಧಾನದಿಂದ ಕೇಳೆಂದು,

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್** ॥ ೧ ॥

(ಅಭಯಂ) ಅಂಜುಬುರುಕುತನವಿಲ್ಲದಿರುವದು (ಸತ್ತ್ವಸಂಶುದ್ಧಿಃ) ಒಳಗೊಂದು ಹೊರಗೊಂದು ಇಲ್ಲದೆ ವ್ಯವಹಾರದಲ್ಲಿ ಶುದ್ಧ ಮನದಿಂದ ವರ್ತಿಸುವದು (ಜ್ಞಾನಯೋಗವ್ಯವಸ್ಥಿತಿಃ) ಶಾಸ್ತ್ರದಿಂದಲೂ ಗುರುಗಳಿಂದಲೂ ತಿಳಿದ ಜ್ಞಾನವನ್ನು ಏಕಾಗ್ರಮನಸ್ಸಿನಿಂದ ಅನುಭವಕ್ಕೆ ತಂದುಕೊಳ್ಳುವ ನಿಷ್ಠೆ (ದಾನಂ) ಆದಷ್ಟು ಮಟ್ಟಿಗೆ ಅನ್ನ ಮೊದಲಾದವುಗಳನ್ನು ಇತರರಿಗೆ ನೀಡುವದು (ದಮಶ್ಚ) ಕಣ್ಣು, ಕಿವಿ–ಮೊದಲಾದ ಇಂದ್ರಿಯಗಳನ್ನು ಬಿಗಿ ಹಿಡಿಯುವದು (ಯಜ್ಞಶ್ಚ) ವೇದೋಕ್ತವಾದ ಅಗ್ನಿಹೋತ್ರ ಮೊದಲಾದವುಗಳು ಮತ್ತು ಸ್ಮೃತ್ಯುಕ್ತವಾದ ದೇವರ ಪೂಜೆ ಮೊದಲಾದವುಗಳು (ಸ್ವಾಧ್ಯಾಯಃ) ಋಗ್ವೇದ ಮೊದಲಾದವುಗಳನ್ನು ಬಾಯಿಗೆ ಕಲಿಯುವದು (ತಪಃ) ಶರೀರ ದಿಂದ, ಮಾತಿನಿಂದ ಮತ್ತು ಮನಸ್ಸಿನಿಂದ ಮಾಡುವ ಮೂರು ಬಗೆಯ ತಪಸ್ಸುಗಳು (ಆರ್ಜವಂ) ಯಾವಾಗಲೂ ಸರಳತನದಿಂದಿರುವದು.

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।**
**ದಯಾಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥ ೨ ॥**

(ಅಹಿಂಸಾ) ಪ್ರಾಣಿಗಳಿಗೆ ಪೀಡೆಯನ್ನು ಮಾಡದಿರುವದು (ಸತ್ಯಂ) ನಿಜವಾದದ್ದನ್ನು ಮತ್ತು ಹಿತವಾದದ್ದನ್ನು ಇದ್ದದ್ದಿದ್ದಂತೆ ಹೇಳುವದು (ಅಕ್ರೋಧಃ) ಮತ್ತೊಬ್ಬರು ನಮ್ಮಮೇಲೆ ಕೈಮಾಡಿದರೂ ನಾವು ಕೋಪ ವನ್ನು ತಡೆದುಕೊಳ್ಳುವದು (ತ್ಯಾಗಃ) ವಿಷಯಗಳ ಮೇಲಿನ ಆಸಕ್ತಿಯನ್ನು ಬಿಡುವದು (ಶಾಂತಿಃ) ಮನಸ್ಸಿನ ಸಮಾಧಾನ (ಅಪೈಶುನಂ) ಮತ್ತೊಬ್ಬರ ಗುಟ್ಟನ್ನು ಹೊರಗೆ ಹಾಕದಿರುವದು (ಭೂತೇಷು) ದುಃಖಿಗೊಂಡ ಪ್ರಾಣಿಗಳ ವಿಷಯದಲ್ಲಿ (ದಯಾ) ಕೃಪೆಯು (ಅಲೋಲುಪ್ತ್ವಂ) ಭೋಗ್ಯಪದಾರ್ಥಗಳು ಎದುರಿಗಿದ್ದರೂ ಇಂದ್ರಿಯಗಳು ವಿಕಾರಗೊಳ್ಳದಿರುವದು (ಮಾರ್ದವಂ) ಕ್ರೂರ ತನವಿಲ್ಲದಿರುವದು (ಹ್ರೀಃ) ನಾಚಿಕೆ (ಅಚಾಪಲಂ) ಸುಮ್ಮನಿರಲಾರದೆ ಕೈಕಾಲುಗಳನ್ನಾಡಿಸುವದನ್ನು ತಡೆದುಕೊಳ್ಳುವದು.

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೩ ॥**

(ತೇಜಃ) ಇತರರಿಂದ ತಿರಸ್ಕಾರವನ್ನು ಪಡೆಯದಿರುವಿಕೆಯು (ಕ್ಷಮಾ) ಇತರರು ಬೈದರೂ ಹೊಡೆದರೂ ಮನಸ್ಸು ತಳಮಳಗೊಳ್ಳದಿರುವದು (ಧೃತಿಃ) ಒಂದುಕಡೆ ಸ್ಥಿರಗೊಳಿಸಿದಂಥ ದೇಹೇಂದ್ರಿಯಗಳನ್ನು ಅದರಿಂದ ಬಳಲ ದಿರುವಂತೆ ಎತ್ತಿ ಹಿಡಿಯುವದು (ಶೌಚಂ) ಶರೀರದ ಮೇಲಿನ ಕೊಳೆಯನ್ನು ತೊಳೆಯುವದು ಮತ್ತು ಮನಸ್ಸಿನ ಬಯಕೆಯನ್ನೂ ಹಗೆತನವನ್ನೂ ಕಳೆಯು ವದು (ಅದ್ರೋಹಃ) ಮತ್ತೊಬ್ಬರಿಗೆ ಎರಡೆಣಿಸದಿರುವದು (ನಾತಿಮಾನಿತಾ) ತಾನೆ ದೊಡ್ಡವನೆಂಬ ಹೆಮ್ಮೆ ಇಲ್ಲದಿರುವದು–ಇವು (ಭಾರತ) ಅರ್ಜುನನೆ, ಕೇಳು. (ದೈವೀಂ) ದೇವತೆಗಳಲ್ಲಿರುವದಕ್ಕೆ ಯೋಗ್ಯವಾದ ಸಾತ್ತ್ವಿಕಗುಣದ (ಸಂಪದಂ) ಒಳ್ಳೆ ವಾಸನೆಗಳನ್ನಿಟ್ಟುಕೊಂಡು (ಅಭಿಜಾತಸ್ಯ) ಹುಟ್ಟಿದವನಿಗೆ (ಭವಂತಿ) ಉಂಟಾಗುತ್ತವೆ.

ಈಗ ಆಸುರೀಸಂಪತ್ತನ್ನು ಹೇಳುತ್ತೇನೆ, ಕೇಳು :—

**ದಂಭೋ ದರ್ಪೋಽತಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ ೪ ॥**

(ದಂಭಃ) ತಾನು ಧರ್ಮಾತ್ಮನೆಂದು ಹೊರಗೆ ತೋರಿಸಿಕೊಳ್ಳುವದು (ದರ್ಪಃ) ವಿದ್ಯೆ, ಹಣ, ರೂಪ–ಮೊದಲಾದವುಗಳಲ್ಲಿ ತನಗೆದುರಿಲ್ಲವೆಂಬ ಸೊಕ್ಕು (ಅತಿಮಾನಶ್ಚ) ತಾನೇ ದೊಡ್ಡವನೆಂಬ ಹೆಮ್ಮೆ (ಕ್ರೋಧಃ) ಸಿಟ್ಟು (ಪಾರುಷ್ಯಮೇವ ಚ) ಮನಸ್ಸು ನೋಯುವಂಥ ಮಾತು (ಅಜ್ಞಾನಂ ಚ) ಅವಿವೇಕವೂ–ಇವೆಲ್ಲ (ಪಾರ್ಥ) ಅರ್ಜುನನೆ, ಕೇಳು (ಆಸುರೀಂ) ಅಸುರರಿಗೊಪ್ಪುವ (ಸಂಪದಂ) ಕೆಟ್ಟ ವಾಸನೆಗಳನ್ನಿಟ್ಟುಕೊಂಡು (ಅಭಿಜಾತಸ್ಯ) ಹುಟ್ಟಿದವನಿಗೆ ಉಂಟಾಗುತ್ತವೆ

ಈ ಎರಡು ಸಂಪತ್ತುಗಳ ಕಾರ್ಯವೇನೆಂದರೆ :—

**ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**
**ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥ ೫ ॥**

(ದೈವೀಸಂಪತ್) ಸಾತ್ತ್ವಿಕಗುಣದ ಒಳ್ಳೆ ವಾಸನೆಯು (ವಿಮೋಕ್ಷಾಯ) ಸಂಸಾರದ ಬಿಡುಗಡೆಗೆಂದೂ (ಆಸುರೀ) ರಜಸ್ತಮೋಗುಣಗಳ ಕೆಟ್ಟ ವಾಸನೆಯು (ನಿಬಂಧಾಯ) ಮತ್ತಷ್ಟು ಕಟ್ಟಿಹಾಕುವದಕ್ಕೆಂದೂ (ಮತಾ) ಗೊತ್ತಾಗಿರುವದು (ಪಾಂಡವ) ಅರ್ಜುನನೆ, (ಮಾ ಶುಚಃ) ನಿನ್ನ ವಾಸನೆ ಎಂಥಾದ್ದಾಗಿರಬಹುದೊ ಎಂದು ದುಃಖಗೊಳ್ಳಬೇಡ ಏಕೆಂದರೆ (ದೈವೀಂ) ಸಾತ್ತ್ವಿಕಗುಣದ (ಸಂಪದಂ) ಒಳ್ಳೆ ವಾಸನೆಯನ್ನಿಟ್ಟುಕೊಂಡು (ಅಭಿಜಾತೋಽಸಿ) ಹುಟ್ಟಿದವನಾಗಿದ್ದಿ

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ದೈವ ಆಸುರ ಏವ ಚ ।***
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬ ॥**

* “ದ್ವಯಾ ಹವೈ ಪ್ರಾಜಾಪತ್ಯಾ ದೇವಾಶ್ಚಾಸುರಾಶ್ಚ”—ಪ್ರಜಾಪತಿಯ ಮಕ್ಕಳು ದೇವತೆಗಳೆಂದೂ ಅಸುರರೆಂದೂ ಎರಡು ಬಗೆ.—ಶ್ರು.

(ಭೂತಸರ್ಗೌ) ಮನುಷ್ಯರ ಸೃಷ್ಟಿಯು (ಅಸ್ಮಿನ್) ಈ (ಲೋಕೇ) ಸಂಸಾರರೂಪವಾದ ಲೋಕದಲ್ಲಿ (ದೈವಃ) ಸಾತ್ತ್ವಿಕಗುಣದ ದೈವವೆಂದೊಂದು (ಆಸುರ ಏವ ಚ) ರಜಸ್ತಮೋಗುಣಗಳ ಆಸುರವೆಂದೊಂದು-ಹೀಗೆ (ದ್ವೌ) ಎರಡು ಬಗೆಯಾಗಿರುವವು ಇವುಗಳಲ್ಲಿ (ಪಾರ್ಥ) ಅರ್ಜುನನೆ, ಕೇಳು. (ದೈವಃ) ಮೈಗೂಡಿಸಿಕೊಳ್ಳಬೇಕಾದ ದೇವೀಸಂಪತ್ತಿನ ವಿಚಾರವು (ವಿಸ್ತರಶಃ) ವಿವರವಾಗಿ (ಪ್ರೋಕ್ತಃ) ಹೇಳಿದ್ದಾಯಿತು (ಮೇ) ನಾನು ಹೇಳುವಂಥ (ಆಸುರಂ) ಬಿಡಬೇಕಾದ ಆಸುರೀಸಂಪತ್ತಿನ ವಿಚಾರವನ್ನು (ಶೃಣು) ಕೇಳು.

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭ ॥**

(ಪ್ರವೃತ್ತಿಂ ಚ) ಯಾವ ಪುರುಷಾರ್ಥಸಾಧನದಲ್ಲಿ ಮುಂದುವರಿಯ ಬೇಕೆಂದೂ (ನಿವೃತ್ತಿಂ ಚ) ಯಾವ ಅನರ್ಥಸಾಧನದಿಂದ ಹಿಮ್ಮೆಟ್ಟಬೇಕೆಂದೂ (ಆಸುರಾಃ) ಆಸುರೀಸಂಪತ್ತಿನ (ಜನಾಃ) ಜನರು (ನ ವಿದುಃ) ತಿಳಿಯುವದಿಲ್ಲ (ತೇಷು) ಅವರಲ್ಲಿ (ಶೌಚಂ) ಶರೀರದ ಮತ್ತು ಮನಸ್ಸಿನ ಶುಚಿತ್ವವೂ (ನ) ಇಲ್ಲ, (ಆಚಾರೋಽಪಿ ಚ) ಒಳ್ಳೆಯ ಆಚರಣೆಯೂ (ನ) ಇಲ್ಲ ಮತ್ತು (ಸತ್ಯಂ) ಇದ್ದದ್ದಿದ್ದಹಾಗೆ ಆಡುವಿಕೆಯು (ನ ವಿದ್ಯತೇ) ಇಲ್ಲ.

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ॥ ೮ ॥**

(ತೇ) ಅವರು (ಜಗತ್) ಜಗತ್ತನ್ನು, (ಅಸತ್ಯಂ) ತಮ್ಮಂತೆಯೇ ಸುಳ್ಳಿನಿಂದ ತುಂಬಿರುವದೆಂದೂ (ಅಪ್ರತಿಷ್ಠಂ) ಧರ್ಮ, ಅಧರ್ಮ-ಮೊದಲಾದ ಯಾವ ಆಧಾರವೂ ಇಲ್ಲದ್ದೆಂದೂ (ಅನೀಶ್ವರಂ) ಮೇಲೆ ಆಳುವವನೊಬ್ಬನಿಲ್ಲ ವೆಂದೂ (ಅಪರಸ್ಪರಸಂಭೂತಂ) ಸ್ತ್ರೀಪುರುಷರು ಒಬ್ಬರಿಗೊಬ್ಬರು ಸೇರಿದ್ದ ರಿಂದಾದ್ದರಿಂದ (ಕಾಮಹೈತುಕಂ) ಸ್ತ್ರೀಪುರುಷರ ಕ್ಷುದ್ರಸುಖೇಚ್ಛೆಯೇ ಕಾರಣವಾಗಿ ಉಳ್ಳದ್ದೆಂದೂ (ಕಿಮನ್ಯತ್) ಮತ್ತೇನಿದೆ? ಎಂದರೆ ಇನ್ನೇನೂ ಇಲ್ಲವೆಂದೂ (ಆಹುಃ) ಹೇಳುವರು

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೯ ॥**

(ಏತಾಂ) ಈ (ದೃಷ್ಟಿಂ) ದೃಷ್ಟಿಯನ್ನು (ಅವಷ್ಟಭ್ಯ) ಅವಲಂಬಿಸಿ (ನಷ್ಟಾತ್ಮಾನಃ) ತಮ್ಮ ವಿವೇಕಬುದ್ಧಿಯನ್ನು ಹಾಳುಮಾಡಿಕೊಂಡು (ಅಲ್ಪ ಬುದ್ಧಯಃ) ಕ್ಷುದ್ರವಾದ ವಿಷಯಗಳ ಮುಂದೆ ಬಾಯಿನೀರು ಸುರಿಸುವಂಥ ಹೀನಬುದ್ಧಿಯವರಾಗಿ (ಅಹಿತಾಃ) ಇತರರಿಗೆ ಹಾನಿಯನ್ನು ಮಾಡುವವರಾಗಿ (ಜಗತಃ) ಜಗತ್ತಿನ (ಕ್ಷಯಾಯ) ನಾಶಕ್ಕಾಗಿ (ಉಗ್ರಕರ್ಮಾಣಃ) ಕ್ರೂರ ಕರ್ಮವನ್ನು ಮಾಡುವವರಾಗಿ (ಪ್ರಭವಂತಿ) ಹುಟ್ಟುತ್ತಾರೆ

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।**
**ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ಪ್ರವರ್ತಂತೇಽಶುಚಿವ್ರತಾಃ ॥ ೧೦ ॥**

(ದುಷ್ಪೂರಂ) ಎಂದಿಗೂ ಸಾಕೆನಿಸದಿರುವಂಥ (ಕಾಮಂ) ಬಯಕೆಯನ್ನು (ಆಶ್ರಿತ್ಯ) ಅವಲಂಬಿಸಿ (ದಂಭಮಾನಮದಾನ್ವಿತಾಃ) ದಂಭ, ಮಾನ, ಮದ–ಇವುಗಳಿಂದ ಕೂಡಿ (ಮೋಹಾತ್) ಅವಿವೇಕದಿಂದ (ಅಸದ್ಗ್ರಾಹಾನ್) ಇಂಥ ಹೆಂಗುಸನ್ನು ವಶಮಾಡಿಕೊಳ್ಳಬೇಕೆಂಬ ಅಥವಾ ಇಂಥ ಶತ್ರುವನ್ನು ಕೊಲ್ಲಬೇಕೆಂಬ ಅಮಂಗಲಕರಗಳಾದ ನಿಶ್ಚಯಗಳನ್ನು (ಗೃಹೀತ್ವಾ) ಹಿಡಿದುಕೊಂಡು (ಅಶುಚಿವ್ರತಾಃ) ಶ್ಮಶಾನ ಮೊದಲಾದ ಕಡೆ ಎಂಜಲು ತಿನ್ನುವದು ಮೊದಲಾದ ವ್ರತಕ್ಕೆ ದೀಕ್ಷಿತರಾಗಿ (ಪ್ರವರ್ತಂತೇ) ತಮ್ಮ ಯತ್ನವನ್ನು ನಡೆಸುವರು

**ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥**

ಅವರು (ಪ್ರಲಯಾಂತಾಂ) ಸಾಯುವವರೆಗೂ ಇರುವಂಥ ಮತ್ತು (ಅಪರಿಮೇಯಾಂ ಚ) ಇಷ್ಟೆಂದು ಹೇಳುವದಕ್ಕೆ ಬರದಂಥ (ಚಿಂತಾಂ) ಚಿಂತೆಯನ್ನು (ಉಪಾಶ್ರಿತಾಃ) ಹಚ್ಚಿಕೊಂಡಿರುವರು (ಕಾಮೋಪಭೋಗ ಪರಮಾಃ) ಶಬ್ದ, ಸ್ಪರ್ಶ–ಮೊದಲಾದ ವಿಷಯಗಳ ಸುಖವನ್ನನುಭವಿಸುವದೇ

ಹೆಚ್ಚಿನ ಪುರುಷಾರ್ಥವೆಂದು ತಿಳಿದಿರುವರು (ಏತಾವತ್) ಈ ಲೋಕದಲ್ಲಿ ಈಗ ಅನುಭವಿಸುವ ವಿಷಯಸುಖದ ಹೊರತು ಬೇರೆ ಇನ್ನೇನೂ ಇಲ್ಲ (ಇತಿ) ಎಂದು (ನಿಶ್ಚಿತಾಃ) ಗೊತ್ತುಮಾಡಿಕೊಂಡಿರುವರು

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥**
**॥ ೧೨ ॥**

ಅವರು (ಆಶಾಪಾಶಶತೈಃ) ನೂರಾರು ಬಯಕೆಗಳೆಂಬ ಹಗ್ಗಗಳಿಂದ (ಬದ್ಧಾಃ) ಕಟ್ಟಿಹಾಕಿಸಿಕೊಂಡವರಾಗಿ (ಕಾಮಕ್ರೋಧಪರಾಯಣಾಃ) ಸ್ತ್ರೀ ಸಂಭೋಗದ ಮತ್ತು ಉಪಕರಣಗಳ ಬಯಕೆ, ಅವುಗಳಿಗೇನಾದರೂ ಅಡಚಣೆಯೊದಗಿದರೆ ಸಿಟ್ಟು–ಇವೆರಡನ್ನೆ ಆಶ್ರಯಿಸಿದವರಾಗಿ (ಕಾಮಭೋಗಾರ್ಥಂ) ಸ್ತ್ರೀಸಂಭೋಗ ಮೊದಲಾದವುಗಳಿಗೆ ಸಾಧನವಾಗಿ (ಅನ್ಯಾಯೇನ) ಮತ್ತೊಬ್ಬರದನ್ನು ಎತ್ತಿ ಹಾಕುವದೇ ಮೊದಲಾದ ಅಧರ್ಮದಿಂದ (ಅರ್ಥಸಂಚಯಾನ್) ಅನೇಕ ಪದಾರ್ಥಗಳನ್ನು (ಈಹಂತೇ) ಅಪೇಕ್ಷಿಸುತ್ತಾರೆ

ಅವರ ಅಭಿಪ್ರಾಯವು ಹೇಗಿರುವದೆಂದರೆ —

**ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥ ೧೩ ॥**

(ಇದಂ) ಈ ಹಣವು ಅಥವಾ ಪದಾರ್ಥವು (ಅದ್ಯ) ಈಗ (ಮಯಾ) ನನ್ನಿಂದ (ಲಬ್ಧಂ) ಸಂಪಾದಿತವಾಗಿರುವದು (ಇಮಂ) ಈ (ಮನೋರಥಂ) ಇಷ್ಟಾರ್ಥವನ್ನು (ಪ್ರಾಪ್ಸ್ಯೇ) ಪಡೆಯುತ್ತೇನೆ (ಇದಂ) ಈ ಹಣವು ಅಥವಾ ಪದಾರ್ಥವು (ಅಸ್ತಿ) ಇದೆ (ಪುನಃ) ಮತ್ತೆ (ಇದಂ) ಈ (ಧನಮಪಿ) ಹಣವೂ ಕೂಡ (ಮೇ) ನನಗೆ (ಭವಿಷ್ಯತಿ) ದೊರೆಯುತ್ತದೆ ಮತ್ತು

**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ ॥೧೪॥**

(ಅಸೌ) ಈ (ಶತ್ರುಃ) ಹಗೆಯು (ಮಯಾ) ನನ್ನಿಂದ (ಹತಃ) ಕೊಲ್ಲಲ್ಪಟ್ಟನು, (ಅಪರಾನಪಿ ಚ) ಉಳಿದವರನ್ನೂ (ಹನಿಷ್ಯೇ) ಕೊಲ್ಲುವೆನು (ಅಹಂ) ನಾನು (ಈಶ್ವರಃ) ಒಡೆಯನು (ಅಹಂ) ನಾನು (ಭೋಗೀ) ಬೇಕಾದಷ್ಟು ಸುಖಸಾಧನಗಳನ್ನುಳ್ಳವನು (ಅಹಂ) ನಾನು (ಸಿದ್ಧಃ) ಸಿದ್ಧ ಪುರುಷನು (ಬಲವಾನ್) ಬಲಿಷ್ಠನು (ಸುಖೀ) ಸುಖಿಯು ಮತ್ತು

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥ ೧೫ ॥**

(ಆಢ್ಯಃ) ಹಣಗಾರನು (ಅಭಿಜನವಾನ್) ಏಳು ತಲೆಗಳಿಂದಲೂ ಶ್ರೋತ್ರಿಯತ್ವದಿಂದ ಕೂಡಿದವನು (ಅಸ್ಮಿ) ಆಗಿದ್ದೇನೆ (ಮಯಾ) ನನ್ನೊಡನೆ (ಸದೃಶಃ) ಹೋಲಿಕೆಗೆ ಯೋಗ್ಯನಾದವನು (ಅನ್ಯಃ) ಬೇರೆ (ಕಃ) ಯಾವನು (ಅಸ್ತಿ) ಇದ್ದಾನೆ? (ಯಕ್ಷ್ಯೇ) ನನ್ನ ಹೆಚ್ಚುಗಾರಿಕೆಗಾಗಿ ಇಂಥದ್ದೊಂದು ದೊಡ್ಡ ಯಾಗವನ್ನು ಮಾಡುತ್ತೇನೆ (ದಾಸ್ಯಾಮಿ) ನಟವಿಟಗಾಯಕರಿಗೆ ಬೇಕಾದಷ್ಟು ಹಣವನ್ನು ಕೊಡುತ್ತೇನೆ, (ಮೋದಿಷ್ಯೇ) ಹೆಚ್ಚು ಆನಂದವನ್ನು ಪಡೆಯುತ್ತೇನೆ-(ಇತಿ) ಹೀಗೆಂದು (ಅಜ್ಞಾನ ವಿಮೋಹಿತಾಃ) ಸರಿಯಾದ ತಿಳಿವಳಿಕೆಯಿಲ್ಲದೆ ಬಗೆಬಗೆಯಾಗಿ ಅವಿವೇಕ ವನ್ನು ಹೊಂದಿರುತ್ತಾರೆ

**ಅನೇಕಚಿತ್ತವಿಭ್ರಾಂತಾಃ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥ ೧೬ ॥**

(ಅನೇಕಚಿತ್ತವಿಭ್ರಾಂತಾಃ) ಲೆಕ್ಕವಿಲ್ಲದಷ್ಟು ಕೆಟ್ಟ ಸಂಕಲ್ಪಗಳಿಂದ ಬಗೆಬಗೆಯಾದ ಭ್ರಾಂತಿಯನ್ನು ಹೊಂದಿ (ಮೋಹಜಾಲಸಮಾವೃತಾಃ) ಅವಿವೇಕವೆಂಬ ಬಲೆಯ ಮುಸುಕಿಗೆ ಸಿಕ್ಕಿ (ಕಾಮಭೋಗೇಷು) ವಿಷಯ ಸುಖದಲ್ಲಿ (ಪ್ರಸಕ್ತಾಃ) ಬಹಳ ಆಸಕ್ತಿಯುಳ್ಳವರಾಗಿ (ಅಶುಚೌ) ಹೊಲಸಾದ (ನರಕೇ) ನರಕದಲ್ಲಿ (ಪತಂತಿ) ಬೀಳುತ್ತಾರೆ

**ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥ ೧೭ ॥**

(ಆತ್ಮಸಂಭಾವಿತಾಃ) ತಮ್ಮನ್ನು ತಾವೆ ದೊಡ್ಡವರೆಂದು ಭಾವಿಸಿಕೊಂಡವರಾಗಿ (ಸ್ತಬ್ಧಾಃ) ಎದೆಯನ್ನುಬ್ಬಿಸಿಕೊಂಡು ನಡೆಯುವವರಾಗಿ (ಧನಮಾನಮದಾನ್ವಿತಾಃ) ತಾವು ಧನಿಕರೆಂಬ ಮಾನದಿಂದಲೂ ಮದದಿಂದಲೂ ಕೂಡಿದವರಾಗಿ (ತೇ) ಅವರು (ದಂಭೇನ) ತಾವು ಧರ್ಮಿಷ್ಠರೆಂದು ತೋರಿಸಿಕೊಳ್ಳಬೇಕೆಂಬಿಚ್ಛೆಯಿಂದ (ನಾಮಯಜ್ಞೈಃ) ದೀಕ್ಷಿತರೆಂಬ ಹೆಸರನ್ನು ಮಾತ್ರ ತಂದುಕೊಡುವ ಯಜ್ಞಗಳಿಂದ (ಅವಿಧಿಪೂರ್ವಕಂ) ಶಾಸ್ತ್ರದಲ್ಲಿ ಹೇಳಿರುವ ನಿಯಮಗಳನ್ನು ಗಮನಿಸದೆ (ಯಜಂತೇ) ಯಜ್ಞವನ್ನು ಮಾಡುವರು

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮ ॥**

(ಅಹಂಕಾರಂ) ನಾನು ಎಲ್ಲರಿಗಿಂತಲೂ ಮೇಲೆಂಬ ಅಭಿಮಾನವನ್ನೂ (ಬಲಂ) ಬಯಕೆಯ ಅಥವಾ ಪ್ರೀತಿಯ ಆವೇಶದ ಶಕ್ತಿಯನ್ನೂ (ದರ್ಪಂ) ಧರ್ಮವನ್ನು ಕಡೆಗಾಣುವಂಥ ಮನಸ್ಸಿನ ಸೊಕ್ಕನ್ನೂ (ಕಾಮಂ) ಸ್ತ್ರೀ ಮೊದಲಾದವರ ಮೇಲಿನ ಬಯಕೆಯನ್ನೂ (ಕ್ರೋಧಂ ಚ) ಬೇಡವೆನಿಸಿದ ವಸ್ತುವಿನ ಮೇಲಿ ಕೋಪವನ್ನೂ–ಇಂಥ ದೊಡ್ಡ ದೊಡ್ಡ ದೋಷಗಳನ್ನು (ಸಂಶ್ರಿತಾಃ) ಚೆನ್ನಾಗಿ ಅವಲಂಬಿಸಿದವರಾಗಿ (ಆತ್ಮಪರದೇಹೇಷು) ತನ್ನ ದೇಹದಲ್ಲಿಯೂ ಇತರರ ದೇಹದಲ್ಲಿಯೂ (ಮಾಂ) ಬುದ್ಧಿಯಲ್ಲಿ ಸಾಕ್ಷಿಭೂತನಾಗಿರುವ ನನ್ನನ್ನು (ಪ್ರದ್ವಿಷಂತಃ) ಇವನೆಷ್ಟರವನೆಂದು ನನ್ನ ಮಾತಿಗೆ ಕಿವಿಗೊಡದೆ ಹಗೆತನವನ್ನು ಮಾಡುತ್ತಲೂ (ಅಭ್ಯಸೂಯಕಾಃ) ಇತರರು ಒಳ್ಳೆದಾರಿಯನ್ನು ಹಿಡಿದಿದ್ದರೆ ಅದನ್ನು ನೋಡಿ ಹೊಟ್ಟೇಕಿಚ್ಚುಪಡುತ್ತಲೂ ಇರುವರು.

ಅವರಿಗೆ ದೊರೆಯುವ ಇದರ ಫಲವೇನೆಂದರೆ —

**ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು*** || ೧೯ ||

(ಅಹಂ) ನಾನು (ದ್ವಿಷತಃ) ಸಾಧುಗಳನ್ನೂ ನನ್ನನ್ನೂ ಕಂಡರೆ ಆಗದಿರುವಂಥ (ಕ್ರೂರಾನ್) ಕಲ್ಲುಮನಸ್ಸಿನವರಾದಂಥ (ಅಶುಭಾನ್) ಕೆಟ್ಟ ಕೆಲಸಗಳನ್ನು ಮಾಡುವಂಥ (ತಾನ್) ಆ (ನರಾಧಮಾನ್) ನೀಚಮನುಷ್ಯರನ್ನು (ಅಜಸ್ರಂ) ಯಾವಾಗಲೂ (ಸಂಸಾರೇಷು) ಅನೇಕವಾದ ಹುಟ್ಟು ಸಾವುಗಳ ದ್ವಾರವಾದ (ಆಸುರೀಷ್ವೇವ) ಹುಲಿ, ಸಿಂಹ, ದುಷ್ಟರು– ಮೊದಲಾದ ಕ್ರೂರಸ್ವಭಾವವೇ ಇರುವ (ಯೋನಿಷು) ಗರ್ಭಗಳಲ್ಲಿ (ಕ್ಷಿಪಾಮಿ) ಬೀಳಿಸುವೆನು

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ||**
|| ೨೦ ||

(ಕೌಂತೇಯ) ಅರ್ಜುನನೆ. ಕೇಳು (ಆಸುರೀಂ) ರಜಸ್ತಮೋಗುಣಗಳಿಂದ ತುಂಬಿದಂಥ (ಯೋನಿಂ) ಗರ್ಭವನ್ನು (ಆಪನ್ನಾಃ) ಪಡೆದಂಥ (ಮೂಢಾಃ) ಅವಿವೇಕಿಗಳು (ಜನ್ಮನಿ ಜನ್ಮನಿ) ಪ್ರತಿಯೊಂದು ಹುಟ್ಟಿನಲ್ಲಿಯೂ (ಮಾಂ) ನನ್ನನ್ನು (ಅಪ್ರಾಪ್ಯೈವ) ಪಡೆದುಕೊಳ್ಳದೆಯೆ (ತತಃ) ಅದಕ್ಕಿಂತಲೂ (ಅಧಮಾಂ) ಕೀಳಾದಂಥ (ಗತಿಂ) ಹುಳ, ಮರ–ಮೊದಲಾದ ಗತಿಯನ್ನು (ಯಾಂತಿ) ಹೊಂದುತ್ತಾರೆ

---

* "ಅಥ ಕಪೂಯಚರಣಾ ಕಪೂಯಾಂ ಯೋನಿಮಾಪದ್ಯೇರನ್ ಶ್ವಯೋನಿಂ ವಾ ಸೂಕರಯೋನಿಂ ವಾ ಚಾಂಡಾಲಯೋನಿಂ ವಾ ಇತಿ"—ಕೆಟ್ಟ ಕರ್ಮಗಳನ್ನು ಮಾಡುವವರು ನಾಯ ಹೊಟ್ಟೆಯಲ್ಲಿಯೋ ಹಂದಿಯ ಹೊಟ್ಟೆಯಲ್ಲಿಯೋ ಹೊಲೆಯರ ಹೊಟ್ಟೆಯಲ್ಲಿಯೋ ಕೆಟ್ಟ ಗರ್ಭಗಳನ್ನೆ ಪಡೆಯುತ್ತಾರೆ —ಶ್ರು.

ಇವೆಲ್ಲ ಅರ್ಥಗಳನ್ನೂ ಒಳಗೊಳ್ಳುವ ಆಸುರೀಸಂಪತ್ತಿನ ಜೀವಾಳದ ಮಾತನ್ನು ಹೇಳುತ್ತೇನೆ, ಕೇಳು

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥೨೧॥**

ಈ ಮನುಷ್ಯನಿಗೆ (ಆತ್ಮನಃ) ತನ್ನ (ನಾಶನಂ) ಹಾನಿಯನ್ನು ಮಾಡುವಂಥ ಎಂದರೆ ತನ್ನನ್ನು ಕೆಳಕೆಳಗಣ ಗರ್ಭಕ್ಕೆ ತಳ್ಳುವಂಥ (ನರಕಸ್ಯ) ನರಕದ (ಇದಂ) ಈ (ದ್ವಾರಂ) ಬಾಗಿಲು (ತ್ರಿವಿಧಂ) ಮೂರು ಬಗೆಯಾಗಿರುವದು ಅವು ಯಾವವೆಂದರೆ (ಕಾಮಃ) ಬಯಕೆಯು, (ಕ್ರೋಧಃ) ಸಿಟ್ಟು (ತಥಾ) ಮತ್ತು (ಲೋಭಃ) ಜಿಪುಣತನ (ತಸ್ಮಾತ್) ಇವು ತನಗೆ ಹಾನಿಯನ್ನು ಮಾಡುವದರಿಂದ (ಏತತ್) ಈ (ತ್ರಯಂ) ಮೂರನ್ನೂ (ತ್ಯಜೇತ್) ಬಿಡಬೇಕು

ಅವುಗಳನ್ನು ಬಿಟ್ಟವನಿಗಾಗುವ ಫಲವೇನೆಂದರ —

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ ೨೨ ॥**

(ಕೌಂತೇಯ) ಅರ್ಜುನನೆ, ಕೇಳು (ಏತೈಃ) ಈ (ತಮೋದ್ವಾರೈಃ) ನರಕದ ಬಾಗಿಲುಗಳಾದ (ತ್ರಿಭಿಃ) ಮೂರರಿಂದ (ವಿಮುಕ್ತಃ) ಬಿಡುಗಡೆಯನ್ನು ಹೊಂದಿದ (ನರಃ) ಮನುಷ್ಯನು (ಆತ್ಮನಃ) ತನ್ನ (ಶ್ರೇಯಃ) ಉನ್ನತಿಯನ್ನು (ಆಚರತಿ) ಮಾಡಿಕೊಳ್ಳುತ್ತಾನೆ (ತತಃ) ಆ ಆಚರಣೆಯಿಂದ (ಪರಾಂ) ಉತ್ಕೃಷ್ಟವಾದ (ಗತಿಂ) ಮೋಕ್ಷವನ್ನು (ಯಾತಿ) ಹೊಂದುತ್ತಾನೆ

ಆಸುರೀಸಂಪತ್ತು ಯಾವದೆಂಬದನ್ನು ತಿಳಿದು ಬಿಡುವದಕ್ಕಾಗಲಿ ಒಳ್ಳೆ ಆಚರಣೆ ಯಾವದೆಂಬದನ್ನು ತಿಳಿದು ನಡೆಸುವದಕ್ಕಾಗಲಿ ಶಾಸ್ತ್ರವೇ ಪ್ರಮಾಣವಾದ್ದರಿಂದ,

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥ ೨೩ ॥**

(ಯಃ) ಯಾವನು (ಶಾಸ್ತ್ರವಿಧಿಂ) ಇಂಥದ್ದನ್ನು ಮಾಡಬೇಕೆಂಬ ಮತ್ತು ಇಂಥದ್ದನ್ನು ಮಾಡಬಾರದೆಂಬ ಶಾಸ್ತ್ರದ ನಿಯಮವನ್ನು (ಉತ್ಸೃಜ್ಯ) ತಿಳಿದಿದ್ದರೂ ಕೂಡ ಉಪೇಕ್ಷೆಮಾಡಿ (ಕಾಮಕಾರತಃ) ಬರೀ ತನ್ನ ಮನಸ್ಸಿನ ಇಚ್ಛೆ ಮಾಡಿಸಿದಂತೆ ಮಾಡುವವನಾಗಿ (ವರ್ತತೇ) ನಡೆಯುತ್ತಾನೊ (ಸಃ) ಅವನು (ಸಿದ್ಧಿಂ) ಮೋಕ್ಷಕ್ಕೆ ತಕ್ಕ ಯೋಗ್ಯತೆಯನ್ನು (ನ ಅವಾಪ್ನೋತಿ) ಪಡೆಯುವದಿಲ್ಲ, (ಸುಖಂ) ಈ ಲೋಕದ ಸುಖವನ್ನು (ನ) ಪಡೆಯುವದಿಲ್ಲ, ಮತ್ತು (ಪರಾಂ) ಉತ್ಕೃಷ್ಟವಾದ (ಗತಿಂ) ಸ್ವರ್ಗವನ್ನು ಅಥವಾ ಮೋಕ್ಷವನ್ನು (ನ) ಪಡೆಯುವದಿಲ್ಲ

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪ ॥**

(ತಸ್ಮಾತ್) ಆದ್ದರಿಂದ (ತೇ) ನಿನಗೆ (ಕಾರ್ಯಾಕಾರ್ಯವ್ಯವಸ್ಥಿತೌ) ಮಾಡಬೇಕಾದ್ದನ್ನೂ ಮಾಡಬಾರದ್ದನ್ನೂ ಗೊತ್ತುಮಾಡುವದರಲ್ಲಿ (ಶಾಸ್ತ್ರಂ) ಶಾಸ್ತ್ರವು (ಪ್ರಮಾಣಂ) ಜ್ಞಾನಸಾಧನವು (ಶಾಸ್ತ್ರವಿಧಾನೋಕ್ತಂ) ಮಾಡಬೇಕೆಂದೂ ಮಾಡಬಾರದೆಂದೂ ಶಾಸ್ತ್ರದಲ್ಲಿ ಹೇಳಿರುವದರ ಲಕ್ಷಣವನ್ನು (ಜ್ಞಾತ್ವಾ) ತಿಳಿದುಕೊಂಡು (ಇಹ) ಈ ಲೋಕದಲ್ಲಿ (ಕರ್ಮ) ನಿನ್ನ ಸ್ವಧರ್ಮವನ್ನು (ಕರ್ತುಮರ್ಹಸಿ) ನೀನು ಮಾಡಬೇಕು

ಇಲ್ಲಿಗೆ **ದೈವಾಸುರಸಂಪದ್ವಿಭಾಗಯೋಗ**ವೆಂಬ

ಹದಿನಾರನೆ ಅಧ್ಯಾಯವು ಮುಗಿಯಿತು



# ಹದಿನೇಳನೆ ಅಧ್ಯಾಯ

ಶಾಸ್ತ್ರವೇ ಸರಿಯಾದ ಜ್ಞಾನಸಾಧನವೆಂದು ಹೇಳಿದ ಮಾತನ್ನು ಕೇಳಿ ಅದರ ವಿಷಯದಲ್ಲಿ ಹೆಚ್ಚಿನ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂದು–

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು :—

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ ೧ ॥**

(ಕೃಷ್ಣ) ಕೃಷ್ಣನೆ, ಹೇಳು ಶಾಸ್ತ್ರನಿಯಮಗಳು ತಿಳಿದಿದ್ದರೂ ಕೂಡ ಅವುಗಳನ್ನು ಉಪೇಕ್ಷಿಸಿದವರಿಗಂತು ಸುಖವಿಲ್ಲವಷ್ಟೆ. ಇನ್ನು (ಯೇ) ಯಾರು (ಶಾಸ್ತ್ರವಿಧಿಂ) ಶ್ರುತಿ, ಸ್ಮೃತಿ–ಮೊದಲಾದವುಗಳಲ್ಲಿ ಹೇಳಿರುವ ನಿಯಮಗಳನ್ನು (ಉತ್ಸೃಜ) ತಿಳಿಯದವರಾಗಿ ಅವುಗಳನ್ನು ಕೈಬಿಟ್ಟು (ಶ್ರದ್ಧಯಾ) ತಮ್ಮ ಹಿರಿಯರ ನಡೆವಳಿಕೆಯಲ್ಲಿರುವ ವಿಶ್ವಾಸದಿಂದ (ಅನ್ವಿತಾಃ) ಕೂಡಿದವರಾಗಿ (ಯಜಂತೇ) ದೇವರ ಪೂಜೆ ಮೊದಲಾದವುಗಳನ್ನು ಮಾಡುತ್ತಾರೊ (ತೇಷಾಂ) ಅವರ (ನಿಷ್ಠಾ ತು) ನಡೆವಳಿಕೆಯಾದರೊ (ಕಾ) ಯಾವದು ? ಎಂದರೆ (ಸತ್ತ್ವಂ) ಸಾತ್ತ್ವಿಕವೊ (ಆಹೋ) ಅಥವಾ (ರಜಃ) ರಾಜಸವೊ ? (ತಮಃ) ತಾಮಸವೊ ?

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು :—

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥**

(ದೇಹಿನಾಂ) ದೇಹಾಭಿಮಾನಿಗಳಾದ ಆ ಜೀವರಿಗೆ (ಸ್ವಭಾವಜಾ) ಹಿಂದಿನ ಜನ್ಮದ ಕರ್ಮಗಳ ಫಲವಾಗಿ ಹುಟ್ಟಿದಾಗಿನಿಂದಲೇ ಸ್ವಭಾವವಾಗಿ ಕಾಣಿಸಿಕೊಂಡಿರುವ (ಸಾ) ಆ (ಶ್ರದ್ಧಾ) ಹಿರಿಯರ ನಡೆವಳಿಕೆಯಲ್ಲಿರುವ ವಿಶ್ವಾಸವು (ಸಾತ್ತ್ವಿಕೀ) ಸಾತ್ತ್ವಿಕವೆಂದೂ (ರಾಜಸೀ ಚೈವ) ರಾಜಸವೆಂದೂ

(ತಾಮಸೀ ಚ) ತಾಮಸವೆಂದೂ ಕೂಡ (ಇತಿ) ಹೀಗೆ (ತ್ರಿವಿಧಾ) ಮೂರು ಬಗೆಯಾಗಿ (ಭವತಿ) ಆಗುತ್ತದೆ (ತಾಂ) ಅದರ ವಿಷಯವನ್ನು (ಶೃಣು) ಮನಸ್ಸಿಟ್ಟು ಕೇಳು.

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥**
**॥ ೩ ॥**

(ಭಾರತ) ಅರ್ಜುನನೆ, ಕೇಳು (ಸರ್ವಸ್ಯ) ಎಲ್ಲರ (ಶ್ರದ್ಧಾ) ಶ್ರದ್ಧೆಯು (ಸತ್ತ್ವಾನುರೂಪಾ) ಅವರವರ ಮನಸ್ಸಿನ ಸಂಸ್ಕಾರಕ್ಕೆ ಅನುಗುಣವಾಗಿ (ಭವತಿ) ಆಗುತ್ತದೆ (ಅಯಂ) ಈ (ಪುರುಷಃ) ಸಂಸಾರಿಯಾದ ಮನುಷ್ಯನು (ಶ್ರದ್ಧಾಮಯಃ) ರೂಪವನ್ನು ಹೊಂದಿದ ಶ್ರದ್ಧೆಯಂತೆ ಆಗುತ್ತಾನೆ ಹೇಗೆಂದರೆ (ಯಃ) ಯಾವನು (ಯಚ್ಛ್ರದ್ಧಃ) ಯಾವ ಬಗೆಯ ಶ್ರದ್ಧೆಯುಳ್ಳವನಾಗುತ್ತಾನೊ (ಸಃ) ಅವನು (ಸ ಏವ) ಆ ಶ್ರದ್ಧೆಯ ಮೂರ್ತಿಯೇ ಆಗಿಬಿಡುತ್ತಾನೆ

ಅವನು ಮಾಡುವ ಪೂಜೆಯಿಂದ ಅವನ ಸತ್ತ್ವಾದಿನಿಷ್ಠೆಯನ್ನು ಊಹಿಸುವದು ಹೇಗೆಂದರೆ.—

**ಯಜಂತೇ ಸಾತ್ತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪ ॥**

(ಸಾತ್ತ್ವಿಕಾಃ) ಸತ್ತ್ವಗುಣದವರು (ದೇವಾನ್) ಇಂದ್ರ, ಅಗ್ನಿ, ವಸು, ರುದ್ರ-ಮೊದಲಾದ ದೇವತೆಗಳನ್ನು (ಯಜಂತೇ) ಪೂಜಿಸುತ್ತಾರೆ (ರಾಜಸಾಃ) ರಜೋಗುಣದವರು (ಯಕ್ಷರಕ್ಷಾಂಸಿ) ಕುಬೇರನೆ ಮೊದಲಾದ ಯಕ್ಷರನ್ನೂ ನೈಋತ ಮೊದಲಾದ ರಾಕ್ಷಸರನ್ನೂ ಪೂಜಿಸುತ್ತಾರೆ (ಅನ್ಯೇ) ಬೇರೆ (ತಾಮಸಾಃ) ತಮೋಗುಣದವರಾದ (ಜನಾಃ) ಜನರು (ಪ್ರೇತಾನ್) ಧರ್ಮಭ್ರಷ್ಟರಾಗಿ ಸತ್ತು ವಾಯುಮಯವಾದ ದೇಹವುಳ್ಳ ಪ್ರೇತಪಿಶಾಚಗಳನ್ನೂ (ಭೂತಗಣಾಂಶ್ಚ) ಸಪ್ತಮಾತೃಕೆ ಮೊದಲಾದ ಭೂತಗಣಗಳನ್ನೂ (ಯಜಂತೇ) ಪೂಜಿಸುತ್ತಾರೆ

ದೇವತೆಗಳನ್ನು ಪೂಜಿಸುವ ಸಾತ್ತ್ವಿಕರ ಸಂಖ್ಯೆಯು ಬಹು ಕಡಿಮೆ. ಏಕೆಂದರೆ —

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥**

**ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥ ೬ ॥**

(ಯೇ) ಯಾವ (ಜನಾಃ) ಜನರು (ದಂಭಾಹಂಕಾರಸಂಯುಕ್ತಾಃ) ತಮ್ಮಲ್ಲಿ ಹೆಚ್ಚುಗಾರಿಕೆ ಕಾಣಲೆಂಬ ಮತ್ತು ತನಗಿಂತ ದೊಡ್ಡವರಿಲ್ಲವೆಂಬ ಭಾವನೆಯಿಂದ ಕೂಡಿದವರಾಗಿಯೂ (ಕಾಮರಾಗಬಲಾನ್ವಿತಾಃ) ಬಯಕೆಗಳ ಮತ್ತು ವಿಷಯಗಳ ಮೇಲಿನ ಪ್ರೀತಿಯ ಆವೇಶದಿಂದ ಕೂಡಿದವರಾಗಿಯೂ (ಶರೀರಸ್ಥಂ) ದೇಹದಲ್ಲಿರುವ (ಭೂತಗ್ರಾಮಂ) ಇಂದ್ರಿಯಗಳ ಸಮೂಹವನ್ನೂ (ಅಂತಃಶರೀರಸ್ಥಂ) ಅವರ ಕರ್ಮಗಳಿಗೆಲ್ಲ ಸಾಕ್ಷಿಯಾಗಿ ಶರೀರದೊಳಗಿರುವ (ಮಾಂ ಚೈವ) ಪರಮಾತ್ಮನಾದ ನನ್ನನ್ನೂ (ಕರ್ಶಯಂತಃ) ಸೊರಗಿಸುವವರಾಗಿಯೂ ಇರುವ–ಎಂದರೆ ಅವರು ಇಂದ್ರಿಯಗಳನ್ನು ಸೊರಗಿಸುವದಂತು ಕಾಣುವದಷ್ಟೆ ವೇದಶಾಸ್ತ್ರಗಳಲ್ಲಿರುವ ನನ್ನ ಆಜ್ಞೆಯನ್ನು ಮೀರಿ ನಡೆಯುವದೆ ನನ್ನನ್ನು ಸೊರಗಿಸಿದಂತಾಗುವದು–ಇಂಥ (ಅಚೇತಸಃ) ಅವಿವೇಕಿಗಳು (ಅಶಾಸ್ತ್ರವಿಹಿತಂ) ಶಾಸ್ತ್ರದಲ್ಲಿ ಹೇಳಿಲ್ಲದಂಥ (ಘೋರಂ) ಪ್ರಾಣಿಗಳಿಗೆ ಪೀಡೆಯನ್ನು ಮಾಡುವಂಥ (ತಪಃ) ತಪಸ್ಸನ್ನು (ತಪ್ಯಂತೇ) ಮಾಡುತ್ತಾರೊ (ತಾನ್) ಅವರನ್ನು (ಆಸುರನಿಶ್ಚಯಾನ್) ಅಸುರರಂಥ ಭಯಂಕರವಾದ ನಿಶ್ಚಯವುಳ್ಳವರೆಂದು (ವಿದ್ಧಿ) ತಿಳಿ

ಸತ್ತ್ವಾದಿನಿಷ್ಠೆಗಳನ್ನು ಗುರ್ತಿಸುವ ಆಹಾರ ಮೊದಲಾದ ಇನ್ನೂ ಬೇರೆ ಬೇರೆ ಬಗೆಗಳೇನೆಂದರೆ:—

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥**

(ಸರ್ವಸ್ಯ) ಎಲ್ಲರ (ಆಹಾರಸ್ತ್ವಪಿ) ಆಹಾರದಲ್ಲಿ ಕೂಡ (ಪ್ರಿಯಃ) ಪ್ರಿಯವು (ತ್ರಿವಿಧಃ) ಮೂರು ಬಗೆಯು (ಭವತಿ) ಆಗುತ್ತದೆ (ತಥಾ) ಹಾಗೆಯೇ (ಯಜ್ಞಃ) ಯಜ್ಞವು, (ತಪಃ) ತಪಸ್ಸು, (ದಾನಂ) ದಾನವು- ಇವು ಕೂಡ ಮೂರುಬಗೆಯಾಗಿರುತ್ತವೆ (ತೇಷಾಂ) ಅವುಗಳ (ಇಮಂ) ಈಗ ನಾನು ಹೇಳುವ (ಭೇದಂ) ಭೇದವನ್ನು (ಶೃಣು) ಕೇಳು.

ಆಹಾರದಿಂದ ಗುರ್ತಿಸುವದು ಹೇಗೆಂದರೆ:—

**ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ ೮ ॥**

(ಆಯುಃ ವಿವರ್ಧನಾಃ) ಆಯುಸ್ಸನ್ನೂ ಮನಸ್ಸಿನ ಉತ್ಸಾಹವನ್ನೂ ಶರೀರದ ಬಲವನ್ನೂ ಆರೋಗ್ಯವನ್ನೂ ಸುಖವನ್ನೂ ಪ್ರೀತಿಯನ್ನೂ ಹೆಚ್ಚಿಸುವಂಥದ್ದಾಗಿಯೂ (ರಸ್ಯಾಃ) ಮಧುರರಸದಿಂದ ಕೂಡಿದ್ದಾಗಿಯೂ (ಸ್ನಿಗ್ಧಾಃ) ತುಪ್ಪ ಮೊದಲಾದವುಗಳ ಜಿಡ್ಡಿನಿಂದ ಕೂಡಿದ್ದಾಗಿಯೂ (ಸ್ಥಿರಾಃ) ಕೆಲವು ಕಾಲ ಶರೀರದಲ್ಲಿ ಉಳಿಯುವಂಥದ್ದಾಗಿಯೂ (ಹೃದ್ಯಾಃ) ಮನಸ್ಸಿಗೆ ಸಂತೋಷವನ್ನುಂಟುಮಾಡುವಂಥದ್ದಾಗಿಯೂ ಇರುವ (ಆಹಾರಾಃ) ಭಕ್ಷ್ಯ, ಭೋಜ್ಯ- ಮೊದಲಾದ ಆಹಾರಗಳು (ಸಾತ್ತ್ವಿಕಪ್ರಿಯಾಃ) ಸಾತ್ತ್ವಿಕರಿಗೆ ಬೇಕೆನಿಸುವವುಗಳಾಗಿರುವವು.

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥**

(ಕಟ್ವಮ್ಲ . ವಿದಾಹಿನಃ) ಬಹಳ ಕಾರ, ಬಹಳ ಹುಳಿ, ಬಹಳ ಉಪ್ಪು, ಬಹಳ ಬಿಸಿ, ಬಹಳ ತೀಕ್ಷ್ಣ, ಬಹಳ ಒಣಗಿದವುಗಳು, ಬಹಳ ಸೀದ ಅಥವಾ ಹುರಿದ ಧಾನ್ಯಗಳು- ಇಂಥ (ದುಃಖ. ಪ್ರದಾಃ) ಒಡನೆ ಆಗುವ ಪೀಡೆಯೆಂಬ ದುಃಖವನ್ನೂ ಮುಂದೆ ಮನಸ್ಸು ಕೆಟ್ಟು ಆಗುವ ಶೋಕವನ್ನೂ ಮತ್ತು ರೋಗವನ್ನೂ ಉಂಟುಮಾಡುವಂಥ (ಆಹಾರಾಃ) ಆಹಾರಗಳು (ರಾಜಸಸ್ಯ) ರಜೋಗುಣದವನಿಗೆ (ಇಷ್ಟಾಃ) ಬೇಕೆನಿಸುವವುಗಳಾಗಿರುವವು.

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥೧೦॥**

(ಯತ್) ಯಾವದು (ಯಾತಯಾಮಂ) ಅರ್ಧ ಬೆಂದಿರುವದೊ ಅಥವಾ ಅಡಿಗೆಯಾಗಿ ಜಾವಕಳೆದು ಆರಿಹೋಗಿರುವದೊ (ಗತರಸಂ) ಒಣಕಲಾಗಿರುವದೊ (ಪೂತಿ) ದುರ್ಗಂಧದಿಂದ ಕೂಡಿರುವದೊ (ಪರ್ಯುಷಿತಂ ಚ) ಬೆಂದ ಮೇಲೆ ರಾತ್ರಿಯನ್ನು ಕಳೆದಿರುವಂಥದ್ದಾಗಿರುವದೊ (ಉಚ್ಛಿಷ್ಟಮಪಿ) ಉಂಡು ಮಿಕ್ಕದ್ದಾಗಿರುವದೊ (ಅಮೇಧ್ಯಂ ಚ) ದೇವರಿಗೆ ಒಪ್ಪಿಸುವದಕ್ಕೆ ಯೋಗ್ಯವಲ್ಲದ್ದಾಗಿರುವದೊ ಇಂಥ (ಭೋಜನಂ) ಊಟವು (ತಾಮಸಪ್ರಿಯಂ) ತಾಮಸರಿಗೆ ಬೇಕೆನಿಸುವಂಥದ್ದಾಗಿರುವದು

ಯಜ್ಞದಿಂದ ಗುರ್ತಿಸುವದು ಹೇಗೆಂದರೆ.—

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧ ॥**

(ಅಫಲಾಕಾಂಕ್ಷಿಭಿಃ) ಫಲವನ್ನು ಬಯಸದೆ ಇರುವವರಿಂದ (ವಿಧಿದೃಷ್ಟಃ) ಶಾಸ್ತ್ರದಲ್ಲಿ ಹೇಳಿರುವಂಥ (ಯಃ) ಯಾವ (ಯಜ್ಞಃ) ಯಜ್ಞವು (ಯಷ್ಟವ್ಯಮೇವ) ಇದು ನಾನು ಮಾಡತಕ್ಕದ್ದೆ (ಇತಿ) ಹೀಗೆಂದು (ಮನಃ) ಮನಸ್ಸನ್ನು (ಸಮಾಧಾಯ) ನಿಶ್ಚಯಮಾಡಿಕೊಂಡು (ಇಜ್ಯತೇ) ಯಜ್ಞ ಮಾಡಲ್ಪಡುವದೊ (ಸಃ) ಆ ಯಜ್ಞವು (ಸಾತ್ತ್ವಿಕಃ) ಸಾತ್ತ್ವಿಕವು.

**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ ೧೨ ॥**

(ಭರತಶ್ರೇಷ್ಠ) ಅರ್ಜುನನೆ, ಕೇಳು. (ಫಲಂ) ಫಲವನ್ನು (ಅಭಿಸಂಧಾಯ ತು) ಉದ್ದೇಶಮಾಡಿಕೊಂಡು (ದಂಭಾರ್ಥಮಪಿ ಚೈವ) ತಾನು ದೊಡ್ಡ ಧರ್ಮಿಷ್ಠನೆಂದು ತೋರಿಸಿಕೊಳ್ಳುವದಕ್ಕೂ ಕೂಡ (ಯತ್) ಯಾವ ಯಜ್ಞವು (ಇಜ್ಯತೇ) ನಡೆಸಲಾಗುತ್ತದೊ (ತಂ) ಆ (ಯಜ್ಞಂ) ಯಜ್ಞವನ್ನು (ರಾಜಸಂ) ರಾಜಸವನ್ನಾಗಿ (ವಿದ್ಧಿ) ತಿಳಿ.

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥**

(ವಿಧಿಹೀನಂ) ಶಾಸ್ತ್ರದಲ್ಲಿ ಹೇಳಿರುವ ನಿಯಮವಿಲ್ಲದ್ದಾಗಿಯೂ (ಅಸೃಷ್ಟಾನ್ನಂ) ಬ್ರಾಹ್ಮಣರಿಗೆ ಅನ್ನಸಂತರ್ಪಣೆ ಇಲ್ಲದ್ದಾಗಿಯೂ (ಮಂತ್ರಹೀನಂ) ಸ್ವರಗಳೂ ಅಕ್ಷರಗಳೂ ಸ್ಪಷ್ಟಗೊಳ್ಳುವ ಮಂತ್ರವಿಲ್ಲದ್ದಾಗಿಯೂ (ಅದಕ್ಷಿಣಂ) ಶಾಸ್ತ್ರದಲ್ಲಿ ಹೇಳಿರುವಂತೆ ದಕ್ಷಿಣೆಯನ್ನು ಕೊಡದೆ ಇರುವಂಥದ್ದಾಗಿಯೂ (ಶ್ರದ್ಧಾವಿರಹಿತಂ) ಯಜ್ಞದ ವಿಷಯದಲ್ಲಿ ಅಥವಾ ಯಜ್ಞವನ್ನು ಮಾಡಿಸುವವರಲ್ಲಿ ಯಾವ ವಿಶ್ವಾಸವೂ ಇಲ್ಲದ್ದಾಗಿಯೂ ಇರುವಂಥ (ಯಜ್ಞಂ) ಯಜ್ಞವನ್ನು (ತಾಮಸಂ) ತಾಮಸವೆಂದು (ಪರಿಚಕ್ಷತೇ) ಹೇಳುತ್ತಾರೆ.

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥**

(ದೇವ. ಪೂಜನಂ) ಶಿವ, ವಿಷ್ಣು–ಮೊದಲಾದ ದೇವತೆಗಳನ್ನೂ ಸಾತ್ತ್ವಿಕರಾದ ಬ್ರಾಹ್ಮಣರನ್ನೂ ತಾಯಿ, ತಂದೆ, ಆಚಾರ್ಯ–ಮೊದಲಾದ ಗುರುಗಳನ್ನೂ ಹೆಚ್ಚಿನ ತಿಳಿವಳಿಕೆಯುಳ್ಳವರನ್ನೂ ಪೂಜಿಸುವದೂ (ಶೌಚಂ) ಶುಚಿತ್ವವೂ (ಆರ್ಜವಮ್) ಮನಸ್ಸಿನ ಸರಲತ್ವವೂ (ಬ್ರಹ್ಮಚರ್ಯಂ) ಸ್ತ್ರೀಸುಖಕ್ಕೆ ಮನಸ್ಸು ಮಾಡದಿರುವದೂ (ಅಹಿಂಸಾ ಚ) ಪ್ರಾಣಿಗಳನ್ನು ಪೀಡಿಸದಿರುವದೂ (ಶಾರೀರಂ) ಶರೀರದಿಂದ ಮಾಡುವ (ತಪಃ) ತಪಸ್ಸು (ಉಚ್ಯತೇ) ಎನಿಸುವದು.

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥**

(ಯತ್) ಯಾವದು (ಸತ್ಯಂ) ನಿಜವಾಗಿರುವದೊ (ಪ್ರಿಯಹಿತಂ ಚ) ಕೇಳುವವನಿಗೆ ಉತ್ಸಾಹವನ್ನು ಹುಟ್ಟಿಸುವದೊ ಮತ್ತು ಮುಂದೆ ಒಳ್ಳೆಯ ಫಲವನ್ನು ಕೊಡುವಂಥದ್ದಾಗಿರುವದೊ ಅಂಥ ಮತ್ತು (ಅನುದ್ವೇಗಕರಂ) ಯಾರಿಗೂ ತಳಮಳವನ್ನುಂಟುಮಾಡದಿರುವಂಥ (ವಾಕ್ಯಂ) ಮಾತೂ

(ಸ್ವಾಧ್ಯಾಯಾಭ್ಯಸನಂ ಚೈವ) ವೇದಶಾಸ್ತ್ರಗಳ ಬಾಯಪಾಠವನ್ನು ಮಾಡುವದೂ ಕೂಡ (ವಾಙ್ಮಯಂ) ಮಾತಿನಿಂದ ಮಾಡುವ (ತಪಃ) ತಪಸ್ಸು (ಉಚ್ಯತೇ) ಎನಿಸುವದು

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥**

(ಮನಃಪ್ರಸಾದಃ) ಮನಸ್ಸು ಸ್ವಸ್ಥವಾಗಿರುವದು (ಸೌಮ್ಯತ್ವಂ) ಅಯೋಗ್ಯವಾದ ವಿಷಯವನ್ನು ಯೋಚನೆಗೆ ತೆಗೆದುಕೊಳ್ಳದೆ ಒಳ್ಳೆಯದನ್ನೆ ಚಿಂತಿಸುತ್ತಿರುವದು (ಮೌನಂ) ಮನಸ್ಸಿನಲ್ಲಿ ಪರಮಾತ್ಮನ ವಿಚಾರವನ್ನು ಮಾಡುತ್ತಿರುವದು ಅಥವಾ ಮಾತಾಡದಿರುವದು (ಆತ್ಮವಿನಿಗ್ರಹಃ) ಮನಸ್ಸನ್ನು ವಿಷಯಗಳ ಕಡೆಗೋಲೆಯದಂತೆ ಬಿಗಿಹಿಡಿಯುವದು (ಭಾವಸಂಶುದ್ಧಿಃ) ಮನಸ್ಸಿನಲ್ಲಿ ವಂಚನೆಯಿಲ್ಲದಿರುವದು-(ಇತಿ) ಹೀಗೆ (ಏತತ್) ಈ (ತಪಃ) ತಪಸ್ಸು (ಮಾನಸಂ) ಮನಸ್ಸಿನಿಂದ ಮಾಡಿದ್ದು (ಉಚ್ಯತೇ) ಎನಿಸುವದು.

ಇವುಗಳಿಂದ ಸತ್ತ್ವಾದಿಗಳನ್ನು ಗುರ್ತಿಸುವ ಬಗೆ ಹೇಗೆಂದರೆ:—

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ ೧೭ ॥**

(ಅಫಲಾಕಾಂಕ್ಷಿಭಿಃ) ಫಲವನ್ನು ಬಯಸದೆ ಇರುವಂಥ ಮತ್ತು (ಯುಕ್ತೈಃ) ಸಮಾಧಾನವಾದ ಮನಸ್ಸುಳ್ಳಂಥ (ನರೈಃ) ಮನುಷ್ಯರಿಂದ (ಪರಯಾ) ಹೆಚ್ಚಿನ (ಶ್ರದ್ಧಯಾ) ವಿಶ್ವಾಸದಿಂದ (ತಪ್ತಂ) ತಪಸ್ಸುಮಾಡಿದಂಥ (ತತ್) ಆ (ತ್ರಿವಿಧಂ) ಶಾರೀರ, ವಾಙ್ಮಯ, ಮಾನಸ-ಎಂಬ ಮೂರು ಬಗೆಯ (ತಪಃ) ತಪಸ್ಸು (ಸಾತ್ತ್ವಿಕಂ) ಸಾತ್ತ್ವಿಕವೆಂದು (ಪರಿಚಕ್ಷತೇ) ಹೇಳುತ್ತಾರೆ.

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮ ॥**

(ಸತ್ಕಾರಮಾನಪೂಜಾರ್ಥಂ) ತಾನೊಬ್ಬ ಸಾಧುವೆನಿಸಿಕೊಳ್ಳಬೇಕೆಂದೂ ಇತರರಿಂದ ತನಗೆ ಮಾನವು ದೊರೆಯಬೇಕೆಂದೂ ತನ್ನನ್ನು ಎಲ್ಲರೂ ಪೂಜಿಸುವಂತಾಗಬೇಕೆಂದೂ (ದಂಭೇನ ಚೈವ) ತಾನೊಬ್ಬ ದೊಡ್ಡವನೆಂದು ತೋರಿಸಿಕೊಳ್ಳಬೇಕೆಂಬ ಉದ್ದೇಶದಿಂದ (ಯತ್) ಯಾವ (ತಪಃ) ತಪಸ್ಸು (ಕ್ರಿಯತೇ) ಮಾಡಲ್ಪಡುವದೊ (ತತ್) ಆ ತಪಸ್ಸು (ಇಹ) ಈ ಲೋಕದಲ್ಲಿ (ಚಲಂ) ಹೊಯ್ದಾಡುತ್ತಿರುವಂಥ ಮತ್ತು (ಅಧ್ರುವಂ) ಅಲ್ಪಕಾಲವಿರುವ ಫಲವನ್ನು ಕೊಡುವಂಥ (ರಾಜಸಂ) ರಾಜಸವೆಂದು (ಪ್ರೋಕ್ತಂ) ಹೇಳುವರು

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥ ೧೯ ॥**

(ಮೂಢಗ್ರಾಹೇಣ) ಅವಿವೇಕಪೂರ್ವಕವಾದ ನಿಶ್ಚಯದಿಂದ (ಆತ್ಮನಃ) ತನ್ನ ಶರೀರದ (ಪೀಡಯಾ) ಪೀಡೆಯಿಂದ ಎಂದರೆ ಶರೀರವನ್ನು ಬಹಳ ಗಾಸಿಗೊಳಿಸುವದರಿಂದ (ವಾ) ಅಥವಾ (ಪರಸ್ಯೋತ್ಸಾದನಾರ್ಥಂ) ಮತ್ತೊಬ್ಬನಿಗೆ ಪೀಡೆಯನ್ನುಂಟುಮಾಡಬೇಕೆಂಬ ಉದ್ದೇಶದಿಂದ (ಯತ್) ಯಾವ (ತಪಃ) ತಪಸ್ಸು (ಕ್ರಿಯತೇ) ಮಾಡಲ್ಪಡುವದೊ (ತತ್) ಆ ತಪಸ್ಸು (ತಾಮಸಂ) ತಾಮಸವೆಂದು (ಉದಾಹೃತಂ) ಹೇಳುವರು.

ದಾನದಿಂದ ಸತ್ತ್ವಾದಿಗಳನ್ನು ಗುರ್ತಿಸುವ ಬಗೆ ಹೇಗೆಂದರೆ :—

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥**
**॥ ೨೦ ॥**

(ದಾತವ್ಯಂ) ಈ ದಾನವು ಅವಶ್ಯಕವಾಗಿ ನಾನು ಮಾಡತಕ್ಕದ್ದು (ಇತಿ) ಎಂದು (ಯತ್) ಯಾವ (ದಾನಂ) ದಾನವು (ಅನುಪಕಾರಿಣೇ) ತನಗೆ ಉಪಕಾರವನ್ನು ಮಾಡದೆ ಇರುವವನಿಗೆ (ದೇಶೇ) ಕುರುಕ್ಷೇತ್ರ ಮೊದಲಾದ ಪುಣ್ಯಸ್ಥಲಗಳಲ್ಲಿ (ಕಾಲೇ ಚ) ಸಂಕ್ರಾಂತಿ ಮೊದಲಾದ ಕಾಲಗಳಲ್ಲಿ (ಪಾತ್ರೇ ಚ (ಒಳ್ಳೆ ವೇದಾಧ್ಯಯನವನ್ನು ಮಾಡಿದ ಯೋಗ್ಯನಿಗೆ (ದೀಯತೇ)

ಕೊಡಲ್ಪಡುವದೊ (ತತ್) ಆ (ದಾನಂ) ದಾನವು (ಸಾತ್ತ್ವಿಕಂ) ಸಾತ್ತ್ವಿಕವು (ಸ್ಮೃತಮ್) ಎನಿಸುವದು

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ ೨೧ ॥**

(ಪ್ರತ್ಯುಪಕಾರಾರ್ಥಂ) ತನಗೆ ಮುಂದೆ ಅವನಿಂದ ಏನಾದರೂ ಉಪಕಾರವಾಗಬೇಕೆಂಬ ನಿರೀಕ್ಷಣೆಯಿಂದ (ವಾ ಪುನಃ) ಅಥವಾ (ಫಲಂ) ಫಲವನ್ನು (ಉದ್ದಿಶ್ಯ) ನಿರೀಕ್ಷಿಸಿಕೊಂಡು (ಯತ್ತು) ಯಾವ ದಾನವು (ಪರಿಕ್ಲಿಷ್ಟಂ) ಕೊಡಬೇಕಲ್ಲ! ಎಂದು ಮನಸ್ಸಿಗೆ ವ್ಯಥೆಯನ್ನುಂಟುಮಾಡಿ ಕೊಂಡು (ದೀಯತೇ ಚ) ದಾನಮಾಡೋಣಾಗುತ್ತದೊ (ತತ್) ಆ (ದಾನಂ) ದಾನವು (ರಾಜಸಂ) ರಾಜಸವು (ಸ್ಮೃತಮ್) ಎನಿಸುವದು.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ೨೨ ॥**

(ಯತ್) ಯಾವ (ದಾನಂ) ದಾನವು (ಅದೇಶಕಾಲೇ) ಪುಣ್ಯಸ್ಥಲ ವೆನಿಸದಿರುವ ಕಡೆ ಸಂಕ್ರಮಣ ಮೊದಲಾದ ವಿಶೇಷಗಳೇನೂ ಇಲ್ಲದ ಕಾಲದಲ್ಲಿ (ಅಪಾತ್ರೇಭ್ಯಶ್ಚ) ಮೂರ್ಖರು, ಕಳ್ಳರು–ಮೊದಲಾದ ಅಯೋಗ್ಯರಿಗೆ (ದೀಯತೇ) ಕೊಡಲ್ಪಡುವದೋ (ಅಸತ್ಕೃತಂ) ಒಳ್ಳೆ ಆದರವನ್ನು ಮಾಡ ದಿರುವಂಥ ಮತ್ತು (ಅವಜ್ಞಾತಂ) ಅವಮಾನಪೂರ್ವಕವಾಗಿ ಕೊಟ್ಟಂಥ (ತತ್) ಆ ದಾನವು (ತಾಮಸಂ) ತಾಮಸವು (ಉದಾಹೃತಂ) ಎನಿಸುವದು

ಈ ಯಜ್ಞ, ದಾನ, ತಪಸ್ಸು–ಮೊದಲಾದವುಗಳ ಲೋಪ ದೋಷ ಪರಿಹಾರಕ್ಕೆ ಉಪಾಯವೇನೆಂದರೆ :—

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥**

(ಬ್ರಹ್ಮಣಃ) ಪರಬ್ರಹ್ಮವಸ್ತುವಿನ (ನಿರ್ದೇಶಃ) ಗುರ್ತಿಸುವ ಹೆಸರುಗಳು (ಓಂ) ಓಂ ಎಂದೂ (ತತ್) ತತ್ ಎಂದೂ (ಸತ್) ಸತ್ ಎಂದೂ (ಇತಿ) ಹೀಗೆ (ತ್ರಿವಿಧಃ) ಮೂರು ಬಗೆಯಾಗಿ (ಸ್ಮೃತಃ) ವೇದಾಂತಶಾಸ್ತ್ರದಲ್ಲಿ ಬ್ರಹ್ಮ ಜ್ಞಾನಿಗಳು ಸ್ಮರಿಸಿರುವರು ಓಂಕಾರವೆಂಬುದು ಬ್ರಹ್ಮನ ಹೆಸರೆಂಬುದನ್ನು ಹಿಂದೆ (೮-೧೩) ಹೇಳಿರುವೆನಷ್ಟೆ 'ತತ್' ಎಂದರೆ 'ಅದು' ಎಂದರ್ಥ 'ಇದು, ಇದು' ಎಂದು ಹೇಳಿಸಿಕೊಳ್ಳುವಂಥ ಜಗತ್ತಿನಿಂದ ಭಿನ್ನವಾಗಿ ಇದರ ಸೋಂಕಿಲ್ಲದೆ ಬೇರೆ ಇರುವದರಿಂದ ಆ ಬ್ರಹ್ಮವನ್ನು 'ತತ್' ಎಂದು ಕರೆಯುವರು 'ಸತ್' ಎಂಬ ಮಾತಿನ ಅರ್ಥವನ್ನೂ ಹಿಂದೆ (೨-೧೬) ಹೇಳಿಯೇ ಇದ್ದೇನೆ ಆದ್ದರಿಂದ ಓಂ, ತತ್, ಸತ್-ಎಂಬ ಈ ಮೂರೂ ಬ್ರಹ್ಮನ ಹೆಸರುಗಳು (ತೇನ) ಈ ಹೆಸರುಳ್ಳ ಬ್ರಹ್ಮನಿಂದಲೆ (ಪುರಾ) ಸೃಷ್ಟಿಕಾಲದಲ್ಲಿ (ಬ್ರಾಹ್ಮಣಾಃ) ಕರ್ಮಗಳನ್ನು ಮಾಡುವ ಬ್ರಾಹ್ಮಣರೂ (ವೇದಾಶ್ಚ) ಕರ್ಮಕ್ಕೆ ಉಪಕರಣಗಳಾದ ವೇದಗಳೂ (ಯಜ್ಞಾಶ್ಚ) ಯಜ್ಞ ಮೊದಲಾದ ಕರ್ಮಗಳೂ (ವಿಹಿತಾಃ) ಹುಟ್ಟಿಸಲ್ಪಟ್ಟಿವೆ

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥ ೨೪ ॥**

(ತಸ್ಮಾತ್) ಆದ್ದರಿಂದ (ವಿಧಾನೋಕ್ತಾಃ) ಶಾಸ್ತ್ರದಲ್ಲಿ ಹೇಳಿರುವಂಥ (ಬ್ರಹ್ಮವಾದಿನಾಂ) ವೇದಾಧ್ಯಯನಸಂಪನ್ನರ (ಯಜ್ಞದಾನತಪಃಕ್ರಿಯಾಃ) ಯಜ್ಞ, ದಾನ, ತಪಸ್ಸು-ಮೊದಲಾದ ಕ್ರಿಯೆಗಳೆಲ್ಲ (ಸತತಂ) ಯಾವಾಗಲೂ (ಓಮಿತಿ) ಓಂ ಎಂದು (ಉದಾಹೃತ್ಯ) ಹೇಳಿದಮೇಲೆ (ಪ್ರವರ್ತಂತೇ) ನಡೆಯುವವು.

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ ೨೫ ॥**

(ಮೋಕ್ಷಕಾಂಕ್ಷಿಭಿಃ) ಮೋಕ್ಷವನ್ನು ಬಯಸುವವರಿಂದ (ತತ್) 'ತತ್' ಎಂಬ ಶಬ್ದವನ್ನು (ಇತಿ) ಹೇಳಿದ ಮೇಲೆಯೆ (ಫಲಂ) ಫಲವನ್ನು (ಅನಭಿ

ಸಂಧಾಯ) ಉದ್ದೇಶವಾಗಿಟ್ಟುಕೊಳ್ಳದೆ (ಯಜ್ಞತಪಃಕ್ರಿಯಾಃ) ಯಜ್ಞ, ತಪಸ್ಸು-ಮೊದಲಾದ ಕ್ರಿಯೆಗಳೂ (ವಿವಿಧಾಃ) ಬಗೆಬಗೆಯಾದ (ದಾನ ಕ್ರಿಯಾಶ್ಚ) ದಾನರೂಪವಾದ ಕ್ರಿಯೆಗಳೂ (ಕ್ರಿಯಂತೇ) ಮಾಡಲ್ಪಡುತ್ತವೆ

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥**

(ಸದ್ಭಾವೇ) ಇದೆಯೆಂಬರ್ಥವನ್ನು ಹೇಳುವದರಲ್ಲಿಯೂ (ಸಾಧು ಭಾವೇ ಚ) ಇದು ಯೋಗ್ಯವೆಂಬರ್ಥವನ್ನು ಹೇಳುವದರಲ್ಲಿಯೂ (ಸತ್ ಇತಿ) 'ಸತ್' ಎಂದು (ಏತತ್) ಈ ಹಸರು (ಪ್ರಯುಜ್ಯತೇ) ಉಪಯೋಗಮಾಡ ಲ್ಪಡುತ್ತದೆ (ಪಾರ್ಥ) ಅರ್ಜುನನೆ, ಕೇಳು (ತಥಾ) ಹಾಗೆಯೇ (ಸಚ್ಛಬ್ದಃ) 'ಸತ್' ಎಂಬ ಶಬ್ದವು (ಪ್ರಶಸ್ತೇ) ಶ್ಲಾಘಾಸ್ಪದವಾದ (ಕರ್ಮಣಿ) ಕರ್ಮದಲ್ಲಿಯೂ (ಯುಜ್ಯತೇ) ಉಪಯೋಗಿಸಲ್ಪಡುತ್ತದೆ

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥**

(ಯಜ್ಞೇ) ಯಜ್ಞದಲ್ಲಿಯೂ (ತಪಸಿ) ತಪಸ್ಸಿನಲ್ಲಿಯೂ (ದಾನೇ ಚ) ದಾನದಲ್ಲಿಯೂ ಕೂಡ (ಸ್ಥಿತಿಃ) ತೊಡಗಿರುವಿಕೆಯು (ಸತ್ ಇತಿ ಚ) 'ಸತ್' ಎಂದು (ಉಚ್ಯತೇ) ತಿಳಿದವರು ಹೇಳುತ್ತಾರೆ (ತದರ್ಥೀಯಂ) ಆ ಯಜ್ಞ ಮೊದಲಾದವುಗಳ ಸಂಬಂಧವಾಗಿ ಮಾಡುವ ಅಥವಾ ಈಶ್ವರನಿಗೆ ಪ್ರೀತಿ ಯಾಗಲೆಂದು ಮಾಡುವ (ಕರ್ಮ ಚೈವ) ಕರ್ಮವು ಕೂಡ (ಸತ್ ಇತಿ ಏವ) 'ಸತ್' ಎಂದೇ (ಅಭಿಧೀಯತೇ) ಹೇಳಲ್ಪಡುತ್ತದೆ ಹೀಗೆ ಒಂದೊಂದು ಮಾತಿನ ಮಾಹಾತ್ಮ್ಯವೇ ಹೀಗಿರುವಾಗ ಈ ಮೂರೂ ಕೂಡಿದ್ದರ ಮಾಹಾತ್ಮ್ಯವನ್ನು ಹೇಳತಕ್ಕದ್ದೇನು! ಆದ್ದರಿಂದ ಯಜ್ಞ ಮೊದಲಾದ ಸಾತ್ತ್ವಿಕಕರ್ಮಗಳಲ್ಲಿ ಲೋಪಗಳೇನಾದರೂ ಆಗಿದ್ದರೂ ಅವುಗಳನ್ನು ಶ್ರದ್ಧೆ ಯಿಂದ ಪರಬ್ರಹ್ಮನ ನಾಮತ್ರಯಗಳ ಉಚ್ಚಾರಪೂರ್ವಕವಾಗಿ ಮಾಡಿದ್ದರೆ ಆ ಕರ್ಮಗಳ ದೋಷಗಳೆಲ್ಲ ಹೋಗಿ ಅವು ಪೂರ್ಣವೇ ಆಗುತ್ತವೆ

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮ ॥**

(ಪಾರ್ಥ) ಅರ್ಜುನನೆ, ಕೇಳು (ಅಶ್ರದ್ಧಯಾ) ವಿಶ್ವಾಸವಿಲ್ಲದೆ ಮಾಡುವಂಥ (ಹುತಂ) ಹೋಮವೂ (ದತ್ತಂ) ದಾನವೂ (ತಪ್ತಂ) ಕಷ್ಟಪಟ್ಟು ಮಾಡಿದ (ತಪಃ) ತಪಸ್ಸೂ ಮತ್ತು (ಯತ್ ಕೃತಂ ಚ) ಮಾಡಿದ ಸ್ತುತಿ, ನಮಸ್ಕಾರ–ಮೊದಲಾದವುಗಳೂ (ಅಸತ್) ನನ್ನನ್ನು ಪಡೆಯುವ ದಾರಿಯವಲ್ಲವಾದ್ದರಿಂದ ಅಯೋಗ್ಯವಾದದ್ದು (ಇತಿ) ಎಂದು (ಉಚ್ಯತೇ) ಹೇಳಲ್ಪಡುವವು (ತತ್) ಆ ಅಶ್ರದ್ಧೆಯ ಕರ್ಮಗಳು (ಪ್ರೇತ್ಯ ಚ) ಸತ್ತಮೇಲೆ (ನ) ಯಾವ ಫಲವನ್ನೂ ಕೊಡುವದೂ ಇಲ್ಲ, (ಇಹ) ಇಲ್ಲಿ ಕೂಡ (ನ) ಯಾವ ಫಲವನ್ನೂ ಕೊಡುವದೂ ಇಲ್ಲ ಆದ್ದರಿಂದ ಶ್ರದ್ಧೆಯಿಂದ ಮಾಡಿದ ಕರ್ಮಗಳ ಯೋಗ್ಯತೆಗೆ ತಕ್ಕ ಫಲವು ಉಂಟು ಅವುಗಳಲ್ಲಿ ಸಾತ್ತ್ವಿಕಶ್ರದ್ಧೆಯು ಬಹಳ ಉತ್ತಮವಾದದ್ದು ಇದರ ಜೊತೆಗೆ ಶಾಸ್ತ್ರಜ್ಞಾನವೂ ಇದ್ದರೆ ಬಂಗಾರದ ಹೂವಿಗೆ ಸುವಾಸನೆಯುಂಟಾದಂತೆ ಶೋಭಾಯಮಾನವಾಗಿರುತ್ತದೆಂಬುದನ್ನು ಮರೆಯಬಾರದು

ಇಲ್ಲಿಗೆ **ಶ್ರದ್ಧಾತ್ರಯವಿಭಾಗಯೋಗ**ವೆಂಬ
ಹದಿನೇಳನೆ ಅಧ್ಯಾಯವು ಮುಗಿಯಿತು



# ಹದಿನೆಂಟನೆ ಅಧ್ಯಾಯ

ರಾಜ್ಯವನ್ನು ಗಳಿಸುವದಕ್ಕಾಗಿ ಗುರುಗಳನ್ನೂ ಹಿರಿಯರನ್ನೂ ಕೊಲ್ಲುವದಕ್ಕಿಂತಲೂ ತಿರಿದುಕೊಂಡಾದರೂ ಇರುವದು ಮೇಲೆಂದು ಅರ್ಜುನನು ಧನುಸ್ಸನ್ನು ಕೈಬಿಟ್ಟು ಕುಳಿತುಕೊಂಡನಷ್ಟೆ ಇದರಿಂದ ತೋರುವದೇನೆಂದರೆ–

ವೀರಕ್ಷತ್ರಿಯನಾದ ಅರ್ಜುನನಿಗೆ ಯುದ್ಧವು ಶಾಸ್ತ್ರವಿಹಿತಕರ್ಮವಾಗಿತ್ತು. ಅದರಿಂದ ಪರಹಿಂಸೆಯಾಗುವದೆಂದು ತೋರುತ್ತಲೆ ತಾನು ಆ ಶಾಸ್ತ್ರವಿಹಿತವಾದ ಕರ್ಮವನ್ನು ಸಂನ್ಯಾಸ ಮಾಡಿಬಿಡಬೇಕೆಂದು–ಎಂದರೆ ಕೈಬಿಡಬೇಕೆಂದು–ಅವನಿಗೆ ಮನಸ್ಸಾಯಿತು ಹೀಗೆ ಶಾಸ್ತ್ರವಿಹಿತಕರ್ಮವನ್ನು ಸಂನ್ಯಾಸಮಾಡುವ ಪದ್ಧತಿಗೆ ಸಂನ್ಯಾಸಾಶ್ರಮವೆಂದು ಹೆಸರು. ಕರ್ಮವನ್ನು ಸಂಪೂರ್ಣವಾಗಿ ಬಿಡುವದು ಶಕ್ಯವೇ ಅಲ್ಲದಿರುವಾಗ ಕಾಷಾಯದಂಡಧಾರಿಗಳಾದ ಈ ಸಂನ್ಯಾಸಾಶ್ರಮದವರು ಕರ್ಮವಿಲ್ಲದೆ ಇರುವದು ಹೇಗೆಂದರೆ–ಅವರಿಗೆ ಚಾತುರ್ವರ್ಣ್ಯಕ್ಕೆಂದು ಗೊತ್ತಾಗಿರುವ ಶಾಸ್ತ್ರವಿಹಿತಕರ್ಮಗಳಿಲ್ಲವೇ ಹೊರತು ಯೋಗಸಾಧನೆಯ ಕರ್ಮಗಳು ಅವರಿಗಿದ್ದೇ ಇವೆ ಇವೂ ಶಾಸ್ತ್ರೀಯಕರ್ಮಗಳಾದರೂ ಚಾತುರ್ವರ್ಣ್ಯದ ಕರ್ಮಗಳಂತೆ ಪ್ರತಿಯೊಬ್ಬನಿಗೂ ವಿಧಿಸಿದ ಕರ್ಮಗಳಲ್ಲ ಇವು ಸಂಸಾರದಲ್ಲಿ ವಿರಕ್ತರಾದ ಕೆಲವರು ಮಾತ್ರ ಹಿಡಿಯತಕ್ಕವು ಇವು ಮೋಕ್ಷಕ್ಕೆ ಹತ್ತಿರದ ಸಾಧನಗಳಾದ್ದರಿಂದ ಇವನ್ನು ಹಿಡಿದು ತನ್ನ ಕ್ಷತ್ರಿಯವರ್ಣಕ್ಕೆ ಗೊತ್ತಾಗಿರುವ ಪರಹಿಂಸಕವಾದ ಯುದ್ಧವೆಂಬ ಶಾಸ್ತ್ರವಿಹಿತಕರ್ಮವನ್ನು ಬಿಟ್ಟುಬಿಡಬೇಕೆಂಬುದು ಅರ್ಜುನನ ಅಭಿಪ್ರಾಯವಾಗಿತ್ತು ಸಂನ್ಯಾಸವೆಂದೊಡನೆ ಯಾರಿಗಾದರೂ ಈ ಸಂನ್ಯಾಸವೇ ಕಣ್ಣ ಮುಂದೆ ಬಂದು ನಿಲ್ಲುವದು ಶ್ರೀಕೃಷ್ಣನು ತನ್ನ ಉಪದೇಶದಲ್ಲಿ ಸಂನ್ಯಾಸವೆಂಬ ಶಬ್ದವನ್ನು ಅನೇಕ ವೇಳೆ ಉಪಯೋಗಿಸಿರುವದೂ ಎದ್ದು ಕಾಣುತ್ತಿದೆ ಇದರ ಜೊತೆಗೆ ಫಲಾಪೇಕ್ಷಯನ್ನು ಬಿಡಬೇಕೆಂಬರ್ಥದಲ್ಲಿ ತ್ಯಾಗವೆಂಬ ಶಬ್ದದ ಪ್ರಯೋಗವೂ ಅಲ್ಲಲ್ಲಿ ಸೇರುತ್ತ ಬಂದಿರುವದು ಹೆಚ್ಚು ಸಂಶಯಕ್ಕೆ ಕಾರಣವಾಯಿತು ಏಕೆಂದರೆ ಶಬ್ದಗಳ ಸಾಮಾನ್ಯಾರ್ಥವನ್ನು ತೆಗೆದುಕೊಂಡರೆ ಸಂನ್ಯಾಸಶಬ್ದಕ್ಕೂ ತ್ಯಾಗಶಬ್ದಕ್ಕೂ 'ಬಿಡುವದು' ಎಂಬ ಒಂದೇ ಅರ್ಥವಿರುವದು ಆದ್ದರಿಂದ ಇವೆರಡರ ಅರ್ಥವಿಶೇಷವೇನಾದರೂ ಇದ್ದರೆ ತಿಳಿಯಬೇಕೆಂದು,

**ಅರ್ಜುನ ಉವಾಚ** ಅರ್ಜುನನು ಕೇಳಿದ್ದು —

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ** ॥ ೧ ॥

(ಮಹಾಬಾಹೋ) ಉದ್ದವಾದ ತೋಳುಗಳುಳ್ಳವನೆ, (ಹೃಷಿಕೇಶ) ಇಂದ್ರಿಯಗಳೊಡೆಯನೆ, (ಕೇಶಿನಿಷೂದನ) ಕೇಶಿಯೆಂಬ ರಾಕ್ಷಸನನ್ನು ಕೊಂದವನೆ, ಹೇಳು (ಸಂನ್ಯಾಸಸ್ಯ) ಸಂನ್ಯಾಸವೆಂಬ ಮಾತಿನ ಮತ್ತು (ತ್ಯಾಗಸ್ಯ ಚ) ತ್ಯಾಗವೆಂಬ ಮಾತಿನ (ತತ್ತ್ವಂ) ನಿಜಸ್ವರೂಪವನ್ನು (ಪೃಥಕ್) ಬೇರೆ ಬೇರೆಯಾಗಿ (ವೇದಿತುಂ) ತಿಳಿಯುವದಕ್ಕೆ (ಇಚ್ಛಾಮಿ) ಬಯಸುತ್ತೇನೆ

ಈ ಮಾತಿಗೆ ಉತ್ತರವನ್ನು ಹೇಳುವ ನೆವದಿಂದ ತನ್ನ ಉಪದೇಶವನ್ನೆಲ್ಲ ಮುಗಿಸುವದಕ್ಕೆ ಹೊರಟು

**ಶ್ರೀಭಗವಾನುವಾಚ** ಶ್ರೀಕೃಷ್ಣನು ಹೇಳಿದ್ದು —

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥**

(ಕಾಮ್ಯಾನಾಂ) ಫಲದ ಬಯಕೆಯಿಂದ ಮಾಡುವಂಥ ಅಶ್ವಮೇಧ ಮೊದಲಾದ (ಕರ್ಮಣಾಂ) ಕರ್ಮಗಳ (ನ್ಯಾಸಂ) ಬಿಡುವಿಕೆಯನ್ನು (ಸಂನ್ಯಾಸಂ) ಸಂನ್ಯಾಸವೆಂದು (ಕವಯಃ) ಕೆಲವರು ಪಂಡಿತರು (ವಿದುಃ) ತಿಳಿದಿರುವರು (ಸರ್ವಕರ್ಮಫಲತ್ಯಾಗಂ) ಎಲ್ಲ ಕರ್ಮಗಳ ಪಲಾಪೇಕ್ಷೆಯನ್ನು ಬಿಡುವದನ್ನು (ತ್ಯಾಗಂ) ತ್ಯಾಗವೆಂದು (ವಿಚಕ್ಷಣಾಃ) ಇನ್ನು ಕೆಲವರು ಪಂಡಿತರು (ಪ್ರಾಹುಃ) ಹೇಳುವರು ಫಲಗಳಿಗಾಗಿ ಏರ್ಪಟ್ಟಿರುವ ಕರ್ಮಗಳನ್ನೆ ಬಿಡುವದು ಸಂನ್ಯಾಸವೆಂದೂ ಕರ್ಮಗಳ ಫಲಗಳನ್ನು ಬಯಸದೆ ಬಿಡುವದು ತ್ಯಾಗವೆಂದೂ ಹೇಳಿರುವದರಿಂದಲೆ ಸಂನ್ಯಾಸತ್ಯಾಗಶಬ್ದಗಳೆರಡಕ್ಕೂ ಬಿಡುವದೆಂಬ ಒಂದೇ ಅರ್ಥವೆಂದು ಗೊತ್ತಾಗುವದು.

ಮುಮುಕ್ಷುಗಳು ಕರ್ಮಗಳನ್ನು ಬಿಡುವದು ಸಂನ್ಯಾಸವೆಂಬ ಮಾತಿನ ಅರ್ಥದಲ್ಲಿ ಕಾಮ್ಯಕರ್ಮಗಳು ಮಾತ್ರ ಸೇರಿರುವದೆಂದ ಮೇಲೆ ನಿತ್ಯನೈಮಿತ್ತಿಕ ಕರ್ಮಗಳು ಅವಶ್ಯಕವಾಗಿ ಮಾಡಲೇಬೇಕಾಗಿ ಉಳಿದುಕೊಳ್ಳುವದಾದರೂ ಸರ್ವಸಮ್ಮತವೊ? ಎಂದರೆ

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩ ॥**

(ಕರ್ಮ) ಕರ್ಮವೆಂಬುದೆಲ್ಲ (ದೋಷವತ್) ಮನುಷ್ಯನನ್ನು ಕಟ್ಟಿಗೊಳಪಡಿಸುವದರಿಂದ ದೋಷದಿಂದ ಕೂಡಿದ್ದು ಆದ್ದರಿಂದ (ತ್ಯಾಜ್ಯಂ) ಎಲ್ಲರೂ ಅದನ್ನು ಬಿಡತಕ್ಕದ್ದು-(ಇತಿ) ಹೀಗೆಂದು (ಏಕೇ) ಕೆಲವರು (ಮನೀಷಿಣಃ) ಪಂಡಿತರೆಂದು ಹೇಳಿಕೊಳ್ಳುವ ಸಾಂಖ್ಯರು (ಪ್ರಾಹುಃ) ಹೇಳುತ್ತಾರೆ. (ಅಪರೇ) ಮೀಮಾಂಸಕರಾದ ಇನ್ನು ಕೆಲವರು (ಯಜ್ಞದಾನತಪಃಕರ್ಮ) ಯಜ್ಞ, ದಾನ, ತಪಸ್ಸು-ಈ ಕರ್ಮಗಳು (ನ ತ್ಯಾಜ್ಯಂ) ಯಾರೂ ಬಿಡತಕ್ಕದ್ದಲ್ಲ-(ಇತಿ ಚ) ಎಂದೂ ಹೇಳುವರು

ಇವುಗಳಲ್ಲಿ ಯಾವ ಪಕ್ಷವನ್ನು ಹಿಡಿಯಬೇಕೆಂದರೆ.—

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪ ॥**

(ಭರತಸತ್ತಮ) ಭರತವಂಶದಲ್ಲಿ ಶ್ರೇಷ್ಠನಾದ ಅರ್ಜುನನೆ, ಕೇಳು ಸಂನ್ಯಾಸವೆಂಬ ಶಬ್ದಕ್ಕೂ ತ್ಯಾಗವೆಂಬ ಶಬ್ದಕ್ಕೂ ಒಂದೇ ಅರ್ಥವೆಂದು ಈಗ ತಾನೆ ಹೇಳಿದೆನಷ್ಟೆ (ತತ್ರ) ಆ (ತ್ಯಾಗೇ) ಸಂನ್ಯಾಸಾತ್ಮಕವಾದ ತ್ಯಾಗವೆಂಬ ಮಾತಿನ ಅರ್ಥದ ವಿಷಯದಲ್ಲಿ (ಮೇ) ನನ್ನ (ನಿಶ್ಚಯಂ) ಗೊತ್ತುವಳಿಯನ್ನು (ಶೃಣು) ಕೇಳು (ಪುರುಷವ್ಯಾಘ್ರ) ಪುರುಷಶ್ರೇಷ್ಠನಾದ ಅರ್ಜುನನೆ, ಕೇಳು ಇದರ ಮರ್ಮವು ಸಾಮಾನ್ಯರಿಗೆ ತಿಳಿಯತಕ್ಕದ್ದಲ್ಲ ಅದೇನೆಂದರೆ ಜ್ಞಾನಿಯು ಕರ್ಮಗಳನ್ನು ಮಾಡಿದರೂ ತಾನು ಅವುಗಳ ಕರ್ತನಲ್ಲವೆಂದು ತಿಳಿದಿರುವದರಿಂದ ಅವುಗಳನ್ನೆಲ್ಲ ಅವನು ಬಿಟ್ಟಂತಾಗುವದರಲ್ಲೇನೂ ವಿಶೇಷವಿಲ್ಲದಿದ್ದರೂ ಅಜ್ಞಾನಿಗಳು ಕರ್ಮಗಳನ್ನು ಬಿಡುವದರಲ್ಲಿ (ತ್ಯಾಗೋ ಹಿ) ಆ ಬಿಡುವಿಕೆಯಾದರೊ (ತ್ರಿವಿಧಃ) ಸಾತ್ತ್ವಿಕಾದಿಗುಣಭೇದಗಳಿಂದ ಮೂರು ಬಗೆಯಾಗಿ (ಸಂಪ್ರಕೀರ್ತಿತಃ) ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು.

ಆ ಗೊತ್ತುವಳಿಯೇನೆಂದರೆ —

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ * ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ † ॥ ೫ ॥**

(ಯಜ್ಞದಾನತಪಃಕರ್ಮ) ಯಜ್ಞ, ದಾನ, ತಪಸ್ಸು–ಎಂಬ ಈ ಕರ್ಮವು (ನ ತ್ಯಾಜ್ಯಂ) ಬಿಡತಕ್ಕದ್ದಲ್ಲ (ತತ್) ಅದು (ಕಾರ್ಯಮೇವ) ಮಾಡಲೇ ಬೇಕಾದ್ದು (ಯಜ್ಞಃ) ಯಜ್ಞವೂ (ದಾನಂ) ದಾನವೂ (ತಪಶ್ಚೈವ) ತಪಸ್ಸೂ ಕೂಡ (ಮನೀಷಿಣಾಮ್) ಫಲದ ಬಯಕೆಯನ್ನು ಮಾಡದೆ ಇರುವ ತಿಳಿವಳಿಕೆ ಯುಳ್ಳವರಿಗೆ (ಪಾವನಾನಿ) ಚಿತ್ತಶುದ್ಧಿಯನ್ನುಂಟುಮಾಡತಕ್ಕವುಗಳು

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥ ೬ ॥**

(ಪಾರ್ಥ) ಅರ್ಜುನನೆ, ಕೇಳು (ಏತಾನ್ಯಪಿ ತು) ಈ ಮೇಲೆ ಹೇಳಿದ ಯಜ್ಞ, ದಾನ, ತಪಸ್ಸು–ಎಂಬ (ಕರ್ಮಾಣಿ) ಕರ್ಮಗಳು (ಸಂಗಂ) ಇವುಗಳನ್ನು ನಾನು ಮಾಡುವವನೆಂಬ ಕರ್ತೃತ್ವದ ಸಂಬಂಧವನ್ನೂ (ಫಲಾನಿ ಚ) ಅವು ಗಳಿಂದಾಗುವ ಫಲಗಳ ಬಯಕೆಯನ್ನೂ (ತ್ಯಕ್ತ್ವಾ) ಬಿಟ್ಟು (ಕರ್ತವ್ಯಾನಿ) ಮಾಡತಕ್ಕವುಗಳು–(ಇತಿ) ಎಂದು (ಮೇ) ನನ್ನ (ಉತ್ತಮಂ) ಉತ್ಕೃಷ್ಟ ವಾದಂಥ (ನಿಶ್ಚಿತಂ) ನೆಲೆಗೆ ನಿಂತಂಥ (ಮತಂ) ಅಭಿಪ್ರಾಯವು

ಆದ್ದರಿಂದ ಹುಟ್ಟುಸಾವುಗಳ ಕೊಂಡಿಯನ್ನು ಕಳಚಿಕೊಳ್ಳಬೇಕೆನ್ನು ವವರು ತಿಳಿಯಬೇಕಾದ ಆ ತ್ಯಾಗದ ಮೂರು ಬಗೆಗಳು ಯಾವವೆಂದರೆ.—

---

* "ಯಜ್ಞೋ ದಾನಂ ತಪಃ ಕರ್ಮ" ಎಂದೂ ಪಾಠಾಂತರ ಅರ್ಥದಲ್ಲೇನೂ ವ್ಯತ್ಯಾಸವಿಲ್ಲ.

† "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ" ಈ ಪರಬ್ರಹ್ಮನನ್ನು ಬ್ರಾಹ್ಮಣರು ನಿತ್ಯವಾದ ವೇದಾಧ್ಯಯನದಿಂದಲೂ ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ತಿಳಿಯಲಪೇಕ್ಷಿಸುತ್ತಾರೆ.

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ ೭ ॥**

(ನಿಯತಸ್ಯ ತು) ಮಾಡಲೇಬೇಕೆಂದು ಶಾಸ್ತ್ರದಲ್ಲಿ ಹೇಳಿರುವಂಥ (ಕರ್ಮಣಃ) ಕರ್ಮಗಳ (ಸಂನ್ಯಾಸಃ) ಬಿಡುವಿಕೆಯು (ನೋಪಪದ್ಯತೇ) ಸಮಂಜಸವಾಗುವದಿಲ್ಲ ಮಾಡಲೇಬೇಕೆಂಬ ಕರ್ಮಗಳಿಗೆ ಬಿಡುವದೆಂಬ ಮಾತೇ ಹೊಂದುವದಿಲ್ಲವೆಂದರ್ಥ. (ಮೋಹಾತ್) ಮಾಡಲೇಬೇಕೆಂದು ಹೇಳಿರುವ ಆ ಕರ್ಮಗಳನ್ನು ಮಾಡದೆ ಇರಬಹುದೆಂಬ ತಪ್ಪುತಿಳಿವಳಿಕೆಯಿಂದ (ತಸ್ಯ) ಆ ನಿತ್ಯಕರ್ಮಗಳ (ಪರಿತ್ಯಾಗಃ) ಬಿಡುವಿಕೆಯು (ತಾಮಸಃ) ತಾಮಸವೆಂದು (ಪರಿಕೀರ್ತಿತಃ) ಹೇಳಲ್ಪಡುವದು

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥**

ಯಾವನು (ದುಃಖಮಿತ್ಯೇವ) ಈ ಕರ್ಮವನ್ನು ಮಾಡುವದು ಕಷ್ಟವೆಂಬುದರಿಂದಲೆ (ಯತ್) ಯಾವ (ಕರ್ಮ) ಕರ್ಮವನ್ನು (ಕಾಯಕ್ಲೇಶಭಯಾತ್) ಶರೀರಕ್ಕೆ ಆಯಾಸವಾಗುವದೆಂಬ ಅಂಜಿಕೆಯಿಂದ (ತ್ಯಜೇತ್) ಬಿಡುತ್ತಾನೊ (ಸಃ) ಅವನು (ರಾಜಸಂ) ರಜೋಗುಣದ ಸಂಬಂಧವಾದ (ತ್ಯಾಗಂ) ಆ ತ್ಯಾಗವನ್ನು (ಕೃತ್ವಾ) ಮಾಡಿದರೆ (ತ್ಯಾಗಫಲಂ) ಕರ್ಮವನ್ನು ಅಕರ್ಮದೃಷ್ಟಿಯಿಂದ ತ್ಯಾಗಮಾಡುವದರಿಂದ ಬರುವ ಫಲವಾದ ಮೋಕ್ಷವನ್ನು (ನೈವ ಲಭೇತ್) ಪಡೆಯುವದೇ ಇಲ್ಲ

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕುರುತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯ ॥**

(ಅರ್ಜುನ) ಅರ್ಜುನನೆ, ಕೇಳು ಯಾವನು (ನಿಯತಂ) ಮಾಡಲೇಬೇಕೆಂದು ಗೊತ್ತಾಗಿರುವಂಥ (ಯತ್) ಯಾವ (ಕರ್ಮ) ಕರ್ಮವನ್ನು (ಕಾರ್ಯಮಿತ್ಯೇವ) ಇದು ನನ್ನ ಕರ್ತವ್ಯವೆಂದೇ (ಸಂಗಂ) ನಾನು ಮಾಡುವೆನೆಂಬ ಅಭಿಮಾನವನ್ನೂ (ಫಲಂ ಚೈವ) ಫಲದ ಬಯಕೆಯನ್ನೂ ಕೂಡ

(ತ್ಯಕ್ತ್ವಾ) ಬಿಟ್ಟು (ಕುರುತೇ) ಮಾಡುತ್ತಾನೊ (ಸಃ) ಆ (ತ್ಯಾಗಃ) ಬಿಡುವಿಕೆಯು (ಸಾತ್ತ್ವಿಕಃ) ಸಾತ್ತ್ವಿಕವೆಂದು (ಮತಃ) ಅಭಿಪ್ರಾಯವು ಇಲ್ಲಿ ತಿಳಿಯಬೇಕಾದ ಮತ್ತೊಂದು ವಿಷಯವೇನೆಂದರೆ ತಾಮಸತ್ಯಾಗದಲ್ಲಿಯೂ ರಾಜಸತ್ಯಾಗದಲ್ಲಿಯೂ ಕರ್ಮವೇ ಬಿಟ್ಟುಹೋಗಿದೆ, ಸಾತ್ತ್ವಿಕತ್ಯಾಗದಲ್ಲಿ ಅಭಿಮಾನವೂ ಫಲಾಪೇಕ್ಷೆಯೂ ಮಾತ್ರ ಬಿಟ್ಟುಹೋಗಿದೆ ಹೀಗೆ ಭೇದವಿದ್ದರೂ ಬಿಟ್ಟುಹೋಗಿರುವಿಕೆಯು ಎರಡರಲ್ಲಿಯೂ ಸಾಮಾನ್ಯವೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು

ಈ ಸಾತ್ತ್ವಿಕತ್ಯಾಗದಿಂದ ಚಿತ್ತಶುದ್ಧಿಯಾಗಿ ಮನಸ್ಸು ಆತ್ಮವಿಚಾರದ ಕಡೆಗೆ ಹರಿದು ಅವನು ಎಂಥ ಒಳ್ಳೆ ಸ್ಥಿತಿಗೆ ಬರುವನೆಂದರೆ·—

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥**

(ತ್ಯಾಗೀ) ಸಾತ್ತ್ವಿಕತ್ಯಾಗಿಯು–ಎಂದರೆ ತಾನು ಮಾಡುವವನೆಂಬಭಿಮಾನವೂ ಇಂಥದ್ದೊಂದು ಫಲವಾಗಬೇಕೆಂಬ ಬಯಕೆಯೂ ಇಲ್ಲದೆ ತನ್ನ ಕರ್ತವ್ಯವೆಂದು ಮಾಡುತ್ತಿರುವವನು (ಸತ್ತ್ವಸಮಾವಿಷ್ಟಃ) ಮೂರು ದಿನದ ಬಾಳಿನವು ಯಾವವೆಂದೂ ಯಾವಾಗಲೂ ಇರುವದು ಯಾವದೆಂದೂ ವಿಂಗಡಿಸಿ ತಿಳಿಯುವ ಸತ್ತ್ವಗುಣದಿಂದ ತುಂಬಿ ತುಳುಕುವವನಾಗಿ (ಮೇಧಾವೀ) ಆದ್ದರಿಂದಲೇ ಆತ್ಮಸ್ವರೂಪವನ್ನರಿಯುವ ಬುದ್ಧಿಯುಳ್ಳವನಾಗಿ (ಛಿನ್ನ ಸಂಶಯಃ) ಆದ್ದರಿಂದಲೇ ಆತ್ಮಜ್ಞಾನದ ಹೊರತು ಇನ್ನೇನಾದರೂ ತನ್ನನ್ನು ಪಾರುಮಾಡುವದೆಂಬ ಸಂಶಯವಿಲ್ಲದವನಾಗಿ (ಅಕುಶಲಂ) ತನ್ನನ್ನು ಸಂಸಾರವೆಂಬ ಕೊರಕಲಿಗೆ ತಳ್ಳುವ (ಕರ್ಮ) ಕಾಮ್ಯಕರ್ಮವನ್ನು (ನ ದ್ವೇಷ್ಟಿ) ದ್ವೇಷಿಸುವದಿಲ್ಲ–ಎಂದರೆ ಇದು ತನಗೆ ಗಂಟುಬಿತ್ತೆಂದು ವ್ಯಥೆಗೊಂಡು ಏನಾದರೂ ಮಾಡಿ ಇದನ್ನು ದೂರಮಾಡಬೇಕೆನ್ನುವದಿಲ್ಲ. (ಕುಶಲೇ) ತನ್ನ ಚಿತ್ತಶುದ್ಧಿಯನ್ನು ಮಾಡಿಕೊಡುವಂಥ ನಿತ್ಯಕರ್ಮಗಳಲ್ಲಿ (ನಾನುಷಜ್ಜತೇ) ಅತಿ ಪ್ರೀತಿಯನ್ನು ಮಾಡುವದಿಲ್ಲ. ಏಕೆಂದರೆ ತನ್ನ ಸತ್ತ್ವಗುಣಪ್ರಭಾವದಿಂದ ತಾನು ಯಾವ ಕರ್ಮವನ್ನೂ ಮಾಡುವ ಕರ್ತನಲ್ಲವೆಂದು ತಿಳಿಯುವದರಿಂದ

ಅವನು ಸರ್ವಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ ಜ್ಞಾನನಿಷ್ಠೆಯಲ್ಲಿರುವವನಾಗಿರುವನು

ಯಾರು ತನಗಿರುವ ದೇಹಾಭಿಮಾನದಿಂದ ಆತ್ಮನ ಅಕರ್ತೃತ್ವವನ್ನರಿಯಲಾರರೊ ಅವರೇನು ಮಾಡಬೇಕೆಂದರೆ:—

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**

(ದೇಹಭೃತಾ) ದೇಹವನ್ನು ಧರಿಸಿಕೊಂಡಿರುವವನಿಂದ-ಎಂದರೆ ಆತ್ಮನ ಅಕರ್ತೃತ್ವಜ್ಞಾನವುಳ್ಳವರು ಕೂಡ ಎಲ್ಲರಂತೆ ದೇಹವನ್ನು ಧರಿಸಿಕೊಂಡಿರುವಂತೆ ಕಂಡರೂ ಅವರಿಗೆ ದೇಹಾಭಿಮಾನವಿರುವದಿಲ್ಲ ಹಾಗಿಲ್ಲದೆ ದೇಹಾತ್ಮಭಾವದ ಕಲೆಯುಳ್ಳವರಿಂದ-(ಕರ್ಮಾಣಿ) ಕರ್ಮಗಳನ್ನು (ಅಶೇಷತಃ) ಏನೂ ಉಳಿಯದಂತೆ (ತ್ಯಕ್ತುಂ) ಬಿಡುವದಕ್ಕೆ (ನ ಹಿ ಶಕ್ಯಂ) ಸಾಧ್ಯವೇ ಅಲ್ಲ. ದೇಹಕ್ಕೂ ಕರ್ಮಗಳಿಗೂ ಗಂಟು ಆದ್ದರಿಂದ ದೇಹವೇ ಆತ್ಮವೆಂಬ ಭಾವನೆ ಹೋಗುತ್ತಲೆ ಅದರ ಜೊತೆಯಲ್ಲಿಯೇ ಕರ್ತೃತ್ವವೂ ಕಾಲಿಗೆ ಬುದ್ಧಿಯನ್ನು ಹೇಳುತ್ತದೆ ದೇಹದಲ್ಲಿ ಆತ್ಮಭಾವವಿರುವವರೆಗೂ ಆತ್ಮನಿಗೆ ಕರ್ತೃತ್ವವು ಬಿಟ್ಟದ್ದಲ್ಲ ಆ ಕರ್ತೃತ್ವವೆಂಬ ವಿಷದ ವೇಗವನ್ನಿಳಿಸುವದಕ್ಕೇನು ಮಾಡಬೇಕೆಂದರೆ (ಯಸ್ತು) ಯಾವನು (ಕರ್ಮಫಲತ್ಯಾಗೀ) ಕರ್ಮವನ್ನು ಮಾಡಿದರೂ ಅದರ ಫಲದ ಬಯಕೆಯನ್ನು ಬಿಡುತ್ತಾನೊ (ಸಃ) ಅವನು (ತ್ಯಾಗೀ) ಕರ್ಮವನ್ನು ಮಾಡಿದರೂ ಮಾಡದವನು (ಇತಿ) ಎಂದು (ಅಭಿಧೀಯತೇ) ಹೇಳಿಸಿಕೊಳ್ಳುತ್ತಾನೆ. ಕರ್ಮವು ಫಲದ ಮೂಲಕವಾಗಿ ತಾನೆ ಬಂಧಕವನ್ನುಂಟುಮಾಡುವದು? ಆ ಫಲವನ್ನೆ ಬಯಸದೆ ಹೋದರೆ ಕರ್ಮವನ್ನು ಬಿಟ್ಟ ಫಲವೆ ದೊರೆತಂತಾಗುವದು.

ಕರ್ಮವನ್ನು ಅಕರ್ಮವೆಂದರಿಯುವದರ ಮೂಲಕ ಎಲ್ಲ ಕರ್ಮಗಳನ್ನೂ ಬಿಡುವದರ ಫಲಕ್ಕೂ ಬರೀ ಫಲದ ಅಪೇಕ್ಷೆಯನ್ನು ಬಿಡುವದರ ಫಲಕ್ಕೂ ವ್ಯತ್ಯಾಸವೇನೆಂದರೆ;—

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨ ॥**

(ಅತ್ಯಾಗಿನಾಂ) ಕರ್ಮವನ್ನು ಅಕರ್ಮದೃಷ್ಟಿಯಿಂದ ಪೂರ್ಣವಾಗಿ ಬಿಟ್ಟವರಾಗದೆ ಫಲದ ಬಯಕೆಯನ್ನು ಮಾತ್ರ ಬಿಟ್ಟವರಿಗೆ ಆ ಕರ್ಮದಿಂದ ಒಂದು ವಿಶೇಷ ಫಲವೇನೂ ಆಗದಿದ್ದರೂ (ಕರ್ಮಣಃ) ಪುಣ್ಯಪಾಪರೂಪವಾದ ಕರ್ಮದ (ಫಲಂ) ಫಲವು (ಪ್ರೇತ್ಯ) ಅವರು ಸತ್ತಮೇಲೆ (ಅನಿಷ್ಟಂ) ನರಕ ರೂಪವಾದ ಅಥವಾ ಪಶುಪಕ್ಷಿಯ ಹುಟ್ಟಿನ ರೂಪವಾದ ಬೇಡವೆನಿಸು ವಂಥದ್ದೂ (ಇಷ್ಟಂ) ದೇವತಾಜನ್ಮರೂಪವಾದ ಬೇಕೆನಿಸುವಂಥದ್ದೂ (ಮಿಶ್ರಂ ಚ) ಮನುಷ್ಯಜನ್ಮರೂಪವಾದ ನಡುವಣ ಮೆಟ್ಟಲಿನದು-ಹೀಗೆ (ತ್ರಿವಿಧಮ್) ಮೂರು ಬಗೆಯಾಗಿ (ಭವತಿ) ಆಗುತ್ತದೆ (ಸಂನ್ಯಾಸಿನಾಂ ತು) ಕರ್ಮವನ್ನು ಅಕರ್ಮವೆಂದು ತಿಳಿಯುತ್ತ ಕರ್ಮಗಳ ಸೋಂಕೇ ಇಲ್ಲದವರಿ ಗಾದರೊ (ನ ಕ್ವಿಚಿತ್) ಯಾವದೊಂದಿಷ್ಟು ಫಲವೂ ಗಂಟುಬೀಳುವದಿಲ್ಲ ಆದ್ದರಿಂದ ಅವರಿಗೆ ಮುಂದೆ ಯಾವ ಹುಟ್ಟಿನ ತೊಂದರೆಯೂ ಇಲ್ಲ

ಯಾವವುಗಳಲ್ಲಿ ತಾನೆಂಬ ಅಭಿಮಾನವನ್ನು ತಳೆದರೆ ಕರ್ಮದ ಸೋಂಕು ತಗಲುವದೊ ಅಂಥ ಕರ್ಮದ ಕಾರಣಗಳನ್ನು ಹೇಳುತ್ತೇನೆ, ಕೇಳು.—

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ । ***
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥ ೧೩ ॥**

(ಮಹಾಬಾಹೋ) ಅರ್ಜುನನೆ, ಕೇಳು. (ಸರ್ವಕರ್ಮಣಾಮ್) ಎಲ್ಲ ಬಗೆಯ ಕರ್ಮಗಳ (ಸಿದ್ಧಯೇ) ನೆರವೇರುವಿಕೆಗಾಗಿ (ಕೃತಾಂತೇ) ಯಾವ ದರಲ್ಲಿ ಕರ್ಮಗಳ ಫಲವೆಲ್ಲ ಅಡಕವಾಗಿ ಹೋಗುವದೋ ಅಂಥದ್ದಾದ (ಸಾಂಖ್ಯೇ) ತಿಳಿಯಬೇಕಾದ ಪದಾರ್ಥಗಳನ್ನೆಲ್ಲ ವಿಚಾರಕ್ಕೆ ತೆಗೆದುಕೊಂಡು ಹೇಳಿರುವ ವೇದಾಂತಜ್ಞಾನದಲ್ಲಿ (ಪ್ರೋಕ್ತಾನಿ) ಹೇಳಿರುವಂಥ (ಏತಾನಿ) ಈ

* "ಪಂಚೇಮಾನಿ" ಎಂದು ಪಾಠಾಂತರ, ಅರ್ಥವ್ಯತ್ಯಾಸವೇನೂ ಇಲ್ಲ.

ಮುಂದೆ ಹೇಳುವ (ಪಂಚ) ಐದು (ಕಾರಣಾನಿ) ಕರ್ಮಸಾಧನಗಳನ್ನು (ಮೇ) ನನ್ನ ಮಾತಿನಿಂದ (ನಿಬೋಧ) ತಿಳಿ

ಅವು ಯಾವವೆಂದರೆ —

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ ೧೪ ॥**

(ಅಧಿಷ್ಠಾನಂ) ಬಯಕೆ, ಹಗೆತನ, ಸುಖ, ದುಃಖ–ಮೊದಲಾದವುಗಳೆಲ್ಲ ತೋರಿಕೊಳ್ಳುವದಕ್ಕೆ ಆಶ್ರಯವಾಗಿರುವ ದೇಹವೂ (ತಥಾ) ಆ ಶರೀರ ದಂತೆಯೇ ಅನಾತ್ಮನಾಗಿ (ಕರ್ತಾ) ದೇಹದಲ್ಲಿ ನಾನು ಮಾಡುವವನೆಂದು ತೋರಿಕೊಳ್ಳುತ್ತ ತಾನೇ ಆತ್ಮವೆಂದು ಕಾಣುವಂತೆ 'ನಾನು, ನಾನು' ಎಂದು ಎದ್ದು ಕಾಣುವ ಅಹಂಕಾರವೂ (ಪೃಥಗ್ವಿಧಂ) ಬೇರೆಬೇರೆಯಾಗಿರುವ (ಕರಣಂ ಚ) ಮುಟ್ಟುವಿಕೆ, ನೋಡುವಿಕೆ, ಕೇಳುವಿಕೆ, ರುಚಿನೋಡುವಿಕೆ, ಮೂಸುವಿಕೆ–ಎಂಬ ಐದು ಜ್ಞಾನೇಂದ್ರಿಯಗಳು, ಮಾತು, ಕೈ, ಕಾಲು, ಪಾಯು, ಉಪಸ್ಥ–ಎಂಬ ಐದು ಕರ್ಮೇಂದ್ರಿಯಗಳು, ಇದೇನೋ ಒಂದು ಪದಾರ್ಥವೆಂದು ಸಾಮಾನ್ಯವಾಗಿ ತಿಳಿಯುವ ಮನಸ್ಸು, ಇದಿಂಥ ಪದಾರ್ಥ ವೆಂದು ಗೊತ್ತಾಗಿ ತಿಳಿಯುವ ಬುದ್ಧಿ–ಈ ಹನ್ನೆರಡು ಸಾಧನಗಳೂ (ವಿವಿಧಾಶ್ಚ) ಬೇರೆ ಬೇರೆ ಬಗೆಯಾದ (ಪೃಥಕ್ಚೇಷ್ಟಾಃ) ಪ್ರಾಣ, ಅಪಾನ–ಮೊದಲಾದ ವಾಯುಗಳ ಸಂಬಂಧವಾದ ಆಕಳಿಸುವದು, ಸೀನುವದು–ಮೊದಲಾದ ಕೆಲಸ ಗಳೂ (ಅತ್ರ) ಈ ಮೇಲೆ ಹೇಳಿದ ನಾಲ್ಕು ಬಗೆಗಳಿಗೂ ಸಾಮರ್ಥ್ಯವನ್ನು ಕೊಡುವ (ಪಂಚಮಂ) ಐದನೆಯದಾದ (ದೈವಂ ಚೈವ) ದೇಹದ ದೇವತೆಯಾದ ಪೃಥಿವಿಯೂ, ಅಹಂಕಾರಕ್ಕೆ ಅಭಿಮಾನಿಯಾದ ರುದ್ರನೂ ಅದರಂತೆಯೇ ಎಲ್ಲವುಗಳ ಅಭಿಮಾನದೇವತೆಗಳೂ–ಹೀಗೆ ಐದು ಕಾರಣಗಳಿರುವವು.

**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫ ॥**

(ನರಃ) ಮನುಷ್ಯನು (ಶರೀರವಾಙ್ಮನೋಭಿಃ) ಶರೀರದಿಂದಲೂ ಮಾತಿ ನಿಂದಲೂ ಮನಸ್ಸಿನಿಂದಲೂ (ನ್ಯಾಯ್ಯಂ ವಾ) ಶಾಸ್ತ್ರಕ್ಕೆ ಸಮ್ಮತವಾದದ್ದೊ

(ವಿಪರೀತಂ ವಾ) ಶಾಸ್ತ್ರಕ್ಕೆ ಸಮ್ಮತವಿಲ್ಲದ್ದೊ ಆದ (ಯತ್) ಯಾವ (ಕರ್ಮ) ಕರ್ಮವನ್ನು (ಪ್ರಾರಭತೇ) ಮೊದಲು ಮಾಡುತ್ತಾನೊ (ತಸ್ಯ) ಆ ಕರ್ಮಕ್ಕೆ (ಏತೇ) ಈ (ಪಂಚ) ಐದು (ಹೇತವಃ) ಕಾರಣಗಳು

ಹೀಗೆ ಕರ್ಮವೆಂಬುದು ಒಂದು ಬಗೆಯಿಂದ ನೋಡಿದರೆ ಐದು ಕಾರಣಗಳಿಂದಲೂ ಇನ್ನೊಂದು ಬಗೆಯಿಂದ ನೋಡಿದರೆ ಮೂರು ಅವಯವಗಳಿಂದಲೂ ನಡೆದರೂ—

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬ ॥**

(ತತ್ರ) ಈ ಕರ್ಮದ ವಿಷಯದಲ್ಲಿ (ಏವಂ ಸತಿ) ಹೀಗೆ ಐದು ಕಾರಣಗಳು ಮಾತ್ರ ಸಂಬಂಧಪಟ್ಟಿರುವಾಗ (ಯಃ) ಯಾವನು (ಅಕೃತಬುದ್ಧಿತ್ವಾತ್) ವೇದಾಂತಶಾಸ್ತ್ರದಿಂದಲೂ ಗುರುಗಳ ಉಪದೇಶದಿಂದಲೂ ಬುದ್ಧಿಗೆ ಸಂಸ್ಕಾರವಾಗದೆ ಇರುವದರ ಫಲವಾಗಿ (ಕೇವಲಂ ತು) ಶುದ್ಧನಾದ (ಆತ್ಮಾನಂ) ಆತ್ಮನನ್ನು (ಕರ್ತಾರಂ) ಮಾಡುವವನನ್ನಾಗಿ (ಪಶ್ಯತಿ) ನೋಡುತ್ತಾನೊ (ಸಃ) ಆ (ದುರ್ಮತಿಃ) ಕರ್ಮದ ಕಾರಣಗಳಾದ ದೇಹ ಮೊದಲಾದವುಗಳನ್ನೆ ತಾನೆಂದು ಭ್ರಮಿಸಿದವನಾಗಿ ಯಾವಾಗಲೂ ಹುಟ್ಟುಸಾವುಗಳಿಗೆ ಕಾರಣವಾದ ಕ್ಷುದ್ರವಾದ ಬುದ್ಧಿಯುಳ್ಳವನು (ನ ಪಶ್ಯತಿ) ನೋಡಿದ ಹಾಗಲ್ಲ ಕಣ್ಣಿನ ದೋಷವುಳ್ಳವನು ಇಬ್ಬರು ಚಂದ್ರರನ್ನು ನೋಡಿದರೆ ಅಥವಾ ಮೋಡಗಳು ಓಡಾಡುತ್ತಿರುವದನ್ನರಿಯದೆ ಚಂದ್ರನೇ ಓಡುತ್ತಿರುವನೆಂದರೆ ಅಥವಾ ತನ್ನ ವಾಹನವು ಓಡುತ್ತಿರುವದನ್ನು ನೋಡಿಯೂ ತಾನೇ ವೇಗವಾಗಿ ಹೋಗುತ್ತಿರುವೆನೆಂದು ತಿಳಿದರೆ ಹೇಗೆ ಅದು ಭ್ರಮೆಯೊ ಆತ್ಮನನ್ನು ಕರ್ಮದ ಕಾರಣನೆಂದು ತಿಳಿದದ್ದು ಹಾಗೆ ಭ್ರಮೆ

ಇನ್ನು ಚೆನ್ನಾಗಿ ನೋಡುವವನು ಯಾರೆಂದರೆ —

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಁಲ್ಲೋಕಾನ್ನ ಹಂತಿ ನ ನಿಬಧ್ಯತೇ ॥ ೧೭ ॥**

(ಯಸ್ಯ) ವೇದಾಂತಶಾಸ್ತ್ರದ ಅಧ್ಯಯನದಿಂದ ಮತ್ತು ಗುರುಗಳ ಉಪದೇಶದಿಂದ ಚಿತ್ತಶುದ್ಧಿಯಾದ ಯಾವನಿಗೆ (ಅಹಂಕೃತಃ) ಕರ್ಮದ ಸಾಧನ

ಗಳಾದ ದೇಹ ಮೊದಲಾದವುಗಳಲ್ಲಿ ನಾನೆಂಬ ಅಭಿಮಾನದ (ಭಾವಃ) ಮನಸ್ಸಿನ ಕಲ್ಪನೆಯು (ನ) ಇಲ್ಲವೋ ಮತ್ತು (ಯಸ್ಯ) ಯಾವನಿಗೆ (ಬುದ್ಧಿಃ) ಬುದ್ಧಿಯು (ನ ಲಿಪ್ಯತೇ) ಇಂಥ ಕರ್ಮವನ್ನು ನಾನು ಮಾಡಿದೆನೆಂಡೂ ಇಂಥ ಫಲವನ್ನು ನಾನು ಅನುಭವಿಸುವೆನೆಂದೂ ಕರ್ಮದ ಅಥವಾ ಕರ್ಮಫಲದ ಸೋಂಕನ್ನು ಹೊಂದುವದಿಲ್ಲವೊ, ಅವನು ನಿಜಸ್ಥಿತಿಯನ್ನು ನೋಡುವನು. (ಸಃ) ಅವನು (ಇಮಾನ್) ಈ (ಲೋಕಾನ್) ಎಲ್ಲ ಪ್ರಾಣಿಗಳನ್ನೂ (ಹತ್ವಾಪಿ) ಕೊಂದರೂ ಕೂಡ (ನ ಹಂತಿ) ಅವನು ಕೊಂದವನಾಗುವದಿಲ್ಲ. ಮತ್ತು (ನ ನಿಬಧ್ಯತೇ) ಅದರ ಪಲದ ಕಟ್ಟಿಗೆ ಬೀಳುವದಿಲ್ಲ. ಕರ್ಮದ ಕಾರಣಗಳಾದ ದೇಹ ಮೊದಲಾದವುಗಳನ್ನೆ ಆತ್ಮವೆಂದು ತಪ್ಪುತಿಳಿದುಕೊಂಡಿರುವವರಿಗೆ ಅವನು ಕೊಂದನೆಂದು ಅಭಿಪ್ರಾಯವಾಗುವದನ್ನು ಲಕ್ಷ್ಯದಲ್ಲಿಟ್ಟುಕೊಂಡು 'ಕೊಂದರೂ ಕೂಡ' ಎಂದು ಹೇಳಿದ್ದಾಗಿದೆಯೇ ಹೊರತು ಶುದ್ಧಾತ್ಮನನ್ನೇ ತಾನೆಂದು ತಿಳಿದಿರುವವನು ಯಾರನ್ನು ಕೊಲ್ಲುವದೂ ಇಲ್ಲ, ಯಾವ ಕಟ್ಟಿಗೂ ಒಳಪಡುವದೂ ಇಲ್ಲ ನೀನು ಗುರುಹಿರಿಯರನ್ನು ಕೊಂದ ಪಾಪವನ್ನು ಕಟ್ಟಿಕೊಳ್ಳಲಾರೆನೆನ್ನುತ್ತೀಯಲ್ಲ! ದೇಹ ಮೊದಲಾದವುಗಳನ್ನು ಆತ್ಮವೆಂದು ತಿಳಿದಿರುವವರೆಗೂ ನೀನು ಕೊಲ್ಲುವವನಾಗುತ್ತೀಯೇ ಹೊರತು ಶುದ್ಧಾತ್ಮನ ಜ್ಞಾನವನ್ನು ಪಡೆದುಕೊಂಡರೆ ಕೊಲ್ಲುವವನಾಗುವದೂ ಇಲ್ಲ, ಅದರ ಒಳ್ಳೆಯ ಅಥವಾ ಕೆಟ್ಟ ಫಲಗಳ ಬಿಗಿತಕ್ಕೆ ಸಿಕ್ಕುವದೂ ಇಲ್ಲ

ಈ ಅಭಿಪ್ರಾಯವನ್ನೆ ಹಿಗ್ಗಿಸಿ ತಿಳಿಸುವದಕ್ಕಾಗಿ ಕ್ರಿಯೆಯ ಸಾಧನಗಳು ಯಾವವೆಂಬುದನ್ನು ಇನ್ನೊಂದು ಬಗೆಯಿಂದ ತಿಳಿಸುತ್ತೇನೆ

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥**

(ಜ್ಞಾನಂ) ಸಾಮಾನ್ಯವಾಗಿ ಎಲ್ಲವನ್ನೂ ತಿಳಿಯುವ ತಿಳಿವಳಿಕೆ, (ಜ್ಞೇಯಂ) ಸಾಮಾನ್ಯವಾಗಿ ತಿಳಿಯಬರುವ ಎಲ್ಲ ವಸ್ತುಗಳು, (ಪರಿಜ್ಞಾತಾ) ನಾನು ಇದನ್ನು ತಿಳಿಯುವವನೆಂಬ ಜೀವ–ಹೀಗೆ (ಕರ್ಮಚೋದನಾ) ಕರ್ಮಕ್ಕೆ ಕೈ ಹಾಕುವಂತೆ ಪ್ರೇರಿಸುವವುಗಳು (ತ್ರಿವಿಧಾ) ಮೂರು ಬಗೆಯಾಗಿರುವವು. ಮನುಷ್ಯನು ಕರ್ಮಕ್ಕೆ ತೊಡಗುವಾಗ ಈ ಮೂರೂ ಸೇರಿ ಅವನನ್ನು ಪ್ರೇರಿಸು

ವವು ಇನ್ನು ಕರ್ಮವು ನಡೆಯುವದಕ್ಕೆ ಒಂದು ದೃಷ್ಟಿಯಿಂದ ದೇಹ, ಕರ್ತೃ-ಮೊದಲಾದ ಐದು ಸಾಧನಗಳನ್ನೂ ಇನ್ನೊಂದು ದೃಷ್ಟಿಯಿಂದ ದೇಹ, ಮಾತು, ಮನಸ್ಸು-ಎಂಬ ಮೂರು ಸಾಧನಗಳನ್ನೂ ಹೇಳಿದ್ದೆನಷ್ಟೆ ಅದನ್ನೆ ಬೇರೆ ಬಗೆಯಿಂದ ಮೂರು ಗುಂಪಾಗಿ ಮಾಡಿ ಹೇಳುತ್ತೇನೆ, ಕೇಳು. (ಕರಣಂ) ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಮನಸ್ಸು, ಬುದ್ಧಿ-ಇವು (ಕರ್ಮ) ಆಗುವ ಕೆಲಸ, (ಕರ್ತಾ) ಕರಣಗಳನ್ನು ಉಪಯೋಗಿಸಿ ಮಾಡುವ ಜೀವ-(ಇತಿ) ಹೀಗೆ (ಕರ್ಮಸಂಗ್ರಹಃ) ಕರ್ಮವನ್ನು ನೆರವೇರಿಸು ವವುಗಳು (ತ್ರಿವಿಧಃ) ಮೂರು ಬಗೆ.

ಈ ಆರನ್ನೂ ಕೂಡ ಇನ್ನೊಂದು ಬಗೆಯಾಗಿ ಸಂಗ್ರಹಮಾಡಿ ಹೇಳುತ್ತೇನೆ, ಕೇಳು —

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯ ॥**

(ಜ್ಞಾನಂ) ಸಾಮಾನ್ಯವಾಗಿ ಎಲ್ಲ ಕರ್ಮಗಳ ತಿಳಿವಳಿಕೆಯೂ (ಕರ್ಮ ಚ) ನಡೆಯುವ ಕೆಲಸವೂ (ಕರ್ತಾ ಚ) ಮಾಡುವವನೂ ಕೂಡ (ಗುಣಸಂಖ್ಯಾನೇ) ಗುಣಗಳ ವಿಚಾರದಲ್ಲಿ ಪ್ರಧಾನವಾದ ಕಪಿಲಋಷಿಗಳ ಸಾಂಖ್ಯಶಾಸ್ತ್ರದಲ್ಲಿ (ಗುಣಭೇದತಃ) ಸತ್ತ್ವರಜಸ್ತಮೋಗುಣಗಳ ಭೇದದಿಂದ (ತ್ರಿಧೈವ) ಮೂರು ವಿಧವಾಗಿಯೆ (ಪ್ರೋಚ್ಯತೇ) ಹೇಳಲ್ಪಡುತ್ತದೆ (ತಾನ್ಯಪಿ) ಜ್ಞಾನ ಮೊದಲಾದವುಗಳ ಆ ಭೇದಗಳನ್ನೂ ಕೂಡ (ಯಥಾವತ್) ಶಾಸ್ತ್ರದಲ್ಲಿ ಹೇಳಿರುವ ನ್ಯಾಯವಾದ ರೀತಿಯಲ್ಲಿ (ಶೃಣು) ಕೇಳು ಕಪಿಲಸಾಂಖ್ಯಶಾಸ್ತ್ರವು ಆತ್ಮತತ್ತ್ವದ ವಿಚಾರದಲ್ಲಿ ನಮಗೆ ಪ್ರಮಾಣವಲ್ಲದಿದ್ದರೂ ಗುಣಗಳ ವಿಚಾರದಲ್ಲಿ ಅವರು ಹೆಚ್ಚು ಮುಂದುವರಿದವರಾದ್ದರಿಂದ ಇಲ್ಲಿ ಅವರ ಗುಣಗ್ರಹಣವನ್ನು ಮಾಡುವದು ಯೋಗ್ಯವು

ಜ್ಞಾನದ ಮೂರು ಬಗೆಗಳೇನೆಂದರೆ —

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ ೨೦ ॥**

(ವಿಭಕ್ತೇಷು) ಬಿಡಿಬಿಡಿಯಾಗಿ ಬೇರೆ ಬೇರೆ ದೇಹವಿರುವ (ಸರ್ವ ಭೂತೇಷು) ಬ್ರಹ್ಮನನ್ನು ಮೊದಲುಗೊಂಡು ಮೋಟುಮರದವರೆಗಿನ ಎಲ್ಲ ವಸ್ತುಗಳಲ್ಲಿ (ಅವಿಭಕ್ತಂ) ಬಿಡಿಬಿಡಿಯಾಗದೆ ಅಖಂಡವಾಗಿರುವಂಥ ಮತ್ತು (ಅವ್ಯಯಂ) ತನ್ನ ಸ್ವರೂಪದಿಂದಾಗಲಿ ತನ್ನ ಧರ್ಮದಿಂದಾಗಲಿ ನಾಶವಾಗದೆ ಇರುವಂಥ (ಏಕಂ) ಆಕಾಶದಂತೆ ಒಂದೇ ಆಗಿರುವ (ಭಾವಂ) ವಸ್ತು (ಯೇನ) ಯಾವನಿಂದ (ಈಕ್ಷತೇ) ನೋಡಲಾಗುವದೊ (ತತ್) ಆ (ಜ್ಞಾನಂ) ಆತ್ಮ ನೊಬ್ಬನೇ ಎಂಬ ಜ್ಞಾನವನ್ನು (ಸಾತ್ತ್ವಿಕಂ) ಸಾತ್ತ್ವಿಕವೆಂದು (ವಿದ್ಧಿ) ತಿಳಿ

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥ ೨೧ ॥**

(ಸರ್ವೇಷು) ಎಲ್ಲ (ಭೂತೇಷು) ಪ್ರಾಣಿಗಳಲ್ಲಿ (ಪೃಥಗ್ವಿಧಾನ್) ಶರೀರ ಭೇದದಿಂದ ಬೇರೆ ಬೇರೆ ಬಗೆಗಳಾಗಿರುವಂಥ (ನಾನಾಭಾವಾನ್) ಬೇರೆ ಬೇರೆ ಅನೇಕರಾಗಿಗುವ ಆತ್ಮರನ್ನು (ಪೃಥಕ್ತ್ವೇನ ತು) ಬೇರೆ ಬೇರೆ ಶರೀರಕ್ಕೆ ಬೇರೆ ಬೇರೆ ಆತ್ಮರೆಂದೇ (ಯತ್) ಯಾವ (ಜ್ಞಾನಂ) ತಿಳಿವಳಿಕಯು (ವೇತ್ತಿ) ತಿಳಿಯುತ್ತದೋ (ತತ್) ಆ (ಜ್ಞಾನಂ) ತಿಳಿವಳಿಕೆಯು (ರಾಜಸಂ) ರಜೋ ಗುಣದಿಂದಾದದ್ದೆಂದು (ವಿದ್ಧಿ) ತಿಳಿ

**ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ ೨೨ ॥**

(ಯತ್ತು) ಮತ್ತೆ ಯಾವ ಜ್ಞಾನವು (ಏಕಸ್ಮಿನ್) ಅನೇಕಗಳಲ್ಲೊಂದಾಗಿ (ಕಾರ್ಯೇ) ಪಂಚಭೂತಗಳು ಸೇರಿ ಆಗಿರುವ ಕಾರ್ಯವಾದ ದೇಹದೊಳಗೊ ಅಥವಾ ಹೊರಗಣ ಬೊಂಬೆಯೊಳಗೊ (ಕೃತ್ಸ್ನವತ್) ಇದೇ ಪುಣ್ಯಸ್ವರೂಪ ವೆಂಬಂತೆ (ಸಕ್ತಂ) ಬಲವಾದ ಭಾವನೆಯುಳ್ಳದ್ದಾಗಿರುವದೊ–ಎಂದರೆ ದೇಹದ ಅಳತೆಯಷ್ಟೇ ಈಶ್ವರನೆಂದೂ ಅಥವಾ ಬೊಂಬೆಯಾಗಿರುವ ಕಲ್ಲೂ ಮರವೂ ಈಶ್ವರನೆಂದೂ ಇದಕ್ಕೆ ಹೊರತಾದ ಈಶ್ವರಸ್ವರೂಪವು ಬೇರೆ ಇಲ್ಲವೆಂದೂ ಪಟ್ಟು ಹಿಡಿದಿರೋಣವಾಗಿರುವದೊ, (ಅಹೈತುಕಂ) ತನಗೆ ಬೆಂಬಲವಾದ ಯುಕ್ತಿಗಳೇನೂ ಇಲ್ಲದ್ದಾಗಿರುವದೊ, (ಅತತ್ತ್ವಾರ್ಥವತ್) ಇದ್ದದ್ದನ್ನು ಇದ್ದ

ಹಾಗೆ ಹೇಳುವಂಥದ್ದಲ್ಲವಾಗಿರುವದೊ ಮತ್ತು (ಅಲ್ಪಂ ಚ) ಆದ್ದರಿಂದ ಕ್ಷುದ್ರ ವೆನಿಸುವದೊ (ತತ್) ಆ ಜ್ಞಾನವು (ತಾಮಸಂ) ತಮೋಗುಣದಿಂದಾದದ್ದೆಂದು (ಉದಾಹೃತಂ) ಹೇಳುವರು

ಕರ್ಮದ ಮೂರು ಬಗೆಗಳೇನೆಂದರೆ —

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ೨೩ ॥**

(ನಿಯತಂ) ಇಂಥದ್ದೊಂದು ಫಲಕ್ಕೆಂದು ಮಾಡತಕ್ಕದ್ದಾಗಿರದೆ ಕರ್ತವ್ಯ ಬುದ್ಧಿಯಿಂದ ಯಾವಾಗಲೂ ಮಾಡತಕ್ಕದ್ದಾಗಿಯೂ (ಸಂಗರಹಿತಂ) ಕರ್ತವ್ಯ ವೆಂದು ಮಾಡುವದರಲ್ಲಿಯೂ ನಾನು ಇದನ್ನು ಬಹು ಚೆನ್ನಾಗಿ ಮಾಡುವವ ನೆಂಬ ಅಭಿಮಾನವಿಲ್ಲದ್ದಾಗಿಯೂ (ಅರಾಗದ್ವೇಷತಃ) ತನಗೆ ಇದರಿಂದ ಒಂದು ಹೆಚ್ಚುಗಾರಿಕೆಯುಂಟಾದೀತೆಂಬ ಪ್ರೀತಿಯ ಅಥವಾ ಒಬ್ಬ ಹಗೆಯನ್ನು ಕೊಚ್ಚಿ ಕೆಡಹುವೆನೆಂಬ ಹಗೆತನದ ಸಂಬಂಧವಿಲ್ಲದೆ (ಅಫಲಪ್ರೇಪ್ಸುನಾ) ಫಲಕ್ಕ ಬಾಯಿನೀರು ಸುರಿಸದೆ ಇರುವವನಿಂದ (ಕೃತಮ್) ಮಾಡಿದ್ದಾಗಿಯೂ ಇರುವ (ಕರ್ಮ) ಕರ್ಮವು (ಯತ್) ಯಾವದೊ (ತತ್) ಅದು (ಸಾತ್ತ್ವಿಕಂ) ಸತ್ತ್ವ ಗುಣದಿಂದಾದದ್ದು (ಉಚ್ಯತೇ) ಎನಿಸುವದು

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ ೨೪ ॥**

(ವಾ ಪುನಃ) ಹಾಗಲ್ಲದೆ (ಯತ್ತು) ಮತ್ತೆ ಯಾವ (ಕರ್ಮ) ಕರ್ಮವು (ಕಾಮೇಪ್ಸುನಾ) ಸ್ವರ್ಗ ಮೊದಲಾದ ಏನಾದರೊಂದು ಫಲವನ್ನು ಬಯಸು ವವನಿಂದ (ಸಾಹಂಕಾರೇಣ) ನನ್ನಂತೆ ಚೆನ್ನಾಗಿ ಮಾಡುವವರು ಯಾರೂ ಇಲ್ಲವೆಂಬ ಗರ್ವದಿಂದ ಕೂಡಿ (ಬಹುಲಾಯಾಸಂ) ಬಹಳ ಕಷ್ಟವನ್ನು ಸಹಿಸಿ (ಕ್ರಿಯತೇ) ಮಾಡಲಾಗುವದೊ (ತತ್) ಅದು (ರಾಜಸಂ) ರಜೋಗುಣದಿಂ ದಾದದ್ದೆಂದು (ಉದಾಹೃತಮ್) ಹೇಳುವರು

**ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ ೨೫ ॥**

(ಅನುಬಂಧಂ) ಇದರಿಂದ ಮುಂದೇನಾದೀತೆಂಬುದನ್ನೂ (ಕ್ಷಯಂ) ತನ್ನ ಶಕ್ತಿ ಮತ್ತು ಹಣ–ಇವುಗಳೆಷ್ಟರ ಮಟ್ಟಿಗೆ ಹೋಗುವವೆಂಬುದನ್ನೂ (ಹಿಂಸಾಂ) ಇತರರಿಗೆಷ್ಟು ತೊಂದರೆಯಾದೀತೆಂಬುದನ್ನೂ (ಪೌರುಷಂ ಚ) ತನ್ನಿಂದಾಗ ಬಹುದಾದದ್ದೆ? ಅಲ್ಲವೆ? ಎಂಬುದನ್ನೂ (ಅನಪೇಕ್ಷ್ಯ) ಎಣಿಕೆಗೆ ತಂದು ಕೊಳ್ಳದೆ (ಮೋಹಾತ್) ಅವಿವೇಕದಿಂದ (ಯತ್) ಯಾವ (ಕರ್ಮ) ಕರ್ಮವು (ಆರಭ್ಯತೇ) ಕೈಹಾಕಲ್ಪಡುವದೊ (ತತ್) ಅದು (ತಾಮಸಂ) ತಮೋಗುಣ ದಿಂದಾದದ್ದು (ಉಚ್ಯತೇ) ಎನಿಸುವದು

ಕರ್ತೃವಿನ ಮೂರು ಬಗೆಗಳೇನೆಂದರೆ —

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬ ॥**

(ಮುಕ್ತಸಂಗಃ) ಫಲದ ಬಯಕೆಯನ್ನು ಬಿಟ್ಟಿರುವವನಾಗಿಯೂ (ಅನಹಂವಾದೀ) ನಾನು ಮಾಡುವವನೆಂಬಭಿಮಾನವನ್ನು ತಲೆಯ ಮೇಲೆ ಹೇರಿಕೊಳ್ಳದವನಾಗಿಯೂ (ಧೃತ್ಯುತ್ಸಾಹಸಮನ್ವಿತಃ) ಎಷ್ಟು ಎಡರುಗಳು ಬಂದರೂ ಹಿಡಿದ ಕಾರ್ಯವನ್ನು ಬಿಡುವದಿಲ್ಲವೆಂಬ ಹಿಡಿತದ ಪಟ್ಟಿನಿಂದಲೂ ಈ ಕಾರ್ಯವನ್ನು ಸಾಧಿಸುವ ಸಾಮರ್ಥ್ಯವು ತನಗುಂಟೆಂಬ ಉತ್ಸಾಹದಿಂದಲೂ ಮೂಡಿದವನಾಗಿಯೂ (ಸಿದ್ಧ್ಯಸಿದ್ಧ್ಯೋಃ) ಕರ್ಮವು ಫಲವನ್ನು ಕೊಟ್ಟರೂ ಕೊಡದಿದ್ದರೂ (ನಿರ್ವಿಕಾರಃ) ಮನಸ್ಸಿನ ಉಬ್ಬರವಿಳಿತಗಳಿಲ್ಲದಿರುವವ ನಾಗಿಯೂ ಇರುವ (ಕರ್ತಾ) ಕೆಲಸಗಾರನು (ಸಾತ್ತ್ವಿಕಃ) ಸಾತ್ತ್ವಿಕನು (ಉಚ್ಯತೇ) ಎನಿಸುವನು

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭ ॥**

(ರಾಗೀ) ಸ್ವರ್ಗ ಮೊದಲಾದ ಸುಖಗಳ ಮೇಲೆ ಪ್ರೇಮವುಳ್ಳವನಾ ಗಿಯೂ (ಕರ್ಮಫಲಪ್ರೇಪ್ಸುಃ) ತಾನು ಮಾಡುವ ಕರ್ಮವು ಸ್ವರ್ಗ ಮೊದಲಾದ ಯಾವದಾದರೂ ಫಲವನ್ನು ಕೊಡಬೇಕೆಂದು ಬಯಸುವವನಾಗಿಯೂ (ಲುಬ್ಧಃ) ಇನ್ನೊಬ್ಬರ ಹಣವನ್ನು ಎತ್ತಿಹಾಕಬೇಕೆಂಬ ಮನಸ್ಸುಳ್ಳವನಾಗಿಯೂ

(ಹಿಂಸಾತ್ಮಕಃ) ತನ್ನದೊಂದಭಿಪ್ರಾಯವನ್ನು ಕೊಟ್ಟು ಮತ್ತೊಬ್ಬನ ಬಾಳನ್ನು ಕೆಡಿಸುವವನಾಗಿಯೂ (ಅಶುಚಿಃ) ಶಾಸ್ತ್ರದಲ್ಲಿ ಹೇಳಿರುವಂತೆ ಮಣ್ಣು, ನೀರು-ಮೊದಲಾದವುಗಳಿಂದ ಶರೀರದ ಶುಚಿಯನ್ನೂ ಗೆಳೆತನ, ಕರುಣ-ಮೊದಲಾದವುಗಳಿಂದ ಮನಸ್ಸಿನ ಶುಚಿಯನ್ನೂ ಸಂಪಾದಿಸದೆ ಇರುವವನಾಗಿಯೂ (ಹರ್ಷ ಶೋಕಾನ್ವಿತಃ) ತನ್ನ ಕರ್ಮಕ್ಕೆ ಫಲವು ದೊರೆತಾಗ ಉಬ್ಬುತ್ತಲೂ ದೊರೆಯದೆ ಹೋದಾಗ ಕಣ್ಣೀರು ಸುರಿಸುತ್ತಲೂ ಇರುವವನಾಗಿಯೂ ಆಗಿರುವ (ಕರ್ತಾ) ಕೆಲಸಗಾರನು (ರಾಜಸಃ) ರಜೋಗುಣದವನೆಂದು (ಪರಿಕೀರ್ತಿತಃ) ಹೇಳುವರು

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ * ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥**

(ಅಯುಕ್ತಃ) ವಿಷಯಗಳ ಮೇಲೆಯೇ ಮನಸ್ಸು ತಗಲಿಕೊಂಡಿರುವದರಿಂದ ಕರ್ಮದ ಮೇಲೆ ತಕ್ಕಷ್ಟು ಎಚ್ಚರಿಕೆ ಇಲ್ಲದವನಾಗಿಯೂ (ಪ್ರಾಕೃತಃ) ಶಾಸ್ತ್ರಸಂಸ್ಕಾರವೇನೇನೂ, ಇಲ್ಲದವನಾಗಿಯೂ (ಸ್ತಬ್ಧಃ) ಗುರುಹಿರಿಯರ ಮುಂದೆ ಕೂಡ ಎದೆಯನ್ನುಬ್ಬಿಸಿಕೊಂಡು ನಡೆಯುವವನಾಗಿಯೂ (ಶಠಃ) ಇತರರನ್ನು ಮೋಸಗೊಳಿಸುವದಕ್ಕಾಗಿ ತನಗೆ ತಿಳಿದ ವಿಷಯವನ್ನು ಮರೆಮಾಜುವವನಾಗಿಯೂ (ನೈಷ್ಕೃತಿಕಃ) ತನ್ನ ತಿಳಿವಳಿಕೆಯನ್ನು ಬಚ್ಚಿಟ್ಟುಕೊಳ್ಳುವದರಿಂದ ಮತ್ತೊಬ್ಬರ ಬಾಳಿಗೆ ಸೀರು ತಿದ್ದುವವನಾಗಿಯೂ (ಅಲಸಃ) ಮೈಮುರಿದು ಕೆಲಸಮಾಡುವದಕ್ಕೆ ಹಿಂದೆಗೆಯುವವನಾಗಿಯೂ (ವಿಷಾದೀ) ವ್ಯಥೆಯಿಂದ ಯಾವಾಗಲೂ ಮುಖವನ್ನು ಜೋಲು ಹಾಕಿಕೊಂಡಿರುವವನಾಗಿಯೂ (ದೀರ್ಘಸೂತ್ರೀ ಚ) ಎಷ್ಟು ದಿನವಾದರೂ ಮುಗಿಸದೆ ಕಲಸವನ್ನು ಮುಂದಕ್ಕೆ ಹಾಕುತ್ತಿರುವವನಾಗಿಯೂ ಇರುವ (ಕರ್ತಾ) ಕಲಸಗಾರನು (ತಾಮಸಃ) ತಮೋಗುಣದವನು (ಉಚ್ಯತೇ) ಎನಿಸುವನು

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥**

---

* "ನೈಕೃತಿಕೋ" ಎಂದು ಪಾಠಾಂತರ.

(ಧನಂಜಯ) ಅರ್ಜುನನೆ, ಕೇಳು ಸತ್ತ್ವಗುಣದ ಕೆಲಸಗಾರನ ಲಕ್ಷಣವನ್ನು ಹೇಳುವಾಗ 'ಧೃತ್ಯುತ್ಸಾಹಸಮನ್ವಿತಃ' ಎಂಬ ಮಾತಿನಿಂದ ಹೇಳಿದ್ದೆನಷ್ಟೆ (ಗುಣತಃ) ಗುಣಗಳ ಭೇದದಿಂದ (ತ್ರಿವಿಧಂ) ಮೂರು ಬಗೆಯಾಗಿರುವ (ಬುದ್ಧೇಃ) ಬುದ್ಧಿಯ ಸ್ಥಿತಿಯ ಮತ್ತು (ಧೃತೇಶ್ಚೈವ) ಹಿಡಿದ ಪಟ್ಟಿನ (ಭೇದಂ) ಭೇದವನ್ನು ಕುರಿತು (ಪೃಥಕ್ತ್ವೇನ) ಬೇರೆ ಬೇರೆಯಾಗಿ (ಅಶೇಷೇಣ) ಪೂರ್ಣವಾಗಿ (ಪ್ರೋಚ್ಯಮಾನಂ) ಹೇಳುವದನ್ನು (ಶೃಣು) ಕೇಳು

ಬುದ್ಧಿಯ ಮೂರು ಬಗೆಗಳೇನೆಂದರೆ —

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥**
**॥ ೩೦ ॥**

(ಪಾರ್ಥ) ಅರ್ಜುನನೆ, ಕೇಳು (ಪ್ರವೃತ್ತಿಂ ಚ) ಮನುಷ್ಯನನ್ನು ಹುಟ್ಟುಸಾವುಗಳಿಗೊಳಪಡಿಸುವ ಕರ್ಮಗಳಲ್ಲಿ ಮುಂದುವರಿಯುವಿಕೆಯನ್ನೂ (ನಿವೃತ್ತಿಂ ಚ) ಕಟ್ಟುಗಳನ್ನೆಲ್ಲ ಕಳಚುವ ಅಕರ್ತ್ರಾತ್ಮಜ್ಞಾನದಿಂದ ಕರ್ಮಗಳಿಂದ ಹಿಮ್ಮೆಟ್ಟುವದನ್ನೂ (ಕಾರ್ಯಾಕಾರ್ಯೇ) ಮಾಡತಕ್ಕದ್ದೆಂದೂ ಮತ್ತು ಮಾಡಬಾರದ್ದೆಂದೂ ಶಾಸ್ತ್ರದಲ್ಲಿ ಹೇಳಿರುವವುಗಳ ವಿಚಾರವನ್ನೂ (ಭಯಾಭಯೇ) ಕರ್ಮಫಲಗಳಿಂದ ಆಗುವ ಗರ್ಭವಾಸ ಮೊದಲಾದ ಭಯದ ಮತ್ತು ಅಕರ್ತ್ರಾತ್ಮಜ್ಞಾನದಿಂದ ಕರ್ಮಗಳ ಸೋಂಕನ್ನು ಕಳೆದುಕೊಳ್ಳುವದರಿಂದ ಆಗುವ ಅಭಯದ ವಿಷಯವನ್ನೂ (ಬಂಧಂ) ದೇಹವನ್ನೆ ತಾನೆಂದು ತಿಳಿದು ತಾನು ಮಾಡುವವನೆಂಬಭಿಮಾನವನ್ನು ತಾಳುವದರಿಂದಾಗುವ ಬಂಧವನ್ನೂ (ಮೋಕ್ಷಂ ಚ) ಶುದ್ಧಾತ್ಮನು ಕರ್ಮದ ಸೋಂಕಿಲ್ಲದವನೆಂದು ತಿಳಿಯುವದರಿಂದ ಆಗುವ ಮೋಕ್ಷವನ್ನೂ (ಯಾ) ಯಾವ ಬುದ್ಧಿಯು (ವೇತ್ತಿ) ತಿಳಿಯುವದೊ (ಸಾ) ಆ (ಬುದ್ಧಿಃ) ಬುದ್ಧಿಯು (ಸಾತ್ತ್ವಿಕೀ) ಸತ್ತ್ವಗುಣಪ್ರಧಾನವಾದದ್ದು

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧ ॥**

(ಪಾರ್ಥ) ಅರ್ಜುನನೆ, ಕೇಳು (ಯಯಾ) ಯಾವ ಬುದ್ಧಿಯಿಂದ (ಧರ್ಮಂ) ಶಾಸ್ತ್ರದಲ್ಲಿ ಮಾಡಬೇಕೆಂದು ಹೇಳಿರುವ ಕರ್ಮಗಳನ್ನೂ (ಅಧರ್ಮಂ ಚ) ಮಾಡಬಾರದೆಂದು ಹೇಳಿರುವ ಕರ್ಮಗಳನ್ನೂ (ಕಾರ್ಯಂ ಚ) ಸಾಮಾನ್ಯವಾಗಿ ಮಾಡಬಹುದಾದವುಗಳನ್ನೂ (ಅಕಾರ್ಯಮೇವ ಚ) ಮಾಡಬಾರದವುಗಳನ್ನೂ (ಅಯಥಾವತ್) ಇದು ಹೀಗೆಯೇ ಸರಿಯೆಂಬ ನಿಶ್ಚಯವಿಲ್ಲದೆ (ಪ್ರಜಾನಾತಿ) ತಿಳಿಯುತ್ತಾನೊ (ಸಾ) ಆ (ಬುದ್ಧಿಃ) ಬುದ್ಧಿಯು (ರಾಜಸೀ) ರಜೋಗುಣ ಪ್ರಧಾನವಾದದ್ದು.

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ ೩೨ ॥**

(ಪಾರ್ಥ) ಅರ್ಜುನನೆ, ಕೇಳು (ಯಾ) ಯಾವ ಬುದ್ಧಿಯು (ತಮಸಾವೃತಾ) ಅಜ್ಞಾನವೆಂಬ ಕತ್ತಲೆಯ ಮುಸುಕಿನೊಳಗೆ ಸಿಕ್ಕಿರುವದಾಗಿ (ಅಧರ್ಮಂ) ಶಾಸ್ತ್ರದಲ್ಲಿ ಮಾಡಬಾರದೆಂದು ಹೇಳಿರುವ ಕರ್ಮವನ್ನು (ಧರ್ಮಂ) 'ಇದು ಮಾಡತಕ್ಕದ್ದೆಂದು ಹೇಳಿರುವ ಕರ್ಮವು' (ಇತಿ) ಎಂದೂ ಮತ್ತು (ಸರ್ವಾರ್ಥಾನ್) ಹೊರಗೆ ಕಾಣುವ ಎಲ್ಲ ಪದಾರ್ಥಗಳನ್ನೂ (ವಿಪರೀತಾಂಶ್ಚ) ಅದರ ವಿರುದ್ಧಧರ್ಮದವುಗಳನ್ನಾಗಿ–ಎಂದರೆ ಸುಖವನ್ನು ಕೊಡತಕ್ಕವುಗಳನ್ನು ದುಃಖವನ್ನು ಕೊಡತಕ್ಕವುಗಳನ್ನಾಗಿಯೂ ದುಃಖವನ್ನು ಕೊಡತಕ್ಕವುಗಳನ್ನು ಸುಖವನ್ನು ಕೊಡತಕ್ಕವುಗಳನ್ನಾಗಿಯೂ (ಮನ್ಯತೇ) ತಿಳಿಯುವದೋ (ಸಾ) ಆ (ಬುದ್ಧಿಃ) ಬುದ್ಧಿಯು (ತಾಮಸೀ) ತಮೋಗುಣಪ್ರಧಾನವಾದದ್ದು

ಧೃತಿಯ ಮೂರು ಬಗೆಗಳೇನೆಂದರೆ.—

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩ ॥**

(ಪಾರ್ಥ) ಅರ್ಜುನನೆ, ಕೇಳು (ಅವ್ಯಭಿಚಾರಿಣ್ಯಾ) ಹೊಯ್ದಾಡದಿರುವ (ಯೋಗೇನ) ಸಮಾಧಾನಚಿತ್ತದಿಂದ (ಯಯಾ) ಯಾವ (ಧೃತ್ಯಾ) ಹಿಡಿದ ಪಟ್ಟಿನಿಂದ (ಮನಃಪ್ರಾಣೇಂದ್ರಿಯಕ್ರಿಯಾಃ) ಮನಸ್ಸಿನ, ಪ್ರಾಣ ವಾಯುಗಳ ಮತ್ತು ಇಂದ್ರಿಯಗಳ ವ್ಯಾಪಾರವೆಲ್ಲ (ಧಾರಯತೇ) ಅಡ್ಡದಾರಿ

ಯಲ್ಲಿ ನುಗ್ಗದಂತೆ ಬಿಗಿಹಿಡಿದು ನಿಲ್ಲಿಸಿಕೊಳ್ಳಲಾಗುತ್ತದೊ (ಸಾ) ಆ (ಧೃತಿಃ) ಹಿಡಿದ ಪಟ್ಟು (ಸಾತ್ತ್ವಿಕೀ) ಸತ್ತ್ವಗುಣದ್ದೆನಿಸುವದು

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ ೩೪ ॥**

(ಅರ್ಜುನ) ಅರ್ಜುನನೆ, ಕೇಳು (ಯಯಾ ತು) ಯಾವ (ಧೃತ್ಯಾ) ಹಿಡಿದ ಪಟ್ಟಿನಿಂದ (ಧರ್ಮಕಾಮಾರ್ಥಾನ್) ಧರ್ಮ, ಅರ್ಥ, ಕಾಮ–ಈ ಮೂರನ್ನು (ಧಾರಯತೇ) ಇಟ್ಟುಕೊಳ್ಳುವನೊ–ಎಂದರೆ ಪರಲೋಕದಲ್ಲಿ ಸೌಖ್ಯವನ್ನು ಕೊಡುವ ಪುಣ್ಯವೆಂಬ ಧರ್ಮವೂ ಈ ಲೋಕದಲ್ಲಿ ಸುಖಕ್ಕೆ ಸಾಧನವಾದ ಹಣವೆಂಬ ಅರ್ಥವೂ ಆ ಹಣದಿಂದ ಬಗೆಬಗೆಯ ಸುಖಗಳನ್ನನು ಭವಿಸುವ ಕಾಮವೂ ಈ ಮೂರೇ ತಾನು ಸಂಪಾದಿಸತಕ್ಕವುಗಳೆಂದು ತಿಳಿದಿರು ವನೊ–ಮತ್ತು (ಪಾರ್ಥ) ಅರ್ಜುನನೆ, ಕೇಳು ಆ ಪುಣ್ಯಕ್ಕಾಗಿ ಮಾಡುವ ಕರ್ಮದಲ್ಲಾದರೂ (ಪ್ರಸಂಗೇನ) ಆಯಾ ಸಂದರ್ಭಕ್ಕೆ ತಕ್ಕ ಹಾಗೆ (ಫಲಾ ಕಾಂಕ್ಷೀ) ಫಲವನ್ನು ಬಯಸುವವನಾಗುತ್ತಾನೊ (ಸಾ) ಮೋಕ್ಷದ ಕಡೆಗೆ ಕಣ್ಣಿಲ್ಲದಿರುವ ಆ (ಧೃತಿಃ) ಹಿಡಿದ ಪಟ್ಟು (ರಾಜಸೀ) ರಾಜಸಗುಣದ್ದೆನಿಸುವದು

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ* ॥ ೩೫ ॥**

(ಪಾರ್ಥ) ಅರ್ಜುನನೆ, ಕೇಳು (ದುರ್ಮೇಧಾಃ) ತಿಳಿಗೇಡಿಯು (ಯಯಾ) ಯಾವ ಹಿಡಿದ ಪಟ್ಟಿನಿಂದ (ಸ್ವಪ್ನಂ) ನಿದ್ರೆಯನ್ನೂ (ಭಯಂ) ತನಗಾಗದ ವಸ್ತುಗಳಿಂದ ಹೆದರುವದನ್ನೂ (ಶೋಕಂ) ತನಗೆ ಬೇಕಾಗಿದ್ದದ್ದು ಹೋಯಿತೆಂದು ಗೋಳಾಡುವದನ್ನೂ (ವಿಷಾದಂ) ಮನೋರೋಗದಿಂದ ಮುಖವನ್ನು ಜೋಲುಹಾಕಿಕೊಂಡಿರುವದನ್ನೂ (ಮದಮೇವ ಚ) ವಿಷಯ ಸುಖಕ್ಕೆ ಮನಸ್ಸನ್ನು ಸೋತು ಅದರಿಂದ ಸೊಕ್ಕಿರುವದನ್ನೂ (ನ ವಿಮುಂಚತಿ) ಬಿಡುವದಿಲ್ಲವೊ–ಎಂದರೆ ತಾನು ಇವುಗಳಲ್ಲಿಯೇ ಇದ್ದು ಸಾಯತಕ್ಕದ್ದೆಂದು

---

* "ತಾಮಸೀ ಮತಾ" ಎಂದು ಪಾಠಾಂತರ

ಗೊತ್ತುಮಾಡಿಕೊಂಡಿರುವನೊ (ಸಾ) ಆ (ಧೃತಿಃ) ಹಿಡಿದ ಪಟ್ಟು (ತಾಮಸೀ) ತಮೋಗುಣದ್ದೆನಿಸುವದು

ಇವೆಲ್ಲವುಗಳ ಫಲವಾದ ಸುಖದ ಬಗೆಗಳನ್ನು ಹೇಳುತ್ತೇನೆ, ಕೇಳು.—

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ ೩೬ ॥**

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ ೩೭ ॥**

(ಭರತರ್ಷಭ) ಅರ್ಜುನನೆ, ಕೇಳು (ಇದಾನೀಂ) ಈಗ (ತ್ರಿವಿಧಂ) ಸಾತ್ತ್ವಿಕ ಮೊದಲಾದ ಮೂರು ಭೇದಗಳಾಗಿರುವ (ಸುಖಂತು) ಸುಖದ ವಿಷಯವನ್ನು (ಮೇ) ನನ್ನಿಂದ (ಶೃಣು) ಕೇಳು ಯಮ ನಿಯಮ-ಮೊದಲಾದ ಸಾಧನಸಂಪನ್ನನಾದ ಯಾವ ಅಧಿಕಾರಿಯು (ಯತ್ರ) ಸಮಾಧಿಯಿಂದಾಗುವಂಥ ಯಾವ ಸಾತ್ತ್ವಿಕಸುಖದಲ್ಲಿ (ಅಭ್ಯಾಸಾತ್) ಮೊದಮೊದಲು ರುಚಿಯು ಹತ್ತದಿದ್ದರೂ ಎಡೆಬಿಡದೆ ಅದನ್ನು ಸಾಧಿಸುವದರಿಂದ (ರಮತೇ) ಆನಂದದಿಂದ ಓಲಾಡುವನೊ, ಮತ್ತು (ದುಃಖಾಂತಂ ಚ) ವಿಷಯಸುಖದಂತೆ ಮುಂದಕ್ಕೆ ದುಃಖದ ಬುತ್ತಿಯಾಗಿರದೆ ದುಃಖದ ನಾಶವನ್ನು (ನಿಗಚ್ಛತಿ) ನಿಶ್ಚಯವಾಗಿ ಪಡೆಯುವನೊ, ಇದಲ್ಲದೆ (ಯತ್ತತ್) ಯಾವದು (ಅಗ್ರೇ) ಜ್ಞಾನವೈರಾಗ್ಯಗಳು ಮೈಗೂಡುವದಕ್ಕೆ ಮೊದಲು (ವಿಷಮಿವ) ಬಹಳ ಆಯಾಸಕರವಾಗುವದರಿಂದ ವಿಷದಂತೆ ಒಗ್ಗದಿರುವಂಥದ್ದಾಗಿಯೂ (ಪರಿಣಾಮೇ) ಜ್ಞಾನವೈರಾಗ್ಯಗಳು ಹಣ್ಣಾದ ಮೇಲೆ ಕೊನೆಗೆ (ಅಮೃತೋಪಮಮ್) ಅಮೃತಕ್ಕೆ ಸಮಾನವಾಗಿ ಹಿತಕರವಾಗಿಯೂ ಇರುವದೊ (ತತ್) ಆ (ಆತ್ಮಬುದ್ಧಿಪ್ರಸಾದಜಂ) ತನ್ನ ಮನಸ್ಸಿನ ಕಾಮ, ಕ್ರೋಧ-ಮೊದಲಾದ ಹೊಲಸೆಲ್ಲ ಹೋಗಿ ತಿಳಿಯಾದ್ದರಿಂದುಂಟಾದ ಅಥವಾ ಬುದ್ಧಿಯಲ್ಲಿ ಆತ್ಮಾನುಸಂಧಾನದ ಒಲಿಯುವಿಕೆಯಿಂದುಂಟಾದ (ಸುಖಂ) ಸುಖವು (ಸಾತ್ತ್ವಿಕಂ) ಸಾತ್ತ್ವಿಕವೆಂದು (ಪ್ರೋಕ್ತಂ) ಹೇಳುವರು.

**ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ ೩೮ ॥**

(ಯತ್) ಯಾವದು (ವಿಷಯೇಂದ್ರಿಯಸಂಯೋಗಾತ್) ವಿಷಯಗಳೂ ಇಂದ್ರಿಯಗಳೂ ಸೇರುವದರಿಂದಾಗುತ್ತದೊ (ತತ್) ಆ ಸುಖವು (ಅಗ್ರೇ) ಅದನ್ನು ಅನುಭವಿಸಿದ ಮೊದಮೊದಲು (ಅಮೃತೋಪಮಂ) ಅಮೃತಕ್ಕೆ ಸಮನಾಗಿ ಹಿತವಾಗಿರುವದು ಮತ್ತು (ಪರಿಣಾಮೇ) ಕೊನೆಕೊನೆಗೆ (ವಿಷಮಿವ) ಶಕ್ತಿ, ಉತ್ಸಾಹ, ನೆನಪು–ಮೊದಲಾದವುಗಳನ್ನೆಲ್ಲ ನುಂಗಿ ನೀರು ಕುಡಿಯುವದರಿಂದ ಮತ್ತು ಅಧರ್ಮದ ಫಲವಾಗಿ ನರಕಕ್ಕೆಳೆದೊಯ್ಯುವದರಿಂದ ವಿಷದಂತೆ ಇರುವದು (ತತ್) ಆ (ಸುಖಂ) ಸುಖವು (ರಾಜಸಂ) ರಾಜಸವೆಂದು (ಸ್ಮೃತಂ) ಹೇಳುವರು

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ ೩೯ ॥**

(ಯತ್) ಯಾವ (ಸುಖಂ) ಸುಖವು (ಅಗ್ರೇ ಚ) ಮೊದಮೊದಲೂ (ಅನುಬಂಧೇ ಚ) ಕೊನೆಕೊನೆಗೂ (ನಿದ್ರಾಲಸ್ಯಪ್ರಮಾದೋತ್ಥಂ) ನಿದ್ರೆ, ಸೋಮಾರಿತನ, ಮರೆವು–ಇವುಗಳಿಂದ ಹುಟ್ಟಿದ್ದಾಗಿ (ಆತ್ಮನಃ) ತನಗೆ (ಮೋಹನಂ) ಭ್ರಾಂತಿಯನ್ನುಂಟುಮಾಡುವದೊ (ತತ್) ಆ ಸುಖವು (ತಾಮಸಂ) ತಾಮಸವೆಂದು (ಉದಾಹೃತಮ್) ಹೇಳುವರು

ಮುಖ್ಯವಾಗಿ ನೆನಪಿಡಬೇಕಾದ್ದೇನೆಂದರೆ —

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦ ॥**

(ಪೃಥಿವ್ಯಾಂ ವಾ) ಈ ಭೂಮಿಯ ಮೇಲಾಗಲಿ (ಪುನಃ) ಅಥವಾ (ದಿವಿ) ಸ್ವರ್ಗಲೋಕದಲ್ಲಿ (ದೇವೇಷು ವಾ) ದೇವತೆಗಳಲ್ಲಾಗಲಿ (ಯತ್) ಯಾವ (ಸತ್ತ್ವಂ) ಪ್ರಾಣಿಯಾಗಲಿ, ವಸ್ತುವಾಗಲಿ (ಪ್ರಕೃತಿಜೈಃ) ಮಾಯಾಶಕ್ತಿಯಿಂದುಂಟಾದ ಅಥವಾ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳ ಫಲವಾಗಿ ಈಗ ಹುಟ್ಟಿದಾಗಿನಿಂದ ಕಾಣಿಸಿಕೊಂಡಿರುವ ಸ್ವಭಾವದಿಂದಾದ (ಏಭಿಃ) ಈ

(ತ್ರಿಭಿಃ) ಮೂರು (ಗುಣೈಃ) ಗುಣಗಳಿಂದ (ಮುಕ್ತಂ ಸ್ಯಾತ್) ಬಿಡಲ್ಪಟ್ಟದ್ದಾಗಿರುವದೊ (ತತ್) ಅದು (ನ ಅಸ್ತಿ) ಇಲ್ಲ

ಹೀಗೆ ಈ ಮೂರು ಗುಣಗಳಿಂದಾಗಿರುವ ಜಗದ್ರೂಪವಾದ ಸಂಸಾರವೆಂಬ ಅರಳೀಮರವನ್ನು ಕತ್ತರಿಸುವಂಥ ಅಸಂಗವೆಂಬ ಶಸ್ತ್ರವನ್ನು ಪಡೆಯುವದಕ್ಕೆ ಸಾಧನವಾಗಿ ಕೆಲವು ವಿಷಯಗಳನ್ನು ಹೇಳಿ ನನ್ನ ಉಪದೇಶವನ್ನು ಮುಗಿಸುತ್ತೇನೆ, ಕೇಳು —

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧ ॥**

(ಪರಂತಪ) ಅರ್ಜುನನೆ, ಕೇಳು (ಬ್ರಾಹ್ಮಣಕ್ಷತ್ರಿಯವಿಶಾಂ) ಬ್ರಾಹ್ಮಣ, ಕ್ಷತ್ರಿಯ, ವೈಶ್ಯ–ಎಂಬ ಮೂರು ಜಾತಿಗೂ (ಶೂದ್ರಾಣಾಂ ಚ) ಶೂದ್ರರಿಗೂ (ಸ್ವಭಾವಪ್ರಭವೈಃ) ಮಾಯಾಶಕ್ತಿಯಿಂದಾದಂಥ ಅಥವಾ ಹಿಂದಿನ ಕರ್ಮಗಳ ಫಲವಾಗಿ ಈಗ ಹುಟ್ಟಿದಂದಿನಿಂದ ಕಾಣಿಸಿಕೊಳ್ಳುವದಲ್ಲಿ ತೋರುವಂಥ (ಗುಣೈಃ) ಗುಣಗಳ ಸಮಾಲೋಚನೆಯಿಂದ–ಎಂದರೆ ಬ್ರಾಹ್ಮಣರಲ್ಲಿ ಕಾಣುವ ಸತ್ತ್ವಗುಣಕ್ಕೂ ಕ್ಷತ್ರಿಯರಲ್ಲಿ ಕಾಣುವ ಸತ್ತ್ವಮಿಶ್ರಿತ ರಜೋಗುಣಕ್ಕೂ ವೈಶ್ಯನಲ್ಲಿ ಕಾಣುವ ತಮೋಮಿಶ್ರಿತರಜೋಗುಣಕ್ಕೂ ಶೂದ್ರನಲ್ಲಿ ಕಾಣುವ ರಜೋಮಿಶ್ರಿತತಮೋಗುಣಕ್ಕೂ ಅನುಗುಣವಾಗಿ–(ಕರ್ಮಾಣಿ) ಅವರವರಿಗೆ ಬೇರೆ ಬೇರೆ ಕರ್ಮಗಳು (ಪ್ರವಿಭಕ್ತಾನಿ) ಬೇರೆ ಬೇರೆ ಗೊತ್ತಾಗಿರುವವು

ಆ ಕರ್ಮಗಳು ಯಾವವೆಂದರೆ.—

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥ ೪೨ ॥**

(ಶಮಃ) ಮನಸ್ಸನ್ನು ಹೊರಗೆ ಹರಿಯಗೊಡದಿರುವದು (ದಮಃ) ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳುವದು (ತಪಃ) ಹಿಂದೆ ಹೇಳಿರುವ ಶಾರೀರ, ವಾಙ್ಮಯ, ಮಾನಸ–ಎಂಬ ಮೂರು ಬಗೆಯ ತಪಸ್ಸುಗಳು (ಶೌಚಂ)

ಮಣ್ಣು, ನೀರು–ಇವುಗಳಿಂದ ದೇಹವನ್ನು ತೊಳೆಯುವದು, ಬಯಕೆ, ಹಗೆತನ–ಇವುಗಳನ್ನು ಕಳೆದು ಮನಸ್ಸನ್ನು ಶುದ್ಧಿಮಾಡುವದು (ಕ್ಷಾಂತಿಃ) ಇತರರು ಬೈದರೂ ಹೊಡೆದರೂ ಮನಸ್ಸು ತಳಮಳಗೊಳ್ಳದಿರುವದು (ಅರ್ಜವ ಮೇವ ಚ) ಒಳಗೊಂದು ಹೊರಗೊಂದು ಇಲ್ಲದಿರುವದು (ಜ್ಞಾನಂ) ವೇದದ ಅರ್ಥವನ್ನು ತಿಳಿಯುವದು (ವಿಜ್ಞಾನಂ) ಆತ್ಮನೊಬ್ಬನೆ ಎಂಬ ಅನುಭವ (ಆಸ್ತಿಕ್ಯಂ) ಹಿಂದೆ ಹೇಳಿದ ಸಾತ್ತ್ವಿಕಶ್ರದ್ಧೆ–ಇವು (ಸ್ವಭಾವಜಂ) ಸತ್ತ್ವಗುಣದ ಸ್ವಭಾವಕ್ಕನುಗುಣವಾದ (ಬ್ರಹ್ಮಕರ್ಮ) ಬ್ರಾಹ್ಮಣನು ಮಾಡುವ ಕೆಲಸಗಳು

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩ ॥**

(ಶೌರ್ಯಂ) ಒಳ್ಳೆ ಬಲಶಾಲಿಗಳ ಮುಂದೆ ಕೂಡ ಎದೆಗೊಟ್ಟು ನಿಲ್ಲುವಂಥ ವಿಕ್ರಮವು (ತೇಜಃ) ಹಗೆಗೆ ಸೋಲದಿರುವ ಕೆಚ್ಚು (ಧೃತಿಃ) ಎಂಥ ವಿಪತ್ತು ಬಂದರೂ ದೇಹೇಂದ್ರಿಯಗಳು ಕಳವಳವನ್ನು ಪಡೆಯದಿರುವದು (ದಾಕ್ಷ್ಯಂ) ಅಕಸ್ಮಾತ್ತಾಗಿ ಒದಗಿದ ಕೆಲಸದಲ್ಲಿಯೂ ಗಾಬರಿಗೊಳ್ಳದೆ ಮುಂದುವರಿಯುವ ಸಾಮರ್ಥ್ಯ (ಯುದ್ಧೇ) ಯುದ್ಧದಲ್ಲಿ (ಅಪಲಾಯನಂ ಚಾಪಿ) ತಲೇ ತಪ್ಪಿಸಿ ಕೊಂಡು ಓಡದೇ ಇರುವದು (ದಾನಂ) ಹಣ, ಬಂಗಾರ, ಅನ್ನ–ಮೊದಲಾದವು ಗಳನ್ನು ಉದಾರ ಮನಸ್ಸಿನಿಂದ ಯೋಗ್ಯರಿಗೆ ಕೊಟ್ಟುಬಿಡುವದು (ಈಶ್ವರ ಭಾವಶ್ಚ) ಸೇವಕರಲ್ಲಿ ತನ್ನ ಅಧಿಕಾರವನ್ನು ತೋರಿಸುವದು–ಇವು (ಸ್ವಭಾವಜಂ) ಸತ್ತ್ವಮಿಶ್ರಿತರಜೋಗುಣದ ಸ್ವಭಾವಕ್ಕನುಗುಣವಾದ (ಕ್ಷಾತ್ರಂ) ಕ್ಷತ್ರಿಯರು ಮಾಡುವ (ಕರ್ಮ) ಕೆಲಸಗಳು

**ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪ ॥**

(ಕೃಷಿಗೌರಕ್ಷ್ಯವಾಣಿಜ್ಯಂ) ವ್ಯವಸಾಯ, ಪಶುಪಾಲನೆ, ವ್ಯಾಪಾರ–ಇವು (ಸ್ವಭಾವಜಮ್) ತಮೋಮಿಶ್ರಿತರಜೋಗುಣದ ಸ್ವಭಾವಕ್ಕನುಗುಣವಾದ (ವೈಶ್ಯಕರ್ಮ) ವೈಶ್ಯರು ಮಾಡುವ ಕೆಲಸಗಳು. (ಪರಿಚರ್ಯಾತ್ಮಕಂ)

ಸೇವಾವೃತ್ತಿಯ (ಕರ್ಮ) ಕರ್ಮವು (ಶೂದ್ರಸ್ಯಾಪಿ) ಶೂದ್ರನಿಗೆ (ಸ್ವಭಾವಜಂ) ರಜೋಮಿಶ್ರಿತತಮೋಗುಣಕ್ಕೆ ಅನುಗುಣವಾದದ್ದು

ಹೀಗೆ ತಮ್ಮ ತಮ್ಮ ಕರ್ಮವನ್ನು ತಾವು ನಡೆಸುವದರಿಂದ ಸತ್ತ ಮೇಲೆ ಸ್ವರ್ಗವೂ ಅದು ಮುಗಿದ ಮೇಲೆ ತಮ್ಮ ಕರ್ಮಕ್ಕನುಗುಣವಾದ ಆಯುಸ್ಸು, ಜ್ಞಾನ, ಹಣ, ಸುಖ– ಮೊದಲಾದವುಗಳಿಂದ ಕೂಡಿದ ಜನ್ಮವೂ ಆಗುವದಲ್ಲದೆ—

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫ ॥**

(ಸ್ವೇ ಸ್ವೇ) ತನ್ನ ತನ್ನ (ಕರ್ಮಣಿ) ಕರ್ಮದಲ್ಲಿ (ಅಭಿರತಃ) ನಿರತನಾದಂಥ (ನರಃ) ಮನುಷ್ಯನು (ಸಂಸಿದ್ಧಿಂ) ಚಿತ್ತಶುದ್ಧಿಯನ್ನು ಪಡೆಯುವದರ ಮೂಲಕ ಜ್ಞಾನನಿಷ್ಠೆಯ ಯೋಗ್ಯತೆಯನ್ನು (ಲಭತೇ) ಹೊಂದುತ್ತಾನೆ ಕರ್ಮವನ್ನು ಮಾಡಿದ ಮಾತ್ರದಿಂದಲೇ ಆ ಯೋಗ್ಯತೆಯುಂಟಾಗುವದೊ? ಎಂದರೆ (ಸ್ವಕರ್ಮನಿರತಃ) ತನ್ನ ತನ್ನ ಕರ್ಮದಲ್ಲಿ ನಿರತನಾದವನು (ಸಿದ್ಧಿಂ) ಜ್ಞಾನನಿಷ್ಠೆಯ ಯೋಗ್ಯತೆಯನ್ನು (ಯಥಾ) ಯಾವ ಪ್ರಕಾರವಾಗಿ (ವಿಂದತಿ) ಹೊಂದುತ್ತಾನೊ (ತತ್) ಅದನ್ನು (ಶೃಣು) ಕೇಳು

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬ ॥**

(ಯತಃ) ಯಾರಿಂದ (ಭೂತಾನಾಂ) ಪ್ರಾಣಿಗಳ ಮತ್ತು ಸಮಸ್ತ ವಸ್ತುಗಳ (ಪ್ರವೃತ್ತಿಃ) ಸೃಷ್ಟಿಯಾಗಿದೆಯೊ (ಯೇನ) ಯಾರಿಂದ (ಇದಂ) ಈ (ಸರ್ವಂ) ಎಲ್ಲವೂ (ತತಂ) ವ್ಯಾಪಿಸಲ್ಪಟ್ಟಿರುವದೋ (ತಂ) ಆ ಪರಮೇಶ್ವರನನ್ನು (ಸ್ವಕರ್ಮಣಾ) ತನ್ನ ಕರ್ಮದಿಂದ (ಅಭ್ಯರ್ಚ್ಯ) ಪೂಜೆಮಾಡಿ–ಎಂದರೆ ತನ್ನ ಕರ್ಮವನ್ನು ಸಮರ್ಪಣೆಮಾಡಿ (ಮಾನವಃ) ಮನುಷ್ಯನು (ಸಿದ್ಧಿಂ) ಜ್ಞಾನನಿಷ್ಠೆಯ ಯೋಗ್ಯತೆಯನ್ನು (ವಿಂದತಿ) ಹೊಂದುತ್ತಾನೆ

---

* "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಯಾವನಿಂದ ಈ ಭೂತಗಳು ಹುಟ್ಟುವವೊ.—ಶ್ರು.

ಆದ್ದರಿಂದ:—

**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭ ॥**

(ಸ್ವಧರ್ಮಃ) ತನ್ನ ಸ್ವಭಾವಕ್ಕನುಗುಣವಾಗಿ ಗೊತ್ತಾಗಿರುವ ಕರ್ಮವು (ವಿಗುಣಃ) ಏನಾದರೊಂದು ಗುಣದ ಕೊರತೆಯುಳ್ಳದ್ದಾಗಿ ಕಂಡರೂ (ಸ್ವನುಷ್ಠಿತಾತ್) ಬಹಳ ಚೆನ್ನಾಗಿ ನಡೆಸಿದಂಥ (ಪರಧರ್ಮಾತ್) ಪರಧರ್ಮಕ್ಕಿಂತಲೂ–ಎಂದರೆ ಮತ್ತೊಬ್ಬನ ಸ್ವಭಾವಕ್ಕನುಗುಣವಾಗಿ ಗೊತ್ತಾಗಿರುವ ಕರ್ಮಕ್ಕಿಂತಲೂ–(ಶ್ರೇಯಾನ್) ಮೇಲಾದುದು ಏಕೆಂದರೆ (ಸ್ವಭಾವ ನಿಯತಃ) ತನ್ನ ಸ್ವಭಾವಕ್ಕನುಗುಣವಾಗಿ ಗೊತ್ತಾಗಿರುವಂಥ (ಕರ್ಮ) ಕರ್ಮವನ್ನು, ಅದರಲ್ಲಿ ಒಂದು ಪಕ್ಷ ದೋಷವು ಕಂಡರೂ (ಕುರ್ವನ್) ಅದನ್ನು ಬಿಡದೆ ಮಾಡಿದ ಮನುಷ್ಯನು, ವಿಷದಲ್ಲಿ ಹುಟ್ಟಿದ ಪ್ರಾಣಿಯು ವಿಷದಿಂದ ಹಾನಿಯನ್ನು ಪಡೆಯದಿರುವಂತೆ (ಕಿಲ್ಬಿಷಂ) ಪಾಪವನ್ನು (ನ ಆಪ್ನೋತಿ) ಪಡೆಯುವದಿಲ್ಲ ಆದ್ದರಿಂದ ನಿನಗೆ ಸ್ವಧರ್ಮವಾದ ಯುದ್ಧವು ಹಿಂಸಾಯುಕ್ತವಾಗಿ ಕಂಡರೂ ಅದು ಪರಧರ್ಮವಾದ ಭಿಕ್ಷಾಜೀವನಕ್ಕಿಂತ ಮೇಲು

ದೋಷದಿಂದ ಕೂಡಿದ್ದೆಂದು ತಿಳಿದ ಕರ್ಮವನ್ನೇಕೆ ಮಾಡಬೇಕೆಂದರೆ :–

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮ ॥**

(ಕೌಂತೇಯ) ಅರ್ಜುನನೆ, ಕೇಳು. (ಸಹಜಂ) ತನ್ನ ಹುಟ್ಟುಗುಣಕ್ಕೆ ಅನುಗುಣವಾದಂಥ (ಕರ್ಮ) ಕರ್ಮವು (ಸದೋಷಮಪಿ) ದೋಷದಿಂದ ಕೂಡಿದ್ದಾದರೂ (ನ ತ್ಯಜೇತ್) ಬಿಡಬಾರದು (ಹಿ) ಏಕೆಂದರೆ (ಅಗ್ನಿಃ) ಅಗ್ನಿಯು (ಧೂಮೇನ ಇವ) ಹೊಗೆಯಿಂದ ಮುಸುಕಿರುವಂತೆ (ಸರ್ವಾರಂಭಾಃ) ಎಲ್ಲ ಉದ್ಯೋಗಗಳೂ (ದೋಷೇಣ) ತ್ರಿಗುಣಾತ್ಮಕವಾದದ್ದರಿಂದ ಏನಾದರೊಂದು ದೋಷದಿಂದ (ಆವೃತಾಃ) ಮುಸುಕುಹಾಕಲ್ಪಟ್ಟವುಗಳಾಗಿವೆ.

ಆದ್ದರಿಂದ ತನ್ನ ತನ್ನ ಕರ್ಮವನ್ನು ತಾನು ಈಶ್ವರಪ್ರೀತಿಗಾಗಿ ಮಾಡಿದ್ದರಿಂದಾಗುವ ಫಲವೇನೆಂದರೆ —

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥ ೪೯ ॥**

(ಸರ್ವತ್ರ) ಹೆಂಡತಿ, ಮಕ್ಕಳು–ಮೊದಲಾದ ಹೊರಗಣ ಸುಖಸಾಧನಗಳಲ್ಲೆಲ್ಲ (ಅಸಕ್ತಬುದ್ಧಿಃ) ಅತಿಮಮತೆಯನ್ನು ಬಿಟ್ಟ ಮನಸ್ಸಿನವನಾಗಿಯೂ (ಜಿತಾತ್ಮಾ) ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡಿರುವವನಾಗಿಯೂ (ವಿಗತಸ್ಪೃಹಃ) ದೇಹಪೋಷಣೆಗೆಂದು ಮತ್ತೇನನ್ನೂ ಬಯಸದಿರುವವನಾಗಿಯೂ ಇರುವ ಜ್ಞಾನಿಯು (ಸಂನ್ಯಾಸೇನ) ಆತ್ಮನಿಗೆ ಯಾವ ಕರ್ಮಗಳ ಸಂಬಂಧವೂ ಇಲ್ಲವೆಂಬ ಜ್ಞಾನದ ಮೂಲಕ ಕರ್ಮಗಳನ್ನೆಲ್ಲ ದೂರಮಾಡಿಕೊಳ್ಳುವದರಿಂದ (ಪರಮಾಂ) ಕರ್ಮಫಲಗಳೆಲ್ಲಕ್ಕಿಂತ ಅತ್ಯಂತ ಉತ್ಕೃಷ್ಟವಾದಂಥ (ನೈಷ್ಕರ್ಮ್ಯಸಿದ್ಧಿಂ) ಕರ್ಮಗಳ ಸೋಂಕಿಲ್ಲದ ಆತ್ಮಸ್ಥಿತಿಯಲ್ಲಿರುವಿಕೆಯನ್ನು (ಅಧಿಗಚ್ಛತಿ) ಹೊಂದುತ್ತಾನೆ

ಆದ್ದರಿಂದ ಈಶ್ವರಾರ್ಪಣ ಬುದ್ಧಿಯಿಂದ ಸ್ವಧರ್ಮವನ್ನು ಮಾಡಿ ಜ್ಞಾನನಿಷ್ಠಾಯೋಗ್ಯತೆಯನ್ನು ಪಡೆಯಬೇಕಲ್ಲದೆ —

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥**

(ಕೌಂತೇಯ) ಅರ್ಜುನನೆ, ಕೇಳು (ಸಿದ್ಧಿಂ) ಜ್ಞಾನನಿಷ್ಠೆಗೆ ಬೇಕಾದ ಯೋಗ್ಯತೆಯನ್ನು (ಪ್ರಾಪ್ತಃ) ಪಡೆದವನು (ಯಾ) ಯಾವದು (ಜ್ಞಾನಸ್ಯ) ಜ್ಞಾನದ (ಪರಾ) ಹೆಚ್ಚಿನ (ನಿಷ್ಠಾ) ನಿಷ್ಠೆಯೊ ಅಂಥ (ಬ್ರಹ್ಮ) ಬ್ರಹ್ಮವಸ್ತುವನ್ನು (ಯಥಾ) ಯಾವ ಪ್ರಕಾರವಾಗಿ (ಆಪ್ನೋತಿ) ಪಡೆಯುತ್ತಾನೊ (ತಥಾ) ಆ ಪ್ರಕಾರವನ್ನು (ಸಮಾಸೇ ನೈವ) ಸಂಕ್ಷೇಪವಾಗಿಯೇ (ಮೇ) ನನ್ನಿಂದ (ನಿಬೋಧ) ಗೊತ್ತುಮಾಡಿಕೊ–ಎಂದರೆ ಹೇಳುತ್ತೇನೆ, ಕೇಳು.

ಆ ಜ್ಞಾನನಿಷ್ಠೆಯನ್ನು ಹೇಗೆ ಸಂಪಾದಿಸಬೇಕೆಂದರೆ:—

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥**

(ವಿಶುದ್ಧಯಾ) ವಂಚನೆಯಿಲ್ಲದಿರುವಂಥ (ಬುದ್ಧ್ಯಾ) ಬುದ್ಧಿಯಿಂದ (ಯುಕ್ತಃ) ಕೂಡಿದವನಾಗಿ (ಧೃತ್ಯಾ) ಹಿಡಿದ ಪಟ್ಟಿನಿಂದ (ಆತ್ಮಾನಂ) ದೇಹ, ಇಂದ್ರಿಯ–ಮೊದಲಾದವುಗಳನ್ನು (ನಿಯಮ್ಯ ಚ) ಹಿಡಿತದಲ್ಲಿಟ್ಟುಕೊಂಡು (ಶಬ್ದಾದೀನ್) ಶಬ್ದ, ಸ್ಪರ್ಶ–ಮೊದಲಾದ (ವಿಷಯಾನ್) ಹೊರಗಣ ವಸ್ತುಗಳನ್ನೆಲ್ಲ (ತ್ಯಕ್ತ್ವಾ) ತಾನು ಬದುಕಿರುವದಕ್ಕೆಷ್ಟು ಬೇಕೊ ಅಷ್ಟರ ಹೊರತು ಹೆಚ್ಚಿನದನ್ನೆಲ್ಲ ಬಿಟ್ಟು (ರಾಗದ್ವೇಷೌ) ಬದುಕಿರುವದಕ್ಕುಪಯೋಗವಾಗುವದಕ್ಕೆ ದೊರೆತದ್ದರಲ್ಲಾದರೂ ಹೆಚ್ಚು ರುಚಿಯುಳ್ಳದ್ದು ಸಿಕ್ಕಿದಾಗ ಅದರ ಮೇಲೆ ಪ್ರೀತಿಯನ್ನೂ ಸಾಮಾನ್ಯವಾದದ್ದು ಸಿಕ್ಕಿದಾಗ ಅದರ ಮೇಲೆ ಹಗೆತನವನ್ನೂ (ವ್ಯುದಸ್ಯ ಚ) ಹಿಮ್ಮೆಟ್ಟಿಸಿ,

ಮತ್ತೇನೆಂದರೆ —

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥**

(ವಿವಿಕ್ತಸೇವೀ) ಜನರ ಗದ್ದಲವಿಲ್ಲದಿರುವ ಕಡೆಯಲ್ಲಿರುವವನಾಗಿಯೂ (ಲಘ್ವಾಶೀ) ನಿದ್ರೆ, ಸೋಮಾರಿತನ–ಮೊದಲಾದವುಗಳನ್ನು ಉಂಟುಮಾಡದಂಥ ಸಾತ್ತ್ವಿಕಾಹಾರವನ್ನು ಮಿತವಾಗಿ ಉಣ್ಣುವವನಾಗಿಯೂ (ಯತವಾಕ್ಕಾಯಮಾನಸಃ) ಮಾತು, ಶರೀರ, ಮನಸ್ಸು–ಈ ಮೂರನ್ನೂ ತನ್ನ ಕೈಯಲ್ಲಿಟ್ಟುಕೊಂಡಿರುವವನಾಗಿಯೂ (ನಿತ್ಯಂ) ಯಾವಾಗಲೂ (ಧ್ಯಾನಯೋಗಪರಃ) ಆತ್ಮಸ್ವರೂಪವನ್ನು ಎಡೆಬಿಡದೆ ಚಿಂತಿಸುವದೇ ತನ್ನ ಮುಖ್ಯ ಕರ್ತವ್ಯವೆಂದು ತಿಳಿದವನಾಗಿಯೂ (ವೈರಾಗ್ಯಂ) ಈ ಲೋಕದ ಅಥವಾ ಪರಲೋಕದ ಹೊರಗಣ ಸುಖಸಾಧನಗಳಲ್ಲಿ ಅಕ್ಕರೆಯಿಲ್ಲದಿರುವಿಕೆಯನ್ನು (ಸಮುಪಾಶ್ರಿತಃ) ಚೆನ್ನಾಗಿ ಮೈಗೂಡಿಸಿಕೊಂಡಿರುವವನಾಗಿಯೂ

ಮತ್ತೇನೆಂದರೆ:—

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥ ೫೩ ॥**

(ಅಹಂಕಾರಂ) ದೇಹ, ಇಂದ್ರಿಯ-ಮೊದಲಾದವುಗಳನ್ನೆ ತಾನೆಂದು ತಿಳಿಯುವಿಕೆಯನ್ನೂ (ಬಲಂ) ಬಲವನ್ನೂ-ಎಂದರೆ ಶರೀರದ ಸ್ವಾಭಾವಿಕ ಬಲವಲ್ಲ, ಏಕೆಂದರೆ ಬಿಡಬೇಕೆಂದು ಹೇಳಿರುವ ಮಾತುಗಳ ಗುಂಪಿನಲ್ಲಿರುವ ಈ ಬಲಕ್ಕೆ ಆ ಅರ್ಥವನ್ನು ಮಾಡಿದರೆ ಆ ಬಲವನ್ನು ಬಿಡುವದೆಂಬುದೇ ಶಕ್ಯವಲ್ಲ ಆದ್ದರಿಂದ ಬಯಕೆ, ಅತಿಪ್ರೀತಿ-ಮೊದಲಾದವುಗಳ ಆವೇಶದಿಂದ ತೋರುವ ಒಂದು ಬಗೆಯ ಹೆಚ್ಚಿನ ಸಾಮರ್ಥ್ಯವೆಂದರ್ಥ-(ದರ್ಪಂ) ಏನಾದರೊಂದು ಹರ್ಷವುಂಟಾದರೆ ಅದರ ಆವೇಶದ ಭರದಲ್ಲಿ ಧರ್ಮವನ್ನು ಮೀರುವಂಥ ಸೊಕ್ಕನ್ನೂ (ಕಾಮಂ) ಮುಂದುಗಾಣಿಕೆಯ ಬಯಕೆಯನ್ನೂ (ಕ್ರೋಧಂ) ಅದಕ್ಕೆ ಅಡಚಣೆಯೊದಗಿದರೆ ಉಂಟಾಗುವ ಕೋಪವನ್ನೂ (ಪರಿಗ್ರಹಂ) ಹೊರಗಣ ಬಗೆಬಗೆಯ ಉಪಕರಣಗಳನ್ನೂ (ವಿಮುಚ್ಯ) ಬಿಟ್ಟು (ನಿರ್ಮಮಃ) ನನ್ನದೆಂಬಭಿಮಾನವಿಲ್ಲದವನಾಗಿ (ಶಾಂತಃ) ಸಮಾಧಾನಸ್ಥಿತಿಯನ್ನು ಹೊಂದಿದವನು (ಬ್ರಹ್ಮಭೂಯಾಯ) ಬ್ರಹ್ಮಸ್ವರೂಪನಾಗುವದಕ್ಕೆ (ಕಲ್ಪತೇ) ಸಮರ್ಥನಾಗುತ್ತಾನೆ.

ಇದೇ ಕ್ರಮದಲ್ಲಿಯೇ :—

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ * ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥ ೫೪ ॥**

(ಬ್ರಹ್ಮಭೂತಃ) ಬ್ರಹ್ಮಸ್ವರೂಪನಾದಂಥ (ಪ್ರಸನ್ನಾತ್ಮಾ) ಶುದ್ಧಚಿತ್ತನು (ನ ಶೋಚತಿ) ತನಗೆ ಇಂಥದ್ದು ಕೊರತೆಯಾಗಿರುವದೆಂದು ಅಳುವದಿಲ್ಲ ಮತ್ತು (ನ ಕಾಂಕ್ಷತಿ) ನನಗೆ ಇಂಥದ್ದು ಬೇಕೆಂದು ಬಾಯಿನೀರುಸುರಿಸುವದಿಲ್ಲ. (ಸರ್ವೇಷು) ಎಲ್ಲ (ಭೂತೇಷು) ಪ್ರಾಣಿಗಳಲ್ಲಿಯೂ (ಸಮಃ)

---

* 'ನ ಹೃಷ್ಯತಿ' ಎಂದು ಪಾಠಾಂತರ. ಸಂತೋಷಪಡುವದಿಲ್ಲವೆಂದರ್ಥ

ತನ್ನಂತೆ ಸುಖವನ್ನೂ ದುಃಖವನ್ನೂ ಸಮವಾಗಿ ನೋಡುವವನಾಗಿ (ಪರಾಂ) ಅತ್ಯುತ್ಕೃಷ್ಟವಾದ (ಮದ್ಭಕ್ತಿಂ) ನನ್ನ ಮೇಲಿನ ಪ್ರೇಮಾತಿಶಯವನ್ನು (ಲಭತೇ) ಹೊಂದುತ್ತಾನೆ

ಅದರಿಂದೇನಾಗುವದೆಂದರೆ —

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥ ೫೫ ॥**

(ಭಕ್ತ್ಯಾ) ಆ ಪರಾಭಕ್ತಿಯಿಂದ–ಎಂದರೆ ಜ್ಞಾನವಾದ ಮೇಲೆ ಉಂಟಾಗುವ ಹೆಚ್ಚಿನ ಭಕ್ತಿಯಿಂದ (ಮಾಂ) ಚೈತನ್ಯಸ್ವರೂಪನಾದ ನನ್ನನ್ನು (ಯಾವಾನ್) ಪರಿಮಿತಿಯ ಕಲ್ಪನೆಯನ್ನುಂಟುಮಾಡುತ್ತಿರುವ ಪ್ರಪಂಚವೆಂಬ ಉಪಾಧಿಯಿಂದ ಎಷ್ಟು ವಿಸ್ತಾರವಾಗಿರುತ್ತೇನೆಂಬುದನ್ನೂ (ಯಶ್ಚಾಸ್ಮಿ) ಆ ಪರಿಮಿತಿಯ ಕಲ್ಪನೆಯನ್ನು ಕೊಡುವವುಗಳನ್ನೆಲ್ಲ ಸರಿಸಿ ನೋಡುವದರಿಂದ ಆಕಾಶಕ್ಕೆ ಸಮನಾದ ಅಖಂಡನಾದ ಉತ್ತಮಪುರುಷನೆಂಬುದನ್ನೂ (ತತ್ತ್ವತಃ) ಹುಟ್ಟು, ಸಾವು–ಮೊದಲಾದವುಗಳೇನೂ ಇಲ್ಲದವನೆಂದು ಇದ್ದೆದ್ದಿದ್ದ ಹಾಗೆ (ಅಭಿಜಾನಾತಿ) ಚೆನ್ನಾಗಿ ತಿಳಿಯುತ್ತಾನೆ (ತತಃ) ಆ ಭಕ್ತಿಯಿಂದ (ಮಾಂ) ನನ್ನನ್ನು (ತತ್ತ್ವತಃ) ಇದ್ದದ್ದಿದ್ದ ಹಾಗೆ (ಜ್ಞಾತ್ವಾ) ತಿಳಿದು (ತದನಂತರಂ) ಒಡನೆ (ವಿಶತೇ) ನನ್ನೊಳಗೆ ಸೇರಿಹೋಗುತ್ತಾನೆ ನನ್ನ ಅಪರಿಮಿತಸ್ವರೂಪವನ್ನು ಮೊದಲು ತಿಳಿದು ಆಮೇಲೆ ನನ್ನೊಳಗೆ ಸೇರುತ್ತಾನೆಂದು ತಿಳಿಯಬಾರದು ಸೇರುವದೆಂಬುದೊಂದು ಬೇರೆ ಅಲ್ಲವೇ ಅಲ್ಲ. ಅಪರಿಮಿತತ್ವವನ್ನು ತಿಳಿಯೋಣವೇ ಸೇರೋಣವೆನಿಸುವದು ಎಂದರೆ ಗಡಿಗೆಯೊಳಗಿರುವ ಬೈಲು ಗಡಿಗೆಯಳತೆಯದೆನಿಸಿಗುವವರೆಗೂ ಗಡಿಗೆಯ ಬಯಲೆಂದು ಬೇರೆಯಾಗಿದ್ದು ಗಡಿಗೆಯೆಂಬ ಪರಿಮಿತಿಯ ಕಲ್ಪನೆಯನ್ನೊಂದು ಕಡೆಗೆ ಸರಿಸಿಟ್ಟು ನೋಡಿದಾಗ ಅದು ಅಪರಿಮಿತವಾದ ಆಕಾಶವೇ ಆಗಿರುವಂತೆ ದೇಹವೆಂಬ ಪರಿಮಿತಿಯೊಳಗಿರುವ ಚೈತನ್ಯವು ದೇಹದ ಪರಿಮಿತಿಗೆ ಕಟ್ಟುಬಿದ್ದದ್ದೆನಿಸಿರುವವರೆಗೂ ಜೀವನೆಂದು ಬೇರೆಯಾಗಿದ್ದು ದೇಹವೆಂಬ ಪರಿಮಿತಿಯ ಕಲ್ಪನೆಯನ್ನೊಂದು ಕಡೆಗೆ ಸರಿಸಿಟ್ಟು ನೋಡಿದಾಗ ಅದು

ಅಪರಿಮಿತ ಬ್ರಹ್ಮಚೈತನ್ಯವೇ ಆಗಿರುವದು. ಜೀವವು ಬ್ರಹ್ಮನಲ್ಲಿ ಪ್ರವೇಶಿಸುವದೆಂಬ ಮಾತು ಮೊದಲು ಜೀವನೆನಿಸಿದ್ದ ಚೈತನ್ಯವು ಆಮೇಲೆ ಬ್ರಹ್ಮರೂಪಾಗಿ ತಿಳಿಯಬರುವದೆಂಬುದನ್ನು ವ್ಯವಹಾರದೃಷ್ಟಿಯಿಂದ ಹೇಳುವ ಮಾತಿನ ಬೆಡಗೇ ಹೊರತು ಮತ್ತೇನೂ ಇಲ್ಲ

ಭಕ್ತಿಯ ಹೆಚ್ಚುಗಾರಿಕೆಯೇನೆಂದರೆ :—

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥ ೫೬ ॥**

(ಸರ್ವಕರ್ಮಾಣ್ಯಪಿ) ಎಲ್ಲ ಕರ್ಮಗಳನ್ನೂ ಎಂದರೆ ಮಾಡಬಾರದವುಗಳನ್ನು ಕೂಡ (ಸದಾ) ಯಾವಾಗಲೂ (ಕುರ್ವಾಣಃ) ಮಾಡುವವನಾದರೂ (ಮದ್ವ್ಯಪಾಶ್ರಯಃ) ನನ್ನನ್ನೆ ಗತಿಯೆಂದು ನಂಬಿರುವ ಅವನು (ಮತ್ಪ್ರಸಾದಾತ್) ಈಶ್ವರನಾದ ನನ್ನ ಅನುಗ್ರಹದಿಂದ (ಅವ್ಯಯಂ) ಎಷ್ಟುಮಾತ್ರವೂ ಸವೆಯದಿರುವಂಥ (ಶಾಶ್ವತಂ) ಎಂದೆಂದಿಗೂ ಇರುವಂಥ (ಪದಂ) ಮೋಕ್ಷಪದವಿಯನ್ನು (ಅವಾಪ್ನೋತಿ) ಪಡೆಯುತ್ತಾನೆ

ಆದ್ದರಿಂದ .—

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ* ಮಚ್ಚಿತ್ತಃ ಸತತಂ ಭವ ॥ ೫೭ ॥**

ನೀನು ಕರ್ಮಕ್ಕೆ ಕೈಹಾಕುವದೇ ಇಲ್ಲವೆನ್ನುವದು ನಿನ್ನ ಯೋಗ್ಯತೆಯ ಮಾತಲ್ಲ. ನೀನೇನು ಮಾಡಬೇಕೆಂದರೆ (ಸರ್ವಕರ್ಮಾಣಿ) ನೀನು ಮಾಡುವ ಕೆಲಸಗಳನ್ನೆಲ್ಲ (ಚೇತಸಾ) ವಿವೇಕಪೂರ್ವಕವಾದ ಮನಸ್ಸಿನಿಂದ (ಮಯಿ) ಪರಮಾತ್ಮನಾದ ನನ್ನಲ್ಲಿ (ಸಂನ್ಯಸ್ಯ) ಅರ್ಪಣಮಾಡಿ—ಎಂದರೆ ಈಶ್ವರನ ದಾಸನಾಗಿ ಮಾಡುವವನೆಂದು ನಿನ್ನನ್ನು ತಿಳಿದುಕೊಂಡು (ಮತ್ಪರಃ) ನನ್ನನ್ನೆ ಗತಿಯೆಂದು ನಂಬಿದವನಾಗಿ (ಬುದ್ಧಿಯೋಗಂ) ಮನಸ್ಸನ್ನು ಸಮತ್ವದಲ್ಲಿಟ್ಟು

---

* "ಬುದ್ಧಿಯೋಗಮಪಾಶ್ರಿತ್ಯ" ಎಂದು ಪಾಠಾಂತರ. ಅದೇ ಅರ್ಥ.

ಕೊಂಡಿರುವ ನಡೆವಳಿಕೆಯನ್ನು (ಉಪಾಶ್ರಿತ್ಯ) ಅವಲಂಬಿಸಿಕೊಂಡು (ಸತತಂ) ಯಾವಾಗಲೂ (ಮಚ್ಚಿತ್ತಃ) ನನ್ನಲ್ಲಿಯೇ ಮನಸ್ಸಿಟ್ಟವನು (ಭವ) ಆಗು

ಇದರಿಂದಾಗುವದೇನೆಂದರೆ —

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥**

(ಮಚ್ಚಿತ್ತಃ) ನನ್ನಲ್ಲಿಯೇ ಮನಸ್ಸಿಟ್ಟ ನೀನು (ಮತ್ಪ್ರಸಾದಾತ್) ನನ್ನ ಅನುಗ್ರಹದಿಂದ (ಸರ್ವದುರ್ಗಾಣಿ) ಹುಟ್ಟುಸಾವುಗಳಿಗೆ ಕಾರಣಗಳಾದ ಅನರ್ಥಪರಂಪರೆಗಳನ್ನೆಲ್ಲ (ತರಿಷ್ಯಸಿ) ದಾಟುತ್ತಿ (ಅಥ) ಹಾಗಲ್ಲದೆ (ತ್ವಂ) ನೀನು (ಅಹಂಕಾರಾತ್) ನೀನೇ ಪಂಡಿತನೆಂಬ ದುರಭಿಮಾನದಿಂದ (ನ ಶ್ರೋಷ್ಯಸಿ ಚೇತ್) ನನ್ನ ಮಾತನ್ನು ಕೇಳದೆ ಹೋದರೆ (ವಿನಂಕ್ಷ್ಯಸಿ) ಪರಧರ್ಮಕ್ಕೆ ಬಲಿಯಾಗಿ ಹಾಳಾಗುತ್ತಿ

ಮಾಡುವದೂ ಬಿಡುವದೂ ನಿನ್ನ ಕೈಯಲ್ಲಿರುವದೆಂದು ನೀನು ತಿಳಿದಿರುವದು ತಪ್ಪು ಏಕೆಂದರೆ.—

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

(ಅಹಂಕಾರಮಾಶ್ರಿತ್ಯ) ಪಾಂಡಿತ್ಯವನ್ನು ಮೈಮೇಲೆ ಹಾಕಿಕೊಂಡು (ನ ಯೋತ್ಸ್ಯ ಇತಿ) ಯುದ್ಧ ಮಾಡುವದಿಲ್ಲವೆಂದು (ಮನ್ಯಸೇ ಯತ್) ತಿಳಿಯುತ್ತೀಯಲ್ಲ! ಆ (ತೇ) ನಿನ್ನ (ಏಷಃ) ಈ (ವ್ಯವಸಾಯಃ) ನಿಶ್ಚಯವು (ಮಿಥ್ಯಾ) ಸುಳ್ಳು ಏಕೆಂದರೆ (ಪ್ರಕೃತಿಃ) ಸತ್ತ್ವಮಿಶ್ರಿತರಜೋಗುಣದ ನಿನ್ನ ಕ್ಷತ್ರಿಯಸ್ವಭಾವವು (ತ್ವಾಂ) ನಿನ್ನನ್ನು (ನಿಯೋಕ್ಷ್ಯತಿ) ಯುದ್ಧಕ್ಕೆಂದು ಮುಂದಕ್ಕೆ ನೂಕಿಯೇ ನೂಕುತ್ತದೆ

ಮತ್ತು —

**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥ ೬೦ ॥**

(ಕೌಂತೇಯ) ಅರ್ಜುನನೆ, ಕೇಳು (ಸ್ವಭಾವಜೇನ) ನಿನ್ನ ಹುಟ್ಟು ಗುಣವಾದಂಥ ಸತ್ತ್ವಮಿಶ್ರಿತರಜೋಗುಣದಿಂದಾದ (ಸ್ವೇನ) ನಿನ್ನ (ಕರ್ಮಣಾ) ಕ್ಷತ್ರಿಯತ್ವೋಚಿತವಾದ ಯುದ್ಧದೊಡನೆ (ನಿಬದ್ಧಃ) ಚೆನ್ನಾಗಿ ಗಂಟುಬಿದ್ದಿರುವ ನೀನು (ಮೋಹಾತ್) ಅವಿವೇಕದಿಂಗ ಕೂಡಿದವನಾಗಿ (ಯತ್) ಯಾವ ಯುದ್ಧಕರ್ಮವನ್ನು (ಕರ್ತುಂ) ಮಾಡುವದಕ್ಕೆ (ನೇಚ್ಛಸಿ) ಬಯಸುವದಿಲ್ಲವೊ (ತತ್) ಆ ಯುದ್ಧಕರ್ಮವನ್ನು (ಅವಶೋಽಪಿ) ನಿನ್ನ ಪ್ರಯತ್ನವಿಲ್ಲದೆ ಯಾದರೂ (ಕರಿಷ್ಯಸಿ) ಮಾಡುತ್ತಿ

ಏಕೆಂದರೆ —

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ ೬೧ ॥**

(ಅರ್ಜುನ) ಅರ್ಜುನನೆ, ಕೇಳು (ಯಂತ್ರಾರೂಢಾನಿ) ಗೊಂಬೆಯು ಆಟಗಾರನು ಪರದೆಯೊಳಗಿದ್ದು ಸೂತ್ರವನ್ನು ಹಿಡಿದುಕೊಂಡು ತಿರುಗಿಸುವ ಯಂತ್ರಕ್ಕ ಕಟ್ಟಿದ ಮರದ ಗೊಂಬೆಗಳನ್ನು ಬಗೆ ಬಗೆಯಾಗಿ ಆಡಿಸುವಂತೆ (ಈಶ್ವರಃ) ಪರಮಾತ್ಮನು (ಸರ್ವಭೂತಾನಿ) ಎಲ್ಲ ಪ್ರಾಣಿಗಳನ್ನೂ (ಮಾಯಯಾ) ಅವರು ಶರೀರವೆಂಬ ಯಂತ್ರಕ್ಕೆ ಸಿಕ್ಕುಬಿದ್ದು ಹುಟ್ಟಿ ಸಾಯುತ್ತ ಮೇಲಿನ ಲೋಕಕ್ಕೂ ಕೆಳಗಿನ ಲೋಕಕ್ಕೂ ತಿರುಗುತ್ತಿರುವರೆಂದು ನೋಡುವವರಿಗೆ ಕಾಣುವಂತೆ ಅವರವರ ಕರ್ಮಗಳೆಂಬ ಸೂತ್ರಗಳನ್ನು ಹಿಡಿದು (ಭ್ರಾಮಯನ್) ಸುತ್ತಿಸುತ್ತ (ಸರ್ವಭೂತಾನಾಂ) ಎಲ್ಲ ಪ್ರಾಣಿಗಳ (ಹೃದ್ದೇಶೇ) ಹೃದಯವೆಂಬ ಸ್ಥಲದಲ್ಲಿ ಪರದೆಯೊಳಗೆ ಹೇಗೋ ಹಾಗೆ ಮರೆಯಾಗಿದ್ದುಕೊಂಡು (ತಿಷ್ಠತಿ) ಇರುತ್ತಾನೆ ಎಲ್ಲೆಲ್ಲಿಯೂ ತುಂಬಿಕೊಂಡಿರುವ ಆತ್ಮನು ಹೃದಯದಲ್ಲಿರುವನೆಂಬ ಮಾತಿಗೆ ಅರ್ಥವೇನೆಂದರೆ ಬೆಳಕು ಎಲ್ಲೆಲ್ಲಿಯೂ ಹರಡಿದ್ದರೂ ಕನ್ನಡಿ ಮೊದಲಾದ ಸ್ವಚ್ಛವಸ್ತುಗಳಲ್ಲಿ ಎದ್ದು ಕಾಣುವಂತೆ ಈಶ್ವರನು ಎಲ್ಲೆಲ್ಲಿಯೂ ತುಂಬಿದ್ದರೂ ಹೃದಯದಲ್ಲಿ ಹೆಚ್ಚು ಕಾಣಿಸಿಕೊಳ್ಳುವನೆಂದರ್ಥ ಏಕೆಂದರೆ ಪರಮಾತ್ಮ ಜ್ಞಾನವಾಗುವದು ಹೃದಯದಲ್ಲಿಯೇ.

ಆದ್ದರಿಂದ —

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ ೬೨ ॥**

(ಭಾರತ) ಅರ್ಜುನನೆ, ಕೇಳು (ಸರ್ವಭಾವೇನ) ಎಲ್ಲ ರೀತಿಯಿಂದಲೂ (ತಮೇವ) ಆ ಪರಮಾತ್ಮನನ್ನೇ (ಶರಣಂ ಗಚ್ಛ) ಶರಣು ಹೋಗು (ತತ್ಪ್ರಸಾದಾತ್) ಅವನ ಅನುಗ್ರಹದಿಂದ (ಪರಾಂ) ಅತ್ಯುತ್ಕೃಷ್ಟವಾದಂಥ (ಶಾಶ್ವತಂ) ಎಂದಿಗೂ ಹೋಗದಂಥ (ಶಾಂತಿಂ) ಸಮಾಧಾನರೂಪವಾದಂಥ (ಸ್ಥಾನಂ) ಮೋಕ್ಷವನ್ನು (ಪ್ರಾಪ್ಸ್ಯಸಿ) ಹೊಂದುತ್ತಿ ನಿನ್ನ ಶೋಕಕ್ಕೆ ಪರಿಹಾರವನ್ನೇ ಕಾಣೆನೆಂದು ನೀನು ಹೇಳಿದ್ದೆಯಲ್ಲ! (೨–೮) ಇಗೋ ಇದೇ ಪರಿಹಾರ.

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥**

(ಇತಿ) ಈ ರೀತಿಯಲ್ಲಿ (ಮಯಾ) ನನ್ನಿಂದ (ತೇ) ನಿನಗೆ (ಗಹ್ಯಾದ್ಗುಹ್ಯತರಂ) ಗುಟ್ಟಾದವುಗಳಲ್ಲೆಲ್ಲ ಗುಟ್ಟಾದ–ಎಂದರೆ ಕಂಡಕಂಡವರ ಮುಂದೆಲ್ಲ ಬಾಯ ತೀಟೆಯನ್ನು ಕಳೆದುಕೊಳ್ಳುವದಕ್ಕೆ ಮಾತುಗಳನ್ನು ಗಾಳಿಯಲ್ಲಿ ತೂರಬಾರದಾದಂಥ (ಜ್ಞಾನಂ) ತಿಳಿವಳಿಕೆಯು (ಆಖ್ಯಾತಂ) ಹೇಳಲ್ಪಟ್ಟಿರುವದು (ಏತತ್) ಇದನ್ನು (ಅಶೇಷೇಣ) ಮೊದಲಿನಿಂದ ಕೊನೆಯವರೆಗೂ ಒಂದೂ ಬಿಡದೆ (ವಿಮೃಶ್ಯ) ಆಲೋಚನೆಯನ್ನು ಮಾಡಿ (ಯಥಾ) ಮುಂದೆ ಹೇಗೆ ಮಾಡಬೇಕೆಂದು (ಇಚ್ಛಸಿ) ಬಯಸುತ್ತೀಯೊ (ತಥಾ) ಆ ರೀತಿಯಲ್ಲಿ (ಕುರು) ಮಾಡು.

ಇನ್ನೂ ಹೇಳುತ್ತೇನೆ, ಕೇಳು —

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥ ೬೪ ॥**

(ಸರ್ವಗುಹ್ಯತಮಂ) ಗುಟ್ಟಾದವುಗಳಲ್ಲೆಲ್ಲ ತಲೆಯಾದಂಥ (ಮೇ) ನನ್ನ (ಪರಮಂ) ಉತ್ತಮವಾದ (ವಚಃ) ಮಾತನ್ನು (ಭೂಯಃ) ಇನ್ನೂ (ಶೃಣು)

ಕೇಳು ನಾನು ಇದನ್ನು ಏನಾದರೊಂದು ಪ್ರಯೋಜನದ ಆಸೆಯಿಂದ ಹೇಳುವವನಲ್ಲ ಮತ್ತೇನೆಂದರೆ ನೀನು (ಮೇ) ನನಗೆ (ದೃಢಂ) ಬಲವಾದ (ಇಷ್ಟೋಽಸಿ) ಗೆಳೆಯನಾಗಿದ್ದಿ (ಇತಿ) ಎಂದು ತಿಳಿದು (ತತಃ) ಆ ಕಾರಣದಿಂದ (ತೇ) ನಿನ್ನ (ಹಿತಂ) ಒಳ್ಳೆಯದನ್ನು (ವಕ್ಷ್ಯಾಮಿ) ಹೇಳುತ್ತೇನೆ ಜಗತ್ತಿನಲ್ಲಿ ಇದಕ್ಕಿಂತ ಒಳ್ಳೆಯದೆನಿಸುವದು ಇನ್ನಿಲ್ಲವೇ ಇಲ್ಲ

ಅದೇನೆಂದರೆ .—

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫ ॥**

(ಮನ್ಮನಾಭವ) ಪರಮಾತ್ಮನಾದ ನನ್ನಲ್ಲಿಯೇ ಮನಸ್ಸನ್ನಿಡುವವನಾಗು (ಮದ್ಭಕ್ತಃ) ಮನಸ್ಸು ನನ್ನಲ್ಲಿ ನಿಲ್ಲದಿದ್ದರೆ ನನ್ನ ಮೇಲಿನ ಪ್ರೇಮದಿಂದ ನನ್ನ ಚರಿತ್ರೆಯನ್ನು ಕೇಳುವ ಅಥವಾ ಹೇಳುವ ಮತ್ತು ಹಾಡುವ ಕೆಲಸವನ್ನು ಮಾಡು (ಮದ್ಯಾಜೀ) ಅದೂ ಕಷ್ಟವೆನಿಸಿದರೆ ನನ್ನನ್ನೇ ಪೂಜೆಮಾಡು (ಮಾಂ ನಮಸ್ಕುರು) ಅದಕ್ಕೂ ಅನನುಕೂಲವಾದರೆ ಅದರ ಸಾಧನವಾಗಿ ನನಗೆ ನಮಸ್ಕಾರವನ್ನು ಮಾಡು ನೀನು ಹೀಗೆ ಮಾಡಿದರೆ (ಮಾಮೇವ) ನನ್ನನ್ನೇ (ಏಷ್ಯಸಿ) ಹೊಂದುತ್ತಿ ನೀನು (ಮೇ) ನನಗೆ (ಪ್ರಿಯೋಽಸಿ) ಗೆಳೆಯನಾಗಿದ್ದಿ ಎಂಬುದರ ಮೇಲೆ (ತೇ) ನಿನಗೆ (ಸತ್ಯಂ) ನಿಜವಾಗಿ (ಪ್ರತಿಜಾನೇ) ಆಣೆ ಮಾಡಿ ಹೇಳುತ್ತೇನೆ.

ನೀನು ಈ ರೀತಿಯಲ್ಲಿದ್ದುಕೊಂಡು ಕರ್ಮಯೋಗವನ್ನು ಚೆನ್ನಾಗಿ ನಡೆಸಿ ಅದರ ಪರಿಪಕ್ವಸ್ವರೂಪವಾಗಿ .—

**ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥೬೬॥**

(ಸರ್ವಧರ್ಮಾನ್) ಧರ್ಮಗಳನ್ನೆಲ್ಲ–ಎಂದರ ವಿಹಿತಗಳನ್ನು ಮಾತ್ರವೇ ಅಲ್ಲ, ನಿಷಿದ್ಧವಾದವುಗಳನ್ನು ಕೂಡ–(ಪರಿತ್ಯಜ್ಯ) ಬಿಟ್ಟು–ಎಂದರೆ ಕರ್ಮಗಳೆಲ್ಲ ದೇಹೇಂದ್ರಿಯಗಳಿಂದ ನಡೆಯತಕ್ಕವುಗಳಾದ್ದರಿಂದ ಚೈತನ್ಯಾತ್ಮಸ್ವರೂಪನಾದ

ತನಗೆ ಅವುಗಳ ಸಂಬಂಧವೇನೂ ಇಲ್ಲವೆಂದು ತಿಳಿದು-(ಮಾಂ ಏಕಂ) ಹುಟ್ಟು ಸಾವು ಮೊದಲಾದ ಏನೇನೂ ಇಲ್ಲದ ಸರ್ವಚೈತನ್ಯಸ್ವರೂಪನಾದ ನನ್ನೊಬ್ಬ ನನ್ನೆ (ಶರಣಂ ವ್ರಜ) ನಿನ್ನ ಆತ್ಮವೆಂದು ಶರಣುಹೊಂದು (ಅಹಂ) ನಾನು (ತ್ವಾ) ಈ ಬಗೆಯ ನಿಶ್ಚಯವುಳ್ಳ ನಿನ್ನನು (ಸರ್ವಪಾಪೇಭ್ಯಃ) ಹುಟ್ಟುಸಾವು ಗಳ ಕಟ್ಟನ್ನುಂಟುಮಾಡುವ ಎಲ್ಲ ಕರ್ಮಗಳ ತೊಡಕಿನಿಂದಲೂ (ಮೋಕ್ಷಯಿಷ್ಯಾಮಿ) ಬಿಡಿಸುತ್ತೇನೆ-ಎಂದರೆ ನೀನು ನನಗೆ ಶರಣುಬಂದದ್ದಕ್ಕೆ ಫಲವಾಗಿ ನನ್ನ ಸರ್ವಚೈತನ್ಯಸ್ವರೂಪವನ್ನು ನಿನಗೆ ತೋರಿಸಿ ಕರ್ಮಗಳು ನಿನ್ನನ್ನು ಸೋಕದಂತೆ ಮಾಡುತ್ತೇನೆ (ಮಾ ಶುಚಃ) ದುಃಖಪಡಬೇಡ

ಆತ್ಮವಿಚಾರವು ಗುಟ್ಟಾಗಿಡತಕ್ಕದ್ದೆಂದು ನಾನು ಅನೇಕ ವೇಳೆ ಹೇಳಿದ್ದೇನಷ್ಟೆ ಯಾರ ಮುಂದೆ ಇದನ್ನು ಹೇಳಬಾರದೆಂದರೆ —

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥೬೭॥**

(ತೇ) ನಿನ್ನ ಹಿತಕ್ಕಾಗಿ ನಾನು ಹೇಳಿದಂಥ (ಇದಂ) ಹುಟ್ಟು ಸಾವು ಗಳನ್ನು ಕಳೆಯುವ ಈ ಆತ್ಮವಿಚಾರಶಾಸ್ತ್ರವು (ಅತಪಸ್ಕಾಯ) ಈಶ್ವರಪ್ರೀತಿ ಗೋಸ್ಕರವಾಗಿ ಮಾಡುವ ಕರ್ಮದ ಅಂಗವಾಗಿ ಶರೀರವನ್ನು ಸೊರಗಿಸದೆ ಮತ್ತು ಇಂದ್ರಿಯಗಳನ್ನೂ ಮನಸ್ಸನ್ನೂ ಒಮ್ಮುಖವಾಗಿ ಮಾಡಿಕೊಂಡು ಪರಮಾತ್ಮ ಚಿಂತನೆಯನ್ನು ಮಾಡದೆ ಇರುವವನಿಗೆ (ನ ವಾಚ್ಯಂ) ಹೇಳತಕ್ಕದ್ದಲ್ಲ. (ಅಭಕ್ತಾಯ) ಒಂದು ವೇಳೆ ಅಂಥ ತಪಸ್ಸನ್ನು ಮಾಡದಿದ್ದರೂ ಇದನ್ನುಪದೇಶ ಮಾಡುವ ಗುರುವಿನಲ್ಲಿ ಭಕ್ತಿಯಾದರೂ ಇಲ್ಲದವನಿಗೆ (ಕದಾಚನ) ಎಂದೆಂದಿಗೂ ಎಂಥ ಸಂದರ್ಭದಲ್ಲಿಯೂ (ನ) ಹೇಳತಕ್ಕದ್ದಲ್ಲ (ಅಶುಶ್ರೂಷವೇ ಚ) ಭಕ್ತನಾಗಿರದಿದ್ದರೂ ಇದನ್ನು ಕೇಳಬೇಕೆಂದಿಚ್ಛೆಯಿಲ್ಲದವನಿಗಂತು (ನ) ಹೇಳತಕ್ಕದ್ದಲ್ಲ ಇದಲ್ಲದೆ (ಯಃ) ಯಾವನು (ಮಾಂ) ನನ್ನನ್ನು (ಅಭ್ಯಸೂಯತಿ) ಎಲ್ಲರಂತೆ ಮನುಷ್ಯನೆಂದೂ ತನಗೇ ಶರಣುಬರಬೇಕೆಂದು ಹೇಳುವ ದುರಭಿಮಾನಿಯೆಂದೂ ಹೊಟ್ಟೇಕಿಚ್ಚುಪಡುವನೊ ಅವನಿಗೂ (ನ ಚ) ಹೇಳತಕ್ಕದ್ದಲ್ಲ.

ಇಂಥವರ ಮುಂದೆ ಇದನ್ನು ವ್ಯರ್ಥಮಾಡಬಾರದೆಂಬುದಕ್ಕಾಗಿ ಗುಟ್ಟಾಗಿಡಬೇಕೆಂದು ಹೇಳಿದ್ದೇ ಹೊರತು ಯೋಗ್ಯರ ಮುಂದೆ ಈ ವಿಷಯವನ್ನು ಅವಶ್ಯಕವಾಗಿ ಹೇಳಿಯೇ ಹೇಳಬೇಕು ಹಾಗೆ ಹೇಳುವದಕ್ಕ ಕೂಡ ಎಂಥ ದೊಡ್ಡ ಫಲವಿರುವದೆಂದರೆ·—

**ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿದಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥**

(ಯಃ) ಯಾವನು (ಪರಮಂ) ಬಹಳ ಹೆಚ್ಚಿನ (ಗುಹ್ಯಂ) ಗುಟ್ಟಾದಂಥ (ಇಮಂ) ಮೇಲೆ ಹೇಳಿದ ಆತ್ಮವಿಚಾರವನ್ನು (ಮದ್ಭಕ್ತೇಷು) ನನ್ನಲ್ಲಿ ಪ್ರೇಮವುಳ್ಳವರಲ್ಲಿ (ಅಭಿಧಾಸ್ಯತಿ) ಗ್ರಂಥವನ್ನು ಕಂಠಪಾಠಮಾಡಿಸುವದರ ಮೂಲಕವೂ ಅರ್ಥವನ್ನು ಮನಗಾಣಿಸುವದರ ಮೂಲಕವೂ ನೆಲೆಗೊಳಿಸುವನೊ ಅವನು (ಮಯಿ) ನನ್ನಲ್ಲಿ (ಪರಾಂ) ಉತ್ಕೃಷ್ಟವಾದ (ಭಕ್ತಿಂ) ಭಕ್ತಿಯನ್ನು (ಕೃತ್ವಾ) ಮಾಡಿ–ಎಂದರೆ ಪರಮಾತ್ಮನ ದಾಸನಾಗಿ ಈ ಕೆಲಸವನ್ನು ಮಾಡುತ್ತೇನೆಂದು ನಡೆಸಿ–(ಮಾಮೇವ) ನನ್ನ ಸ್ವರೂಪವನ್ನೆ (ಏಶ್ಯತಿ) ಪಡೆಯುತ್ತಾನೆ. (ಅಸಂಶಯಃ) ಈ ವಿಷಯದಲ್ಲಿ ಸಂಶಯವಿಲ್ಲ

ಮತ್ತೇನೆಂದರೆ —

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥**

(ಮನುಷ್ಯೇಷು) ಮನುಷ್ಯರಲ್ಲಿ (ತಸ್ಮಾತ್) ಈ ಶಾಸ್ತ್ರಸಂಪ್ರದಾಯವನ್ನು ನೆಲೆಗೊಳಿಸಿದಂಥವನಿಗಿಂತ (ಮೇ) ನನಗೆ (ಪ್ರಿಯಕೃತ್ತಮಃ) ಅತಿಶಯ ಪ್ರೀತಿಯವನು (ಕಶ್ಚಿತ್) ಯಾವನೂ (ನ ಚ) ಈಗಲೂ ಇಲ್ಲ (ತಸ್ಮಾತ್) ಆ ಮನುಷ್ಯನಿಗಿಂತ (ಅನ್ಯಃ) ಬೇರೆ ಯಾರೂ (ಭುವಿ) ಭೂಲೋಕದಲ್ಲಿ (ಮೇ) ನನಗೆ (ಪ್ರಿಯತರಃ) ಹೆಚ್ಚು ಪ್ರೀತಿಯವನು (ನ ಚ ಭವಿತಾ) ಮುಂದೆ ಹುಟ್ಟುವದೂ ಇಲ್ಲ.

ಏಕೆಂದರೆ :—

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**

(ಯಃ) ಯಾವನು (ಧರ್ಮ್ಯಂ) ಧರ್ಮಸಮ್ಮತವಾದಂಥ (ಆವಯೋಃ) ನಮ್ಮಿಬ್ಬರ (ಇಮಂ) ಈ (ಸಂವಾದಂ) ಮಾತುಗಾರಿಕೆಯನ್ನು (ಅಧ್ಯೇಷ್ಯತೇ ಚ) ಓದುವನೊ (ತೇನ) ಅವನಿಂದ (ಅಹಂ) ನಾನು (ಜ್ಞಾನಯಜ್ಞೇನ) ಹಿಂದೆ ಹೇಳಿದ (೪–೨೮, ೩೩) ಜ್ಞಾನರೂಪವಾದ ಯಜ್ಞದಿಂದ (ಇಷ್ಟಃ ಸ್ಯಾಂ) ಪೂಜಿತನಾಗುವೆನು (ಇತಿ) ಎಂದು (ಮೇ) ನನ್ನ (ಮತಿಃ) ಅಭಿಪ್ರಾಯವು ಅರ್ಥವನ್ನು ತಿಳಿದುಕೊಂಡರಂತು ನಿಜವಾದ ಜ್ಞಾನಯಜ್ಞವೇ ಆಗುವದು ಸುಮ್ಮನೆ ಓದಿದರೂ ಕೂಡ ತಾನು ಪರಮೇಶ್ವರನ ಚಿಂತನೆಯನ್ನು ಮಾಡುತ್ತಿರುವೆನೆಂಬ ಭಾವನಾಬಲದಿಂದಲೂ ಅದು ಜ್ಞಾನಯಜ್ಞವೆನಿಸುವದು

ಓದಿದವನಿಗಾಗುವ ಫಲವನ್ನು ಕೇಳಿದೆಯಷ್ಟೆ ಕೇಳಿದವನಿಗಾಗುವದೇನೆಂದರೆ —

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ಪ್ರಾಪ್ನುಯಾತ್ಪುಣ್ಯ**
**ಕರ್ಮಣಾಮ್ ॥ ೭೧ ॥**

(ಯಃ) ಯಾವ (ನರಃ) ಮನುಷ್ಯನು (ಶ್ರದ್ಧಾವಾನ್) ಇದರಿಂದ ನನ್ನ ಉನ್ನತಿಯಾಗುವದೆಂಬ ವಿಶ್ವಾಸವುಳ್ಳವನಾಗಿಯೂ (ಅನಸೂಯಶ್ಚ) ಮನುಷ್ಯಮಾತ್ರದವನ ಉಪದೇಶದ್ದೇನು ಮಹತ್ವವೆಂಬ ಹೊಟ್ಟೇಕಿಚ್ಚಿಲ್ಲದವನಾಗಿಯೂ (ಶೃಣುಯಾದಪಿ) ಈ ಗ್ರಂಥವನ್ನು ಸುಮ್ಮನೆ ಕಿವಿಗೆ ಹಾಕಿಕೊಂಡರೂ ಕೂಡ (ಸೋಽಪಿ) ಅವನೂ (ಮುಕ್ತಃ) ಪಾಪದಿಂದ ಬಿಡುಗಡೆಯನ್ನು ಹೊಂದಿ (ಶುಭಾನ್) ಮಂಗಲಕರವಾದಂಥ ಮತ್ತು (ಪುಣ್ಯಕರ್ಮಣಾಂ) ಅಗ್ನಿಹೋತ್ರ ಮೊದಲಾದ ಕರ್ಮಗಳನ್ನು ಮಾಡಿದಂಥವರು ಪಡೆಯುವಂಥ (ಲೋಕಾನ್) ಉತ್ತಮಲೋಕಗಳನ್ನು (ಪ್ರಾಪ್ನುಯಾತ್) ಪಡೆದುಕೊಳ್ಳುವನು. ಸುಮ್ಮನೆ ಕಿವಿಗೆ ಹಾಕಿಕೊಂಡವನಿಗೇ ಇಷ್ಟಾದರೆ ಅರ್ಥವನ್ನು ಮನಗಂಡವನಿಗಾಗುವ ಹೆಚ್ಚುಗೆಯನ್ನು ಹೇಳುವದೇನು !

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಂಮೋಹಃ ಪ್ರಣಷ್ಟಸ್ತೇ ಧನಂಜಯ ॥ ೭೨ ॥**

(ಪಾರ್ಥ) ಅರ್ಜುನನೆ, ಕೇಳು (ಏತತ್) ಇದು (ತ್ವಯಾ) ನಿನ್ನಿಂದ (ಏಕಾಗ್ರೇಣ) ಒಮ್ಮುಖವಾದ (ಚೇತಸಾ) ಮನಸ್ಸಿನಿಂದ (ಕಚ್ಚಿತ್ ಶ್ರುತಂ) ಕೇಳಲ್ಪಟ್ಟಿತೊ? (ಧನಂಜಯ) ಅರ್ಜುನನೆ, ಕೇಳು (ತೇ) ನಿನ್ನ (ಅಜ್ಞಾನ ಸಂಮೋಹಃ) ಕ್ಷತ್ರಿಯಧರ್ಮವಾದ ಯುದ್ಧಕ್ಕಿಂತಲೂ ಬ್ರಾಹ್ಮಣಧರ್ಮವಾದ ಭಿಕ್ಷಾಟನವು ಒಳ್ಳೆಯದೆಂಬ ತಪ್ಪು ತಿಳಿವಳಿಕೆಯ ಭ್ರಾಂತಿಯು (ಕಚ್ಚಿತ್ ಪ್ರಣಷ್ಟಃ) ಹೋಯಿತಷ್ಟೆ?

**ಅರ್ಜುನ ಉವಾಚ** ಅರ್ಜುನನು ಹೇಳಿದ್ದು —

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩ ॥**

(ಅಚ್ಯುತ) ಕೃಷ್ಣನೆ, ಕೇಳು. (ಮೋಹಃ) ಭೀಷ್ಮ ಮೊದಲಾದವರನ್ನು ನಾನು ಕೊಲ್ಲುವವನೆಂದೂ ಭೀಷ್ಮ ಮೊದಲಾದವರು ನನ್ನಿಂದ ಸಾಯುವರೆಂದೂ ನನಗಾಗಿದ್ದ ಭ್ರಾಂತಿಯು (ನಷ್ಟಃ) ಕಳೆದುಹೋಯಿತು (ಸ್ಮೃತಿಃ) ಚೈತನ್ಯವು ಬಿಡಿಬಿಡಿಯಾದ್ದಲ್ಲವೆಂದೂ ಮತ್ತು ನಾಶವಿಲ್ಲದ್ದೆಂದೂ ನೆನಪು (ತ್ವತ್ಪ್ರಸಾದಾತ್) ನಿನ್ನನುಗ್ರಹದಿಂದ (ಮಯಾ) ನನ್ನಿಂದ (ಲಬ್ಧಾ) ಪಡೆಯಲ್ಪಟ್ಟಿತು. ಈಗ ನಾನು (ಗತಸಂದೇಹಃ) ಯುದ್ಧವನ್ನು ಮಾಡುವದೊಳ್ಳೆಯದೊ, ಮಾಡದಿರುವದೊಳ್ಳೆಯದೊ–ಎಂಬ ಸಂಶಯವನ್ನು ಕಳೆದುಕೊಂಡು (ಸ್ಥಿತೋಽಸ್ಮಿ) ನೀನು ಹೇಳಿದಂತೆ ಮಾಡುವದಕ್ಕೆ ಸಿದ್ಧನಾಗಿ ನಿಂತಿದ್ದೇನೆ. (ತವ) ನಿನ್ನ (ವಚನಂ) ಮಾತನ್ನು (ಕರಿಷ್ಯೇ) ನಡೆಸುತ್ತೇನೆ

**ಸಂಜಯ ಉವಾಚ** ಸಂಜಯನು ಧೃತರಾಷ್ಟ್ರನಿಗೆ ಹೇಳಿದ್ದು :—

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಂ ॥ ೭೪ ॥**

ಧೃತರಾಷ್ಟ್ರನೆ, ಕೇಳು. (ಇತಿ) ಈ ರೀತಿಯಲ್ಲಿ (ಅಹಂ) ನಾನು (ವಾಸುದೇವಸ್ಯ) ಶ್ರೀಕೃಷ್ಣನ ಮತ್ತು (ಮಹಾತ್ಮನಃ) ಮಹಾತ್ಮನಾದ (ಪಾರ್ಥಸ್ಯ ಚ) ಅರ್ಜುನನ (ಇಮಂ) ಈ (ಅದ್ಭುತಂ) ಆಶ್ಚರ್ಯಕರವಾದಂಥ ಮತ್ತು (ರೋಮಹರ್ಷಣಂ) ರೋಮಾಂಚವನ್ನುಂಟುಮಾಡುವಂಥ (ಸಂವಾದಂ) ಮಾತುಗಾರಿಕೆಯನ್ನು (ಅಶ್ರೌಷಂ) ಕೇಳಿದ್ದೇನೆ.

**ವ್ಯಾಸಪ್ರಸಾದಾಚ್ಛ್ರುತವಾನಿಮಂ ಗುಹ್ಯತಮಂ ಪರಮ್ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಮ್ ॥೭೫॥**

(ಸಾಕ್ಷಾತ್) ತಾನೇ (ಸ್ವಯಂ) ತಾನಾಗಿಯೇ (ಕಥಯತಃ) ಹೇಳುತ್ತಿರುವ (ಯೋಗೇಶ್ವರಾತ್) ಮಾಯಾಶಕ್ತಿಯ ಒಡೆಯನಾದಂಥ (ಕೃಷ್ಣಾತ್) ಶ್ರೀಕೃಷ್ಣನ ಬಾಯಿಯಿಂದ ಬಂದ (ಇಮಂ) ಈ (ಗುಹ್ಯತಮಂ) ಹೆಚ್ಚಿನ ಗುಟ್ಟಾದಂಥ ಮತ್ತು (ಪರಂ) ಉತ್ಕೃಷ್ಟವಾದಂಥ (ಯೋಗಂ) ಜ್ಞಾನಯೋಗವನ್ನು (ವ್ಯಾಸಪ್ರಸಾದಾತ್) ವ್ಯಾಸರು ಅನುಗ್ರಹಿಸಿಕೊಟ್ಟ ದಿವ್ಯಚಕ್ಷುಸ್ಸಿನ ಬಲದಿಂದ (ಶ್ರುತವಾನ್) ಕೇಳಿದವನಾದೆನು.

**ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ॥೭೬**

(ರಾಜನ್) ಧೃತರಾಷ್ಟ್ರನೆ, ಕೇಳು (ಕೇಶವಾರ್ಜುನಯೋಃ) ಶ್ರೀಕೃಷ್ಣಾರ್ಜುನರಿಗೆ ನಡೆದ (ಪುಣ್ಯಂ) ಕೇಳಿದ ಮಾತ್ರದಿಂದಲೆ ಪಾಪವನ್ನು ಕಳೆಯುವಂಥ ಮತ್ತು (ಅದ್ಭುತಂ) ಆಶ್ಚರ್ಯಕರವಾದಂಥ (ಇಮಂ) ಈ (ಸಂವಾದಂ) ಮಾತುಗಾರಿಕೆಯನ್ನು (ಸಂಸ್ಮೃತ್ಯ ಸಂಸ್ಮೃತ್ಯ) ಮತ್ತೆ ಮತ್ತೆ ನೆನೆಸಿಕೊಂಡು (ಮುಹುರ್ಮುಹುಃ) ಬಾರಿ ಬಾರಿಗೂ (ಹೃಷ್ಯಾಮಿ ಚ) ಹರ್ಷವನ್ನು ಹೊಂದುತ್ತಿರುವೆನು

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ರಾಜನ್ಹೃಷ್ಯಾಮಿ ಚ ಪುನಃ ಪುನಃ ॥ ೭೭ ॥**

(ರಾಜನ್) ಧೃತರಾಷ್ಟ್ರನೆ, ಕೇಳು. (ಹರೇಃ) ಶ್ರೀಕೃಷ್ಣನ (ಅತ್ಯದ್ಭುತಂ) ಅತ್ಯಾಶ್ಚರ್ಯಕರವಾದ (ತತ್) ಆ (ರೂಪಂ ಚ) ವಿಶ್ವರೂಪವನ್ನೂ (ಸಂಸ್ಮೃತ್ಯ ಸಂಸ್ಮೃತ್ಯ) ಮತ್ತೆ ಮತ್ತೆ ನೆನೆಸಿಕೊಂಡು (ಮೇ) ನನಗೆ (ಮಹಾನ್) ಹೆಚ್ಚಿನ (ವಿಸ್ಮಯಃ) ಆಶ್ಚರ್ಯವಾಗುತ್ತಿರುವದು. (ಪುನಃ ಪುನಃ) ಮತ್ತೆ ಮತ್ತೆ (ಹೃಷ್ಯಾಮಿ ಚ) ಹರ್ಷವನ್ನೂ ಹೊಂದುತ್ತಿರುವೆನು

ಹೆಚ್ಚು ಹೇಳುವದೇನು ?

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ ೭೮ ॥**

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ **ಮೋಕ್ಷಸಂನ್ಯಾಸ ಯೋಗೋ** ನಾಮ ಅಷ್ಟಾದಶೋಽಧ್ಯಾಯಃ

(ಯತ್ರ) ಯಾವ ಪಕ್ಷದಲ್ಲಿ (ಯೋಗೇಶ್ವರಃ) ಯೋಗಸಿದ್ಧಿಗಳಿಗೆಲ್ಲ ಒಡೆಯನಾದ (ಕೃಷ್ಣಃ) ಶ್ರೀಕೃಷ್ಣನಿರುವನೊ (ಯತ್ರ) ಯಾವ ಪಕ್ಷದಲ್ಲಿ (ಧನುರ್ಧರಃ) ಗಾಂಡೀವ ಧನುಸ್ಸನ್ನು ಹಿಡಿದಿರುವ (ಪಾರ್ಥಃ) ಅರ್ಜುನ ನಿರುವನೋ (ತತ್ರ) ಆ ಪಕ್ಷದಲ್ಲಿ (ಶ್ರೀಃ) ರಾಜ್ಯಸಂಪತ್ತೂ (ವಿಜಯಃ) ಗೆಲವೂ (ಭೂತಿಃ) ಏಳಿಗೆಯೂ (ನೀತಿಃ) ನೀತಿಯೂ (ಧ್ರುವಾ) ಎಂದೂ ಕುಂದದೆ ನೆಲೆಯಾಗಿರುವದೆಂದು (ಮಮ) ನನ್ನ (ಮತಿಃ) ನಿಶ್ಚಯವು

ಇಲ್ಲಿಗೆ **ಮೋಕ್ಷಸಂನ್ಯಾಸಯೋಗವೆಂಬ**
ಹದಿನೆಂಟನೆ ಅಧ್ಯಾಯವು ಮುಗಿಯಿತು

ಓಂ ತತ್ಸತ್



# ಶ್ಲೋಕಾನುಕ್ರಮಣಿಕೆ

(ಈ ಕೆಳಗೆ ಕೊಟ್ಟಿರುವ ಸಂಖ್ಯೆಗಳಲ್ಲಿ ಮೊದಲನೆಯದು ಅಧ್ಯಾಯವನ್ನೂ ಎರಡನೆಯದು ಶ್ಲೋಕವನ್ನೂ ತೋರಿಸುವವು)

## ಅ

ದ

### ಶ



### ಸ

| | | | |
|---|---|---|---|
| ಮಹಾಸತಿ, ಜಿ ವರದರಾಜರಾಯರು | | ೧ | ೪ |
| ಭಾಗ್ಯಶಿಲ್ಪಿ, ರೇಣುಕಾಚಾರ್ಯರು | | ೧ | ೮ |
| ರಾಜಾರಾಮಮೋಹನರಾಯ್, ಡಿ ವಿ ಶೇಷಗಿರಿರಾಯರು | | ೧ | ೮ |
| ಪಂಚಾಮೃತ ಮತ್ತು ಇತರ ಕಥೆಗಳು, ದೇವುಡು | | ೧ | ೦ |
| ರಾಕ್ಷಸನ ಸೋಲು, ಓ ಎನ್ ಲಿಂಗಣ್ಣಯ್ಯ | | ೧ | ೮ |
| ಹರಿಹರನ ರಗಳೆಯ ಕಥೆಗಳು ಬಿ, ನಂಜುಂಡಪ್ಪ | | ೧ | ೦ |
| ಅಮರನಾಥ, ವಿ ಗುರುರಾಜನ್ | | ೧ | ೦ |
| ಗೀತೆಯ ತಿರುಳು, | ಹೊಸಕೆರೆ ಚಿದಂಬರಯ್ಯ | ೦ | ೧೨ |
| ಕೀರ್ತನ ರಾಮಾಯಣ | ,, | ೧ | ೧೨ |
| ಕೀರ್ತನ ಕಂಠಾಭರಣ ಭಾರತ | ,, | ೧ | ೪ |
| ,, ಭಾಗವತ | ,, | ೧ | ೪ |
| ,, ಕೆಲವು ಸತ್ಪುರುಷರು | ,, | ೧ | ೪ |
| ,, ಕೆಲವು ಉಪಾಖ್ಯಾನಗಳು | ,, | ೧ | ೪ |
| ಮಕ್ಕಳ ಕೈಗೀತೆ, | ,, | | |
| ರಾಜಸೂಯ, ವೆಂಕಟರಾಮಪ್ಪ, ಪ್ರಹ್ಲಾದರಾವ್ | | ೧ | ೮ |
| ಎಳೆಯ ಕನಸುಗಳು, ವೈ ಎಂ ಷಣ್ಮುಖಯ್ಯ | | ೧ | ೪ |
| ಮುಗಿಲುಗಳು, ಎಂ ವಿ ಸೀತಾರಾಮಯ್ಯ | | ೧ | ೪ |
| ಕುಟುಂಬ ಸೌಖ್ಯ, ಎಲ್ ಗುಂಡಪ್ಪ | | ೨ | ೪ |
| ಭಾರತದ ಬಾಪು, ಅ ನ ಕೃ | | ೧ | ೪ |
| ಗಾಂಧೀ ಜೀವನಪಾಠಗಳು, ಬ ನ ಸುಂ | | ೧ | ೪ |
| ನಾಗಕನ್ನಿಕೆ, ಎಂ ರಾಮರಾವ್ | | ೧ | ೪ |
| ಪ್ರೇಮಯೋಗಿನಿ, ಸಿ ಕೆ ನಾಗರಾಜರಾವ್ | | ೦ | ೬ |
| ದೀಪಾವಳಿ, | ,, | ೦ | ೧೨ |
| ದಿಲ್ಲಿಯಿಂದ ಹಳ್ಳಿಗೆ, | ,, | ೧ | ೮ |
| ಶೂದ್ರಮುನಿ, | ,, | ೦ | ೬ |
| ಸಂಶಯ, | ,, | ೦ | ೬ |
| ಕಾಶೀನಾಥ, | ,, | ೦ | ೮ |